ಪ್ರತಿಭಾ ಗ್ರಂಥಮಾಲೆ, ಧಾರವಾಡ. ವರ್ಷ ೪ ಕಿರಣ ೭-೮

# ಇಂದ್ರಜಾಲ

ಸಾಮಾಜಿಕ ಕಾದಂಬರಿ

ಬರೆದವರು

"ನವಗಿರಿನಂದ"



೧ ಅಕ್ಟೋಬರ ೧೯೪೭ ಬೆಲೆ: ೪-೦-೦

ಮುದ್ರಕರು:
ಶೇ. ಗೋ ಕುಲಕರ್ಣಿ
ಸಾಧನ ಮುದ್ರಣಾಲಯ
ಧಾರವಾಡ

ಪ್ರಕಾಶಕರು:
ಭಾಲಚಂದ್ರ ಘಾಣೇಕರ
ಸಮಾಜ ಪುಸ್ತಕಾಲಯ,
ಧಾರವಾಡ

# ಪ್ರತಿಭಾ ಗ್ರಂಥಮಾಲೆ, ಧಾರವಾಡ

ಸಂಪಾದಕರು: **ಭಾಲಚಂದ್ರ ಘಾಣೇಕರ**

ವಾರ್ಷಿಕ ಚಂದಾ (ಅಂಚೆ-ರಜಿಸ್ಟರ್ ಸೇರಿ) ೯ ರೂ. ಮಾತ್ರ

- ವರ್ಷದಲ್ಲಿ ಸುಮಾರು ೧೨-೧೩ ರೂ. ಮುಖಬೆಲೆಯ ಪುಸ್ತಕಗಳು ಪ್ರಕಟವಾಗುತ್ತವೆ
- ಜನೆವರಿ, ಎಪ್ರಿಲ್, ಜುಲೈ, ಆಕ್ಟೋಬರ್ ಮೊದಲನೇ ವಾರದಲ್ಲಿ—ಪ್ರತಿಸಲ ಎರಡು ಪುಸ್ತಕಗಳಂತೆ ನಾಲ್ಕುಸಲ ಪುಸ್ತಕ ರವಾನಿಸುತ್ತೇವೆ.
- ಜನೆವರಿ ೧ನೇಕ್ಕೆ ಮಾಲೆಯ ೫ನೇ ವರ್ಷಾರಂಭ

## ನಾಲ್ಕನೆ ವರ್ಷದ ಪ್ರಕಟನೆಗಳು

| | | | |
|---|---|---|---|
| ೧ | ಕಾಲಯಾನ | ಭಾರತೀಸುತ | ೧–೧೦–೦ |
| ೨ | ಮಾಧವಲೀಲೆ | ವೆಂಕಟೇಶಯ್ಯ | ೧– ೮–೦ |
| ೩ | ಕರೀ ಬೆಕ್ಕು | ರಮೇಶ | ೧– ೪–೦ |
| ೪ | ಕೊಂದವರು ಯಾರು? | ಜೋಶಿ | ೧– ೪–೦ |
| ೫ | ದಲಿತ ಕುಸುಮ | ಹೊಸಮನೆ | ೨– ೦–೦ |
| ೬ | ನೂರಜಹಾನ | ಕೇಶವಶರ್ಮಾ | ೧– ೦–೦ |
| ೭–೮ | ಇಂದ್ರಜಾಲ | ನವಗಿರಿನಂದ | ೪– ೦–೦ |

# ಮೊದಲರಿಕೆ

ಮುನ್ನುಡಿಯಿಲ್ಲದ ಗ್ರಂಥವು ಕಿಟಿಕಿಯಿಲ್ಲದ ಮನೆಯಂತೆ" ಎಂಬ ಕೊರತೆಗೆ ಈಡಾಗಬಾರದೆಂದು ಈ ಪುಟ್ಟ ಕಿಟಿಕಿಯನ್ನಿಟ್ಟಿದ್ದೇನೆ– ಓದುಗರು ಇಣಿಕಿ ನೋಡಲಿಕ್ಕಾಗಿ! ಆದರೆ ಓದುಗರನ್ನು ಈ ಗ್ರಂಥದೊಳಗೆ ಕರೆದೊಯ್ಯುವ ಮೊದಲು, ಇದನ್ನು ಓದುಗರ ಕೈಗೊಪ್ಪಿಸಿ ನನಗೆ ಬಹುದೊಡ್ಡ ಸಹಾಯವನ್ನು ಮಾಡಿದ ಪ್ರತಿಭಾ ಗ್ರಂಥಮಾಲೆಯ ಸಂಪಾದಕರಾದ ಶ್ರೀ ಭಾಲಚಂದ್ರ ಘಾಣೇಕರರಿಗೆ ನಾನು ಅತ್ಯಂತ ಕೃತಜ್ಞನಾಗಿ ವಂದನೆಯನ್ನು ಸಮರ್ಪಿಸುತ್ತೇನೆ. ಇನ್ನು ಈ ಗ್ರಂಥದೊಳಗೆ ಧಾರಾಳವಾಗಿ ಪ್ರವೇಶಮಾಡಬಹುದು. ಅಗೋ! ರಾಮಾಜೋಯಿಸರು ಲಕ್ಷ್ಮಣ್ಣನ ಮನೆಯಂಗಳದಲ್ಲಿ ಕಾದಿದ್ದಾರೆ. ನೋಡಿರಿ!

ಇತಿ—

"ನವಗಿರಿನಂದ"

# ಪ್ರಕಾಶಕರ ಮಾತು

ಈ ಪುಸ್ತಕದಿಂದ ಪ್ರತಿಭಾ ಗ್ರಂಥಮಾಲೆಯ ನಾಲ್ಕನೆ ವರ್ಷವು ಪೂರ್ತಿಯಾಗುತ್ತದೆ. ಯುಗಾದಿಯಿಂದ ಯುಗಾದಿಗೆಂದು ಇಟ್ಟುಕೊಂಡಿದ್ದ ಚಂದಾ ಅವಧಿಯನ್ನು ಜನೆವರಿಯಿಂದ ಜನೆವರಿಗೆಂದು ಮಾಡಿಕೊಂಡಿದ್ದು, ಚಂದಾದಾರರಿಗೆ ಪುಸ್ತಕಗಳನ್ನು ಕಳಿಸುವ ನಾಲ್ಕು ತಿಂಗಳನ್ನೂ ನಿರ್ದಿಷ್ಟ ಪಡಿಸಿಕೊಂಡಿದ್ದೇವೆ ಅದರ ವಿವರವನ್ನು ಈ ಪುಸ್ತಕದ ಆರಂಭದಲ್ಲಿ ಕೊಟ್ಟಿರುವ ಮಾಲೆಯ ಪ್ರಕಟನೆಯಿಂದ ಅರಿತುಕೊಳ್ಳಬಹುದು

ಈ ನಾಲ್ಕನೇ ವರ್ಷದ ೩-೪ನೇ ಕಿರಣಗಳು ಮಾತ್ರ ವಿಲಂಬ ವಾಗಿ ಹೊರಟವು ಆದರೂ ಮುಂದಿನ ಕಿರಣಗಳೆಲ್ಲ ಅವಧಿಗಿಂತ ಮುಂಚಿತವಾಗಿಯೇ ವಾಚಕರ ಕೈಸೇರಿವೆಯೆಂಬುದು ಗಮನಾರ್ಹವಾದ ವಿಷಯವಾಗಿದೆ ನಾಲ್ಕನೆ ವರ್ಷದ ಪ್ರಕಟನೆಗಳಲ್ಲಿ ಎರಡು ಪತ್ತೇದಾರಿ, ಒಂದು ಐತಿಹಾಸಿಕ, ಒಂದು ವೈಜ್ಞಾನಿಕ ಮೂರು ಸಾಮಾಜಿಕ ಈ ರೀತಿ ಎಲ್ಲ ಬಗೆಯ ಕಾದಂಬರಿಗಳೂ ಪ್ರಕಟವಾಗಿ ಚಂದಾದಾರರನ್ನು ಮೆಚ್ಚಿಸಿವೆಯೆಂದು ನಾವಂತೂ ನಂಬಿದ್ದೇವೆ.

ಕೊನೆಯದಾದ ಈ ಸುದೀರ್ಘವಾದ "ಇಂದ್ರಜಾಲ" ವನ್ನು ಮದರಾಸಿನ "ನವಗಿರಿನಂದ"ರು ನಮಗೆ ಒದಗಿಸಿ ಮಹದುಪಕಾರವನ್ನೇ ಮಾಡಿದ್ದಾರೆ ತಮ್ಮ ಅಮೌಲ್ಯವಾದ ಕೃತಿಗಳನ್ನು ಒದಗಿಸಿ ನೆರವಾಗುತ್ತ ಬಂದ ಲೇಖಕ ವೃಂದಕ್ಕೆಲ್ಲ ಚಿರಋಣಿಯಾಗಿದ್ದೇವೆ ಬೇರೆ ರೀತಿಯಿಂದ ನೆರವಾದ ಗೆಳೆಯರಿಗೂ ಸಹ ನಮ್ಮ ಕೃತಜ್ಞತೆಯನ್ನು ಸೂಚಿಸದೆ ಇರಲಾರೆವು. ಚಂದಾದಾರರ ನೆರವಿಲ್ಲದಿದ್ದರೆ ಮಾಲೆಯು ಅವ್ಯಾಹತವಾಗಿ ನಾಲ್ಕು ವರ್ಷ ತನ್ನ ಸೇವೆಯನ್ನು ಸಲ್ಲಿಸುವದು ದುಸ್ತರವಾಗುತ್ತಿದ್ದಿತು. ಇಂದಿನ ವರೆಗೆ ಆಶ್ರಯವಿತ್ತ ಚಂದಾದಾರರಿಗೆಲ್ಲ ಕೃತಜ್ಞರಾಗಿದ್ದೇವೆ. ಮುಂದೆಯೂ ಮಮತೆಯಿಂದ ಪೋಷಿಸಿ ಮುನ್ನಡೆಸುವರೆಂದು ನಮ್ಮಾಸೆ

# ಇಂದ್ರಜಾಲ

## ೧. ರಾಮಾ ಜೋಯಿಸರು

"ಬನ್ನಿ ಜೋಯಿಸರೆ, ಕೂತುಕೊಳ್ಳಿ'' ಎನ್ನುತ್ತಾ ಲಕ್ಷ್ಮಮ್ಮನು ಲಗುಬಗೆಯಿಂದ ಮೂಲೆಯಲ್ಲಿ ಜೋಪಾನವಾಗಿಟ್ಟಿದ್ದ ಬಣ್ಣದ ಚಾಪೆಯನ್ನು ತೆಗೆದು ಜಗುಲಿಯಲ್ಲಿ ಹಾಸಿದಳು.

ಔಪಚಾರಿಕವಾಗಿ '' ಬೇಡ ಬೇಡ'' ಎನ್ನುತ್ತಾ ರಾಮಾ ಜೋಯಿಸರು, ಅಂಗಳದ ಬದಿಯ ತೆಂಗಿನ ಕಟ್ಟೆಯ ಕಡೆಗೆ ಹೋಗಿ, ತಂಬುಲವನ್ನು ಉಗಿದು ಕೆಂಬಾಯಿಯನ್ನು ತೆರೆದು ಎಡೆಬಿಟ್ಟ ಹಲ್ಲುಗಳನ್ನು ತೋರಿಸುತ್ತ—'' ನಮಗೆಲ್ಲಾ ಚಾಪೆ ಗೀಪೆ ಯಾಕೆ ಹೇಳಿ ಲಕ್ಷ್ಮಮ್ಮ? ನಾವೇನು ನೆಂಟರೋ?" ಎನ್ನುತ್ತಾ ಬಂದು ಚಾಪೆಯ ಮೇಲೆ ಕುಳಿತರು.

ಲಕ್ಷ್ಮಮ್ಮ ಬೆಲ್ಲ-ನೀರುಗಳನ್ನು ತಂದು ಅವರ ಮುಂದಿಟ್ಟು, ಒಳಗೆ ಹೋಗಿ ಅಡಿಕೆಲೆಯ ತಟ್ಟೆಯನ್ನು ತಂದಿಟ್ಟಳು.

'' ನಿಮ್ಮ ಮಗಂದೇನಾದರೂ ಕಾಗದ ಬಂತೆ?'' ಎಂಬ ಪ್ರಶ್ನೆಯನ್ನು ಹೊರಡಿಸಿ, ಬೆಲ್ಲದ ತುಂಡನ್ನೆತ್ತಿ ಬಾಯೊಳಗೆ ಬಿಟ್ಟು ಹಲ್ಲಿನೆಡೆಗೆ ಕಳುಹಿಸಿದರು ಜೋಯಿಸರು.

'' ಹುಂ, ಮೊನ್ನೆ ಒಂದು ಬಂದಿತ್ತು."—ಲಕ್ಷ್ಮಮ್ಮ ಅಲ್ಲಿಯೆ ಜಗುಲಿಯ ಬದಿಯಲ್ಲಿ ಕುಳಿತು ಮಾತಿಗೆ ಮೊದಲು ಮಾಡಿದಳು.

''' ಏನಂತೆ? ದಾರಿಗೆ ಬರುತ್ತಾನಷ್ಟೆ?'' ಎಂದು ಜೋಯಿಸರು ಕುತೂಹಲದಿಂದ ಲಕ್ಷ್ಮಮ್ಮನನ್ನು ನೋಡುತ್ತ, ನೀರಿನ ಲೋಟೆಯನ್ನು ಎತ್ತಿಕೊಂಡರು.

'' ಹುಂ, ನಾನು ಅಷ್ಟು ಮನಸ್ಸು ಕರಗುವ ಹಾಗೆ ಬರೆದ್ದರಿಂದ, ಸ್ವಲ್ಪ ಸಮಾಧಾನವಾಗುವ ಹಾಗೆ ಉತ್ತರ ಬರೆದಿದ್ದಾನೆ. ಅವನಿಗೇನೂ ಇಷ್ಟವಿಲ್ಲವಂತೆ. ನನಗಾಗಿಯೇ ಒಪ್ಪಿಕೊಳ್ಳುತ್ತಾನಂತೆ!"

ಜೋಯಿಸರು ನೀರು ಕುಡಿದು ಲೋಟಿಯನ್ನು ಕೆಳಗಿಟ್ಟು, "ಈಗಿನ ಕಾಲದ ಹುಡುಗರ ರೀತಿಯೇ ಹೀಗೆ. ಮದುವೆ ಬೇಡ ಬೇಡಾಂತ ಹೇಳಿ ಮಾಡಿಕೊಂಡ ಮೇಲೆ ಹೆಂಡತಿಯನ್ನು ಒಂದು ನಿಮಿಷಕೂಡಾ ಬಿಡದೆ, ಅಂಟಿಕೊಂಡೇ ಬಿಡುತ್ತಾರೆ ಮತ್ತೆ. ಇರಲಿ, ಯಾವಾಗ ಊರಿಗೆ ಬರುತ್ತಾನಂತೆ?"

"ಮುಂದಾಗಿ ಬರಲೊಲ್ಲನಂತೆ; ನಾನೇ ಎಲ್ಲಾ ನೋಡಿ ನಿಶ್ಚಯ ಮಾಡಿ ಮುಹೂರ್ತ ಸಹಾ ಇಟ್ಟು ಬರೆದರೆ, ಕೂಡಲೇ ಬಂದು ಕಣ್ಣು ಮುಚ್ಚಿ ಮಾಡಿಕೊಂಡುಬಿಡುತ್ತಾನಂತೆ."

"ಇದೊಳ್ಳೆ ಕತೆ! ಹೀಗೆಲ್ಲಿಯಾದರೂ ಉಂಟೆ? ಹುಡುಗಾಟಾಂದರೆ ಇದೇ ನೋಡಿ. ಅವನು ಮುಂದಾಗಿ ಬಂದು, ಹುಡುಗಿಯನ್ನು ನೋಡಿ ಒಪ್ಪಿಕೊಂಡಮೇಲಲ್ಲವೇ ನಮ್ಮ ಕೆಲಸ?" ಎಂದು ಜೋಯಿಸರು ಬೆಲ್ಲ ನೀರುಗಳ ತಟ್ಟೆ ಲೋಟಗಳನ್ನು ದೂರ ಇಟ್ಟು, ಅಡಿಕೆಲೆಯ ತಟ್ಟೆಯನ್ನು ಸಮೀಪಕ್ಕೆ ಎಳೆದುಕೊಂಡರು.

"ಹಾಗೆಲ್ಲ ಬರುವುದಿಲ್ಲವಂತೆ ಜೋಯಿಸರೆ. ನಾನು ಎಲ್ಲವನ್ನೂ ತಿಳಿಸಿ ಬರೆಸಿರುವೆನಷ್ಟೆ? ಅವನು ಬರೆದ ಗಟ್ಟಿಯಾದ ಉತ್ತರ ನೀವೇ ನೋಡಿ" ಎಂದು ಲಕ್ಷ್ಮಮ್ಮನು ಒಳಗೆ ಹೋಗಿ ಒಂದು ಕಾಗದವನ್ನು ತಂದು ಜೋಯಿಸರ ಕೈಗೆ ಕೊಟ್ಟಳು.

ಜೋಯಿಸರ ಕೈಬೆರಳಿನಲ್ಲಿ ಸುಣ್ಣವಿತ್ತು; ಆ ಬೆರಳನ್ನು ಅಸ್ಪೃಶ್ಯದಂತೆ ದೂರ ಹಿಂಬದಿಗೆತ್ತಿ ತಮ್ಮ ಪಂಚಾಂಗದ ಕಟ್ಟಿನೊಳಗಣಿಂದ ಕನ್ನಡಕದ ಕರಡಿಗೆಯನ್ನು ಜಾರಿಸಿ, ಕನ್ನಡಕವನ್ನೆತ್ತಿ ಎಲವಸ್ತ್ರದಿಂದ ವರೆಸಿ ಮೂಗಿನ ಮೇಲೇರಿಸಿಕೊಂಡು ಪತ್ರವನ್ನೆಲ್ಲ ಎಡಗೈಯಲ್ಲಿ ಹಿಡಿದು ಮೌನವಾಗಿ ಓದಲಾರಂಭಿಸಿದರು. ಆಗ ನಡುನಡುವೆ ಅವರ ಹುಬ್ಬುಗಳು ಏರಿಳಿದುವು; ಒಂದೆರಡು ಬಾರಿ ತಲೆದೂಗಿತು. ಮತ್ತೊಂದು ಭಾಗದ ಪತ್ರವಾಕ್ಯಗಳು ನಾಲಗೆಯಾಡಿಕೊಂಡೇ ಹೊರಬಿದ್ದುವು:

"—ಅಮ್ಮ, ನನಗೆ ಸತ್ಯವಾಗಿಯೂ ಮದುವೆ ಮಾಡಿಕೊಳ್ಳುವ ಮನಸ್ಸಿಲ್ಲ. ಕಡೆಯವರೆಗೂ ಬ್ರಹ್ಮಚಾರಿಯಾಗಿರಬೇಕೆಂದೇ ನಿಶ್ಚಯವಿತ್ತು. ಹೇಗೂ ನನಗೊಬ್ಬ ತಮ್ಮನಿದ್ದಾನೆ; ಅವನಿಗೂ ಪ್ರಾಯ ಬರಲಿ

ಕ್ಕಾಯಿತು; ಅವನಿಗೇ ಮದುವೆ ಮಾಡಿ ಸಂತೋಷಪಡಬಹುದಿತ್ತು. ಆದರೂ ನೀನು ನನಗೇ ಮದುವೆ ಮಾಡಬೇಕೆಂದು ಹಟಹಿಡಿದು ವ್ಯಸನಪಡುತ್ತಿರುವುದರಿಂದಲೇ, ನನ್ನ ಹಣೆಯಲ್ಲಿ ಮದುವೆಯಾಗಬೇಕೆಂದೇ ಇದ್ದರೆ, ತಪ್ಪಿಸಲು ಸಾಧ್ಯವಿಲ್ಲವೆಂದು ಭಾವಿಸಿಕೊಂಡು, ನಿನ್ನ ಇಷ್ಟಕ್ಕೆ ಒಪ್ಪಿದ್ದೇನೆ. ಆದರೆ ಮಾತ್ರ ನೀನು ಬರೆದಂತೆ ಮುಂದಾಗಿ ಬಂದು ವಧುವನ್ನು ನಾನೇ ನೋಡಿ ಮಾತಾಡಿ ಮಾಡಿಕೊಳ್ಳುವಷ್ಟು ಉತ್ಸಾಹವು ನನಗಿಲ್ಲವೇ ಇಲ್ಲ ನೀನೇ ಎಲ್ಲಾ ನೋಡು, ನೀನೇ ಎಲ್ಲಾ ಮಾತಾಡು, ನೀನೇ ಮಾಡು. ಈ ವಿಷಯದಲ್ಲಿ ನೀನು ನನ್ನ ಮೇಲೆ ಯಾವ ತರದ ಸಂದೇಹವನ್ನೂ ತಾಳಬೇಡ. ಮುಖ್ಯ ಈ ವಿವಾಹವು ನಿನಗಾಗಿಯೇ ಹೊರತು ನನಗಾಗಿ ಮಾತ್ರ ಅಲ್ಲವೆಂದು ಖಂಡಿತವಾಗಿ ತಿಳಿ! ಆದುದರಿಂದ ನೀನು ಯಾವಳನ್ನು ಸೊಸೆಯನ್ನಾಗಿಸಲು ಒಪ್ಪುವಿಯೋ-ಅವಳನ್ನು ವರಿಸಲು ನಾನೂ ಸಿದ್ಧನು.—"

ಪತ್ರವು ಇನ್ನೂ ಸ್ವಲ್ಪ ಇತ್ತು. ಜೋಯಿಸರು ಅಷ್ಟಕ್ಕೇ ನಿಲ್ಲಿಸಿ, ಪತ್ರವನ್ನು ಕೆಳಗಿಟ್ಟು—"ಭಲೆಭಲೆ! ಚಂದಾಗಿದೆ ಬರೆದ ರೀತಿ! ಆದರೆ, ಇಷ್ಟು ಮಾತೃವಿಶ್ವಾಸವಿರುವ ಹುಡುಗರು ಮಾತ್ರ ಈ ಕಾಲದಲ್ಲಿ ಅಪರೂಪವಮ್ಮ. ಏನೇ ಇರಲಿ; ನಾವೇನು ಬೇಕಂತ ಯಾರಿಗೂ ಕೆಡುಕು ಮಾಡುವುದಿಲ್ಲಾನ್ನಿ. ಆದರೂ ನಮ್ಮಿಷ್ಟಕ್ಕೆ ನಾವೇ ಮುಂದೆ ಹೋದರೆ ಮುಂದೆ ಹೇಗೆ ಹೇಗೆ ಆಗುತ್ತೋ ಯಾರಿಗೆ ಗೊತ್ತು? ತಾಯಿಯ ಮೇಲೆ ಎಷ್ಟೇ ವಿಶ್ವಾಸವಿದ್ದರೂ, ಇಂಥಾದ್ದಕ್ಕೆಲ್ಲಾ ತಾನೇ ಬಂದು ನಿಧಾನವಾಗಿ ನೋಡಿ ಮಾಡಿಕೊಳ್ಳಬೇಕು. ಆಯಿತು, ಯಾವುದಕ್ಕೂ ಈ ಪತ್ರವು ನನ್ನ ಬಳಿಯಲ್ಲೇ ಇರಲಿ, ಲಕ್ಷ್ಮಮ್ಮ ಮುಂದೆ ದೈವವಶಾತ್ ಏನಾದರೂ ಆದರ—ನಮ್ಮ ಮೇಲೆ ಜವಾಬುದಾರಿಯಿಲ್ಲದಂತೆ ಈ ಪತ್ರವು ಕಾಪಾಡೀತು" ಎಂದು ಕನ್ನಡಕವನ್ನು ಕಳಚಿ ಕರಡಿಗೆಯೊಳಗೆ ಅಡಗಿಸಿ, ವೀಳ್ಯದೆಲೆಗೆ ಸುಣ್ಣವನ್ನು ತೀಡುವ ಉದ್ಯೋಗಕ್ಕೆ ಪ್ರಾರಂಭಮಾಡಿದರು. ಪತ್ರವು ಕಣ್ಣಡಕದ ಕರಡಿಗೆಯ ಬುಡದಲ್ಲಿತ್ತು

"ಹಾಗೇನೂ ಆಗಲಿಕ್ಕಿಲ್ಲ—ಜೋಯಿಸರೆ. ನಾವೆಲ್ಲಾ ಹಾಗೆ ಅವನಿಗೆ ಅಹಿತವನ್ನು ಯಾಕೆ ಮಾಡಿಯೇವು?—ಇರಲಿ. ಯಾವುದಾದರೂ ಜಾತಕ ಹೊಂದಿಕೆಯಾಗಿದೆಯೋ ಜೋಯಿಸರೆ?"

ಜೋಯಿಸರು—"ಹುಂ, ಹೊಂದಿಕೆ- ಅಂದರೆ- ನೋಡಿ- ಲಕ್ಷ್ಮಮ್ಮ-" ಎಂದು ವೀಳ್ಯದ ಮಡಿಕೆಯನ್ನು ಬಾಯಿಯೊಳಗೆ ಹೊಗಿಸಿ, ಅಡಕೆಯ ಹೋಳುಗಳನ್ನು ಅದರ ಮೇಲೆ ಕುಣಿಸಿ ಮೆಲ್ಲುತ್ತ,—"ಹುಡುಗನ ಜಾತಕ ತುಂಬಾ ಅಬಲ. ಇಂಥಾ ಜಾತಕಕ್ಕೆ ಹೊಂದುವ ಅಬಲ ಜಾತಕದ ಕನ್ಯೆ ಕುದುರುವುದೆಂದರೆ ಬಹಳ ಪ್ರಯಾಸ. ಅಂತೂ ಉಂಟೂನ್ನಿ! ಆದರೆ ನಮ್ಮ ನಿಮ್ಮ-ಗ್ರಾಮ-ಗ್ರಾಮಾಂತರಗಳಲ್ಲಿ ನನಗೆ ತಿಳಿದಕಡೆ ಕೋಡಿಗಳ ಅನೇಕ ಜಾತಕಗಳು ಬಂದುವು. ಒಂದೂ ಸರಿಹೋಗಿಲ್ಲ. ಆದರೆ—" ಎಂಬಲ್ಲಿಗೆ ಮಾತು ನಿಲ್ಲಿಸಿ, ಆ ಪತ್ರವನ್ನು ತೆಗೆದು ಪಂಚಾಂಗದೊಳಗೆ ಅಡಗಿಸಿ, ಪಂಚಾಂಗದಿಂದ ಕೆಲವು ಕಾಗದಗಳನ್ನು ತೆಗೆದು, ಎದ್ದು ಹೋಗಿ ತಂಬುಲವನ್ನು ಉಗುಳಿ ಬಂದು ಕುಳಿತು, ಮತ್ತೆ ಕನ್ನಡಕವನ್ನು ಮೂಗೇರಿಸಿಕೊಂಡು, ಆ ಕಾಗದಗಳನ್ನು ಒಂದೊಂದೇ ಅವಲೋಕನ ಮಾಡುತ್ತಾ ಕೆಳಗಿಡುತ್ತಿದ್ದರು.

"ಹಾಗಾದರೆ ಯಾವ ಕೋಡಿಯೂ ನಿಮ್ಮ ನಿಶ್ಚಯಕ್ಕೆ ಬಂದಿಲ್ಲಾನ್ನಿ?"

"ಹಾಗೆಂದು ನಿರಾಶೆಯಾದೀತೇ ಈ ಬ್ರಹ್ಮಸೃಷ್ಟಿಯಲ್ಲಿ? ಒಂದು ಗಂಡಿಗೆ ಒಂದು ಹೆಣ್ಣು ಉಂಟೇ ಉಂಟು-ಎಲ್ಲಿಯೋ!"

"ಅಂತೂ ಬೇಗದಲ್ಲಿ ಕುದುರೋದಿಲ್ಲಾಂತ ಕಾಣುತ್ತೆ?"

"ಛೆಛೆ, ನಿಮ್ಮ ಹುಡುಗನ ಜಾತಕದಲ್ಲಿ ಈ ವರ್ಷವೇ ಗುರುಫಲ! ಕಲ್ಯಾಣಯೋಗ! ಆದ್ದರಿಂದ ಈ ತಿಂಗಳ ಅಂತ್ಯದೊಳಗೆ ವಿವಾಹವಾಗಿಯೇ ತೀರಬೇಕು ನೋಡಿ!"

"ನೋಡಿ ಜೋಯಿಸರೆ, ಆಗುವುದು ಆದಷ್ಟು ಬೇಗನೇ ಆದರೆ ತುಂಬಾ ಸಂತೋಷವಿತ್ತು. ನನಗೋ ಹೆಚ್ಚು ಕೆಲಸ ಮಾಡಲಿಕ್ಕೆ ಕೂಡುವುದಿಲ್ಲ; ಮನೆಯಲ್ಲಿರುವುದಿಬ್ಬರು ಪೋಕರಿ ಮಕ್ಕಳು; ತೋಟ-ಮನೇ-ದನಾ-ಕರೂ-ಎಲ್ಲಾ ನಾನು ಒಬ್ಬಳೇ ನೋಡಿಕೊಳ್ಳಬೇಕು. ಹುಡುಗರು ಶಾಲೆಗೆ ಬೇರೆ ಹೋಗಿಬಿಟ್ಟರೆ ನಾನೊಬ್ಬಳೇ ಎಷ್ಟೂಂತ ಮಾಡಿಯೇನು? ಬರುವ ಸೊಸೆ ಬೇಗನೇ ಬಂದರೆ ಎಷ್ಟೋ ಹಗುರಾದೀತು. ನನಗೋ ಈ ಊರುಕೇರಿಯ ಪರಿಚಯವೂ ಅಷ್ಟಿಲ್ಲ. ಇದ್ದ ಒಬ್ಬಿಬ್ಬರು ಬಂಧು

ಬಾಂಧವರು ನನ್ನ ಹಗೆಗಳ ಹಾಗೆ ಕೂಡಿದ್ದಾರೆ. ಆದ್ದರಿಂದಲೇ ಎಲ್ಲಾ ವಿಷಯದಲ್ಲಿಯೂ ನಿಮ್ಮನ್ನೇ ನಂಬಿದ್ದೇನೆ ಜೋಯಿಸರೆ."

ಕಾಗದಗಳನ್ನು ಪರಿಶೀಲನೆ ಮಾಡುತ್ತಲೇ ಇದ್ದ ಜೋಯಿಸರು-ಕಿವಿಯನ್ನು ಹೊಕ್ಕ ಲಕ್ಷ್ಮಮ್ಮನ ಮಾತುಗಳಿಗೆ ತಲೆದೂಗುತ್ತ-"ಗೊತ್ತುಂಟು -ಲಕ್ಷ್ಮಮ್ಮ-ನನಗೆಲ್ಲವೂ ಗೊತ್ತುಂಟು." ಎಂದೊಂದು ಕವಲ್ನುಡಿಯನ್ನು ಬಿಟ್ಟು, ಒಂದು ಕಾಗದವನ್ನು ಮಾತ್ರ ಕೈಯಲ್ಲಿಟ್ಟುಕೊಂಡು ಉಳಿದವುಗಳನ್ನು ಕೆಳಗಿಟ್ಟರು.

ಲಕ್ಷ್ಮಮ್ಮನ ಮಾತು ಇನ್ನೂ ಕೊನೆ ಮುಟ್ಟಿರಲಿಲ್ಲ.—"ಹೌದು-ಜೋಯಿಸರೆ, ನೀವೇನೋ ದೊಡ್ಡ ಮನಸ್ಸು ಮಾಡಿ ನನಗೆ ಸಹಾಯ ಮಾಡಲಿಕ್ಕೆ ಮುಂದೆ ನಿಂತಿದ್ದೀರಿ. ನಾವಾದರೋ ಬಡವರು. ನಮ್ಮ ಸ್ಥಿತಿಗತಿ ಎಲ್ಲಾ ನಿಮಗೂ ಗೊತ್ತುಂಟು; ನಿಮ್ಮ ಮೆಹನತ್ತಿಗೆ ತಕ್ಕ ಪ್ರತಿಫಲವನ್ನು ಕೊಡುವಷ್ಟು ಶಕ್ತಿ ಮಾತ್ರ ನಮಗಿರಲಿಕ್ಕಿಲ್ಲ.''

''ಛೆಛೆ! ಪ್ರತಿಫಲಾಪೇಕ್ಷೆಯಿಂದ ನಾನು ಈ ಕೆಲಸಕ್ಕೆ ಬಂದದ್ದೇ ಅಲ್ಲಮ್ಮ. ನಾನು ಮಲೆಯಾಳಕ್ಕೆ ಬಂದಾಗ ನಿಮ್ಮ ವೆಂಕಪ್ಪಯ್ಯನಿಗೂ ನನಗೂ ತುಂಬಾ ಅಚ್ಚುಮೆಚ್ಚು ಇತ್ತೆಂತಲೇ ನಾನು ಈ ಕೆಲಸಕ್ಕೆ ಕೈಹಾಕಿದೆ. ಇದಕ್ಕಾಗಿ ನೀವು ನನಗೆ ಪ್ರತಿಫಲಕೊಟ್ಟರೂ ನಾನು ಸ್ವೀಕರಿಸಿಯೇನೆಂದು ಮಾಡಿದಿರೇನು? ವೆಂಕಪ್ಪಯ್ಯ ನನಗೆ ಮಾಡಿದ ಉಪಕಾರಗಳಿಗೆ ನಾನು ಎಷ್ಟು ಋಣಿಯಾಗಿದ್ದರೂ ಸಾಲದು. ನೀವೇನೂ ಚಿಂತಿಸಬೇಡಿ ಲಕ್ಷ್ಮಮ್ಮ. ವೆಂಕಪ್ಪಯ್ಯನ ಮಗ ಶೀನೂಗೆ ಮದುವೆ ಮಾಡಿಸಿಯೇ ಬೇರೆ ಕೆಲಸವೆಂದು ಪಂಥಕಟ್ಟಿದ್ದೇನೆ." ಎಂದು ಜೋಯಿಸರು ನಿಶ್ಚಯಭಾವದಿಂದ ಕನ್ನಡಕವನ್ನು ಕಳಚಿ ಕರಡಿಗೆಯಲ್ಲಿಟ್ಟರು.

ಗತಿಸಿದ ಗಂಡನ ಜ್ಞಾಪಕವು ಬಂದು, ದುಃಖಭಾವವು ಉಕ್ಕಿ, ಕಣ್ಣಿನಲ್ಲಿ ತುಂಬಿದ ನೀರನ್ನು ಕೆಂಜೀರೆಯ ಸೆರಗಿನಿಂದ ಒತ್ತಿಕೊಂಡಳು ಲಕ್ಷ್ಮಮ್ಮ.

ಶೀನುವಿನ ಜಾತಕದೊಂದಿಗೆ ಇನ್ನೊಂದು ಜಾತಕವನ್ನು ಹಿಡಿದುಕೊಂಡು ಜೋಯಿಸರೆಂದರು:—"ಲಕ್ಷ್ಮಮ್ಮ, ಇಷ್ಟು ಜಾತಕಗಳಲ್ಲಿ ಇದೊಂದು ಜಾತಕ ಮಾತ್ರ ಬಲುಚಂದಾಗಿ ಒಪ್ಪುತ್ತೆ ನೋಡಿ. ಇದನ್ನೇ

ಪ್ರಸ್ತಾವಿಸಬೇಕೆಂದು ಇವತ್ತು ನಾನು ಬಂದದ್ದು. ಜಾತಕದ ವಿಷಯ ದಲ್ಲಿ ಸಂದೇಹವಿದ್ದರೆ, ನೀವು ಬೇರೆ ಜನರಿಗೆ ತೋರಿಸಬಹುದು."

"ಯಾಕೆ? ನೀವು ನೋಡಿದರೆ ಸಾಲದೆ? ಯಾರುಯಾರಿಗೆ ತೋರಿಸಿದರೆ, ಏನಾದರೊಂದು ಹೇಳುತ್ತಲೇ ಇದ್ದಾರು. ಅಲ್ಲದೆ ಈ ಕಾಲದಲ್ಲಿ ಜಾತಕವನ್ನಾದರೂ ಯಾರು ನೋಡುತ್ತಾರ ಹೇಳಿ? ನಮಗೆ ಇದೊಂದು ಪೂರ್ವಾಚಾರ ಸೀವಂತೂ ಶಾಸ್ತ್ರಪ್ರಕಾರ ನೋಡಿ, ಸರಿ ಉಂಟೆಂದರೆ ತೀರಿತು. ಜೋಯಿಸರೆ, ಅದು ಯಾವ ಕೋಡಿ? ನಮ್ಮ ಹಾಗೆಯೇ ಬಡವರ ಕಡೆಯಾ? ಹುಡುಗಿಗೆ ಎಷ್ಟು ಪ್ರಾಯ? ಹ್ಯಾಗಿದೆ? ಕೆಲಸ ಕಾರ್ಯಗಳಲ್ಲಿ ಚುರುಕಿದೆಯಾ?" ಎಂದು ಲಕ್ಷ್ಮಮ್ಮ ಪ್ರಶ್ನೆಗಳ ಮೇಲೆ ಪ್ರಶ್ನೆಯನ್ನು ಸುರಿಸಿದಳು.

"ಅದೆಲ್ಲ ಹೇಳುತ್ತೇನೆ—ಕೇಳಿ—" ಎಂದು ರಾಮಾ ಜೋಯಿಸರು ಮತ್ತೊಮ್ಮೆ ಅಂಗಳದ ಕೊನೆಗೆ ಹೋಗಿ, ತಂಬುಲದ ಜಿಗಟೆಗಳನ್ನು ಉಗುಳಿ ಬಂದು ಕುಳಿತು—"ನನಗೇನೋ ನಿಮ್ಮ ಶೀನೂಗೆ ಈ ಸಂಬಂಧವೇ ವಿಹಿತವೆಂದು ಕಾಣುತ್ತೆ. ಕೋಡಿ ಈ ಊರು ಅಲ್ಲ, ಇಲ್ಲಿಗೆ ಹದಿನೈದು ಮೈಲು ದೂರದಲ್ಲಿರುವ 'ಕೊಳ್ಳಾಜೆ' ಗ್ರಾಮದಲ್ಲಿ. ಹುಡುಗಿಯ ತಂದೆಗೆ ಏನೋ ಗೌರ್ನ್‌ಮೆಂಟು ಉದ್ಯೋಗ. ಅವರು ಯಾವಾಗಲೂ ಬಳ್ಳಾರಿ ಅತ್ತ ಕಡೆಯಲ್ಲೇ ಇರೋದು. ಹುಡುಗಿ ಮಾತ್ರ ಕೊಳ್ಳಾಜೆಯಲ್ಲಿ ಅದರ ಅಜ್ಜಿ ಮನೆಯಲ್ಲಿ ಉಂಟು. ಮದುವೇ ವಯಸ್ಸು ಬಂದಿದೆ; ಅಂದರೆ ಈಗ ಹದಿನಾಲ್ಕನೇ ವಯಸ್ಸು. ಹುಡುಗಿಯನ್ನು ನಾನೂ ನೋಡಿದ್ದೇನೆ, ಆಗಬಹುದು; ನಿಮ್ಮ ಶೀನೂ ಕೂಡಾ ನೋಡಿದರೆ ಒಪ್ಪಿಯೇ ಬಿಟ್ಟಾನು."

"ಅದಲ್ಲ ಜೋಯಿಸರೆ, ಹುಡುಗಿಯ ತಂದೆಗೆ ಗೌರ್ಮೆಂಟ್ ಉದ್ಯೋಗವಂತ ಕೇಳಿದರೆ, ಅಷ್ಟು ದೊಡ್ಡವರು ನಮ್ಮಂಥಾ ಬಡವರಿಗೆ ಕೊಟ್ಟಾರು? ಅಂತಾ ದೊಡ್ಡವರ ಮನೆಯ ಹುಡುಗಿನ ತಂದರೆ ನಾವಾದರೂ ಸವಾಳಿಸಿಕೊಂಡೇವಾ?"

ರಾಮಾ ಜೋಯಿಸರು ಮತ್ತೆ ಬಚ್ಚೇತಟ್ಟೆಯನ್ನು ಬದಿಗೆ ಎಳೆದುಕೊಂಡು ಕೈಗೆ ಆ ಕೆಲಸವನ್ನು ಕೊಟ್ಟು,—"ಆ ಸಂದೇಹ ಬಿಡಿ

ಲಕ್ಷ್ಮಮ್ಮ. ದೊಡ್ಡವರ ಮಗಳಾದರೂ ತಂದೆಯೊಂದಿಗೆ ಬೆಳೆದ ಹುಡುಗಿಯಲ್ಲವದು. ತಂದೆಗೆ ಉದ್ಯೋಗದ ಮೇಲೆ ಊರಿಂದೂರಿಗೆ ತಿರುಗಬೇಕಾಗಿ ಬರುವುದರಿಂದ ಈ ಹುಡುಗಿಯನ್ನು ಅಜ್ಜಿಮನೆಯಲ್ಲಿ ಬಿಟ್ಟಿದ್ದಾರೆ. ಹುಡುಗಿಗೆ ತಾಯಿಯಿಲ್ಲ ನೋಡಿ! ಅಂತೆಯೆ ಅಜ್ಜಿಗೂ ಮೊಮ್ಮಗಳ ಮೇಲೆ ಬಹಳ ಮೋಹ. ತನ್ನ ಬಳಿಯಲ್ಲಿ ಇಟ್ಟುಕೊಂಡು, ಬೆಳೆಸಿದ್ದಾರೆ. ಅಲ್ಲದೆ ಸೋದರಮಾವ ಇದ್ದಾರೆ. ಅವರು ನಮಗೆ ತುಂಬ ಪರಿಚಯದವರು, ನಾರಾಯಣಯ್ಯಾಂತ. ಅವರೇ ಹುಡುಗಿಯ ಜಾತಕವನ್ನು ನನಗೆ ಕೊಟ್ಟು 'ನಿಮ್ಮಕಡೆ ಎಲ್ಲಾದರೂ ವರನೋಡೀ'ಂತ ಹೇಳಿದರು. ನಾನೂ ಮೊನ್ನೆ ಕೊಳ್ಳ್ಯಜೆಗೆ ಹೋದಲ್ಲಿ ಹುಡುಗಿಯನ್ನೇ ಖುದ್ದು ನೋಡಿ ವಿಚಾರಿಸಿಕೊಂಡೆ. ಹುಡುಗಿಯ ಹೆಸರು 'ಸುಂದರಿ'. ಹೆಸರಿಗೆ ತಕ್ಕ ಹಾಗೇ ಉಂಟೂನ್ನಿ. ಕಟ್ಟು-ಮೈಕಟ್ಟು-ಕಳೆ-ಲಕ್ಷಣ-ಎಲ್ಲ ಚನ್ನಾಗಿದೆ. ಎಂಟನೇ ಕ್ಲಾಸಿನವರೆಗೆ ಓದಿಸಿದ್ದಾರಂತೆ. ತಕ್ಕಷ್ಟು ಓದಲು--ಬರೆಯಲು ಬಂದರ ಹೆಂಗುಸಿಗೆ ಸಾಲದೆ? ಇನ್ನು ಕೆಲಸ ಕಾರ್ಯದಲ್ಲಿ—ನೋಟಕ್ಕೆ ಚುರುಕಾಗಿದೆ; ಹಳ್ಳಿಮನೆಯ—ಅದೂ ನಾಗುವಳ್ಳಿಯರುವವರಮನೆಯಲ್ಲಿ ಬೆಳೆದ ಹುಡುಗಿಯಾಗಿದ್ದರಿಂದ, ಮನೆಗೆಲಸಗಳಲ್ಲೆಲ್ಲಾ ನುರಿತೇ ಇದ್ದಾಳೆ. ನನಗೆ ತೋರುತ್ತೆ—ಲಕ್ಷ್ಮಮ್ಮ, ಅಂಥಾ ಹುಡುಗಿ ಬಂದರೆ ನಿಮ್ಮ ಭಾರವೇ ಇಳಿದು ಹೋದೀತೂಂತ! ಒಮ್ಮೆ ನೀವೇ ನನ್ನೊಂದಿಗೆ ಹೊರಟು ಹೋಗಿ ಹುಡುಗಿಯನ್ನು ನೋಡಿಕೊಂಡು ಬರುವ."

ಲಕ್ಷ್ಮಮ್ಮ ವಿಚಾರ ಮಾಡುತ್ತ—"ಅಲ್ಲಾ, ನಮ್ಮಂಥ ಬಡವರಿಗೆ?"

"ಆ ಸಂಶೇಪವೆ ಬೇಡ ನಿಮಗೆ. ನಾನು ನಾರಾಯಣಯ್ಯನೊಡನೆ ಆ ವಿಷಯ ಪೂರಾ ಮಾತಾಡಿದ್ದೇನೆ. ಆ ಹುಡುಗಿಯ ತಂದೆ—ಹೆಸರು ಮುಕುಂದರಾಯರೆಂದು, ಅವರು ನಾರಾಯಣಯ್ಯನಿಗೆ ಖಂಡಿತ ಮಾಡಿ ಬರೆದಿದ್ದಾರೆ. ಏನೆಂದರೆ, 'ವರ ಶ್ರೀಮಂತನಾಗಬೇಕೆಂದಿಲ್ಲ, ಬಿ. ಎ; ಎಂ. ಎ; ಅಂತ ವಿದ್ವಾಂಸನಾಗಬೇಕೆಂದಿಲ್ಲ; ಆದರೆ ನಾಲ್ಕು ನೋಟಗಳ ಕಾಟವಿಲ್ಲದೆ, ಒಳ್ಳೆಯ ನಡತೆಯುಳ್ಳವನಾಗಿ ಏನಾದರೊಂದು ಸಮುದ್ಯೋಗದಲ್ಲಿ ನಾಲ್ಕು ಕಾಸು ಸಂಪಾದನೆ ಮಾಡುವಂತಹವನಾಗಿದ್ದರೆ ಸಾಕು. ಎಲ್ಲಾ ನೀವೇ ನೋಡಿ, ಮುಹೂರ್ತ ಕೂಡಾ ನಿಶ್ಚಯ ಮಾಡಿ ಕಾಗದ ಹಾಕಿದರೆ ಆ ಸಮಯಕ್ಕೆ ಸರಿಯಾಗಿ ನಾನು ಬರುತ್ತೇನೆ ಅಂತ.'"

"ಓ! ಹಾಗಿದ್ದರೆ ಮದುವೆಯ ಜವಾಬುದಾರಿಯೆಲ್ಲ ಹುಡುಗೆಯ ಸೋದರ ಮಾವನ ಮೇಲೆಯೇ ಉಂಟೊನ್ನಿ."

"ಹೌದು. ಹಣವೆಲ್ಲ ಬೇಕಾದ ಹಾಗೆ ಮುಕುಂದರಾಯರು ಕಳುಹಿಸುತ್ತಾರೆ. ಬಾಕಿ ಎಲ್ಲದ್ದಕ್ಕೂ ನಾರಾಯಣಯ್ಯ."

"ಹೌದು ಜೋಯಿಸರೆ, ಅವರು ಅವರ ಅಂತಸ್ತಿಗೆ ತಕ್ಕಂತೆ ಗೌಜಿಯಿಂದ ಮಾಡಿಯಾರು; ಆದಕ್ಕೆ ತಕ್ಕ ಹಾಗೆ ನಡೆದುಕೊಳ್ಳಲಿಕ್ಕಾದರೂ ನಮಗೆ ಶಕ್ತಿ ಬೇಕಲ್ಲ?"

"ಓ! ಇನ್ನೊಂದು ಮುಖ್ಯ ವಿಷಯ ನಿಮಗೆ ಹೇಳಲಿಕ್ಕೆ ಮರೆತೆ" ಎಂದು ಜೋಯಿಸರು, ಮಗುದೊಮ್ಮೆ ಎದ್ದು ತಾಂಬೂಲವನ್ನು ಉಗುಳಿ-ಬಂದು ಕುಳಿತು,—"ಇದರಲ್ಲಿ ದೊಡ್ಡಸ್ತಿಕೆ-ಬಡಸ್ತಿಕೆಗಳಿಗೆ ಎಡೆಯೆ ಇಲ್ಲದ ಹಾಗೆ ಕಣ್ವತೀರ್ಥ ಕ್ಷೇತ್ರದಲ್ಲಿಯೇ ಮದುವೆಯಾಗಬೇಕಂತ, ಆ ಹುಡುಗಿಯ ತಾಯಿಯೊಂದು ಹರಕೆ ಹೊತ್ತಿದ್ದಾಳಂತೆ. ಆಯಿತೋ ಇಲ್ಲವೊ? ನೀವು ನಿಮಗೆ ಬೇಕಾದ ನಾಲ್ಕು ಜನರನ್ನು ಕರೆದುಕೊಂಡು ಅಲ್ಲಿಗೆ ಹೋಗಿಬಿಡುವುದು, ಅವರೂ ಅಷ್ಟೇ ಜನರೊಂದಿಗೆ ಅಲ್ಲಿಗೆ ಬರುವುದು; ಎಲ್ಲಾ ಒಂದೇ ದಿನದೊಳಗೆ ಮುಗಿದು ಹೋಗುತ್ತೆ. ನಿಮಗೇನೂ ಖರ್ಚಿಲ್ಲ!"

"ಅದೇನು? ಹಾಗೆ ಹರಿಕೆ ಹೊರಲು ಕಾರಣ?"

"ಅದೇನೋ—ಆ ಹುಡುಗಿಗೆ ಹಿಂದೆ ಕಠಿನವಾದದೊಂದು ಕಾಯಿಲೆ ಬಂತಂತೆ. ಆಗ ಜೀವದಲ್ಲಿದ್ದ ಅದರ ತಾಯಿ 'ಈ ಮಗು ಬದುಕಿದರೆ, ಕಣ್ವತೀರ್ಥದಲ್ಲಿ ನಮ್ಮ ಖರ್ಚಿನಿಂದಲೇ ಸಾಲಂಕಾರ ಕನ್ಯಾದಾನ ಮಾಡುತ್ತೇವೆ.' ಅಂತ ಹರಕೆ ಹೊತ್ತಳಂತೆ. ಪಾಪ! ಅವಳು ಸತ್ತುಹೋದರೂ ಆ ಹರಕೆಯನ್ನು ಈಡೇರಿಸಬೇಕು ನೋಡಿ!"

"ಬೇಡವೆ ಮತ್ತೆ? ಹಾಗಾದರೆ ಮುಕುಂದರಾಯರು ಎರಡನೇ ಮದುವೇ—ಗಿದುವೇ ಮಾಡಿಕೊಂಡಿದ್ದಾರೇನೋ?"

"ಅಂ! ಮೊದಲನೇ ಹೆಂಡತಿ ಸತ್ತು ಅನೇಕ ವರ್ಷಗಳಾದರೂ ಮಾಡಿಕೊಳ್ಳಲೇ ಇಲ್ಲ. ಇತ್ತೀಚೆಗೆ ಅಂದರೆ ಎರಡು ವರ್ಷಗಳ ಪೂರ್ವದಲ್ಲಿ ಎಲ್ಲಿಯೋ ತಮಿಳು ಪ್ರಾಂತದ ಹುಡುಗಿಯನ್ನು ಮಾಡಿಕೊಂಡಿದ್ದಾ

ರೆಂತ ವರ್ತಮಾನ. ಅದು ಏನಾದರೂ ನಮಗೇನು ಹೇಳಿ. ನಾನು ಆ ಮುಕುಂದರಾಯರನ್ನೂ ಬಲ್ಲೆ. ತುಂಬಾ ಒಳ್ಳೆಯ ಘನವಂತರು. ನಿಮ್ಮ ಶೀನುವಿನ ಕವಿತಾ ಕಲೆಗಳಿಗೆಲ್ಲ ಅವರಿಂದ ತುಂಬಾ ಸಹಾಯವಾದೀತು. ಲಕ್ಷಮ್ಮ! ಯೋಚಿಸಿ ನೋಡಿ. ನಿಮ್ಮ ಮಗ ಬಂದರೆ ಅವನೂ ನೀವೂ ಕೂಡಿಯೇ ಬನ್ನಿರಿ–ಹೋಗೋಣ ಹುಡುಗಿಯನ್ನು ನೋಡಲಿಕ್ಕೆ."

"ಅವನಂತೂ ಖಂಡಿತವಾಗಿ ಬರೆದಿದ್ದಾನಲ್ಲಾ 'ನೀನೇ ಎಲ್ಲಾ ನೋಡಿ ಬರೀ'ಂತ, ನಿಮ್ಮ ಹೇಳಿಕೆ ಪ್ರಕಾರ ನೋಡಿದರೆ ಆಗಬಹುದು ಅಂತ ಕಾಣುತ್ತೆ. ದೂರದ ನೆಂಟಸ್ತಿಕೆ ಆದರೇನಾಯಿತು? ಬೀಗರು ಬೀಗರೊಳಗೆ ಜಗಳವಾಗುವುದು ಸ್ವಲ್ಪ ಕಡಮೆಯೆ ಆಗುತ್ತೆ."

ಜೋಯಿಸರು ನಕ್ಕು—"ಜಗಳಕ್ಕೆ ಯಾರಿದ್ದಾರೆ? ಮುಖ್ಯ ಬೀಗಿತ್ತಿ ಹುಡುಗಿಯ ತಾಯಿ ಇಲ್ಲವೇ ಇಲ್ಲಲ್ಲ? ಇರಲಿ. ಹಾಗಾದರೆ ನಾನು ನಾಡದು ಗುರುವಾರದಿನ ಬರುತ್ತೇನೆ. ಇಬ್ಬರೂ ಬಸ್ಸು ಹತ್ತಿ ಹೋಗಿ ಬರೋಣವೇ ಕೊಳ್ಳಾಜೆಗೆ?"

"ಗುರುವಾರ ಒಳ್ಳೆಯ ದಿನವೇನು?"

"ಮತ್ತಲ್ಲದೆ? ಒಳ್ಳೆಯ ದಿನವೆಂದೇ-ಹೇಳಿದೆ."

"ಆಗಬಹುದು ಹಾಗಾದರೆ"

"ಸರಿ–" ಎಂದು ರಾಮಾ ಜೋಯಿಸರು, ತಮ್ಮ ಪಂಚಾಂಗವನ್ನು ಕಟ್ಟಿಕೊಳ್ಳಲಾರಂಭಿಸಿದರು. ಮತ್ತೊಮ್ಮೆ ಗುರುವಾರದಿನ ಇಂತಹ ಹೊತ್ತಿನಲ್ಲಿ ಹೊರಡಬೇಕು,–ಇಂತಹ ಹೊತ್ತಿನಲ್ಲಿ ವಾಪಸು ಬರಬೇಕು-ಎಂಬ ವಿಷಯದಲ್ಲಿಯೂ ನಿರ್ಣಯ ಮಾಡಿಕೊಂಡು, ಜೋಯಿಸರು ಹೊರಡಬೇಕೆಂದು ಕಾಲೆತ್ತುವಷ್ಟರಲ್ಲಿ ಅಂಗಳದಾಚೆ ಬೇಲಿಯ ಕಡೆಯಿಂದ "ಲಕ್ಷಮ್ಮನವರೆ" ಎಂಬ ಶಬ್ದವು ಕೇಳಿಸಿತು.

ತಲೆಯೆತ್ತಿ ನೋಡಿದರೆ ಪೋಸ್ಟ್ ಜವಾನನು ಬರುತ್ತಿದ್ದನು. ಜೋಯಿಸರು ಲಗುಬಗೆಯಿಂದ ಮುಂದುವರಿದು ಹೋಗಿ ಅವನು ಕೊಟ್ಟ ಪತ್ರವನ್ನು ಪಡೆದುಕೊಂಡರು.

## ೨ ಅದೇನು ಗುಸಗುಸ !

"ಯಾರದು ಕಾಗದ ? ಶೀನುವೇ ಬರೆದಿರಬೇಕು. ಮತ್ತೆ ಯಾರು ಪತ್ರ ಬರೆಯುವರು ನನಗೆ ?" ಎಂದು ಲಕ್ಷ್ಮಮ್ಮ ಮುಂದಡಿಯಿಡುತ್ತಿರಲು, ರಾಮಾ ಜೋಯಿಸರು "ಇಗೊಳ್ಳಿ ಲಕ್ಷ್ಮಮ್ಮ" ಎಂದು ಪತ್ರವನ್ನು ಅವಳ ಕಡೆಗೆ ನೀಡಿದರು.

"ಈಗ ಇಲ್ಲಿ ಓದುವವರು ಯಾರೂ ಇಲ್ಲ; ಕೃಷ್ಣ ಶಾಲೆಗೆ ಹೋಗಿದ್ದಾನೆ. ನೀವೇ ಓದಿ ಹೇಳಿ ಜೋಯಿಸರೆ. ಶೀನುವೇ ಬರೆದಿದ್ದರೆ ಅವನ ಮದುವೇ ವಿಷಯವಾಗಿ! ಮತ್ತೇನು ಬರೆದಿದ್ದಾನೊ ? ನಿಮಗೂ ತಿಳಿಯಲಿ" ಎಂದಳು ಲಕ್ಷ್ಮಮ್ಮ.

ರಾಮಾ ಜೋಯಿಸರು ಮತ್ತೆ ಜಗಲಿಯಲ್ಲಿ ಕುಳಿತು ತಮ್ಮ ಪಂಚಾಂಗದ ಕಟ್ಟಿನೊಳಗಣಿಂದ ಕನ್ನಡಕವನ್ನು ತೆಗೆದೇರಿಸಿಕೊಂಡು, ಕವರನ್ನು ಒಡೆದು ಒಳಗಿನ ಪತ್ರವನ್ನು ಬಿಡಿಸಿ ಓದಲಾರಂಭಿಸಿದರು:—

"ಮಾತೃಶ್ರೀ ತಾಯಿಯ ಚರಣಾರವಿಂದಕ್ಕೆ. ಶ್ರೀನಿವಾಸನು ಮಾಡುವ ಸಾಷ್ಟಾಂಗ ನಮಸ್ಕಾರ. ಕ್ಷೇಮ, ಕ್ಷೇಮಕ್ಕೆ ಬರೆಯಬೇಕಾಗಿ ಬೇಡಿಕೊಳ್ಳುತ್ತೇನೆ. ಪರಿತರುವಾಯ—

ನನ್ನ ಲಗ್ನದ ವಿಷಯದಲ್ಲಿ ಮೂರು ದಿನಗಳ ಹಿಂದೆ ನಾನೊಂದು ಕಾಗದವನ್ನು ಬರೆದಿದ್ದೆ. ಅದರಲ್ಲಿ ನಾನು ಲಗ್ನಕ್ಕೆ ಒಪ್ಪಿರುವೆನೆಂದು ತಿಳಿದು ನೀನು ಆ ಪ್ರಯತ್ನದಲ್ಲಿ ತೊಡಗಿರಬಹುದು. ಆದರೆ ನಾನು ಪುನಃ ದೀರ್ಘಾಲೋಚನೆ ಮಾಡಿ ಬರೆಯುವುದೇನೆಂದರೆ: ನಾನು ನಾಚಿಗೆ ದಾಕ್ಷಿಣ್ಯಗಳನ್ನು ಬಿಟ್ಟು ನಿನಗೆ ನನ್ನ ಹೃದ್ಗತವನ್ನು ತಿಳಿಸುತ್ತೇನೆ. ನಾವು ಕಲ್ಲಿಕೋಟೆಯ ಕುಂಞಂಘೇರಿಯಲ್ಲಿದ್ದಾಗ, ನಮ್ಮ ನೆರೆಮನೆಯಲ್ಲಿ, ಶಂಬಗಭಟ್ಟರ ಮಗಳು ಕಮಲಾ ಎಂಬ ಹುಡುಗಿ ಇದ್ದಳಷ್ಟೆ ? ನಾನು ಮದುವೆ ಮಾಡಿಕೊಳ್ಳುವದಾದರೆ ಅವಳನ್ನೆ ಮಾಡಿಕೊಳ್ಳಬೇಕು, ಇಲ್ಲದಿದ್ದರೆ ಬ್ರಹ್ಮಚಾರಿಯಾಗಿರಬೇಕು—ಎಂದು ಮನಸ್ಸಿನಲ್ಲಿ ತೀರ್ಮಾನಿಸಿದ್ದೆನು. ನಾವು ಕುಂಞಂಘೇರಿಯನ್ನು ಬಿಟ್ಟು ಈಗ ಆರು ವರ್ಷಗಳಾದುವು. ಈ ಆರು ವರ್ಷಗಳಲ್ಲಿ ನಾವು ಶಂಬಗಭಟ್ಟರಿಗೆ ಕಾಗದವನ್ನೂ ಹಾಕಲಿಲ್ಲ.

ಅವರ ಯಾವ ಸಮಾಚಾರವನ್ನೂ ತಿಳಿಯಲಿಲ್ಲ. ಈಗ ಕಮಲೆಗೆ ಮದುವೆಯ ವಯಸ್ಸು ಬಂದಿರಬೇಕು. ನೀನು ಶಿಂಬಗಭಟ್ಟರ ಹೆಂಡತಿ ಸೀತಮ್ಮನಿಗೆ ಒಂದು ಪತ್ರವನ್ನು ಬರೆದು ಕಮಲೆಗೆ ಮದುವೆಯಾಯಿತೋ ಇಲ್ಲವೋ ಎಂಬುದನ್ನು ತಿಳಿದುನೋಡು ಆಗಿರದಿದ್ದರೆ ಯಾವ ರೀತಿಯಿಂದಾದರೂ ಅವಳನ್ನೆ ನನಗೆ ಮದುವೆಯಾಗಿಸುವ ಪ್ರಯತ್ನ ಮಾಡಬೇಕು. ಈ ವಿಷಯವನ್ನು ಅವರಿಗೆ ನಾನೇ ಬರೆದು ತಿಳಿಯುವುದು ಅಷ್ಟು ಉಚಿತವಲ್ಲ. ನಿನಗೆ ಸೀತಮ್ಮ ತುಂಬಾ ಗುರುತಿನವಳಾದುದರಿಂದ, ನಿನಗೆ ಖಂಡಿತವಾಗಿ ಉತ್ತರವನ್ನು ಬರೆದಾರು. ಈ ಸಂಗತಿಯನ್ನು ಪರಿಷ್ಕಾರವಾಗಿ ತಿಳಿದುಕೊಂಡು ಆಮೇಲೆಯೇ ಮುಂದಣ ಪ್ರಯತ್ನಕ್ಕೆ ಕೈಹಾಕಬೇಕು. ಅಲ್ಲಿಂದ ಉತ್ತರವು ಬರುತ್ತಲೇ ಎಲ್ಲಾ ವಿವರಗಳನ್ನೂ ಬರೆಯಿಸಿಹಾಕು. ಬೇರೇನೂ ವಿಶೇಷವಿಲ್ಲ. ಇತಿ ಬೇಡುವ ಆಶೀರ್ವಾದ."

ಪತ್ರವನ್ನು ಮಡಚಿ ಕವರಿನೊಳಗಿಟ್ಟು ರಾಮಾ ಜೋಯಿಸರು ಲಕ್ಷ್ಮಮ್ಮನ ಮುಖವನ್ನು ನೋಡಿ ತಲೆದೂಗುತ್ತಾ ಕನ್ನಡಕವನ್ನು ಕಳಚಿ "ಹೂಂ" ಎಂದುಕೊಂಡರು.

ಲಕ್ಷ್ಮಮ್ಮ ಒಂದು ನಿಮಿಷ ಸ್ತಬ್ಧಳಾಗಿದ್ದಳು. ''ಹೀಗೂ ಉಂಟೆ ಹಾಗಾದರೆ!'' ಎಂಬ ಉದ್ಗಾರವು ಅವಳ ಅರೆದೆರೆದ ಬಾಯಿಯಿಂದ ಹೊರಬಿತ್ತು.

ಜೋಯಿಸರು ಅತ್ತಿಂದಿತ್ತ ತಿರುಗಾಡುತ್ತ—''ಅದೇ ನೋಡಿ ಲಕ್ಷ್ಮಮ್ಮ! ಮದುವೆ ಬೇಡ-ಬೇಡಾಂತ ಅಂದರೆ ಏನೋ ಒಳಗುಟ್ಟು ಇರಲೇಬೇಕೆಂದು ಯೋಚನೆ ಮಾಡಿಕೊಂಡಿದ್ದೆ. ಈಗಿನ ಕಾಲದ ಹುಡುಗರಿಗೆಲ್ಲಾ ಇಂಥಾ ಪ್ರೇಮಲಹರಿಗಳು ಹುಟ್ಟಿಯೇ ಹುಟ್ಟುತ್ತವೆ ಇದರಲ್ಲಿ ಏನೂ ಆಶ್ಚರ್ಯವಿಲ್ಲ ಅದಿರಲಿ ಲಕ್ಷ್ಮಮ್ಮ, ಈಗ ಏನು ಮಾಡಬೇಕಂತ ಇದ್ದೀರಿ? ಯಾವಳು ಕಮಲಾ ಎಂಬ ಹುಡುಗಿ? ಏನಾದರೂ ಮೊದಲೇ ಅವರು ಆ ಕನ್ಯೆಯನ್ನು ಕೊಡುತ್ತೇವೆಂದು ಹೇಳಿದ್ದರೇನು?''

''ಛೆಛೆ! ಅದೇನೂ ಇಲ್ಲ ಜೋಯಿಸರೆ! ನಾವು ಕುಂಬಾಂಛೇರಿಯಲ್ಲಿದ್ದಾಗ, ನಮ್ಮ ನೆರೆಮನೆಯಲ್ಲಿ ಶಿಂಬಗಭಟ್ಟರೆಂತ ಒಬ್ಬರು ಐಯ್ಯರು ವಾಸವಾಗಿದ್ದರು. ಅವರ ಮಗಳು ಕಮಲಾ ಎಂಬ ಹುಡುಗಿ

ತುಂಬ ಮುದ್ದು ಮುದ್ದಾಗಿತ್ತು. ಯಾವಾಗಲೂ ನಮ್ಮ ಮನೆಗೆ ಬಂದು ನಮ್ಮ ಶೀನೂನ ಜತೆಲೇ ಇರುವಳು. ಆಗ ಅವಳು ಎಂಟು ಹತ್ತು ವರ್ಷದ ಹುಡುಗಿ. ಶೀನುವಿಗೆ ಹದಿನಾಲ್ಕು ಹದಿನೈದು ವರ್ಷ. ಕತೆ ಬರೆಯುವುದು ಚಿತ್ರ ಬಿಡಿಸುವುದು ಪದ ಕಟ್ಟುವುದು ಅಂದರೆ ಶೀನೂಗೆ ಆಗಿಂದಲೇ ದೊಡ್ಡ ಹುಚ್ಚು. ಆ ಹುಡುಗಿಯೂ ಹಾಗೆಯೇ ಇವನಿಂದ ಕತೆ ಹೇಳಿಸೋದು-ಬರಿಸೋದು-ಇವನು ಚಿತ್ರ ಬಿಡಿಸುವಾಗ ನೋಡುವುದು-ಬಣ್ಣ ಹಾಕುವದು, ಅವಳೂ ಇವನ ಹಾಗೇ ಮಾಡುವದು-ಹೀಗೆ ಇಬ್ಬರೂ ಬಹಳ ಅನ್ಯೋನ್ಯರಾಗಿದ್ದದ್ದು ನಿಜವೇ. ನಾವೆಲ್ಲಾ ಏನೋ ಹುಡುಗಾಟಾಂತ ತಿಳಕೊಂಡಿದ್ದೆವು. ಹೀಗಾಗುತ್ತೆಂತ ಮಾಡಿರಲಿಲ್ಲ—"

"ಈಗೇನು ಆ ಹುಡುಗಿಗೆ ಇನ್ನೂ ಮದುವೆಯಾಗಿಲ್ಲಾಂತಲೋ ನಿಮ್ಮ ಅಭಿಪ್ರಾಯ?"

"ಆಗಿರಲಿ, ಆಗದಿರಲಿ! ಆ ಹುಡುಗಿಯ ಅಪ್ಪ ಬಹಳ ಆಶೆಯುಳ್ಳವ. ಆ ಶಿಂಬಗಭಟ್ಟರು ಆಗಲೇ ಹೇಳಿಕೊಂಡಿದ್ದರು, ಕಮಲಾ ದೊಡ್ಡವಳಾದರೆ ಐದು ಸಾವಿರ ಸಿಕ್ಕುತ್ತೆ--ಹತ್ತು ಸಾವಿರ ಸಿಕ್ಕುತ್ತೇಂತ—"

"ಹಃ! ಪಡ್ಚಾಯ್ತು!" ಎಂದು ಜೋಯಿಸರು ಬಾಯಿಯನ್ನು ಇಷ್ಟಗಲ ತೆರೆದು ಒಂದು ದೊಡ್ಡ ಅಟ್ಟಹಾಸ ಮಾಡಿ—"ಅಂತೂ ಆ ಕಮಲಾ ಎಂಬ ಹುಡುಗಿ ಒಂದು ವ್ಯಾಪಾರದ ಹುಡುಗೀ ಅನ್ನಿ. ಇಷ್ಟು ಹೊತ್ತಿಗೆ ವ್ಯಾಪಾರವಾಗಿದ್ದರಂತೂ ತಿರಿಯೇಹೋಯಿತು. ಇಲ್ಲದಿದ್ದರೆ ಸಾವಿರಗಟ್ಟಲೆ ಕನ್ಯಾಶುಲ್ಕ ಸುರಿದು ಆ ಕಮಲೆಯನ್ನು ಕೊಂಡುಕೊಳ್ಳಲು ನಿಮಗೆ ಸಾಧ್ಯವೇನಮ್ಮ?"

"ಎಷ್ಟುಮಾತ್ರಕ್ಕೂ ಸಾಧ್ಯವಿಲ್ಲಪ್ಪಾ!"

"ಮತ್ತೆ ಬಿಡಿರಿ ಆ ವಿಚಾರ." ಜೋಯಿಸರು ಮತ್ತೆ ಜಗಲಿಯಲ್ಲಿ ಕುಳಿತು ಬಚ್ಚೇತಟ್ಟೆಗೆ ಕೈಯಿಟ್ಟರು.

ಲಕ್ಷ್ಮಮ್ಮ "ಹೌದು. ಆದರೆ ಶೀನು ಇಷ್ಟರ ಮಟ್ಟಿಗೆ ಬರೆದಿದ್ದಾನಲ್ಲ? ಒಂದು ಕಾಗದವನ್ನು ಆ ಸೀತಮ್ಮನಿಗೆ ಹಾಕಿಸಿಯೇ ಬಿಡೋಣ. ಬಾಧಕವೇನು? ಸಂಗತಿಯಾದರೂ ತಿಳಿದೀತು."

"ಹಾಗಾದರೆ ಕೊಳ್ಯಾಜಿಯ ಸಂಬಂಧವನ್ನು ಬಿಟ್ಟುಬಿಡೋಣವೇ ಪ್ರಕೃತ?"

"ಬಿಡಬಾರದು ಜೋಯಿಸರೆ; ಆದರೆ ಸ್ವಲ್ಪ ನಿಧಾನಿಸೋಣ ವೇಂತ ನಾನನ್ನೋದು."

ಜೋಯಿಸರು ಅಡಿಕೆ ಹೋಳನ್ನು ಬಾಯಿಗೆ ಬಿಸುಟುಕೊಂಡು, "ಅದೇ ನೋಡಿ ಅಮ್ಮಾ ಹೆಂಗುಸರ ಬುದ್ಧಿ ಬಹಳ ಚಂಚಲಾ ಅನ್ನೋದು. 'ಆಲಸ್ಯಾದಮೃತಂ ವಿಷಂ' ಅಂತ ಹಿರಿಯರು ಅಂತಾರೆ. ನಿಧಾನಿಸಿದರೆ ಈ ಸಂಬಂಧ ತಪ್ಪಿಹೋಗುವ ಸಂಭವವುಂಟು. ಕೊಳ್ಯಾಜಿಯು ಹುಡುಗಿಗೆ ಆದಷ್ಟು ಬೇಗನೆ ಮದುವೆ ಮಾಡಬೇಕಂತ ಸಂಕಲ್ಪದಲ್ಲಿದ್ದಾರೆ. ಯಾವುದಕ್ಕೂ—" ಎಂದು ಎದ್ದು ಹೋಗಿ ತಂಬುಲವನ್ನು ಗುಳಿ ಬಂದು—"ಲಕ್ಷ್ಮಮ್ಮ, ನೀವು ಸೀತಮ್ಮನಿಗೂ ಕಾಗದ ಹಾಕಿರಿ. ಅದು ಮುಕ್ಕಾಲೂ-ಮೂರುವೀಸ ಕೈಮೀರಿ ಹೋಗುವಂತಾದ್ದೇ. ಅಲ್ಲಿಂದ ನಿರಾಶೆಯ ಉತ್ತರವೇ ಬಂದರೂ ನಿಮ್ಮ ಶೀನೂಗೆ ಹಾಗೆ ಬರೆಯಲೇ ಬಾರದು. ಉಪಾಯವಾಗಿ ಬರೆದು ಅವನು ಊರಿಗೆ ಬರುವ ಹಾಗೆ ಮಾಡಬೇಕು. ಅದಿರಲಿ, ನಾವು ಹಿಡಿದ ಕೆಲಸವನ್ನು ಬಿಟ್ಟುಬಿಡುವುದೇಕೆ ಮತ್ತೆ? ನಾಡದು ಗುರುವಾರ ನಾನು ಬರ್ರುತ್ತೇನೆ. ನಿಮ್ಮೊಂದಿಗೆ ನಿಮ್ಮ ಕಡೆಯವರಾಗಿ ಬೇರೆ ಯಾರಾದರೂ ಬರುತ್ತಾರೆಯೆ?"

"ಯಾರಿದ್ದಾರೆ ಜೋಯಿಸರೆ ನಮಗೆ? ಇರುವ ನನ್ನ ಅಣ್ಣನೊಬ್ಬ ನನ್ನ ಮೇಲೆ ಅಕಾರಣವಾಗಿ ಸಿಟ್ಟಾಗಿದ್ದಾನೆ. ನಮ್ಮವರ ಮೇಲಿನ ಸಿಟ್ಟಿನಿಂದ ಬಾಪಂದಿರೂ ನಮ್ಮನ್ನು ಮೂಸಿನೋಡಲಿಕ್ಕೂ ಬರುವುದಿಲ್ಲ ಮತ್ತೆ ಯಾರಿದ್ದಾರೆ ಹೇಳಿ?"

"ಹಾಗಲ್ಲ ಲಕ್ಷ್ಮಮ್ಮ, ಈ ಶುಭಕಾರ್ಯಕ್ಕೆ ಯಾರಾದರೂ ನಿಮ್ಮವರಾದ ಒಬ್ಬರು ಮುಂದಾಳು ಬೇಕಲ್ಲ? ನಿಮ್ಮ ಅಣ್ಣ ವೆಂಕಟ್ರಾಯರನ್ನೆ ಆದಷ್ಟು ಒಳ್ಳೆಯದು ಮಾಡಿಕೊಳ್ಳಲಿಕ್ಕಾಗುತ್ತದೊ ನೋಡಿ, ಆದರೂ ಅವರು ಸಿಟ್ಟು ಬಿಟ್ಟು ಬರದಿದ್ದರೆ ಬೇಡ; ದೇವರಿದ್ದಾನೆ. ನಾವಿಬ್ಬರೇ ಹೋಗಿಬರೋಣ. ಯಾರಿದ್ದು ಏನು ಮಾಡಿಯಾರು?"

“ ಕಡೆಗೆ ಹಾಗೇ ಕಾಣುತ್ತೆ. ಯಾವುದಕ್ಕೂ ನೀವು ನಾಡದು ಗುರುವಾರ ಬೆಳಗ್ಗೆ ಬನ್ನಿ ಹಾಗಾದರೆ.”

“ ಆಗಲಿ, ನನಗೂ ಹೊತ್ತಾಯಿತೀಗ” ಎಂದು ಜೋಯಿಸರು ತಮ್ಮ ಪಂಚಾಂಗದ ಕಟ್ಟನ್ನು ಎತ್ತಿಕೊಂಡು ಹೊರಡುತ್ತ—“ ಲಕ್ಷ್ಮಮ್ಮ, ಆದಂತೆ ಗುರುವಾರ ಬೆಳಿಗ್ಗೆ ಫಸ್ಟ್ ಬಸ್ಸಿನಲ್ಲಿರುತ್ತೇನೆ ನೋಡಿ. ನಿಮಗೂ ಟಿಕೇಟು ಕೊಂಡಿರುತ್ತೇನೆ. ನೀವು ತಪ್ಪದೆ ಆ ಬಸ್ಸಿಗೆ ಕಾದಿರಬೇಕು. ವೆಂಕಟ್ರಾಯರು ಬಂದರೆ ಅವರ ಮಗನಾಗಲೀ ನಿಮ್ಮ ಕೃಷ್ಣನಾಗಲೀ ಹೊರಡಬೇಕು. ಯಾಕಂದರೆ ಶುಭಕಾರ್ಯಕ್ಕೆ ಮೂರು ಮಂದಿಯಾಗಿ ಹೋಗಬಾರದು.”

“ ಆಗಬಹುದು ಆಗಬಹುದು.”

ರಾಮಾ ಜೋಯಿಸರು ಅವಸರವಸರದಿಂದ ಹೊರಡುವಾಗ, ಶಾಲೆಯಿಂದ ಪುಸ್ತಕಗಳ ಚೀಲದೊಂದಿಗೆ ಹುಡುಗ ಕೃಷ್ಣನೂ ಹುಡುಗಿ ಗೌರಿಯೂ ಮನೆಗೆ ಬಂದರು ಕೃಷ್ಣನು ಜೋಯಿಸರನ್ನು ನೋಡಿ “ ಏನು ಜೋಯಿಸರೆ! ಏನು ವಿಶೇಷ?” ಎಂದು ಮಾತಾಡಿಸಿದನು.

“ ವಿಶೇಷವಿಲ್ಲದೆ ನನ್ನಂಥ ಜೋಯಿಸರು ಬಂದಾರೇ? ಎಲ್ಲಾ ನಿನ್ನ ಅಮ್ಮನನ್ನು ಕೇಳು. ದೇವರ ದಯದಿಂದ ಬೇಗದಲ್ಲೆ ನಿನಗೊಬ್ಬಳು ಅತ್ತಿಗೆ ಬರುವ ಯೋಗವುಂಟಪ್ಪಾ!”

“ ಬರಲಿ, ಜೋಯಿಸರೆ, ಬರಲಿ ನಿಮ್ಮ ಪುಣ್ಯದಿಂದ” ಎನ್ನುತ್ತಾ ಕೃಷ್ಣನು ಮನೆಯೊಳಗೆ ಹೊಕ್ಕನು.

ಜೋಯಿಸರು ಅಲ್ಲಿಂದ ಹೊರಟು ಬೀದಿಗೆ ಬರುತ್ತಲೇ, ಅಲ್ಲಿ ಅವರನ್ನೆ ಕಾದುಕೊಂಡು ಸಾಲುಮರದ ಬುಡದಲ್ಲಿ ವಿಶ್ರಾಂತಿಪಡೆಯುತ್ತಿದ್ದ ವ್ಯಕ್ತಿಯನ್ನು ನೋಡಿ—“ ಏನು ನಾರಾಯಣಯ್ಯ, ಬಹಳ ಹೊತ್ತಾಯಿತಂತ ಕಾಣುತ್ತೆ. ಕಾದುಕಾದು ಬೇಜಾರಾತೇನೊ?” ಎಂದರು.

“ ಛೆಛೆ! ಮುಖ್ಯ ಕಾರ್ಯವೇನಾಯಿತು? ಹಣ್ಣೊ—ಕಾಯೊ?”

“ ಈ ರಾಮಾ ಜೋಯಿಸರು ಹಿಡಿದ ಕಾರ್ಯವು ಕಾಯಾಗಿ ನಿಂತೀತೆ? ನಾಡದು ಗುರುವಾರ—ನಾಟಕ ಚಲೋ ರೀತಿಯಲ್ಲಿ ಜರುಗಬೇಕು ನೋಡೀ! ನಡೆಯಿರತ್ತ, ಇಲ್ಲಿಯೇ ಇನ್ನಿದ್ದರೆ ಯಾರಾದರೂ ಕೇಳಿ

ಏನಾದರೂ ಕಹಿಯಿದ್ದೀತು!'' ಎಂದು ರಾಮಾ ಜೋಯಿಸರು ಮುಂದೆ ನಡೆದರು.

ನಾರಾಯಣಯ್ಯನೂ ಎದ್ದು ಅವರನ್ನು ಅನುಸರಿಸುತ್ತ—“ಅಲ್ಲಯ್ಯ ಜೋಯಿಸರೆ! ನಾಡದು ಎಷ್ಟು ಮಂದಿಯನ್ನು ಕರಕೊಂಡು ಬಂದೀರಿ? ಅವಳೊಬ್ಬಳೇ ಬರುವ ಹಾಗೆ ಮಾಡಿದ್ದೀರಾ?''

“ಹಾಗೇ ಆಗುತ್ತೆ ಬಿಡಿ! ಮತ್ತೆ ಯಾರಿದ್ದಾರೆ ಅವಳೊಟ್ಟಿಗೆ ಬರು ವವರು? ಹಾಗೇನಾದರೂ ಆದರೆ ನಾಟಕ ಚಂದಾಗಿ ತೋರಿಸಿಬಿಟ್ಟರೆ ತೀರಿತು! ನಿಮಗೇಕೆ?–ನಡೆಯಿರಿ–ಎಲ್ಲ ನಾಸಿದ್ದೇನೆ!''

ಈ ರೀತಿಯಾಗಿ ಇಬ್ಬರೂ ಗುಸುಗುಸು ಮಾತಾಡುತ್ತ ನಗುತ್ತ ಎಲ್ಲಿಗೋ ಹೊರಟರು. ಅವರು ಎಲ್ಲಿಗಾದರೂ ಹೋಗಲಿ, ನಮಗೇನು? ಆದರೆ ಅವರ ಮಾತಿನ ಪೊಲಬನ್ನು ನೋಡಿದರೆ ಪಾಪ, ನಮ್ಮ ಸಾಧು ಲಕ್ಷ್ಮಮ್ಮನನ್ನು ಏನೋ ಇಂದ್ರಜಾಲದಲ್ಲಿ ಹಿಡಿಯುವಂತೆಯೇ ತೋರುವು ದಲ್ಲವೇ? ಏನೊ!

---

## ೩. ಏಕಾಕಿನಿ ಲಕ್ಷ್ಮಮ್ಮ

ಸಾಧು ಲಕ್ಷ್ಮಮ್ಮನಿಗೆ ತಂತ್ರ-ಮಂತ್ರಗಳೊಂದೂ ತಿಳಿಯದು. ಅವಳು ತನ್ನ ಸ್ವಾಭಾವಿಕವಾದ ಸರಳ ದೃಷ್ಟಿಯಿಂದ ರಾಮಾ ಜೋಯಿಸರನ್ನು ಚೆನ್ನಾಗಿ ನಂಬಿಕೊಂಡಿದ್ದಳು. ಅವಳ ಗಂಡನಾದ ವೆಂಕಪ್ಪಯ್ಯನಿಗೆ ರಾಮಾ ಜೋಯಿಸರು ಮಿತ್ರರಾಗಿದ್ದರು ಅದು ಮಲೆಯಾಳದೇಶದಲ್ಲಿ ಕೂಡಿದ ಮೈತ್ರಿ. ಆದರೆ ರಾಮಾ ಜೋಯಿಸರು ವೆಂಕಪ್ಪಯ್ಯನಂತೆ ಮಲೆಯಾಳದಲ್ಲೆ ತಳವೂರಿದವರಲ್ಲ ಅವರ ಪರಿಚಿತರು ಅನೇಕರು ಮಲೆ ಯಾಳದಲ್ಲಿಯೂ ಇರವರಾದುದರಿಂದ ಅವರು ಆಗಾಗ–ಹೆಚ್ಚಾಗಿ ಊರು ಪರವೂರುಗಳವರ ವಿವಾಹಘಟನಾರ್ಥವಾಗಿ–ಮಲೆಯಾಳದೇಶದ ಕಡೆಗೆ ಹೋಗಿಬರುತ್ತಿದ್ದರು. ಹಾಗೆಯೇ ಕುಂಞಂಭೇರಿಯಲ್ಲಿದ್ದ ವೆಂಕಪ್ಪಯ್ಯನ ಮನೆಯಲ್ಲಿಯೂ ಅನೇಕ ಬಾರಿ ಇಳಕೊಂಡಿದ್ದರು.

ವೆಂಕಪ್ಪಯ್ಯನಿಗೆ ಕುಂಞಂಭೇರಿಯ ಒಂದು ದೇವಾಲಯದಲ್ಲಿ

'ಶಾಂತಿ' ಕೆಲಸ:—ಅಂದರೆ ಪೂಜಾಕಾರ್ಯ. ಅದೇ ಅವರ ಜೀವನೋದ್ಯೋಗ ಕೂಡಾ ಆಗಿತ್ತು. ವೆಂಕಪ್ಪಯ್ಯ ತಮ್ಮ ಹುಟ್ಟೂರಿನಲ್ಲಿ ಮದುವೆಯನ್ನು ಮಾಡಿಕೊಂಡರೂ ಹೆಂಡತಿ ಲಕ್ಷ್ಮಮ್ಮನನ್ನು ಕಟ್ಟಿಕೊಂಡು ಹೋಗಿ ಕುಂಜಾಂಘೇರಿಯಲ್ಲಿಯೆ ವಾಸವಾಗಿದ್ದರು. ಶೀನು ಅವರ ಹಿರಿಯ ಮಗ; ಅಮೇಲೊಂದು ಮಗು ಹುಟ್ಟಿ ತೀರಿಹೋಗಿತ್ತು. ಅನಂತರ ಕೃಷ್ಣ–ಗೌರಿ ಎಂಬ ಮಕ್ಕಳಾದ ಮೇಲೆ ವೆಂಕಪ್ಪಯ್ಯ ಕಾಲವಶದಿಂದ ಪರಲೋಕವಾಸಿಗಳಾದರು.

ಇನ್ನು ಲಕ್ಷ್ಮಮ್ಮನಿಗೆ ಕುಂಜಾಂಘೇರಿಯಲ್ಲಿ ಏನೂ ಆಧಾರವಿರಲಿಲ್ಲ. ಸಂಸಾರವನ್ನು ಎತ್ತಿಕೊಂಡು ಊರಿಗೇ ಹೋಗಬೇಕಾಗಿ ಬಂತು. ದಕ್ಷಿಣ ಕನ್ನಡಜಿಲ್ಲೆಯ ಮಂಗಳೂರಿಗೆ ಸಮೀಪದಲ್ಲಿರುವ "ಕಿರುಗಟ್ಟಿ" ಎಂಬ ಗ್ರಾಮವು ವೆಂಕಪ್ಪಯ್ಯನ ಹುಟ್ಟೂರು. ಅಲ್ಲಿ ಅವರ ಪಾಲಿಗೆ ಬಿದ್ದ ಒಂದು ಪಟ್ಟೆ ಆಸ್ತಿಯೂ ಒಂದು ಗುಡಿಸಿಲಿನಂತಹ ಮನೆಯೂ ಲಕ್ಷ್ಮಮ್ಮನಿಗೆ ಸ್ವಾಗತವನ್ನು ಕೊಟ್ಟವು. ಅದು ವಿಧವೆಯಾದ ಅವಳ ಸಣ್ಣ ಸಂಸಾರಕ್ಕೆ ಅರೆಗಂಜಿ–ಅರೆಬಟ್ಟೆಯನ್ನು ಕೊಡುವಷ್ಟೇ ನಿರ್ಬಲವಾದ ಆಸ್ತಿ.

ವೆಂಕಪ್ಪಯ್ಯ ಸಾಯುವಾಗ ಲಕ್ಷ್ಮಮ್ಮನ ಪಾಲಿಗೆ ಏನೂ ಹಣ ಸಂಪಾದನೆ ಮಾಡಿಟ್ಟಿರಲಿಲ್ಲ. ಏನೋ ಕೂಡಿಸಿಟ್ಟ ಮುನ್ನೂರುನಾಲ್ನೂರು ರೂಪಾಯಿಯನ್ನು ಕುಂಜಾಂಘೇರಿಯಲ್ಲಿಯೇ ಪ್ರೋನೋಟಿನ ಮೇಲೆ ಸಾಲ ಕೊಟ್ಟಿದ್ದರು. ಆದುದರಿಂದ ಅವರು ಸಾಯುವಾಗ ಆ ಸಾಲದ ಪತ್ರಗಳಷ್ಟೇ ಲಕ್ಷ್ಮಮ್ಮನ ಕೈಯಲ್ಲಿದ್ದುವು. ಆ ಸಾಲವನ್ನು ವಸೂಲು ಮಾಡಿಕೊಳ್ಳಲು ಅವಳಿಂದಾಗದೆ ಹೋಯಿತು. ಊರಿಗೆ ಬಂದ ಮೇಲೆ ಅವಳ ಅಣ್ಣ ವೆಂಕಟ್ರಾಯರ ಮೂಲಕವಾಗಿ ಕುಂಜಾಂಘೇರಿಯ ಆ ಸಾಲಿಗರ ಮೇಲೆ ದಾವೆಯನ್ನು ಮಾಡಿಸಿದಳು. ಈ ಕಲಿಕಾಲದ ಸಂಸಾರದ ತಾಪತ್ರಯಗಳಲ್ಲಿ ಸಿಕ್ಕಿಬಿದ್ದಿರುವ ವೆಂಕಟ್ರಾಯರು ದಾವೆ ಎಲ್ಲಾ ಮುಗಿದು ಲೆಕ್ಕವನ್ನು ಲಕ್ಷ್ಮಮ್ಮನಿಗೆ ಒಪ್ಪಿಸುವಾಗ "ಇಗೋ ನೋಡು, ವಕೀಲರ ಫೀಸು ಇಷ್ಟು, ನೋಟೀಸು ಜ್ಯಾರಿಗೆ ಇಷ್ಟು, ನಾನು ಹೋಗಿಬಂದ ಖರ್ಚು ಇಷ್ಟು,–ಇಷ್ಟಾದರೂ ಹಣಪೂರಾ ವಸೂಲಾಗಲಿಲ್ಲ. ಒಬ್ಬನು ದಿವಾಳಿ–" ಎಂದೆಲ್ಲಾ ಹೇಳಿ ಖರ್ಚಿನ ಲೆಕ್ಕದ ಕಾಗದವನ್ನಷ್ಟೇ ಓದಿಕೊಟ್ಟರು.

ಲೆಕ್ಕಪ್ರಕಾರ ವೆಂಕಟ್ರಾಯಣ್ಣನಿಗೇ ಲಕ್ಷಮ್ಮ ಹದಿನೈದು ರೂಪಾಯಿ ಕೊಡಬೇಕಾಗಿ ಬಂತು. ಈ ಲೆಕ್ಕಾಚಾರದಲ್ಲಿ ಅಣ್ಣನು ತನಗೆ ಖಂಡಿತ ವಾಗಿಯೂ ಮೋಸಮಾಡಿರುವನೆಂದು ಲಕ್ಷಮ್ಮನಿಗೆ ಅನಿಸಿ,ಆದರ ಜಳವು ತಾಗುವಂತೆ ಏನೋ ಎರಡು ಬಿಸಿಮಾತನ್ನೂ ಅಣ್ಣನಿಗಂದಳಂತೆ. ಸರಿ, ವೆಂಕಟ್ರಾಯರು ಮೊದಲೇ ಇದಿರುಸಿಟ್ಟಿನವರು. ಕೇಳಬೇಕೆ? ಒಂದು ವಾಕ್ಕಲಹವೇ ಅವರವರೊಳಗೆ ನಡೆಯಿತು. ಸಿಟ್ಟಿನ ಭರದಲ್ಲಿ ಲಕ್ಷ ಮ್ಮನೂ ಏನೇನೊ ಅಂದಳು; ಅವರೂ ಏನೇನೋ ಅಂದರು. ಲಕ್ಷ ಮ್ಮನು ಸ್ವಭಾವತಃ ಸಾಧುಶೀಲೆಯಾದುದರಿಂದ ಅಣ್ಣನಿಗೆ ಕೂಡಲೇ ಹದಿನೈದು ರೂಪಾಯಿಯನ್ನು ಸಮರ್ಪಣ ಮಾಡಿ, ಸಂತಾಪದಿಂದ ಕಣ್ಣೀರು ಸುರಿಸುತ್ತ ತನ್ನ ಮನೆಗೆ ಬಂದುಬಿಟ್ಟಳು. ಇದೇ ಅಣ್ಣನು ಅವಳ ಮೇಲೆ ಹಗೆಯಾಗಲು ಕಾರಣ.

ಇನ್ನು ವೆಂಕಪ್ಪಯ್ಯನಿಗೆ ಅಣ್ಣತಮ್ಮಂದಿರಿಬ್ಬರು ಕಿರುಗಟ್ಟೆಯಲ್ಲಿ ದ್ದರು. ವೆಂಕಪ್ಪಯ್ಯನಿಗೂ ಅವರಿಗೂ ವಿಭಾಗಕಾಲದಲ್ಲಿ ವಿವಾದವೆದ್ದು ಅವರು ವೆಂಕಪ್ಪಯ್ಯನೊಡನೆ ಮಾತುಕತೆಗಳನ್ನು ಬಿಟ್ಟಿದ್ದರು. ಅದೇ ದ್ವೇಷವನ್ನಿಟ್ಟುಕೊಂಡು ಅವರು ಲಕ್ಷಮ್ಮನನ್ನು ಕೂಡಾ ಮಾತಾಡಿಸುತ್ತಿ ರಲಿಲ್ಲ ಆದುದರಿಂದ ಲಕ್ಷಮ್ಮನ ಕಿರುಗಟ್ಟೆಯ ವಾಸವೆಂದರೆ ಶತ್ರು ಗಳ ಮಧ್ಯದಲ್ಲಿರುವಷ್ಟು ಕಠಿನವೆಂದೇ ಹೇಳಬೇಕಾಗುತ್ತಿತ್ತು. ಆದರೆ ಸಾಧು ಲಕ್ಷಮ್ಮನು ಯಾರ ತಂಟೆಗೂ ಹೋಗದೆ, ಯಾರ ಸಹಾಯವನ್ನೂ ಪ್ರಾರ್ಥಿಸದೆ, ಕಷ್ಟವೋ ನಷ್ಟವೋ ತನ್ನಷ್ಟಕ್ಕೆ ತಾನೇ ಅನುಭವಿಸುತ್ತ ಯಾರನ್ನೂ ದೂರದೆ ಯಾರನ್ನೂ ಬಯ್ಯದೆ ದಿವಸ ದೂಡುತ್ತಿದ್ದಳು. ಅವಳ ಭಾವಂದಿರೂ ಅಣ್ಣನೂ ದ್ವೇಷಬುದ್ಧಿಯುಳ್ಳವರಾಗಿದ್ದರೂ, ಬೇಕೆಂದು ಅವಳಿಗ ಕೆಡುಕು ಬಯಸುವವರಾಗಿರಲಿಲ್ಲ; ಹಾಗೆಂದು ಕೇಳಿ ದರೆ ಸಹಾಯ ಮಾಡುವವರಾಗಿಯೂ ಇರಲಿಲ್ಲ. ಆದರೆ ಲಕ್ಷಮ್ಮನು ಕಷ್ಟಕ್ಕೆ ಬಿದ್ದರೆ ಮಾತ್ರ ನೆಗಾಡದೆ ಬಿಡುವಷ್ಟು ಸಜ್ಜನರೂ ಅಲ್ಲ. ಇದ ನ್ನೆಲ್ಲ ಊಹಿಸಿಕೊಂಡೇ ಲಕ್ಷಮ್ಮನು ಆ ಗ್ರಾಮದಲ್ಲಿ ಬಹುಜಾಗರೂಕತೆ ಯಿಂದ ವಾಸವಾಗಿದ್ದಳು.

ಬರುವ ಹುಟ್ಟುವಳಿ ವರ್ಷಪೂರಾ ಎಲ್ಲರಿಗೂ ಸಾಕಾಗುವಷ್ಟು

ಇಲ್ಲದ ಕಾರಣ ಲಕ್ಷ್ಮಮ್ಮನು ಮೂರು ಮಕ್ಕಳನ್ನೂ ಮನೆಯಲ್ಲಿಯೇ ಇಟ್ಟು ಗೊಂಡು ಜೀವನ ನಡೆಯಿಸುವುದು ಬಲು ಕಷ್ಟವಾಯಿತು. ಅದರಲ್ಲಿ ಶ್ರೀನಿವಾಸನ ವಿದ್ಯೆಯ ಪ್ರಶ್ನೆಯೊಂದು ಎದ್ದು ನಿಂತಿತು. ಶೀನು ಕುಂಞಾಂ ಥೇರಿಯ ಶಾಲೆಯಲ್ಲಿ ಏಳನೆ ಕ್ಲಾಸಿನವರೆಗೆ ಓದಿದ್ದನು. ಆಮೇಲೆ ತಂದೆಯ ಮರಣವಾಗಿ ಓದು ನಿಂತಿತು; ಕುಂಞಾಂಥೇರಿಯ ವಾಸವೂ ತಪ್ಪಿತು. ಮುಂದೆ ಓದಿಸಲಿಕ್ಕೂ ಲಕ್ಷ್ಮಮ್ಮನಿಗೆ ದುಡ್ಡಿನ ಬಲವಿರಲಿಲ್ಲ. ಸಂಸಾರ ವನ್ನು ಸಾಗಿಸಲಿಕ್ಕೇ ಹಣವಿಲ್ಲದಿರುವಾಗ ವಿದ್ಯಾರ್ಜನೆಗೆ ದುಡ್ಡನ್ನು ಎಲ್ಲಿಂದ ಒದಗಿಸಿಯಾಳು? ಇನ್ನು ಶೀನು ಓದಿ ಪಾಸಾಗಿ ಉಚ್ಚ ಶಿಕ್ಷಣ ವನ್ನು ಪಡೆದು, ಆಮೇಲೆ ಉದ್ಯೋಗದ ಬೇಟೆಯಲ್ಲಿ ಗೆದ್ದು, ಹಣಸಂಪಾ ದನೆಗೆ ಇಳಿಯುವವರೆಗಾದರೂ ಉದರ ಪೋಷಣೆಯನ್ನು ತಾಳಿಕೊಂಡಿರ ಲಿಕ್ಕೆ ದುಡ್ಡು ಬೇಕಲ್ಲವೆ? ಬದಲಾಗಿ ಈಗಲೆ ಹಣವು ಆಗತ್ಯವಾಗಿತ್ತು, ಸಂಸಾರದ ಬಂಡಿಯನ್ನು ಸಾಗಿಸಬೇಕಾದರೆ! ಆದುದರಿಂದ ಶೀನು ವಿದ್ಯಾರ್ಜನೆಗೆ ತಿಲಾಂಜಲಿಯನ್ನು ಕೊಟ್ಟು, ಉದ್ಯೋಗಕ್ಕೆ ಹೊರಡಲು ಸಿದ್ಧನಾಗಬೇಕಾಯಿತ, ತನ್ನ ಹದಿನೈದನೆಯ ವಯಸ್ಸಿನಲ್ಲಿಯೆ!

ಶೀನುವಿಗೇನೋ ಕನ್ನಡದಲ್ಲಿ ಬಹುದೊಡ್ಡ ವಿದ್ವಾಂಸನಾಗ ಬೇಕೆಂಬ ಮಹತ್ವಾಕಾಂಕ್ಷೆಯಿತ್ತು. ಕಲಿಯಬೇಕೆಂಬ ಉತ್ಸಾಹವೂ ಇತ್ತು. ಆದರೆ ತಾಯಿಯ ಹಣದ ಅಡಚಣೆಯ ಸಂಕಷ್ಟವು ವಿದ್ಯಾರ್ಜ ನೆಯ ಆಶೆಯನ್ನು ಕಿತ್ತೊಗೆಯಿಸಿ ಅವನನ್ನು ಧನಾರ್ಜನೆಯ ಮಡುವಿ ನಲ್ಲಿ ಇಳಿಸಿತು. ಆ ಸಮಯಕ್ಕೆ ಸರಿಯಾಗಿ ಹೊಸಪೇಟೆಯಲ್ಲಿ ಒಬ್ಬರು ಮುನ್ಸೀಫರಿಗೆ ಅಡುಗೆಗೆ ಒಬ್ಬ ಹುಡುಗನು ಬೇಕೆಂಬ ವರ್ತಮಾನವು ಬಂತು. ಅಡುಗೆ! ಅಹಾ! ಎಷ್ಟು ಒಳ್ಳೆಯ ಉದ್ಯೋಗ! ಗುರುವಿಲ್ಲದೆ ಬಲು ಸುಲಭದಲ್ಲಿ ಕಲಿಯಬಹುದಾದ ವಿದ್ಯೆ ಅಡುಗೆ! ಪಟ್ಟ—ಪದಕ— ಸರ್ಟಿಫಿಕೇಟುಗಳಿಲ್ಲದೆ ದೊರೆಯಬಹುದಾದ ಉದ್ಯೋಗ ಅಡುಗೆ! ಎಂತೆಂತಹ ಘನವಂತರ ಮಹಾಭವನಗಳ ಮುಖ್ಯ ಕಾರ್ಯಾಲಯಕ್ಕೆ ಅಧಿಪತಿಯನ್ನಾಗಿಸುವ ರಾಜವಿದ್ಯೆ ಅಡುಗೆ! ದೊಡ್ಡ ದೊಡ್ಡ ರಾಯರು ಗಳಿಗಿಂತಲೂ ಮಿಗಿಲಾದ ರಸವಂತವಾದ ಭೋಜನಾದಿಗಳನ್ನು ಒದಗಿ ಸುವ ಕಾಮಧೇನು ಅಡುಗೆ! ಯಾರಿಗೂ ಹೆದರದೆ ಯಾರಿಗೂ ಬಗ್ಗದೆ

ಯಾರ ಹಂಗಿಗೂ ಒಳಗಾಗಿಸದಂತೆ ಮೆರೆಯಿಸಬಲ್ಲ ಉದ್ಯೋಗ ಅಡುಗೆ! ಬೇಕಾದಾಗ ಸಿಗುವ-ಬೇಕಾದಾಗ ಬಿಡಬಲ್ಲ ಸ್ವತಂತ್ರ ಉದ್ಯೋಗ ಅಡುಗೆ! ರಾಯರುಗಳ ನಾರೀಪರಿವಾರಗಳ ವಾಕ್ಚಾತುರ್ಯಗಳನ್ನು ಆಲಿಸುತ್ತ, ಅವರ ಬಳೆಗಳ ಕಣಕಣಾಟದ ಇಂಚರದೊಂದಿಗೆ, ಅವರ ಭರ್ಜರಿಯ ಸೀರೆಗಳ ಸಳಸಳ ಸಪ್ಪಳಗಳ ನಡುವೆ ಸರಾಗವಾಗಿ ಸಾಗಿಸಬಲ್ಲ ಉದ್ಯೋಗ ಅಡುಗೆ! ಎಂತಹ ಮೂರ್ಖನನ್ನಾದರೂ ಬಾಳುವೆಯನ್ನು ಗೆಲಿಸುವಂತಹ ವಿದ್ಯೆ ಅಡುಗೆ! ಸಂಪುಷ್ಟ ಭೋಜನ-ಸಂತುಷ್ಟ ಸಂಬಳ ಇವೆರಡನ್ನೂ ಒಟ್ಟಿಗೆ ಒದಗಿಸಬಲ್ಲ ಸುಭಿಕ್ಷೋದ್ಯೋಗವೇ ಅಡುಗೆ! ರಜೆಯಿಲ್ಲದ ನಿರಂತರೋದ್ಯೋಗವಿದು! ನಳಭೀಮಾದಿಗಳಿಂದ ಪುರಾಣ ಪ್ರಸಿದ್ಧವಾದ ಉದ್ಯೋಗವಿದು! ಅಂತೆಯೆ ಈ ರಾಜೋದ್ಯೋಗಕ್ಕೆ "ಐ. ಸಿ. ಎಸ್" ಎಂಬ ಸಂಕೇತನಾಮವನ್ನು ಇತ್ತೀಚೆಗೆ ಇಟ್ಟಿದ್ದಾರೆ. ಹೀಗಿದ್ದೂ 'ಅಡುಗೆಯವ'ನೆಂದಕೂಡಲೇ ಬಹಳ ಕೀಳಾಗಿ ತೋರುತ್ತೆ ಜನತೆಗೆ. ಅದು ಪ್ರತಿಯೊಂದು ಮನೆಯಲ್ಲಿಯೂ ಅಡುಗೆ ನಡೆದೇ ತೀರುವುದರಿಂದ, ಅಡುಗೆಯೂ ಅನ್ನವೂ ಹೇಗೆ ಸರ್ವಸಾಮಾನ್ಯವಾಗಿ ಹೋಯಿತೋ ಹಾಗೆಯೇ ಅಡುಗೆಯ ಉದ್ಯೋಗವೂ ಸರ್ವಸಾಮಾನ್ಯವಾಗಿ ಹೋಗಿರಬೇಕು. ನೋಡೋಣಾಗಲಿ ಬೇಕಾದರೆ! ಅಡುಗೆಯ ಬಂಟರು ಇಲ್ಲದಿದ್ದರೆ ಮದುವೆಯ ಸಮಾರಂಭವಾದೀತೆ? ಮುಂಜಿಯ ವೈಭವವು ಜರುಗೀತೆ? ವಿಶೇಷ ಉತ್ಸವ-ಸಮಾರಾಧನೆಗಳು ನಡೆದಾವೆ? ಇವೆಲ್ಲ ಸಾರ್ವಜನಿಕ ಸಮಾರಂಭಗಳು ಹಾಗಿರಲಿ, ಬಿ. ಎ; ಎಂ. ಎ; ಮೊದಲಾದ ದೊಡ್ಡ ದೊಡ್ಡ ಪಟ್ಟಾಧಾರಿಗಳಾಗಿ, ದೊಡ್ಡ ದೊಡ್ಡ ಗೌರ್ನ್‌ಮೆಂಟ್ ಉದ್ಯೋಗಿಗಳಾಗಿ ಮೆರೆಯುವ ಮಹಾರಾಯರುಗಳ ಹೆಂಡಂದಿರಿಗೆಲ್ಲಾ "ಅಮ್ಮನವರು" ಎಂಬ ದೊಡ್ಡ ಗೌರವಪದವಿ ಪ್ರಾಪ್ತವಾಗುತ್ತದಷ್ಟೆ? ಅಂತಹ ಅಮ್ಮನವರನ್ನು ಕೇಳಿರಿ–ಅಡುಗೆಯ ಭಟ್ಟರ ಅಗತ್ಯವು ಆಗ ತಿಳಿದೀತು! ನಮ್ಮ ಶೀನು ಅಂತಹ ಅಡುಗೆಯ ಭಟ್ಟನ ಅವತಾರವನ್ನು ಎತ್ತಿಕೊಂಡು ಹೊಸಪೇಟೆಯ ಕಡೆಗೆ ಹೊರಟುಹೋದನು.

ಇನ್ನು ಮನೆಯಲ್ಲಿರುವವರೆಂದರೆ ಲಕ್ಷಮ್ಮ–ಹನ್ನೆರಡು ವರ್ಷದ ಹುಡುಗ ಕೃಷ್ಣ, ಕೃಷ್ಣನ ತಂಗಿ–ಹತ್ತುವರ್ಷದ ಹುಡುಗಿ. ಕೃಷ್ಣನೂ ಗೌರಿಯೂ ಕಿರುಗಟ್ಟೆಯ ಶಾಲೆಗೆ ಹೋಗುತ್ತಿದ್ದರು.

ಹೊಟ್ಟೆಯ ಮಗ ಹುಡುಗಪ್ರಾಯದ ಶೀನುವನ್ನು ಹೊಟ್ಟೆಯ ಪಾಡಿಗಾಗಿ ದೂರದೂರಿಗೆ—ಅದೂ ಅಡುಗೆಮನೆಯ ಮೋರಿ ಬಳಿಯುವ ಕೆಲಸಕ್ಕೆ— ಕಳುಹಿಸಿದ ಆ ಬಗೆಯ ಪುತ್ರವಿಯೋಗ ದುಃಖದಿಂದಲೂ, ಸಂಸಾರದ ತಾಪತ್ರಯಗಳಿಂದಲೂ ಲಕ್ಷ್ಮಮ್ಮನು ದಿನೇದಿನೇ ಕೃಶಳಾಗುತ್ತಿದ್ದಳು. ಹಾಳು ತಲೆನೋವೊಂದು ಯಾವಾಗಲೂ ಅವಳನ್ನು ಬಾಧಿಸುತ್ತಿತ್ತು. ಇದರೆಡೆಯಲ್ಲಿ ಬೆನ್ನುನೋವು ಸೇರಿ ಹೀಗಾಗಿ ಯಾವಾಗಲೂ ಔಷಧ-ತೈಲ-ಲೇಪನ-ಕಷಾಯಗಳೇ! ಶೀನು ಸಂಪಾದಿಸಿ ಕಳುಹಿಸಿದ ಹಣದಲ್ಲಿ ಅರ್ಧಭಾಗವು ವೈದ್ಯನಪಾಲಿಗೇ ಸರಿಯಲಾರಂಭಿಸಿತ್ತು. ಮನೆ-ದನ-ತೋಟಗಳ ಕೆಲಸಗಳನ್ನು, ಸಹಾಯಕರಿಲ್ಲದೆ ಜೀನಬಿದ್ದ ಲಕ್ಷ್ಮಮ್ಮನೊಬ್ಬಳೇ ಮಾಡಿಕೊಳ್ಳಬೇಕಾಗಿತ್ತು. ಆದುದರಿಂದ ಸೊಸೆ ಬಂದರೆ ತನಗೆ ಎಷ್ಟೋ ವತ್ತಾಸೆಯಾಗುತ್ತಿತ್ತೆಂಬ ಯೋಚನೆ ಲಕ್ಷ್ಮಮ್ಮನ ಹೃದಯದಲ್ಲಿ ತಲೆಯೆತ್ತುವುದು ಸ್ವಾಭಾವಿಕವೇ ಆಗಿದೆ. ಶೀನುವಿಗೂ ವಯಸ್ಸು ಇಪ್ಪತ್ತೊಂದು ಬಂತು. ಈ ಸಮಯದಲ್ಲೆ ರಾಮಾ ಜೋಯಿಸರು ಅವಳ ಅಂಗಳಕ್ಕೆ ತಲೆಹಾಕಲಾರಂಭಿಸಿ "ನಿಮ್ಮ ಶೀನುವಿನ ಜಾತಕವನ್ನು ಕೊಡುತ್ತೀರಾ?" ಎಂದು ಅವಳ ಯೋಚನೆಯನ್ನು ಚಿಗುರಿಸಿದರು.

ರಾಮಾ ಜೋಯಿಸರು ಕಿರುಗಟ್ಟೆಯ ಪಕ್ಕದ ಗ್ರಾಮವಾದ "ದಿಡ್ಡಂಬಳ"ದಲ್ಲಿ ವಾಸ. ಕಲ್ಯಾಣಘಟನಾ ಕಾರ್ಯವೇ ಅವರ ಮುಖ್ಯವಾದ ವೃತ್ತಿ. ಲಕ್ಷ್ಮಮ್ಮನಿಗೆ ಹೇಗೂ ಪರಿಚಿತರು. ಅಂತೆಯೆ ಅವರು ಆಯತ ವೇಳೆಯಲ್ಲಿಯೇ ಲಕ್ಷ್ಮಮ್ಮನಿಗೆ ಭೇಟೀಕೊಟ್ಟರು. ತನ್ನ ಗಂಡನ ಪರಿಚಿತರೆಂಬ ವಿಶ್ವಾಸವನ್ನು ಲಕ್ಷ್ಮಮ್ಮನು ಅವರ ಮೇಲಿಟ್ಟು, ತನ್ನ ಸುಖ-ದುಃಖಗಳನ್ನು ಅವರೊಡನೆ ಹೇಳಿಕೊಂಡು ಮಗನ ಮದುವೆಯ ಆಗತ್ಯವನ್ನು ಅವರ ಕೈಗೆ ಹತ್ತಿಸಿದಳು; ಅಂದರೆ ಶೀನುವಿನ ಜಾತಕವನ್ನು ಕೊಟ್ಟಳು. ಮಂದಿಯ ವಿಶ್ವಾಸವನ್ನು ಹೊಂದಿಸಿಕೊಳ್ಳುವುದರಲ್ಲಿ ರಾಮಾ ಜೋಯಿಸರ ನಾಲಗೆ ಬಲು ಸಮಾಯಿ! ಅಂತಹ ಕುಟಿಲನಾರದರು ಲಕ್ಷ್ಮಮ್ಮನಂತಹ ಸರಳ ಸ್ವಭಾವದ ಸಾಧುವಿಧವೆಯನ್ನು ನಂಬಿಸಿ ಕಾರ್ಯವನ್ನು ಯಾವ ಮಟ್ಟಕ್ಕೆ ತಂದು ಮುಟ್ಟಿಸಿದರೆಂಬುದನ್ನು ಮೊದಲೇ ಬಣ್ಣಿಸಿದ್ದೇವೆ.

ವೆಂಕಟ್ರಾಯಣ್ಣನ ಮಟ್ಟು ಲಕ್ಷ್ಮಮ್ಮನ ಮೇಲೆ ಯಾವ ರೀತಿ

ಯಲ್ಲಿದೆ ಎಂಬುದು ಧೂರ್ತರಾದ ರಾಮಾ ಜೋಯಿಸರಿಗೆ ಗೊತ್ತೇ ಯಿತ್ತು. ಗೊತ್ತಿದ್ದೇ ಹಾಗೆ ಮಾತಾಡಿದ್ದರು. ಜೋಯಿಸರು ಹೊರಟು ಹೋದಮೇಲೆ ಲಕ್ಷ್ಮವ್ವನೂ ಆಲೋಚನೆ ಮಾಡಿದಳು. "ಹೌದು, ರಾಮಾಜೋಯಿಸರು ಹೇಳಿದಂತೆ ಒಮ್ಮೆ ವೆಂಕಟ್ರಾಯಣ್ಣನನ್ನು ನೋಡಿ ಬರುವುದು ಲೇಸು. ನಾನಾಗಿ ಬಿಟ್ಟೇಂತ ಆಗಬಾರದು—" ಎಂದು ವಿವೇಚಿಸಿಕೊಂಡು ಪಟ್ಲಪಾಡಿ ಗ್ರಾಮಕ್ಕೆ ಹೋದಳು. ವೆಂಕಟ್ರಾಯರ ಮನೆ ಅಲ್ಲಿತ್ತು.

ಇವಳನ್ನು ನೋಡುತ್ತಲೇ ಮಾತಾಡಿಸದೆ ಬಿಮ್ಮಗೆ ಕುಳಿತ ವೆಂಕಟ್ರಾಯಣ್ಣನನ್ನು ನೋಡುತ್ತಲೇ ಫಲಿತಾಂಶವು ತಿಳಿದೇಹೋಯಿತು. ಆದರೂ ಬಿಡದೆ ಲಕ್ಷ್ಮವ್ವನೇ ಮೊದಲು ಮಾತೆತ್ತಿದಳು. ರಾಮಾಜೋಯಿಸರಿಗೂ ತನಗೂ ನಡೆದ ಸಂಭಾಷಣೆಗಳನ್ನು ಅರಿಕೆಮಾಡಿಕೊಂಡಳು. ತನ್ನಕಡೆಯ ಯಜಮಾನನಾಗಿ ನಿಂತು ಕೆಲಸವನ್ನು ಸುಧಾರಿಸಿಕೊಡಬೇಕೆಂದು ಕೇಳಿಕೊಂಡಳು. ಹುಡುಗಿಯನ್ನು ನೋಡಲಿಕ್ಕೆ ತನ್ನೊಂದಿಗೆ ಕೊಳ್ಯಾಜೆಗೆ ಬರಬೇಕೆಂದು ಪ್ರಾರ್ಥನೆಮಾಡಿಕೊಂಡಳು.

ಅದಕ್ಕೆ ವೆಂಕಟ್ರಾಯಣ್ಣನು ಕೊಟ್ಟ ಉತ್ತರದ ಅಭಿಪ್ರಾಯ ಇದು: "ಈಗ ನಿನಗೆ ನನ್ನ ಜ್ಞಾಪಕವು ಬಂತಂತ ಕಾಣುತ್ತೆ. ಇಷ್ಟೆಲ್ಲಾ ರಾಮಾಜೋಯಿಸರ ಮುಖಾಂತರವಾಗಿ ಮುಂದುವರಿಸಿದ ಮೇಲೆ, ಈಗ ನಾಚಿಕೆಯಿಲ್ಲದೆ ಚಂದಕ್ಕಾಗಿ ನನ್ನನ್ನು ಕರೆಯಲು ಬಂದಿದ್ದೀಯೇನು? ಒಟ್ಟಾರೆ ನಿನಗೆ ನನ್ನ ಮೇಲೆ ಎಷ್ಟರಮಟ್ಟಿಗೆ ವಿಶ್ವಾಸವುಂಟಂತ ಅವೊತ್ತೇ ತಿಳಿದು ಹೋಗಿದೆ! ಇನ್ನು ನಿನ್ನ ಮಗನ ಮದುವೆಯ ಬಾಬಿಗೆ ಯಜಮಾನನಾಗುವ ಗೌರವವೂ ಬೇಡ--ಅದರಿಂದ ನನಗೆ ಒಳ್ಳೆಯ ಹೆಸರು ಬರುವುದೂ ಬೇಡ—"

"ಅಲ್ಲಣ್ಣ; ಹೀಗೆ ನೀನು ನಿಷ್ಠುರವಾಗಿ ಮಾತಾಡಿದರೆ ನನ್ನ ಮಗನಿಗೆ ಮದುವೆಯೇ ಆಗಲಿಕ್ಕಿಲ್ಲವೇನು?—" ಎಂದು ಲಕ್ಷ್ಮವ್ವನೊಂದು ಕೂರಾದ ನುಡಿಯನ್ನೂ ನುಡಿದುಬಿಟ್ಟಳು.

"ಆಗಲಿ! ಮಂಗಳವಾಗಿ ಆಗಲಿ. ನಾನೂ ಇಲ್ಲಿಂದಲೇ ಆಶೀರ್ವಾದ ಮಾಡಿಬಿಡುತ್ತೇನಮ್ಮ!"

ಆಮೇಲೆ ಲಕ್ಷ್ಮಮ್ಮನು ವಿನಯದಿಂದ ಪ್ರಾರ್ಥಿಸಿಯೂ ಕ್ಷಮಾಪಣೆಯನ್ನು ಕೇಳಿಯೂ ನೋಡಿದಳು. ಒಡೆದ ಮಡಿಕೆಯಂತೆ ಉಪಯೋಗವಾಗದೆ ಹಿಂದಿರುಗಬೇಕಾಯಿತು ಸಂತಾಪದಿಂದ.

ಆಮೇಲೆ ಭಾವಂದಿರ ಬಳಿಗೂ ಹೋಗಿ ವೃತ್ತಾಂತವನ್ನು ಹೇಳಿಕೊಂಡಳು ಅವರು—"ಆಗಲಿ, ಶುಭಸಮಾಚಾರ! ಆದರೆ ನಮಗೆ ನಾಡಮ ಗುರುವಾರ ಬರಲಿಕ್ಕೆ ಸಮಯವಿಲ್ಲಮ್ಮ. ನಾವು ಬಂದಾದರೂ ಏನು ಮಾಡುವುದಿದೆ—ಹೇಳು? ಎಲ್ಲಾ ಬಲ್ಲ ರಾಮಾ ಜೋಯಿಸರಿದ್ದಾರಲ್ಲ. ಹಾಗೂ ನಿನಗೆ ಅಗತ್ಯವಿದ್ದರೆ, ಗ್ರಾಮಮೊಕ್ತೇಸರ ವೀರಪ್ಪಯ್ಯನನ್ನು ಕರಕೊಂಡು ಹೋಗು,—ಕೆಲಸ ಮುಂದುವರಿಯಲಿ. ಅಂಥಾ ಅಗತ್ಯಬಂದರೆ ನಾವಿದ್ದೇ ಇದ್ದೇವೆ!-" ಎಂದು ಉಪಾಯದಿಂದ ಲಕ್ಷ್ಮಮ್ಮನನ್ನು ಮುಂಜರಿಸಿ ತಾವು ಹಿಂಜರಿದುಕೊಂಡರು.

ವೀರಪ್ಪಯ್ಯನನ್ನು ಕರಕೊಂಡು ಹೋಗಲಿಕ್ಕೆ ಲಕ್ಷ್ಮಮ್ಮನಿಗೆ ಇಷ್ಟವಿರಲಿಲ್ಲ. ಅವನು ಗ್ರಾಮಮೊಕ್ತೇಸರನಾದರೂ, ಭಾರೀ ದೊಡ್ಡಮಾತಿನ ಮಲ್ಲನೆಂದು ಪ್ರಸಿದ್ಧಿ. ತಂಟೆ-ತಗಾದೆಗಳನ್ನು ತರಿಸಲಿಕ್ಕೂ ಪರಿಹರಿಸಲಿಕ್ಕೂ ಮಾತ್ರ ಅವನ ಅಗತ್ಯ ಹೆಚ್ಚು. ಈ ಆರಂಭ ಕಾರ್ಯಕ್ಕೆ ಅವನೇಕೆ? ತಾನೊಬ್ಬಳೇ ರಾಮಾ ಜೋಯಿಸರೊಂದಿಗೆ ಹೊರಡುವುದೆಂದು ತೀರ್ಮಾನಿಸಿಕೊಂಡಳು.

ಈ ಮಧ್ಯದಲ್ಲಿ ಅವಳು ಶೀನುವಿನ ಪ್ರೇಮಲಹರಿಗೂ ಗಮನ ಕೊಡದಿರಲಿಲ್ಲ ಹುಡುಗ ಕೃಷ್ಣನ ಮೂಲಕವಾಗಿ ಕುಂಜಾಂಘೇರಿಯ ಶಿಂಬಗಭಟ್ಟರ ಹೆಂಡತಿ ಸೀತಮ್ಮನಿಗೆ ಒಂದು ಪತ್ರವನ್ನು ಬರೆಯಿಸಿ ಹಾಕಿಸಿದ್ದಳು. ಅದರಲ್ಲಿ 'ಕಮಲೆಗೆ ಮದುವೆಯಾಯಿತೋ ಇಲ್ಲವೋ-ಎಂಬ ವಿಷಯವನ್ನು ಕೂಡಲೇ ತಿಳಿಸಬೇಕೆ'ಂದು, ಪ್ರತ್ಯುತ್ತರಕ್ಕಾಗಿ ಸ್ಟಾಂಪಿನ ಕವರನ್ನು ಕೂಡಾ ಇಟ್ಟು ಕಳುಹಿಸಿದ್ದಳು. ಪ್ರತ್ಯುತ್ತರದಲ್ಲಿ ಆಶೆಯು ಇರಲಿಕ್ಕಿಲ್ಲವೆಂಬುದು ಲಕ್ಷ್ಮಮ್ಮನಿಗೆ ಗೊತ್ತಿತ್ತು. ಆ ವಿಷಯದಲ್ಲಿ ನಿರಾಶೆಯ ಪತ್ರವನ್ನೆ ಶೀನುವಿಗೆ ಬರೆದರೆ ಅವನ ಮನಸ್ಥಿತಿ ಹೇಗಾದೀತೊ! ಊರಿಗೆ ಬಂದಾನೋ–ಬಾರನೋ! ಆದುದರಿಂದ ಉಪಾಯವಾಗಿಯೇ ಬರೆದು ಅವನನ್ನು ಊರಿಗೆ ಬರಿಸಿಕೊಳ್ಳಬೇಕಾಗುತ್ತದೆಯೆಂದು ಎಣಿಕೆ

ಹಾಕುತ್ತ, ರಾಮಾಜೋಯಿಸರು ಗುರುತಿಟ್ಟ ಅದೇ ಗುರುವಾರ ದಿನ-ಬೆಳಗ್ಗೆ, ಗೌರಿ–ಕೃಷ್ಣಂದಿರಿಗೆ ತುಂಬಾ 'ಜಾಗ್ರತೆ' ಹೇಳಿ "ಮಕ್ಕಳೆ! ಜಾಗ್ರತೆ! ಮನೆಬಿಟ್ಟು ಎಲ್ಲಿಗೂ ಹೋಗಬೇಡಿ! ಕೃಷ್ಣಾ! ಆಕಳಿಗೆ ಹುಲ್ಲು ಹಾಕಿ ಕಲಗಚ್ಚು ಇಡಪ್ಪಾ. ಅನ್ನ ಗೊಜ್ಜು ಮಾಡಿ ಮಜ್ಜಿಗೆ ಹಾಕ್ಕೊಂಡು ಉಣ್ಣಿ. ಕತ್ತಲಾಗುವುದರೊಳಗೆ ನಾನು ಬಂದುಬಿಡುತ್ತೇನೆ- ಜಾಗ್ರತೆ!" ಎಂದು ಬಾರಿಬಾರಿಗೂ ಎಚ್ಚರಕೊಟ್ಟು, ಬೀದಿಯ ಬದಿಗೆ ಹೊರಟು ಬಂದು, ರಾಮಾ ಜೋಯಿಸರು ಬರುವ ಬಸ್ಸನ್ನು ಕಾದುಕೊಂಡು ಲಕ್ಷ್ಮಮ್ಮ ನಿಂತಿದ್ದಳು.

---

## ೩. ಹುಡುಗಿಯನ್ನು ನೋಡುವುದು

"ಭೊಂ—ಭೊಂ—" ಎಂದು ಹಾರನ್ ಕೊಡುತ್ತ ಪ್ರಯಾಣಿಕರನ್ನು ತುಂಬಿಕೊಂಡು ಬಸ್ ಬಂದು ಲಕ್ಷ್ಮಮ್ಮನ ಬಳಿಯಲ್ಲಿ ನಿಂತಿತು.

"ಹತ್ತಿರಿ ಲಕ್ಷ್ಮಮ್ಮ. ನೀವು ಒಬ್ಬರೇ ಬಂದಿರಂತ ಕಾಣುತ್ತೆ. ಸರಿ ಒಳ್ಳೇದೇ ಆಯಿತು. ಬಸ್ಸಿನಲ್ಲಿಯೂ ಸ್ಥಳವಿಲ್ಲ. ಹತ್ತಿರಿ-ಹತ್ತಿರಿ" ಎಂದು ಬಸ್ಸಿನೊಳಗಣಿಂದ ರಾಮಾ ಜೋಯಿಸರ ತಲೆ ಅವಸರಪಡಿಸಿತು. ಲಕ್ಷ್ಮಮ್ಮನು ಬಸ್ಸಿನಲ್ಲಿ ಏರಿಕೊಂಡು ಹೆಂಗುಸರ ಸೀಟಿನಲ್ಲಿ ಕುಳಿತಳು. ಬಸ್ಸು "ಭುರ್ರ್"ಎಂದು ಕೆಂಧೂಳಿಯನ್ನು ಹಿಂದೆಬ್ಬಿಸಿಕೊಂಡು ದೊಡ್ಡ ಭೂತದ ಹಾಗೆ ಓಡಿಹೋಯಿತು.

ಒಂದು ಗಂಟೆಯ ಒಳಗೆ ಬಸ್ಸಿನ ಪ್ರಯಾಣವು ಮುಗಿಯಿತು. ಲಕ್ಷ್ಮಮ್ಮ-ರಾಮಾ ಜೋಯಿಸರಿಬ್ಬರೂ ಬಸ್ಸಿನಿಂದ ಇಳಿದು, ಎಳೆಸೀರನ್ನು ಕೊಂಡುಕೊಂಡು ಕುಡಿದು ಆ ಮೇಲೆ ಹೊರಟರು. ಅಂಗಡಿ ಬೀದಿಯನ್ನು ಕಳೆದು ಗುಡ್ಡದ ಕಾಲುದಾರಿಯನ್ನು ಹಿಡಿದು, ಬೆಟ್ಟ ಗದ್ದೆಗಳನ್ನು ಹಾದು, ಪೊದೆಮೆಗಳನ್ನು ದಾಟಿ, ಓಣಿಯಲ್ಲಿ ಹೊಕ್ಕು ನಡೆಯುತ್ತಿದ್ದರು. ಲಕ್ಷ್ಮಮ್ಮನ ಮನಸ್ಸಿನಲ್ಲಿ ಒಂದು ಸಂದೇಹವು ಎದ್ದಿತು; ಹುಡುಗಿಯನ್ನು ನೋಡಬೇಕೆಂಬ ಉದ್ದೇಶದಿಂದ ತಾನಿಲ್ಲಿಗೆ ಬಂದರೂ ಹುಡುಗಿ ಮನೆಯಲ್ಲಿ ಉಂಟೋ ಇಲ್ಲವೋ-ಇದ್ದರೂ ಎಣ್ಣೆ ಹಾಕುತ್ತಲೋ-ಊಟಮಾಡುತ್ತಲೋ

ಇದ್ದರೆ ಶಕುನ ಹಾಳಾದೀತು! ಒಂದು ವೇಳೆ ಇದೆಲ್ಲಾ ಸರಿಯಾಗಿದ್ದರೂ ನಮ್ಮ ಶೀನೂನ ಅವರು ನೋಡಬೇಕಂತ ಕೋರಿದರೆ? ಹಾಗಿದ್ದರೆ ಮುಂದೆ ಹೇಗಾದರೂ ಮಾಡಿ ಶೀನುವನ್ನು ಕರಕೊಂಡು ಬಂದರಾಯಿತು —" ಎಂದು ಯೋಚಿಸುತ್ತ ತನ್ನ ಸಂದೇಹವನ್ನು ಜೋಯಿಸರಿಗೆ ಬಿಚ್ಚಿಯೂ ತೋರಿಸಿದಳು.

ಆ ಊರಿನಲ್ಲಿ ನಡೆಯುವ ವಿವಾಹದ ಮೊತ್ತಮೊದಲಿನ ಇಂತಹ ಸಂದರ್ಭದಲ್ಲಿ ಆ ಬಗೆಯ ಸಂದೇಹಗಳು ಏಳುವುದು ಬಹಳ ಜಾಸ್ತಿ. ನಾಗರಿಕ ನಡಿಗೆಯುವರಲ್ಲಿ "ಹುಡುಗಿಯನ್ನು ನೋಡಲಿಕ್ಕೆ ಬರುತ್ತೇವೆ"ಂದು ವರನ ಕಡೆಯುವರು ಮೊದಲೇ ವಧುವಿನ ಕಡೆಯುವರಿಗೆ ತಿಳಿಸುತ್ತಾರೆ. ಆದುದರಿಂದ ವಧುವಿನ ಕಡೆಯುವರು ಮುಂದಾಗಿ ಅರಿತು ವಧುವನ್ನು ತಕ್ಕಂತೆ ಸಿಂಗರಿಸಿ ತಕ್ಕ ರೀತಿಯಲ್ಲಿ ಪ್ರದರ್ಶನ ಮಾಡುತ್ತಾರೆ. ವರನ ಕಡೆಯುವರಾದರೂ ದಾಕ್ಷಿಣ್ಯವಿಲ್ಲದೆ ಸಂಗೀತದಲ್ಲಿ–ಭಾಷಣದಲ್ಲಿ–ವಿದ್ಯೆಯಲ್ಲಿ ಪೂರಾ ವಧುವನ್ನು ಪರೀಕ್ಷೆಮಾಡಿಯೇ ಬಿಡುತ್ತಾರೆ. ವಧೂ-ವರರಿಬ್ಬರೂ ಪರಸ್ಪರ ಚೆನ್ನಾಗಿ ನೋಡಿಕೊಂಡು ಮನವೊಂದಿಕೆ ಮಾಡಿಕೊಳ್ಳುತ್ತಾರೆ. ಇದನ್ನು ಮೇಲಾದ ವಧುವರೀಕ್ಷಾಕ್ರಮವೆಂದು ನಾವು ಹೇಳುತ್ತೇವೆ.

ಆದರೆ ದಕ್ಷಿಣಕನ್ನಡದ ಗ್ರಾಮಾಂತರಗಳ ವಿಧಾನವು ಹೀಗಿಲ್ಲ; ವರನ ಕಡೆಯುವರು ವಧುವನ್ನು ನೋಡಬೇಕೆಂದು ಬರುವ ವಿಚಾರವು ವಧುವಿನ ಮನೆಯುವರಿಗೆ ಗೊತ್ತೇ ಆಗಲಿಕ್ಕಿಲ್ಲ. ಏನೋ ಬೇರೆ ಮಾತಿಗೆ ಬಂದವರಂತೆ ಬಂದು, ಆ ಮನೆಯಲ್ಲಿಯ ಕನ್ನೆಯನ್ನು ಕಳ್ಳನೋಟದಿಂದ ನೋಡಿಕೊಂಡು ಹೋಗುತ್ತಾರೆ. ಅಲ್ಲಿ ಎರಡು ಮೂರು ಕನ್ಯೆಗಳಿದ್ದರೆ ವರನೇ ಗೊಂದಲದಲ್ಲಿ ಬೀಳುವುದೂ ಉಂಟು. ಆಗ ತಿಳಿದವನು ಪಕ್ಕದಲ್ಲಿದ್ದು "ಅದೇ ಕನ್ನೆ" ಎಂದು ಕಣ್ಸನ್ನೆಯಿಂದ ಉಪಾಯವಾಗಿ ತಿಳಿಸುವುದೂ ಉಂಟು; ಅಥವಾ ವರನು ನೋಡದೆ ನಿರಾಶನಾಗಿ ಹಿಂದಿರುಗಿ "ಹುಡುಗಿಯನ್ನು ನೋಡಿದಿಯಾ?" ಎಂದು ಯಾರಾದರೂ ಕೇಳಿದರೆ ಜಂಬದಿಂದ "ಓ, ನೋಡಿದೆ" ಎಂದು ಸುಮ್ಮನೆ ಹೇಳಿಬಿಡುವುದೂ ಉಂಟು; ಅಥವಾ ಮನಸ್ಸಿನಲ್ಲಿ ಯಾವಳನ್ನೊ ಕನ್ಯೆಯೆಂದು

ಭಾವಿಸಿಕೊಂಡು ಧಾರೆಮುಂಟಪದಲ್ಲಿ ಇದಿರುನಿಂತ ವಧುವನ್ನು ನೋಡಿ ಮೋಸಹೋಗಿ ಮಿಡುಕುವುದೂ ಉಂಟು. ಅಥವಾ ಮೊತ್ತಮೊದಲ ನೋಟಕ್ಕೇ ಅಪಶಕುನದ ರೀತಿಯಲ್ಲಿ ಕನ್ಯೆ ದೃಷ್ಟಿಗೆ ಬಿದ್ದರೆ, ಆ ಸಂಬಂಧದ ಆಶೆಯನ್ನು ಬಿಟ್ಟು ಉಪಾಯದಿಂದ ಜಾರಿಬಿಡುವುದೂ ಉಂಟು. ಒಂದು ವೇಳೆ ಬಂದವರು ತಮ್ಮ ಹುಡುಗಿಯನ್ನು ನೋಡಲಿಕ್ಕಾಗಿಯೇ ಎಂಬ ಭಾವವು ವಧುವಿನ ಹಿರಿಯರಿಗೆ ಹೊಳೆದರೆ, ಅವರು ಉಪಾಯದಿಂದ ವಧುವನ್ನು ಏನೋ ಒಂದು ಕೆಲಸಕ್ಕಾಗಿ ಅಂಗಳದಲ್ಲಿ ಕಳುಹಿಸುತ್ತಾರೆ. ಆಗ ವರನ ಕಡೆಯವರು ಪಕ್ಕನೆ ನೋಡಿಬಿಡಬೇಕಾಗುತ್ತೆ. ತನ್ನನ್ನು ಮದುವೆ ಮಾಡಿಕೊಳ್ಳಲಿಕ್ಕೆ ಬಂದವರು ಎಂಬ ವಿಚಾರವು ಆ ಕನ್ಯೆಗೆ ತಿಳಿದರಂತೂ ತೀರಿತು !— ಆ ಹುಡುಗಿ ಬ್ರಹ್ಮಾಂಡದಷ್ಟು ನಾಚಿಕೆಯಿಂದ ಮೋರೆಯನ್ನು ಎತ್ತೊ ತಿರುಗಿಸಿಕೊಂಡು-ತಲೆಯನ್ನೆತ್ತದೆ ತನ್ನ ದೇಹದ ಯಾವುದೋ ಒಂದು ಭಾಗವನ್ನು ತೋರಿಸುತ್ತ ಮಿಂಚಿನಂತೆ ಓಡಿಹೋಗಿಬಿಡುತ್ತಾಳೆ. ಈ ಬಗೆಯ ಕಣ್ಣುಮುಚ್ಚಾಲೆಯಂತಹ ಸಾಂಪ್ರದಾಯದಲ್ಲಿ ಏನು ತಿರುಳೋ ನಮಗೆ ತಿಳಿಯದು. ಆದರೆ 'ಕನ್ಯೆಯನ್ನು ನೋಡಲಿಕ್ಕೆ ಬಂದುದು' ಎಂಬುದನ್ನು ಬಹಿರಂಗಪಡಿಸುವುದರಲ್ಲಿ ಏನೂ ದೋಷವಿಲ್ಲವಂತೆ; ಹಾಗಾದರೆ ಬಹಿರಂಗದೊಳಗೊಂದು ಅಂತರಂಗವೇಕೆ ? ಪರಂತು ಶಕುನದ ನಂಬಿಕೆಯಿಂದಲೇ ಆಗಿರಬಹುದು. '' ಹುಡುಗಿಯನ್ನು ಮೊತ್ತಮೊದಲು ನೋಡುವಾಗ ಅವಳು ಸರಿಯಾದ ಶಕುನದಲ್ಲಿ ಕಣ್ಣಿಗೆ ಬೀಳಬೇಕು; ಇಂತಹ ಶಕುನ ಪರೀಕ್ಷೆಯಾಗಬೇಕಾದರೆ ಮುಂದಾಗಿ ತಿಳಿಸಬಾರದು '' ಎಂಬ ಮೂಢ ನಂಬಿಕೆಯೇ ಕಾರಣವಾಗಿರಬಹುದು. ಈ ಬಗೆಯ ಪ್ರಾರಂಭದಿಂದ ಜರುಗಿದ ವಿವಾಹವು ವಿಷಮಸಂಸಾರವಾಗಿ ಪರಿಣಮಿಸುವ ಚಿತ್ರವನ್ನು ಆ ಪ್ರಾಂತದಲ್ಲಿ ವಿಶೇಷವಾಗಿ ನೋಡಬಹುದು.

ಲಕ್ಷಮ್ಮನ ಮನಸ್ಸಿನಲ್ಲಿ ಎದ್ದ ಸಂದೇಹಗಳಿಗೆಲ್ಲಾ, ಸರಿಯಾದ ನಿವಾರಣೆಯ ಉತ್ತರಗಳನ್ನು ಕೊಡುತ್ತ ರಾಮಾ ಜೋಯಿಸರು ಲಕ್ಷಮ್ಮನನ್ನು ಕರೆದುಕೊಂಡು ಕೊಳ್ಳಾಜೆ ನಾರಾಯಣಯ್ಯನ ಮನೆಯನ್ನು ತಲುಪಿದರು. ಜಗುಲಿಯಲ್ಲಿ ಕುಳಿತು ಎಲೆಯಡಿಕೆ ಮೆಲ್ಲುತ್ತಿದ್ದ ನಾರಾಯಣ

ಯ್ಯನು ಇವರನ್ನು ಕಂಡು ದಿಡುಕ್ಕನೆ ಎದ್ದು—"ಓಃ! ರಾಮಾ ಜೋಯಿಸರು! ಬಹಳ ಅಪರೂಪ! ಬನ್ನಿ! ಬನ್ನೀಮ್ಮ!" ಎಂದು ಸ್ವಾಗತ ಮಾಡಿ, ಲಗುಬಗೆಯಿಂದ ಒಳಗೆ ಹೋಗಿ ಬಣ್ಣದ ಚಾಪೆಯನ್ನು ತಂದು ಚಾವಡಿಯಲ್ಲಿ ಹಾಸಿದರು.

ಹೊತ್ತು ಏರುತ್ತಾ ಬರುವ ಸಮಯ. ಇನ್ನೂ ಗ್ರಾಮಸ್ಥ ಗೃಹಿಣಿಗಳ ಅಡಿಗೆಯ ಕೆಲಸವು ಮುಗಿದಿರಲಿಲ್ಲ. ನಾರಾಯಣಯ್ಯನ ಬೀಡರಸಿ ಒಳಗೆ ಗುಡುಗುಡನೆ ಮಸಾಲೆ ಅರೆಯುವ ಸದ್ದು ಹೊರಗೆ ಕೇಳಿಸುತ್ತಿತ್ತು. ಕೆಲವರ ಮನೆಗಳಲ್ಲಿ ಪೂಜೆಯ ವೇಳೆಯಲ್ಲಿ ಮೊರೆಯುತಿರುವ ಜಗನ್ನಾಥ ಗಂಟೆಯ ಝೇಂಕಾರವು ಕೇಳಿಬರುತ್ತಿದ್ದುವು.

ಲಕ್ಷ್ಮಮ್ಮನೂ ಜೋಯಿಸರೂ ಅಂಗಳವನ್ನು ಏರುತ್ತಲೇ ಅಂಗಳದ ಎಡಬದಿಯಲ್ಲಿರುವ ಬಾವೀಕಟ್ಟೆ ಸಹಜವಾಗಿ ಅವರ ಕಣ್ಣಿಗೆ ಬಿತ್ತು. ಆ ಬಾವಿಕಟ್ಟೆಯಲ್ಲಿ ಹುಡುಗಿಯೊಬ್ಬಳು ಕುಳಿತುಕೊಂಡು ತಂಬಿಗೆ ಕವಳಿಗೆಗಳಿಗೆ ಹುಣಸೇಹಣ್ಣು ಹಾಕಿ ತಿಕ್ಕುತ್ತಿದ್ದಳು. ಅವಳ ವಯಸ್ಸು ಹದಿನಾಲ್ಕೇ ಇರಬಹುದು. ಗೌರಾಂಗಿ; ಲಕ್ಷಣವಾದ ಮುಖ. ಮನೆಯ ಪ್ರತಿನಿತ್ಯದ ಸಾದಾವೇಷದಲ್ಲಿದ್ದರೂ—ಸುಂದರಳಾದ ಕನ್ಯೆಯೆಂದು ನೋಡಿದ ಕೂಡಲೇ ಹೊಳೆದುಹೋಗುತ್ತಿತ್ತು. ಇನ್ನೊಬ್ಬಳು ಮಲಿನವಾದ ಸೀರೆಯನ್ನುಟ್ಟು, ಮಸೀಮಯ ವರ್ಣದ—ಸ್ಥೂಲಕಾಯದ—ಅಕಳ-ವಿಕಳ—ಮುಖಮುದ್ರೆಯ—ಕೆದರಿದ ತಲೆಗೂದಲಿನ—ಒಟ್ಟಾರೆ ಕುರೂಪಿಣಿಯಾದ—ಹದಿನೇಳು—ಹದಿನೆಂಟು ವರ್ಷ ವಯಸ್ಸಿನ ತರುಣ ಸ್ತ್ರೀ ವ್ಯಕ್ತಿಯೊಂದು ನೀರು ಸೇದಿ ಸೇದಿ ತೋಟದ ಗಿಡಗಳಿಗೆ ಎರೆಯುತ್ತಿದ್ದಳು. ಜೀತದಾಳು ಮಗಳೆನ್ನಲು ಸಂದೇಹವೇ ಇಲ್ಲ.

ನಾರಾಯಣಯ್ಯ ಚಾಪೆಯನ್ನು ತರಲು ಒಳಗೆ ಹೋದ ಸಂಧಿಯಲ್ಲೇ ಜೋಯಿಸರು ಲಕ್ಷ್ಮಮ್ಮನಿಗೆ—ಬಾವೀಕಟ್ಟೆಯ ಕಡೆಗೆ ಗೋಣು ನೀಡಿ, ಹುಬ್ಬೇರಿಸಿ, ಕಣ್ಸನ್ನೆ ಮಾಡಿ "ಒಳ್ಳೆಯ ಶಕುನ! ಲಕ್ಷ್ಮಮ್ಮ! ಅದೇ ಕನ್ಯೆ—ನೋಡಿ!" ಎಂದು ಪಿಸುಗುಟ್ಟಿದರು.

ಅದೇ ಸಮಯದಲ್ಲಿ ಪಾತ್ರೆ ಬೆಳಗುತ್ತಿದ್ದ ಸುಂದರಿ ತಲೆಯೆತ್ತಿ ಬಂದವರನ್ನು ನೋಡಿದಳು. ಲಕ್ಷ್ಮಮ್ಮನ ಕಣ್ಣೂ ಅವಳ ಕಣ್ಣೂ ತಾಕ

ಲಾಡಿತು!—ಒಂದೇ ಒಂದು ಕ್ಷಣ ಮಾತ್ರ—ಮಿಂಚಿನಂತೆ! ಮರುಕ್ಷಣವೇ ಆ ಹುಡುಗಿಯ ಮುಖವು ಅವನತವಾಯಿತು! ಆವರೆ ಬಂದವರ ಉದ್ದೇಶವು ತಿಳಿದೋ ಏನೋ—ಗಲ್ಲಗಳು ನಸುಲಜ್ಜೆಯಿಂದ ಕೆಂಪಾದಂತೆ ತೋರಿದುವು. ಮತ್ತೆ ತಲೆಯೆತ್ತದೆ ತನ್ನ ಕಾರ್ಯದಲ್ಲಿ ಮಗ್ನಳಾದಳು.

ಆಗ ಸೀರನ್ನು ಸೇದುತ್ತಿದ್ದ ಆ ವಿಕಟ ಸ್ತ್ರೀ ಮೂರ್ತಿಯ ವಿಕಳ ಮುಖವು ಕಿಸಕಿಸನೆ ನಕ್ಕಂತಾಯಿತು. ವಿಚಿತ್ರವಾದುದೊಂದು ನೋಟವನ್ನೂ ಲಕ್ಷ್ಮಮ್ಮನ ಮೇಲೆಸೆಯಿತು. ಆ ಮೇಲೆ ಸೀರಿನ ಬಿಂದಿಗೆಯನ್ನು ಕಂಕುಳಲ್ಲಿ ಇಟ್ಟುಕೊಂಡು ಬಾಳೆಯ ಗಿಡದ ಕಡೆಗೆ ಹೋಯಿತು. ವಧುವನ್ನು ನೋಡಲಿಕ್ಕೆ ಬಂದವರೆಂಬ ಸಂದೇಹವುಂಟಾದರೆ ಸುತ್ತುಮುತ್ತಿನ ಹೆಂಗುಸರು ಅದೊಂದು ಬಗೆಯ ಕೌತುಕ ನೋಟದಿಂದ ನೋಡಿಯೇ ನೋಡುತ್ತಾರಷ್ಟೆ? ಅಂತಹ ಒಂದು ಮಾದರಿಯಾಗಿರಬಹುದು ಅದು!

ರಾಮಾ ಜೋಯಿಸರು ನಗುತ್ತ ಹೋಗಿ ಚಾವಡಿಯಲ್ಲಿ ಕುಳಿತರು. ಲಕ್ಷ್ಮಮ್ಮನು ಚಾವಡಿಯನ್ನೇರುವಾಗ ನಾರಾಯಣಯ್ಯ—“ಬನ್ನೀಮ್ಮ. ಹೀಗೆ ಕುಳಿತುಕೊಳ್ಳಿ” ಎಂದು ಚಾವಡಿಯಲ್ಲಿರುವ ಇನ್ನೊಂದು ಚಾಪೆಯನ್ನು ತೋರಿಸಿದರು. ಲಕ್ಷ್ಮಮ್ಮನು ಅಲ್ಲಿ ಅಚ್ಚುಕಟ್ಟಾಗಿ ಕುಳಿತಳು.

“ನೆಂಟರು ಬಂದಿದ್ದಾರೆ! ಸಕ್ಕರೆ ನೀರು!” ಎಂದು ನಾರಾಯಣಯ್ಯನ ದನಿ ಕೂಗಿತು.

ಜೋಯಿಸರು ಪರಿಚಯ ಮಾಡಿಸುವ ಮೊದಲ ಮಾತನ್ನು ಎತ್ತಿದರು. “ಆವೊತ್ತು ನಾನು ಬಂದಾಗ ಒಂದು ವರನ ವಿಷಯ ಪ್ರಸ್ತಾಪಿಸಿದ್ದೆನಷ್ಟೆ? ಆ ವರನ ತಾಯಿ ಲಕ್ಷ್ಮಮ್ಮನವರೆಂದರೆ ಇವರೆ”

“ಓಹೋ! ಬಹಳ ಸಂತೋಷವಾಯಿತು” ಎಂದು ನಾರಾಯಣಯ್ಯನ ಮುಖವು ನಸುನಕ್ಕಿತು.

ಅವರ ಗೃಹಿಣಿ ಸಕ್ಕರೆ ನೀರನ್ನು ತಂದು ನೆಂಟರಿಬ್ಬರಿಗೂ ಬೇರೆ ಬೇರೆ ಇಟ್ಟು ಲಕ್ಷ್ಮಮ್ಮನನ್ನು ನೋಡಿ ಆದರಭಾವದ ನಗುವಿನಿಂದ —“ಬಹಳ ದೂರದಿಂದ ಬಂದಿದ್ದೀರಿ–ಬಾಯಾರಿಕೆ ತಕ್ಕೊಳ್ಳಿ” ಎಂದಳು. ಲಕ್ಷ್ಮಮ್ಮನು ಅವಳ ಮುಖವನ್ನು ನೋಡಿ ಸ್ವೀಕೃತ ಭಾವದಿಂದ ನಕ್ಕಳು. ಗೃಹಿಣಿ ಒಳಗೆ ಹೋದಳು.

ಜೋಯಿಸರೂ ಲಕ್ಷ್ಮಮ್ಮನೂ ಸಕ್ಕರೆ ಸೀರನ್ನು ಸೇವಿಸಿಯಾದ ಮೇಲೆ–ನಾರಾಯಣಯ್ಯ ಪ್ರಕೃತ ಪ್ರಸ್ತಾಪಕ್ಕೆ ಪ್ರಾರಂಭಮಾಡಿದರು:

ನಾರಾಯಣಯ್ಯ:— ನೀವಿಬ್ಬರೇ ಬಂದಹಾಗೆ ಕಾಣುತ್ತೆ ?

ಜೋಯಿಸರು:— ಆ! ಸುಮ್ಮನೆ ಗುಂಪುಕಟ್ಟಿಕೊಂಡು ದಿಬ್ಬಣ ಬರುವ ಅವಶ್ಯವೇನು ಹೇಳಿ ?

ನಾರಾಯಣಯ್ಯ:— ನಿಜ ನಿಜ.

ಜೋಯಿಸರು:— ನೋಡೀ ನಾರಾಯಣಯ್ಯ, ನಾನು ಮೊನ್ನೆ ಬಂದಾಗಲೇ ಈ ವರಕ್ಕೆ ಜಾತಕದಲ್ಲಿ ಉತ್ತಮವಾಗುತ್ತದೆಂತಲೂ, ಮತ್ತು ವರನ ವಯಸ್ಸು–ಉದ್ಯೋಗ–ಸ್ಥಿತಿಗತಿ ಎಲ್ಲವನ್ನೂ ಹೇಳಿದ್ದೇನೆ—"

ನಾರಾಯಣಯ್ಯ:— ಹೌದು, ಹೌದು. ನಿಮ್ಮ ಮಾತಿನಲ್ಲಿ ನಮಗೆ ಒಳ್ಳೇ ವಿಶ್ವಾಸವುಂಟು. ಹುಡುಗಿಯ ತಂದೆ ಮುಕುಂದರಾಯರದು ಮೊನ್ನೆ ಕೂಡಾ ಒಂದು ಪತ್ರ ಬಂದಿತ್ತು. 'ದೊಡ್ಡಸ್ತಿಕೆ ಬಡಸ್ತಿಕೆಯ ವಿಚಾರ ಮುಖ್ಯವಲ್ಲ, ಪ್ರಾಯದಲ್ಲಿ–ಗುಣದಲ್ಲಿ–ನಡತೆಯಲ್ಲಿ ಹೊಂದಿಕೊಂಡಿದ್ದರೆ ಸರಿ.' ಎಂದು ಬರೆದಿದ್ದಾರೆ. ನೀವು ಹೇಳುವ ವರ ಇದಕ್ಕೆ ಸರಿಯಾಗಿದೆ ನಮಗೇನೂ ಸಂಶಯವಿಲ್ಲ.

ಜೋಯಿಸರು:— ಸಂಶಯ ಸುಟ್ಟಿತು. ಹಾಗೆ ಸಂಶಯವಿದ್ದರೆ ವರನು ಹೇಗಿದ್ದರೂ ಸದ್ಯದಲ್ಲೇ ಊರಿಗೆ ಬರುತ್ತಾನೆ; ನೀವೇ ನೋಡಿ ಮಾತಾಡಿಸಿ ಖಾತ್ರಿ ಮಾಡಿಕೊಳ್ಳಲೂಬಹುದು.

ನಾರಾಯಣಯ್ಯ:— ನಿಮ್ಮ ಮಾತೆಂದ ಮೇಲೆ ಅದೆಲ್ಲ ನಮಗೆ ಅವಶ್ಯವೇ ಇಲ್ಲ–ಜೋಯಿಸರೆ! ಹುಡುಗ ಬೇಕಾದರೆ ಅಗತ್ಯವಾಗಿ ಬಂದು ಹುಡುಗಿಯನ್ನು ನೋಡಿಕೊಂಡು ಹೋಗಬಹುದಲ್ಲ ?

ಜೋಯಿಸರು:— ಅದೇ ನೋಡಿ ನಾನೂ ಹೇಳುವುದು; ಆದರೆ ಆ ಹುಡುಗನ ಮಾತೃವಿಶ್ವಾಸವೆಂದರೆ ಅಷ್ಟು ಉಚ್ಚತರದ್ದು ನೋಡಿ! "ಅಮ್ಮ! ನೀನೇ ಎಲ್ಲಾ ನೋಡು, ನೀನು ನೋಡಿ ಒಪ್ಪಿದ ಹುಡುಗಿ ಹ್ಯಾಗಿದ್ದರೂ ನನಗೆ ಒಪ್ಪಿಗೆಯೇ!" ಎಂದು ಪೂರಾ ತಾಯಿಯ ಮೇಲೆ ಭಾರಹಾಕಿ ಬರೆದಿದ್ದಾನೆ. ಮುಹೂರ್ತ ನಿಶ್ಚಯ ಮಾಡಿ ಕಾಗದ ಹಾಕಿದ ಕೂಡಲೇ ಅವನು ಹೊರಟು ಬರುತ್ತಾನಂತೆ!

ನಾರಾಯಣಯ್ಯ:—ಬಂಗಾರದಂತಹ ಗುಣವೆಂದರೆ ಇದೇನೋಡಿ' ನಮ್ಮ ಭಾವ ಮುಕುಂದರಾಯರೂ ಹಾಗೆಯೆ; ಎಲ್ಲ ಭಾರ ನನ್ನ ಮೇಲೆಯೆ ಹಾಕಿ, ನಾನು ನೋಡಿಟ್ಟ ವರನಿಗೆ ತಾನು ಬಂದು ಧಾರೆಯೆರೆದು ಕೊಡುತ್ತೇನೆಂತ ಬರೆದಿದ್ದಾರೆ. ಒಳ್ಳೇ ವಿಶ್ವಾಸಿಗರಾದ ಮಾವ ಅಳಿಯಂದಿರೇ ಸೇರಿದಹಾಗಾಯಿತು !

ಜೋಯಿಸರು ನಗುತ್ತ;— ಇದೇ ಸುಯೋಗವೆಂದರೆ !

ನಾರಾಯಣಯ್ಯ:— ಇನ್ನು ಮುಚ್ಚುಮರೆ ಯಾತಕ್ಕೆ ? ಲಕ್ಷ್ಮಮ್ಮನವರೆ, ಹುಡುಗಿಯನ್ನು ನೋಡಿದಿರಷ್ಟೆ ? ಅದೇ-ಬಾವಿಕಟ್ಟೆಯಲ್ಲಿದ್ದಾಳಲ್ಲ ?

ಲಕ್ಷ್ಮಮ್ಮ:—"ನೋಡಿದೆ-ನೋಡಿದೆ." ಎಂದು ತಲೆಯಾಡಿಸಿದಳು.

ನಾರಾಯಣಯ್ಯ:—"ಹಾಗಲ್ಲ, ಸರಿಯಾಗಿ ನೋಡಬೇಡವೆ ?" ಎಂದು ಬಾವಿಕಟ್ಟೆಯ ಕಡೆಗೆ ಮುಖವನ್ನು ತಿರುಗಿಸಿ—"ಅಮ್ಮಾ! ಇಲ್ಲಿ ಬಾರೆ! "ಎಂದು ಪ್ರೀತಿಯಿಂದ ಕರೆದರು.

ಸ್ವಲ್ಪ ಹೊತ್ತಿನಲ್ಲಿ ಕೈಯಲ್ಲಿ ಒಂದೆರಡು ಬೆಳಗಿದ ತಂಬಿಗೆ-ಲೋಟಾಗಳನ್ನು ಎತ್ತಿಕೊಂಡು, ಕನ್ಯೆ ಜಂಕುತ್ತ ಜಂಕುತ್ತ ಮುಂದೆ ಬಂದು ಆವತನಮುಖಿಯಾಗಿ ಲಕ್ಷ್ಮಮ್ಮನ ಇದಿರಿನಲ್ಲೆ ಹಾದುಕೊಂಡು ಹೋಗುತ್ತಿದ್ದಳು.

ರಾಮಾ ಜೋಯಿಸರು ಮುಗುಳು ನಗುತ್ತ, ಅಡಕೆಲೆಯ ತಟ್ಟೆಯ ಮೇಲೆ ದೃಷ್ಟಿಯನ್ನಿಟ್ಟುಕೊಂಡು,—"ಲಕ್ಷ್ಮಮ್ಮನವರೆ, ಏನಾದರೂ ಮಾತಾಡಿಸಬಹುದಲ್ಲ ? ಹೇಗೂ ನಿಮ್ಮ ಭಾವೀ ಸೊಸೆ ! ಏನೇ ಹುಡುಗಿ! ನಾಚಿಕೆ ಮಾಡಲಿಕ್ಕೆ ನಿನ್ನ ಗಂಡನು ಇಲ್ಲಿಗೆ ಬರಲಿಲ್ಲವಮ್ಮಾ !" ಎಂದರು.

ಸುಂದರಿ ಒಳಗೆ ಹೋಗುವ ಬಾಗಿಲಿನ ಒಳಗೊಂದು ಕಾಲು-ಹೊರಗೊಂದು ಕಾಲು ಇಟ್ಟುಕೊಂಡು ಒಂದರೆ ನಿಮಿಷ ಹಾಗೆಯೆ ನಿಂತಳು.

ಲಕ್ಷ್ಮಮ್ಮನು ಏನು ಮಾತಾಡಿಸುವುದೆಂದು ತೋರದೆ—"ನಿನ್ನ ಹೆಸರೇನಮ್ಮ ?" ಎಂದು ಕೇಳಿದಳು ಆ ಕನ್ಯೆಯನ್ನು ನೋಡುತ್ತ

ನಾಚಿಕೆಯಿಂದಾಗಿರಬಹುದು; ಆ ಹುಡುಗಿ ಉತ್ತರ ಕೊಡಲಿಲ್ಲ; ಹಿಂದೆ ಮುಂದೆ ನೋಡಿಕೊಂಡು ಸುಮ್ಮನೆ ನಿಂತಿದ್ದಳು. ಆಗ-'ಸುಂದರಿ'

ಎಂಬೊಂದು ಶಬ್ದವು ಅಂಗಳದಲ್ಲಿ ಕೇಳಿಸಿತು. ಲಕ್ಷ್ಮಮ್ಮನು ತಿರುಗಿ ನೋಡಿದಳು.

ಬಾವಿಯಿಂದ ನೀರು ಸೇದಿ ಗಿಡಕ್ಕೆ ಹಾಕುತ್ತಿದ್ದ ಆ ವಿಕಳವಾದ ಸ್ತ್ರೀಮೂರ್ತಿ ಅಲ್ಲಿ ಬಂದು ನಿಂತು ಲಕ್ಷ್ಮಮ್ಮನ ಪ್ರಶ್ನೆಗೆ ಉತ್ತರ ಕೊಟ್ಟಿತ್ತು! ಮತ್ತೂ ನಿಂತಿದೆ ಮಿಸಿಮಿಸಿ ನಗುತ್ತ--ಅಮಾವಾಸ್ಯೆಯ ರಾತ್ರಿಯಲ್ಲಿ ಚಂದ್ರೋದಯವಾದಂತಹ ತನ್ನ ಶುಭ್ರದಂತ ಪಂಕ್ತಿಗಳನ್ನು ತೋರಿಸುತ್ತ !

ಲಕ್ಷ್ಮಮ್ಮನಿಗೆ ವಿಚಿತ್ರವೆನಿಸಿತು; ಯಾರೊಡನೆ ಕೇಳಿದುದಕ್ಕೆ ಯಾರು ಉತ್ತರ ಕೊಟ್ಟದ್ದು ?

"ಸರಿ. ಹುಡುಗಿಗೆ ತುಂಬಾ ನಾಚಿಗೆ! ಹೋಗಲಿ ಹಾಗಾದರೆ. ಮುಂದೆ ಎಷ್ಟೋ ಮಾತಾಡಿಸಬಹುದು" ಎಂದರು ಜೋಯಿಸರು.

"ನಾಚಿಕೆಯಿಲ್ಲದೆ ಇದ್ದೀತೇ? ಒಳ್ಳೆಯ ಹುಡುಗಿಯರಿಗೆಲ್ಲಾ ಮೊತ್ತಮೊದಲು ಹೀಗೆಯೇ ಸರಿ" ಎಂದಳು ಲಕ್ಷ್ಮಮ್ಮ.

ನಾರಾಯಣಯ್ಯ ಆ ವಿಕಳ ತರುಣಿಯನ್ನು ನೋಡಿ—"ಸರಿ ಸರಿ! ನೀನು ಹೋಗಿ ನಿನ್ನ ಕೆಲಸ ಮಾಡಮ್ಮ!' ಎಂದರು.

ಮಿಸಿಮಿಸಿ ನಗುತ್ತ, ಸುಂದರಿಯರ ದೃಷ್ಟಿನಿವಾಳಿಸುವಂತಹ ಆ ವಿಲಕ್ಷಣ ಸ್ತ್ರೀ ಹೊರಟುಹೋಯಿತು–ಬಾವೀಕಟ್ಟೆಯ ಕಡೆಗೆ. ಆ ಹುಡುಗಿಯೂ ಒಳಗೆ ಹೋದಳು.

ಅಷ್ಟರಲ್ಲಿ ಬೆನ್ನುಬಾಗಿದ ಒಂದು ಹಣ್ಣು ಹಣ್ಣು ಮುದುಕಿ ಒಳಗಿನಿಂದ ಬಾಗಿಲ ಹೊರಗೆ ಕಾಲೆಳೆದುಕೊಂಡು ಬಂದು ಕುಳಿತಿತು.

ರಾಮಾ ಜೋಯಿಸರು ಆ ಮುದುಕಿಯನ್ನು ಕುರಿತು—"ಅವ್ವಾ! ಇವರೇ ನೋಡಿ ಲಕ್ಷ್ಮಮ್ಮನವರೂ ಅಂದರೆ. ನಿಮ್ಮ ಪುಳ್ಳಿ ಸುಂದರೀಬಾಯಿಯನ್ನು ಇವರ ಮಗ ಶ್ರೀನಿವಾಸನಿಗೆ ತಕ್ಕೊಳ್ಳೋದೂ ಅಂತ ಆಲೋಚನೆ ಮಾಡಿ ಬಂದದ್ದು." ಎಂದರು.

ಮುದುಕಿ ಲಕ್ಷ್ಮಮ್ಮನ ಬದಿಬದಿಗೆ ಸರಿದು ಕುಳಿತು, ನಿರ್ಬಲವಾದ ನಡುಗುವ ದನಿಯಿಂದ—"ಲಕ್ಷ್ಮಮ್ಮ! ನನಗಾ ಕಣ್ಣು ಸರೀ ಕಾಣೋಲ್ಲಾ! ಬಾಳಾವಯಸ್ಸಾಯಿತೂ, ನನ್ನ ಪುಳ್ಳೀ ತಲೇಮೇಲೆ ಮಂಗಳಾಕ್ಷತೆ

ಹಾಕಿ ಕಣ್ಣು ಮುಚ್ಚಬೇಕೂಂತ ಮಾಡಿದ್ದೇನೆ. ತಾಯಿಯಿಲ್ಲದ ಮಗು ಪಾಪ, ಸುಂದರಿ. ನಾನೇ ಅಚ್ಚೆಯಿಂದ ಆದರ ಅಪ್ಪನ ಬಳಿಗೆ ಸಹಾ ಕಳುಹಿಸದೆ ಕಾಪಾಡಿದೆ. ಎಲ್ಲ ಭಾರ ಇನ್ನು ನಿಮಗೇ. ನೀವೇ ನೋಡಿಕೋಬೇಕು ಹುಡುಗೀನ." ಎಂದು ರಾಗವೆಳೆದಳು.

ಲಕ್ಷಮ್ಮ:— ಆ ವಿಷಯದಲ್ಲಿ ನೀವೇನೂ ಚಿಂತೆ ಮಾಡಬೇಡಿ ಅವ್ವಾ. ದೇವರಿಲ್ಲಾ ಒಳ್ಳೇದೆ ಮಾಡುತ್ತಾನೆ.

ಜೋಯಿಸರು:— ಆಯಿತು ಲಕ್ಷಮ್ಮ, ಇನ್ನು ನಾವು ಹೊರಡೋಣವೇ? ಮುಂದಿನ ವಿಷಯವೆಲ್ಲ ನಾನೂ ನಾರಾಯಣಯ್ಯನೂ ಮಾತಾಡಿಕೊಳ್ಳುವೆವು.

ನಾರಾಯಣಯ್ಯ:— ಅಂದರೆ ಜೋಯಿಸರೆ, ನಮಗೆ ನಿಧಾನ ಮಾಡುವ ಮನಸ್ಸಿಲ್ಲ. ಆದಷ್ಟು ಬೇಗನೇ ಮುಹೂರ್ತವಿಡಬೇಕು ನೋಡಿ.

ಜೋಯಿಸರು:— ನಮಗೂ ಹಾಗೆಯೆ. 'ಶುಭಸ್ಯಶೀಘ್ರಂ!' ಅಲ್ಲವೇ ಲಕ್ಷಮ್ಮ?

ಲಕ್ಷಮ್ಮ:— ಹೌದು, ಹುಡುಗನನ್ನು ಕಾಗದ ಹಾಕಿ ಕರೆಯಿಸುವಷ್ಟು ಅವಧಿಯಿದ್ದರೆ ನಮಗೆ ಸಾಕು.

ಜೋಯಿಸರು:— ಅದಕ್ಕೆ ಹೆಚ್ಚಾದರೆ ಹನ್ನೆರಡು ಹದಿನೈದು ದಿನ ಅವಧಿಯಿದ್ದರೆ ಸಾಕು. ಆದರೆ ನಾರಾಯಣಯ್ಯ, ಇನ್ನೊಂದು ಮುಖ್ಯ ಸಂದೇಹವು ನಮ್ಮ ಲಕ್ಷಮ್ಮನರಿವಗುಂಟು. ದೊಡ್ಡವರ ಸಂಬಂಧ—ತನಗೇನಾದರೂ ಅವಮಾನ—

ನಾರಾಯಣಯ್ಯ:— ಛೆಛೆ! ಹಾಗೇನಿದೆ ಇದರಲ್ಲಿ? ಮುಖ್ಯವಾಗಿ ನಾವು ಸಾಲಂಕಾರ ಕನ್ಯಾದಾನ ಮಾಡುವವರಿದ್ದೇವೆ. ಕನ್ನೆಯ ತಾಯಿ ಹೋಳಿಕೊಂಡ ಹರಿಕೆಯಿಂದಾಗಿ ಮದುವೆ ಮಾತ್ರ ಕಣ್ವತೀರ್ಥದಲ್ಲೇ ಆಗಬೇಕು.

"ಆಗಬಹುದೆ"ಂದು ಲಕ್ಷಮ್ಮ ಒಪ್ಪಿದಳು. ಜೋಯಿಸರು ಪಂಚಾಂಗವನ್ನು ಬಿಡಿಸಿ ಜಾತಕಗಳ ಒರೆಹಚ್ಚಿ ಇಪ್ಪತ್ತು ದಿನಗಳೊಳಗೆ ಒಂದು ಮುಹೂರ್ತವನ್ನು ಗೊತ್ತುಪಡಿಸಿದರು.

ಮದುವೆಯ ಕಾಲದ ವರೆಗೆ ಬೀಗರ ಮನೆಯಲ್ಲಿ ಊಟವು ನಿಷಿದ್ಧ. ಆದುದರಿಂದ ಜೋಯಿಸರೂ ಲಕ್ಷ್ಮಮ್ಮನೂ ಆಗಲೇ ಅಲ್ಲಿಂದ ಹೊರಟು ಹೋದರು.

"ಹುಡುಗಿ ನನ್ನ ಮನಸ್ಸಿಗೆ ಹಿಡಿಯಿತು ಜೋಯಿಸರೆ, ಆದರೆ ಆದರ ಸೃಷ್ಟಿ ನಿವಾಳಿಸುವಂತಹ ಅವತಾರವನ್ನೆತ್ತಿಕೊಂಡು ಅಂಗಳದಲ್ಲಿ ಬಂದ ಸಿಂಹ—"ಸುಂದರಿ" ಎಂದು ಕೂಗಿದ ಹೆಂಗುಸನ್ನು ನೋಡಿ –"ಅಬ್ಬ ಹೀಗೂ ಒಂದು ಹೆಣ್ಣಿನ ಜನ್ಮವಿದ್ದಿತೆಂತ ಆಶ್ಚರ್ಯವಾಗುತ್ತೆ." ಎಂದು ಹೋಗುವಾಗ ಲಕ್ಷ್ಮಮ್ಮನಂದಳು.

ಅದಕ್ಕೆ ಜೋಯಿಸರೆಂದರು —"ಅ! ಬ್ರಹ್ಮಸೃಷ್ಟಿಯೆಂದರೇನೇ ಒಂದು ವಿಚಿತ್ರ ಸೃಷ್ಟಿ ಲಕ್ಷ್ಮಮ್ಮನವರೆ. ಅದಿರಲಿ, ನಾನು ನಿಮ್ಮನ್ನು ಬಸ್ಸು ಹತ್ತಿಸಿ, ಕಳುಹಿಸಿ–ಬೇರೆಕಡೆಗೆ ಹೋಗುತ್ತೇನೆ. ನೀವು ಹೋದ ಕೂಡಲೇ ಜರೂರಿನಿಂದ ಕಾಗದ ಹಾಕಿಸಿ ನಿಮ್ಮ ಮಗನನ್ನು ಕರೆಯಿಸ ಬೇಕು. ನಾನು ನಾಡದು ಬಂದು ನಿಮ್ಮನ್ನು ಕಾಣುತ್ತೇನೆ.—"

---

## ೫. ನಿರಾಶೆಯ ನಿಟ್ಟುಸಿರು

ನಿರೀಕ್ಷೆ ಮಾಡಿದಂತೆಯೇ ಬಂತು ಶೆಂಬಗಭಟ್ಟರ ಹೆಂಡತಿ ಸೀತಮ್ಮನ ಪ್ರತ್ಯುತ್ತರ. ಕಮಲೆಗೆ ಮದುವೆಯಾಗಿ ಎರಡು ವರ್ಷವಾಗಿ ಹೋಯಿತೆಂದೂ ಈಗ ಅವಳು ಗಂಡನೊಂದಿಗೆ ಹೋಗಿರುತ್ತಾಳೆಂದೂ ಹೀಗೆ ಸಂಕ್ಷೇಪವಾಗಿತ್ತು.

ಇದನ್ನು ಶೀನುವಿಗೆ ತಿಳಿಸಿದರೆ ಪರಿಣಾಮವು ಸರಳವಾಗಲಿಕ್ಕಿಲ್ಲ ವೆಂದು ಬಗೆದು ಲಕ್ಷ್ಮಮ್ಮನು ಕೃಷ್ಣನ ಮೂಲಕವಾಗಿ ಶೀನುವಿಗೆ ಹೀಗೊಂದು ಕಾಗದವನ್ನು ಬರೆಯಿಸಿ ಹಾಕಿಸಿದಳು:–

"ಚಿರಂಜೀವಿ ಶ್ರೀನಿವಾಸನಿಗೆ ನಿನ್ನ ತಾಯಿಯ ಆಶೀರ್ವಾದಗಳು. ಕ್ಷೇಮ–ಕ್ಷೇಮಕ್ಕೆ ಬರೆಯುವುದು. ಪರಿತರುವಾಯ ಕಳೆದ ಕಾಗದದಲ್ಲಿ ನೀನು ಬರೆದು ತಿಳಿಸಿದ ಪ್ರಕಾರ, ಸೀತಮ್ಮನಿಗೆ ಪತ್ರವನ್ನು ಬರೆದು ಉತ್ತರವನ್ನು ತರಿಸಿಕೊಂಡಿದ್ದೇನೆ, ದೇವರು ಅನುಕೂಲ ಮಾಡಿಸುವ

ಹಾಗೆಯೇ ಕಾಣುತ್ತೆ. ನಾನು ಅದೇ ಸಿದ್ಧತೆಯಲ್ಲಿ ಕೆಲಸವನ್ನು ಮುಂದು ವರಿಸುತ್ತಾ ಇದ್ದೇನೆ. ಈ ಪತ್ರವನ್ನು ನೋಡಿದ ಕೂಡಲೇ ನೀನು ಹೊರಟು ಬರಬೇಕು. ಮುಖ್ಯ ಈ ಕಾಗದವು ತಂತಿ ಎಂದು ಭಾವಿಸಿ ಜರೂರಾಗಿ ಹೊರಟು ಬಾ. ಉಳಿದುದೆಲ್ಲಾ ಮುಖತಃ ಮಾತಾಡುವ. ಇತಿ ಆಶೀರ್ವಾದ—"

ಈ ಪತ್ರವನ್ನು ಹಾಕಿದ ಎಂಟನೆಯ ದಿನದಲ್ಲಿ ಶೀನು ಹೊರಟು ಬಂದು ತಾಯಿಯ ಚರಣಕಮಲಕ್ಕೆ ಪೊಡಮಟ್ಟನು.

ನಿಧಾನವಾಗಿ ಲಕ್ಷ್ಮಮ್ಮನು ಅವನಿಗೆ ಸತ್ಯ ಸಮಾಚಾರಗಳನ್ನು ತಿಳಿಸಲಾರಂಭಿಸಿದಳು. ಕಮಲೆಯ ಆಶೆ ತಪ್ಪಿಹೋಯಿತು—ಎಂದು ತಿಳಿಯುತ್ತಲೇ ಶೀನುವಿಗೆ ತಡಿದಾಘಾತವಾದಂತಾಯಿತು! ಅವನ ಮೌನ ಮುದ್ರೆ ತಾಯಿಯನ್ನು ಗಾಬರಿಗೊಳಿಸಿತು ಲಕ್ಷ್ಮಮ್ಮನು ಮತ್ತೂ ಸಮಾಧಾನವನ್ನು ಹೇಳಿದಳು.

—"ಇನ್ನು ಆ ವಿಷಯದಲ್ಲಿ ಚಿಂತೆ ಮಾಡಿ ಏನು ಪ್ರಯೋಜನ ಅಪ್ಪಾ? ನಾನು ಎರಡು ವರ್ಷಗಳ ಮೊದಲೇ ನಿನ್ನ ಮದುವೆಯ ಪ್ರಸ್ತಾಪವನ್ನು ತೆಗೆಯಲಿಲ್ಲವೆ? ಆಗಲೇ ನೀನು ನಿನ್ನ ಹೊಟ್ಟೆಯ ಗುಟ್ಟನ್ನು ಹೊರಗೆ ಹಾಕಿದ್ದರೆ ನೋಡಬಹುದಿತ್ತು. ನೀನು ಮದುವೆಯೇ ಬೇಡ-ಬೇಡ ಅಂತ ಬರೆಯಲಿಕ್ಕೆ ಶುರುಮಾಡಿದಿ!—"

"ಅಂದರೆ ಅಮ್ಮಾ! ಆ ಕಮಲೆಯನ್ನು ವರಿಸಿಕೊಳ್ಳಬೇಕೆಂದು ನನ್ನ ಮನಸ್ಸಿನೊಳಗಿರುವ ಗುಟ್ಟು ನನಗೇ ಗೊತ್ತಾಗಲಿಲ್ಲ. ಇತ್ತಿತ್ತಲಾಗಿ ನೀನು ನನಗೆ ಮದುವೆ--ಮದುವೇಂತ ಕಾಗದ ಬರೆದಾಗಲೆಲ್ಲಾ ನನ್ನ ಮನಸ್ಸು ಆ ಕಮಲೆಯನ್ನು ನೆನೆದು ನೆನೆದು ಹೋಗಲಾರಂಭವಾಯಿತು. ಇದೆಲ್ಲಾ ನಿನಗೆ ತಿಳಿಸಿದರೆ ಆಗುವವಾತಲ್ಲವೆಂದೂ—ನೀನು ಗೇಲಿ ಮಾಡುವಿಯೆಂದೂ—ದಾಕ್ಷಿಣ್ಯಪಟ್ಟುಕೊಂಡಿದ್ದೆ. ಮತ್ತೆ ಮತ್ತೆ ಮದುವೆಗೆ ನಿನ್ನ ಒತ್ತಾಯವು ಬಲವಾಗಿ ಹೋಗುವುದು ನೋಡಿ—ಕಮಲೆಯ ಸಂಗತಿಯೆಲ್ಲ ಕನಸೇ ಎಂದು ಭಾವಿಸಿ—ನಿನಗೆ ಸಂತೋಷವಾಗುವ ಹಾಗೆ ಬರೆದೆ—ಆಮೇಲೆ ಪುನಃ ಮನಸ್ಸು ಚಂಚಲವಾಯಿತು. ದಾಕ್ಷಿಣ್ಯಪಟ್ಟರೆ ಆಗಲಾರದು. ಆಶೆಯೋ ನಿರಾಶೆಯೋ ತೇಲಿಹೋಗಲಿ ಎಂದು

ನಿಶ್ಚಯ ಮಾಡಿಕೊಂಡು ಪುನಃ ನಿನಗೆ ಹಾಗೆ ಬರೆದೆನು. ಈಗ ನೋಡಿ ದರೆ ನನ್ನ ಸಂದೇಹದಂತೆಯೇ ಆಯಿತು. ನೀನು ನನ್ನನ್ನು ಸ್ವಲ್ಪ ಮೋಸ ಪಡಿಸಿದ ಹಾಗಾಯಿತಮ್ಮ ''

'' ಹೌದು ಮತ್ತೆ, ಶೀನು ! ನಿನಗೆ ಸತ್ಯಸಮಾಚಾರವನ್ನು ತಿಳಿಸಿ ಬಿಟ್ಟರೆ–ಇಕೋ–ಹತ್ತು ದಿನಗಳ ಕೆಳಗೆ ಒಬ್ಬನು ನಿನ್ನ ಹಾಗೇ ಬಂದು ಹುಡುಗಿಯ ಮೇಲೆ ಮನಸ್ಸಿಟ್ಟು–ಆ ಹುಡುಗಿ ಕೈತಪ್ಪಿ ಹೋಯಿತೂಂತ ಉರುಲು ಹಾಕಿಕೊಂಡನಂತೆ! ಇದೆಲ್ಲಾ ಯೋಚಿಸಿ ಹೆದರಿ ಹ್ಯಾಗಾದರೂ ನಿನ್ನನ್ನು ಊರಿಗೆ ಬರುವ ಹಾಗೆ ಮಾಡಿದ್ದೇನೆ ತಪ್ಪೇನಪ್ಪ? ಅಲ್ಲದೆ ಎರಡು ವರ್ಷದ ಮೊದಲೇ ಆದರೂ ಆ ಕಮಲೆಯನ್ನು ನಮಗೆ ಕೊಡು ತ್ತಿದ್ದರೂಂತ ಮಾಡಿದಿಯಾ? ಆ ಧನಪಿಶಾಚಿ ಹಿಡಿದ ಶಿಂಬಗಭಟ್ಟರಿಗೆ ಸಾವಿರಗಟ್ಟಲೆ ರೂಪಾಯಿಯನ್ನು ಸುರಿದು ಕಮಲೆಯನ್ನು ತರಲು ನಮ್ಮಿಂದ ಸಾಧ್ಯವೆ? ಅಪ್ಪಾ, ಶೀನು! ಆ ವಿಚಾರವನ್ನು ಬಿಡಪ್ಪ ಇನ್ನು. ಈಗ ನೋಡು ನಿನಗೊಂದು ಚೆಲೋ ಹುಡುಗಿಯನ್ನು ನೋಡಿಟ್ಟಿ ದ್ದೇನೆ.—'' ಎಂದು ಲಕ್ಷ್ಮಮ್ಮನು ಪ್ರಕೃತ ರಂಗದಕಡೆಗೆ ಅವನ ಮನ ಸ್ಸನ್ನು ಇಳಿಸಲು ತೊಡಗಿ, ಅದುವರೆಗೆ ನಡೆದ ವಿವಾಹ ವೃತ್ತಾಂತವೆಲ್ಲ ವನ್ನೂ ತಿಳಿಸಿದಳು. '' ನೀನೂ ಒಮ್ಮೆ ಕೊಳ್ಳಾಜೆಗೆ ಹೋಗಿ ಹುಡುಗಿ ಯನ್ನು ನೋಡಿಯೆ ಬರಬೇಕು, '' ಎಂದೂ ಒತ್ತಾಯಪಡಿಸಿದಳು.

ಶೀನು ನಿರುತ್ಸಾಹದಿಂದ ತನಗೆ ಮದುವೆಯೆ ಬೇಡವೆಂದೂ, ಬ್ರಹ್ಮಚಾರಿಯಾಗಿರುವೆನೆಂದೂ ತುಂಬಾ ಪಟ್ಟುಹಿಡಿದನು. ಲಕ್ಷ್ಮಮ್ಮನು ನಾನಾತರದಲ್ಲಿ ಬೋಧಿಸಿ ಕಣ್ಣೀರು ಸುರಿಸಲಾರಂಭಿಸಿದಳು. ಅವನು ಮದುವೆಗೆ ಒಪ್ಪಿಕೊಂಡು ಬರೆದ ಪತ್ರದ ಒಕ್ಕಣೆಗಳನ್ನೂ ಎತ್ತಿತೋರಿಸಿ ದಳು. '' ಆ ನಿನ್ನ ಒಪ್ಪಿಗೆಯ ಪತ್ರವು ರಾಮಾ ಜೋಯಿಸರ ಕೈಯಲ್ಲಿ ರುವಾಗ–ಇಷ್ಟೆಲ್ಲ ಕಲಸ ಮುಂದುವರಿಸಿ, ಅದಕ್ಕಾಗಿಯೇ ಎಂಬಂತೆ ನೀನು ಊರಿಗೆ ಕೂಡಾ ಬಂದು, ಈಗ ಫಕ್ಕನೆ ನಿಂತುಹೋದರೆ–ಜನರೇ ನಂದಾರು? ಆ ಜೋಯಿಸರೇನಂದಾರು? ಆ ಹುಡುಗಿಯ ಕಡೆಯವರು ತುಂಬಾ ಮರ್ಯಾದಸ್ಥರು. ನಿನ್ನ ಗುಣವನ್ನು ತಿಳಿದು ಸಾಲಂಕಾರ ಕನ್ಯಾದಾನವನ್ನು ಮಾಡಲಿಕ್ಕಿದ್ದಾರೆ. ನೀನು ಈಗ ಹಿಂಜರಿದರೆ ಅವರು

ಜರಿಯರೆ? ಗಳಿಗೆಗೊಂದೊಂದು ಬುದ್ಧಿ ಅಂತ ಊರವರೆಲ್ಲ ಹಳಿಯರೆ? ಮನೆತನಕ್ಕೆ ಹಿರಿಯ ಮಗನಾದ ನೀನು ಮದುವೆಯೆ ಬೇಡ ಅಂದರೆ ನ್ಯಾಯವೆ?–ನೋಡಪ್ಪ, ನಿನಗೂ ವಯಸ್ಸಾಯಿತು—'' ಎಂದು ಮನಸ್ಸು ಕರಗುವಂತೆ ಹೇಳಿದಳು.

ಕಟ್ಟಕಡೆಗೆ ಶೀನು 'ಮೌನಂ ಸಮ್ಮತಿ ಲಕ್ಷಣಂ' ಎಂಬಂತೆ ತಲೆ ಯಾಡಿಸಿದನು. ಆದರೆ ಇದು ಅವನು ಮೊದಲೇ ಪತ್ರದಲ್ಲಿ ಬರೆದಂತೆ ತಾಯಿಯ ಒತ್ತಾಯಕ್ಕಾಗಿಯೇ. '' ನೀನೂ ಹೋಗಿ ಒಮ್ಮೆ ಹುಡುಗಿ ಯನ್ನು ನೋಡಿಕೊಂಡು ಬಾ—ಕೃಷ್ಣನೂ ನೀನೂ ಹೋಗಿ ಬನ್ನಿ—" ಎಂದು ಲಕ್ಷ್ಮಮ್ಮ ಹೇಳಿದುದಕ್ಕೆ—'' ಬೇಡ ಬೇಡ. ಅಮ್ಮ! ನಿನ್ನ ಸಹಾಯಕ್ಕಾಗಿ ಒಬ್ಬಳು ಸೊಸೆ ಬರಬೇಕೆಂತಲೇ ನೀನು ಹೇಳಿದ ಹಾಗೆ ಕೇಳಿದೆನೇ ಹೊರತು ನನಗೇನೂ ಬೇಡಮ್ಮ. ನೀನು ನೋಡಿ ಸಮ್ಮತಿ ಪಟ್ಟಿರುವಿಯಷ್ಟೆ? ಆಯಿತು! ಆದರೂ ಅಮ್ಮ, ನನಗೆ ಮಾತ್ರ ಈ ಮದುವೆ ಯಿಂದ ಎಷ್ಟು ಮಾತ್ರಕ್ಕೂ ಸಂತೋಷವಾಗಲಿಕ್ಕಿಲ್ಲ!''

'' ಸಾಕು ಬಿಡು! ಇನ್ನೊಮ್ಮೆ ಈ ಬಗೆಯ ಹೊಲ್ಲದ ಸಂನ್ಯಾಸೀ ಮಾತು ಆಡಬೇಡಪ್ಪಾ! ಯಾರಾದರೂ ಕೇಳಿದರೆ ಹೇಸಿಗೆ ಗೊತ್ತೇ? ಮದುವೆಯಾಗಲಿ, ಮುಂದೆಲ್ಲಾ ಸರಿಯಾಗುತ್ತೆ." ಎಂದು ಲಕ್ಷ್ಮಮ್ಮನ ಮಗನು ಇಷ್ಟುಮಟ್ಟಿಗಾದರೂ ಒಪ್ಪಿದನಲ್ಲ, ಎಂದು ಸಂತೋಷಪಟ್ಟು ತನ್ನ ಕೆಲಸಕ್ಕೆ ಹೊರಟುಹೋದಳು.

ಈ ಸಂಭಾಷಣೆ ಚಾವಡಿಯಲ್ಲಿಯೆ ನಡೆದಿತ್ತು. ತಾಯಿ ಹೊರಟು ಹೋದರೂ ಶೀನು ಇನ್ನೂ ಅಲ್ಲೇ ಕುಳಿತಿದ್ದನು. ಅಂಗಳದ ಮೇಲೆ ಆಕಾಶದ ಕಡೆಗೆ ಅವನ ಸಾಂದ್ರ ದೃಷ್ಟಿಗಳು ನೆಟ್ಟುಹೋಗಿದ್ದುವು. ಸಾಯಂಕಾಲದ ಸಮಯ. ಗ್ರೀಷ್ಮಋತುವಿನ ಗಾಳಿ ಮೆಲ್ಲಮೆಲ್ಲನೆ ಬೀಸ ಲಾರಂಭವಾಗಿತ್ತು. ಆಕಾಶದಲ್ಲಿ ಚಲನೆಯಾಗುವ ಮೋಡಗಳಂತೆಯೇ ಶೀನುವಿನ ಮನಸ್ಸಿನಲ್ಲಿಯೂ ಆಲೋಚನೆಗಳು ಚಾಲನೆಯಾಗಲಾರಂಭಿ ಸಿದ್ದುವು. ಆದುದರಿಂದ ಶೀನುವಿನ ದೃಷ್ಟಿಗಳು ಸ್ಥಿರವಾಗಿ ಆಕಾಶವನ್ನು ನೋಡುತಿದ್ದುವು. ಸಂಧ್ಯಾರಾಗದ ಕೆಂಬಣ್ಣದಿಂದಲಂಕೃತವಾಗಿ ಸಾಗಿ ಸಾಗಿ ಹೋಗುತಿರುವ ಜಲಧರ ಪರಿಚ್ಛೇದಗಳೆಡೆಯೆಡೆಯಲ್ಲಿ ಕಮಲೆಯ

ಮುಖಕಮಲವೇ ಶೀನುವಿನ ಕಣ್ಣಿಗೆ ಕಾಣಿಸುತಿರಬೇಕು—ಇಲ್ಲವೇ ಅವು ಗಳ ಎಡೆಯಲ್ಲಿ ಕಮಲೆಯನ್ನು ಹುಡುಕುತಿರಬೇಕು. ಪಕ್ಷಿವೃಂದಗಳ ಸಂಧ್ಯಾಲಾಪನೆಯಲ್ಲಿಯೂ ಕಮಲೆಯ ಸ್ವರವೇನಾದರೂ ಇರುವುದೇ ಎಂದು ಅವನು ಆಲಿಸುತಿರಬೇಕು. ಅವನು ಹಾಗೆ ಅಂತಃಶೋಧನೆಯಲ್ಲಿ ದ್ದಾಗ—ಶಾಲೆಬಿಟ್ಟು ಕೃಷ್ಣ-ಗೌರಿಯರು ಮನೆಗೆ ಬಂದುದನ್ನೂ ಅವನು ಅರಿಯನು. ಆ ಅಣ್ಣತಂಗಿಯರು ತಾಯಿ ಹುರಿದುಕೊಟ್ಟ ಸಂಡಿಗೆಯ ತಟ್ಟೆಗಳನ್ನು ತಂದು ಹಿರಿಯಣ್ಣನ ಮುಂದಿಟ್ಟುದೂ ಅವನು ಅರಿಯನು.

"ಅಣ್ಣನೇನೋ ಗ್ರೀಷ್ಮಾಕಾಶವನ್ನು ನೋಡಿ ಕಾವ್ಯಕಟ್ಟುತಿದ್ದಾನೆ!" ಎಂದನು ಕೃಷ್ಣ. "ಅಣ್ಣ! ದೊಡ್ಡಣ್ಣಾ! ಸಂಡಿಗೆತಕ್ಕೋಣ್ಣ" ಎಂದಳು ಗೌರಿ. ಆಗ ತಾನೇ ಫಕ್ಕನೇ ವಿಚಾರದಿಂದೆದ್ದ ಶೀನು—"ಹ, ನೀವು ತಕ್ಕೊಳ್ಳಿ. ನಾನು ಆಗಲೇ ತಕ್ಕೊಂಡಾಯಿತಲ್ಲ!" ಎಂದು ತಟ್ಟೆಯಿಂದ ಎರಡು ಸಂಡಿಗೆಯನ್ನು ಎತ್ತಿಕೊಂಡನು. ಆದರೆ ಅವನು ಸಂಡಿಗೆಯನ್ನು ಬಾಯಿಗಿಟ್ಟರೂ ಅದು ಹಾಗೆಯೇ ಬಾಯಲ್ಲಿತ್ತು—ಇನ್ನೊಂದು ಹಾಗೆಯೇ ಕೈಯಲ್ಲಿತ್ತು. ದೃಷ್ಟಿ ಮತ್ತೆ ಹೋಯಿತು ಆಕಾಶದಕಡೆಗೆ.

ಇದನ್ನು ಕಂಡು ಗೌರಿ—"ದೊಡ್ಡಣ್ಣನಿಗೆ ನಿದ್ದೆ ಬರುತ್ತೇಂತ ಕಾಣುತ್ತೆ" ಎಂದಳು.

ಕೃಷ್ಣನು,—"ಹೌದು. ಬೆಳಿಗ್ಗೆ ಪೂರಾ ದಣಿದು ಬಂದಿದ್ದಾನೆ. ಅಣ್ಣ—ಸಂಧ್ಯಾಕಾಲವಾಯಿತು. ಬೇಗನೇ ಉಂಡು ಮಲಗಿಬಿಡಣ್ಣ." ಎಂದನು

ಶೀನು ಮತ್ತೆ ಅರಿವು ತಂದುಕೊಂಡು—"ಹಾಗೇನೂ ಇಲ್ಲಪ್ಪ ಕೃಷ್ಣ. ಸ್ವಲ್ಪ ಹೊತ್ತು ನೀವು ಯಾರೂ ನನ್ನನ್ನು ಮಾತಾಡಿಸಬೇಡಿ. ನಾನು ಸಹಸ್ರನಾಮವನ್ನು ಉರುಹಾಕುತ್ತಾ ಇದ್ದೇನೆ." ಎಂದನು.

ಕೃಷ್ಣನು ನಗುತ್ತ—"ಅಲ್ಲಲ್ಲ! ನನಗೆ ಗೊತ್ತಿದೆ. ನನ್ನ ಅತ್ತಿಗೆಯ ವಿಚಾರವಾಗಿ ಯೋಚನೆ ನಡೆದದೆ ಅಣ್ಣ! ಯೋಚನೆ ಯಾಕೆ ಹೇಳು? ನಾನೂ-ನೀನೂ ಒಮ್ಮೆ ಹೋಗಿ ನೋಡಿಕೊಂಡೇ ಬರೋಣವೇನು?"

ಶೀನು ಕೃಷ್ಣನ ಮುಖವನ್ನು ನೋಡಿ ಶುಷ್ಕವಾದ ನಗುವನ್ನು ನಕ್ಕು—"ಹೋಗೋ—ಏನಾದರೂ ಮಾತಾಡುತ್ತಿ! ನಾನೊಂದು

ಕವಿತೆ ಕಟ್ಟುತ್ತಿದ್ದೇನೆ ಗೊತ್ತೋ?" ಎಂದಂದು ಅಲ್ಲಿಂದೆದ್ದು ತೋಟಕ್ಕೆ ಹೋಗಿ—ಅತ್ತಿತ್ತ ತಿರುಗಾಡಲಾರಂಭಿಸಿದನು. ತೋಟದ ಹಲಸಿನ—ಮಾವಿನ ಮರಗಳಲ್ಲಿ ಸೇರಿಕೊಂಡು ಚಿಲಿಬಿಲಿಗುಟ್ಟುತಿರುವ ಪಕ್ಷಿಸಂಕುಲಗಳು "ಕಮಲೆಯಿಲ್ಲ—ಕಮಲೆಯಿಲ್ಲ" ಎಂದು ಕೂಗುವಂತೆ ಕೇಳಿಸಿದುವು. ಆಗಸದ ನಡುವಿನಲ್ಲಿದ್ದ ಸಾವಿರಾರು ಮೇಘದ ತುಂಡುಗಳು ಗಾಳಿಯ ಸಹಾಯವನ್ನು ಪಡೆದುಕೊಂಡು, ಮುಳುಗಲಿರುವ ದಿನಮಣಿಯನ್ನು ಕಳುಹಿಸಿಕೊಡಲಿಕ್ಕಾಗಿ ನೈರುತ್ಯ-ವಾಯುವ್ಯ ದಿಕ್ಕುಗಳಿಗೆ ಸಾಗಿ ಹೋಗಿ ಆಗಸದಂಚಿನಲ್ಲಿ ಗುಂಪುಗುಂಪಾಗಿ ಸೇರಿಕೊಂಡು--ಸೂರ್ಯನೊಡನೆ ದಿನಾಂತದ ಮಾತುಕತೆಗಳಲ್ಲಿ ಮಗ್ನವಾಗಿದ್ದುವು. ಪಕ್ಷಿಗಳು ಕೆಲವು ಆ ಕಡೆಗೆ ಹಾರಿ ಹಾರಿ ಹೋಗುತ್ತಿದ್ದುವು. ಆಗೋ—ಆಗಸದ ಈಶಾನ್ಯದ ಕೆಳಗೆಲ್ಲಿಯೋ ತಪ್ಪಿಹೋದ ಕರುಮೋಡದ ತುಂಡೊಂದು, ಸೂರ್ಯನ ಕಟ್ಟಕಡೆಯ ದರುಶನಾತುರದಿಂದ ಓಡೋಡಿ ಬರುತ್ತಿದ್ದಿತು. ಅದರ ಮೇಲೆಯೇ ದೃಷ್ಟಿಯನ್ನು ಹರಿಯಬಿಡುತ್ತಾ-ಶೀನುವೂ ಯೋಚನೆ ಮಾಡುತ್ತಿದ್ದನು.—" ಈ ಮೇಘಗಳೆಲ್ಲ ಇನ್ನು ಮೇಲೆ ಸೂರ್ಯದೇವನನ್ನು ಮರೆತು ಹೋಗುವ ಹಾಗೆ ನಾನೂ ಇನ್ನು ಮೇಲೆ ಕಮಲಾದೇವಿಯನ್ನು ಮರೆಯಲೇಬೇಕೆ?" ಎಂದು ಚಿಂತಿಸುತ್ತಿದ್ದನು.

ಕಮಲೆಯನ್ನು ಅವನು ನೋಡಿ ಇಂದಿಗೆ ಆರು ವರ್ಷಗಳಾಗಿ ಹೋಗಿದ್ದುವು. ಆಗ ಅವಳು ಹತ್ತು ವರ್ಷದ ಬಾಲೆಯಾಗಿದ್ದಳು. ಅವನು ಹದಿನಾಲ್ಕು ವರ್ಷದ ಹುಡುಗ. ಶೀನು ಆಗ ಮಲೆಯಾಳದ ಶಾಲೆಯಲ್ಲಿ ಓದುತ್ತಿದ್ದನು. ಆದರೂ ಅವನಿಗೆ ಮಾತೃಭಾಷೆಯಾದ ಕನ್ನಡದ ಮೇಲೆ ಬಲು ಪ್ರೀತಿ. ಮನೆಯಲ್ಲಿ ತಂದೆಯಾದ ವೆಂಕಪ್ಪಯ್ಯನವರ ಸಂಗ್ರಹದಲ್ಲಿ ಕನ್ನಡ ಗ್ರಂಥಗಳಿದ್ದುವು ವೆಂಕಪ್ಪಯ್ಯನವರು ಮಲೆಯಾಳದಲ್ಲೇ ತಳವೂರಿದವರಾದರೂ ಅವರಿಗೆ ಕನ್ನಡ ಭಾಷೆಯ ಮೇಲೆ ತುಂಬಾ ಅಭಿಮಾನ-ಮಮತೆ. ಅಂತೆಯೇ ಅವರು ಕನ್ನಡ ಗದ್ಯ-ಪದ್ಯ ಗ್ರಂಥಗಳನ್ನು ಆದಷ್ಟು ಸಂಗ್ರಹಿಸಿಕೊಂಡಿದ್ದರು. ಯಕ್ಷಗಾನ ಪ್ರಸಂಗಗಳೂ ಆಧುನಿಕ ಗ್ರಂಥಗಳೂ ಅವರ ಸಂಗ್ರಹದಲ್ಲಿದ್ದುವು. ಆ ಬಗೆಯ ತಂದೆಯ ಮಾತೃಭಾಷಾ ಪ್ರೇಮವೇ ಮಗನನ್ನೂ ಅಂಟಿಕೊಂಡಿತ್ತು.

ಶೀನು ಪೂರ್ವಜನ್ಮವಾಸನೆಯುಳ್ಳ ಕಲಾವಿದನಾಗುವನೆಂಬ ಲಕ್ಷಣವು ಎಳೆತನದಲ್ಲಿಯೇ ಕಂಡುಬರುತ್ತಿತ್ತು. ಅವನು ಶಾಲೆಯಲ್ಲಿ ಕೇಳಿದ ಮಲೆಯಾಳೀ ಕತೆಗಳನ್ನು ಕನ್ನಡದಲ್ಲಿ ಬರೆಯುವನು; ಕಲಿತ ಪಾಠವನ್ನು ಕನ್ನಡ ಪದ್ಯಮಾಲಿಕೆಯಾಗಿ ಪೋಣಿಸುವನು; ನೋಡಿದ ಆಟವನ್ನು ಚಿತ್ರವಾಗಿ ಚಿತ್ರಿಸುವನು. ಅವನ ಆಟನೋಟಗಳೆಲ್ಲವೂ ಕಲಾನುಸಾರಿಯಾಗಿದ್ದುವು.

ಅವನಿಗೆ ತಕ್ಕ ಹಾಗೆ ಅವನಂತೆಯೆ ಕಲಾವಿಲಾಸಿನಿಯಾದ ಕಮಲಾಬಾಲೆ ಅವನ ಬಾಲ್ಯಸಖಿಯಾಗಿ ಸೇರಿದ್ದಳು. "ಕಮಲಾ! ಹೀಗೆ ನಿಲ್ಲು" ಎಂದು ಶೀನುವಿನ ಬಾಯಿಯಿಂದ ಹೇಳಿಸಿಕೊಂಡು ಕಮಲೆ ನಿಲ್ಲುವಳು. ಅವಳು ನಿಂತ ಹಾಗೆ ಶೀನು ಚಿತ್ರವನ್ನು ಬಿಡಿಸುವನು. ನೋಡಿ ಇಬ್ಬರೂ ಆನಂದಪಡುವರು. ...........

ಶೀನು ಕತೆಗಳನ್ನು ಬರೆಯುವಾಗಲೂ, ತಂದೆಯ ಹೇಳಿಕೆಯಂತೆ ಹಳೇಗ್ರಂಥಗಳ ಪ್ರತಿಯನ್ನು ತೆಗೆಯುವಾಗಲೂ, ಕಮಲೆಯೂ ಅವನ ಪಕ್ಕದಲ್ಲೇ ಇದ್ದು ಓದಿ ಓದಿ ಹೇಳುತಿದ್ದಳು. ಅವನ ಸಹಾಯದಿಂದ ಅವಳೂ ಕನ್ನಡವನ್ನು ಕಲಿಯುತ್ತಿದ್ದಳು ... ....... ...

ಶೀನು ನಾಯಿ ಬೆಕ್ಕುಗಳ ಮೇಲೆ ಕವನವನ್ನು ಕಟ್ಟಿದರೆ, ಕಮಲೆ ಇರುವೆ–ನುಸಿ–ನೊಣಗಳ ಮೇಲೆ ಪದ್ಯಕಟ್ಟಿ ಹೇಳುವಳು. ಕ್ಷಣ ಕವಿಗಳ ಹಾಗೆ ಇಬ್ಬರೂ ಪದ್ಯಗಳನ್ನೆ ಮಾತುಗಳಲ್ಲಿ ಉಪಯೋಗಿಸಿಕೊಳ್ಳುವರು.

ಹೀಗೆ ಒಂದಲ್ಲ–ಎರಡಲ್ಲ ಆ ಕಾಲದ ಶೀನುವಿನ ಕಲಾವಿಲಾಸವೆಲ್ಲವೂ ಕಮಲಾಬಾಲೆಯ ಒಡನಾಟದಲ್ಲೇ ಬೆಳೆದಿದ್ದಿತು. ಸಹೋದರರಾದ ಕೃಷ್ಣ ಗೌರಿಯರೊಡನೆಯೂ ಶೀನು ಕಮಲೆಯೊಡನೆ ಆಡಿಕೊಂಡಂತೆ ಆಡಿರಲಿಲ್ಲ......... ... ..

ಆ ಮೇಲೆ ಕಾಲವಿಲಾಸದಿಂದಾಗಿ ತಂದೆಯ ಮರಣವಾಯಿತು. ಮಲೆಯಾಳದ ವಾಸವನ್ನು ಬಿಡಬೇಕಾಯಿತು; ಕಟ್ಟಕಡೆಯ ಆ ವಿಯೋಗ ಕಾಲದಲ್ಲಿ ಕಮಲಾಬಾಲೆ ಅಳುತ್ತಲೇ ಇದ್ದಳು. ಆ ಕಟ್ಟಕಡೆಯ ದುಃಖ ದೃಶ್ಯವು ಈಗ ಅವನ ಹೃದಯದಲ್ಲಿ ಹೊಸ ಹೊಸ ಪ್ರತಿಯಾಗಿ ಮೂಡುತ್ತಲೇ ಇದ್ದಿತು. ಆ ವಿಯೋಗಕಾಲದಲ್ಲಿ ಇವನೂ ಅತ್ತಿದ್ದನು. ಆದರೆ

ಆಗಣ ಭಾವನೆಗಳೆಲ್ಲಾ ಬಾಲ ಭಾವನೆಗಳೇ ಹೊರತು—ಹೀಗೆ ಪ್ರಣಯ ರೂಪವಾಗಿ ಪರಿವರ್ತನೆಯಾಗುವುದೆಂದು ಗೊತ್ತೇ ಆಗಲಿಲ್ಲ. ಅವಳಿಗೂ ಹೀಗೆಯೇ ಆಗಿರಬಹುದೆ?........ಉತ್ತರ ಹೇಳುವವರಾರು? ಕಾಲದೇವನಾದ ಸೂರ್ಯನು ಮೌನಮುದ್ರೆಯಿಂದ ಮುಳುಗಿ ಹೋಗುತ್ತಿದ್ದಾನೆ. ಕತ್ತಲೆಗಳು ನಾಲ್ಕು ಕಡೆಗಳಿಂದ ಅವನ ಮುಳುಗುವಿಕೆಯನ್ನು ಹೊಂಚು ಹಾಕುತ್ತ ಕಾದಿವೆ. .. ... .......

ಸಂಕಷ್ಟ ರಜನಿಗಳ ಕಾಲಮಾರ್ಗದಲ್ಲಿ ನಡೆಬಿಟ್ಟ ಶೀನು ಅಡುಗೆಯ ಭಟ್ಟನಾಗಿ ದ್ರವ್ಯಾರ್ಜನೆಯ ಮಡುವಿನಲ್ಲಿ ಇಳಿದುಬಿಟ್ಟಿದ್ದಾನೆ. ಕಮಲೆಯ ಮೂರ್ತಿ ಹೃದಯಾಂತರಾಳದಲ್ಲಿ ಹುಗಿಹುಗಿಯುತ್ತ ಅಡಗಿಕೊಂಡು ಹೋಗಿದೆ ಅಡುಗೆಯ ಕೆಲಸವನ್ನು ಮಾಡುತ್ತ ವಿರಾಮ ಕಾಲವನ್ನು ವ್ಯರ್ಥವಾಗಿ ಕಳೆಯದೆ—'ವ್ಯರ್ಥವಾಗಿ ಕಳೆಯಬಾರದೆ'ಂಬ ತಿಳುವಳಿಕೆಯಿಂದೇನೂ ಅಲ್ಲದಿದ್ದರೂ—ಅವನ ಪ್ರಕೃತಿಯೇ ಸಾಹಿತ್ಯ ಸೇವಾ ಪ್ರಕೃತಿಯಾದುದರಿಂದ—ಅವನ ಹುಟ್ಟಿನೊಂದಿಗೇ ಹುಟ್ಟಿಬಂದ ಕನ್ನಡ ಸಾಹಿತ್ಯ ಸೇವೆಯನ್ನು–ಕಲೆಗಳ ಅಭ್ಯಾಸವನ್ನು--ಬಿಡದೆ ಹಿಡಿದು ಕೊಂಡೇ ಇದ್ದನು. ತಕ್ಕ ಗುರುವನ್ನು ಹಿಡಿದು--ತಕ್ಕ ಶಿಕ್ಷಣವನ್ನು ಪಡೆದು--ತಕ್ಕ ಮಾರ್ಗವನ್ನು ಅನುಸರಿಸಿದ್ದರೆ, ಅವನು ಸರಳ ರೀತಿಯಾಗಿ ಮೇಲ್ಮೆಯನ್ನೈದಿ-ಕನ್ನಡ ಮಹಾದೇವಿಗೆ ಬಗೆಬಗೆಯ ಕಳಾಭೂಷಣಗಳನ್ನು ಅಲಂಕರಿಸಿ--ಆ ದೇವಿಯ ಕೀರ್ತಿರೂಪ ಪ್ರಸಾದಕ್ಕೆ ಭಾಗಿಯಾಗುತ್ತಿದ್ದನ ;– ಆದರೆ ಅವನು ಹಿಡಿದ ದಾರಿ ಅಂಧಕಾರಮಯವಾದುದರಿಂದ ನಾನಾ ವಿಡಂಬನೆಗಳಿಗೆ ಒಳಗಾಗಬೇಕಾಯಿತು. ಆದರೂ-

"ನಹಿ ಕಲ್ಯಾಣ ಕೃತ್ಕಶ್ಚಿತ್ ದುರ್ಗತಿಂ ತಾತ ಗಚ್ಛತಿ"

ಎಂಬ ಕೃಷ್ಣವಾಕ್ಯವು ಸತ್ಯವಾದರೆ--ಕನ್ನಡ ತಾಯಿ ಆ ತನ್ನ ಬಡಕಂದನನ್ನು ಆದರಿಸದೆ ಹೋದಾಳೆ?

ಪುಸ್ತಕಗಳೂ ಪ್ರಕೃತಿಯ ನೋಟಗಳೂ ಅವನ ಸಾಹಿತ್ಯ ಕಲೆಗಳಿಗೆ ಗುರುಸ್ವರೂಪಗಳು. ಆದರೆ ಮನಸ್ಸಿಗೆ ತೋರುವ ಪುಸ್ತಕಗಳನ್ನೆಲ್ಲ ಕೊಂಡುಕೊಳ್ಳಬೇಕೆಂದರೆ ಹಣದ ಅಡಚಣೆ--ಪಾಪ! ಆದುದರಿಂದ ಸುಲಭವಾಗಿ ಸಿಕ್ಕುವ ಮಾಸಿಕಗಳು-ಲೈಬ್ರೆರಿಯ ಪುಸ್ತಕಗಳು ಮುಂತಾದ

ಈ ಬಗೆಯ ಸಾಧನೆಗಳಿಂದಲೇ ಅವನು ಲೇಖನಕಲೆಯಲ್ಲಿ ಸುರಿಯುತ್ತಿದ್ದನು. ಹುಟ್ಟುಕವಿ ಸುಖ-ದುಃಖಗಳನ್ನು ಅನುಭವಿಸುತ್ತಿದ್ದರೂ ಕವಿತಾ ವಾಸನೆಯನ್ನು ಮಾತ್ರ ಬಿಡಲಾರನು. ಅವನ ಮಿದುಳಿನಲ್ಲಿ ಮಿಳಿತವಾದ 'ಪ್ರತಿಭೆ' ಸುಖ-ದುಃಖಗಳ ಸಂಯೋಗದಿಂದ ಸರ್ವದಾ ಸ್ಫುರಣ ಹೊಂದುತ್ತ ಅವನನ್ನು ಕಾರ್ಯರೂಪಕ್ಕೆ ಇಳಿಸಿಯೇ ತೀರುವುದು. ಶೀನುವೂ ಹಾಗೆಯೆ. ಕಮಲೆಯ ವಿಯೋಗಸ್ಮರಣೆ ಹೃದಯಾಂತರಾಳದಲ್ಲಿದ್ದರೂ--ಸಾಹಿತ್ಯ ಸೇವೆಯ ಸಮಯದಲ್ಲಿ ಅದು ಯತ್ಕಿಂಚಿತ್ತಾಗಿ ನೆನಪಿಗೆ ಬಂದರೂ, ಅದು 'ಅನಿವಾರ್ಯ ಚಿಂತೆ' ಎಂಬ ಸಮಾಧಾನದಿಂದ ಅಡಗಿಕೊಂಡು ರಸಪೋಷಕವಾಗಿ ಒದಗುತ್ತಿತ್ತು. ಅವನ ಕಾರ್ಯವು ಆನಂದದಿಂದ ಸಾಗುತ್ತಿತ್ತು. ತನಗೂ ಮುಂದೆ ಮದುವೆಯಾಗುವ ಸಂದರ್ಭವುಂಟು, ಆಗ ಕಮಲೆಯನ್ನೆ ವರಿಸಿಕೊಳ್ಳಬೇಕು ಎಂಬ ಯೋಚನೆ ಕವಲೊಡೆದಿರಲಿಲ್ಲ. ತಾನು ಮದುವೆಯನ್ನೆ ಮಾಡಿಕೊಳ್ಳದೆ ಸಾಹಿತ್ಯ--ಕಲಾಪ್ರಪಂಚದಲ್ಲಿ ಒಂದು ದಿವ್ಯವಾದ ಸ್ಥಾನವನ್ನು ಆಕ್ರಮಿಸಿಕೊಳ್ಳಬೇಕೆಂಬುದು ಅವನ ಮಹತ್ವಾಕಾಂಕ್ಷೆಯಾಗಿತ್ತು; ನಂಬುಗೆಯೂ ಇತ್ತು. ಈ ಬಗೆಯ ಸದಾಕಾಂಕ್ಷೆಯೂ--ತಕ್ಕ ನಂಬುಗೆಯೂ ಇಲ್ಲದಿದ್ದರೆ. ಸಾಹಿತಿಗೆ ಸಾಹಿತ್ಯ ಸೇವೆಯನ್ನು ಮಾಡುವಷ್ಟು ಚಿತ್ತಸ್ಥೈರ್ಯವು ಬರಲಾರದೆಂದೇ ಹೇಳಬೇಕು. ಆದರೆ ಶೀನು ಯಾವುದನ್ನೂ ಪ್ರಕಟಪಡಿಸಬೇಕೆಂಬ ಅವಸರಕ್ಕೆ ಇನ್ನೂ ಇಳಿದಿರಲಿಲ್ಲ. ಏಕೆಂದರೆ, ಅವುಗಳು ಹೊರಗೆ ತೋರಿಸುವಷ್ಟು ಯೋಗ್ಯತೆಗೆ ಇನ್ನೂ ಬಂದಿಲ್ಲವೆಂದೂ, ಒಂದು ವೇಳೆ ತೋರಿಸಿದರೂ ಜಂಬಗಾರನೆಂಬ ಅಪಖ್ಯಾತಿ ಬಂದೀತೆಂದೂ, ನೋಡುವವರಾದರೂ ಅನೇಕವಾಗಿ ಮುಖಸ್ತುತಿಗಾರರೂ--ಇಲ್ಲವೇ ಸ್ವಪೌರುಷವನ್ನು ತೋರಿಸುತ್ತ ಅನ್ಯಕೃತಿಯಲ್ಲಿ ಅಲ್ಪದೋಷಗಳನ್ನು ಕೆಣಕುವವರೂ ಹೊರತು, ಉದಾತ್ತಭಾವದಿಂದ ಪ್ರೋತ್ಸಾಹಗೊಳಿಸುವಂತಹ ಮಹನೀಯರ ಪರಿಚಯವಿಲ್ಲದುದರಿಂದಲೂ, ಅವನ ಕೃತಿಗಳೆಲ್ಲಾ ಅಡುಗೆ ಮನೆಯ ಮೂಲೆಯಲ್ಲೇ ನಡೆದು, ಅವನ ಟ್ರಂಕು ಪೆಟ್ಟಿಗೆಯೊಳಗೇ ಸೇರಿಕೊಳ್ಳುತ್ತಿದ್ದುವು ಎಲ್ಲರಿಗೂ ಅಡುಗೆಯ ಭಟ್ಟನಾಗಿಯೇ ಪರಿಚಿತನಾಗಿದ್ದನು.

ಹೀಗಿರುವಾಗಲೇ ವಿವಾಹದ ಪ್ರಸ್ತಾಪವನ್ನು ಕುರಿತು ಅವನ ತಾಯಿ ಬರೆದ ಕಾಗದಗಳು ಅವನಲ್ಲಿ ವಿಚಾರ ಕ್ರಾಂತಿಯನ್ನುಂಟಾಗಿಸಿದುವು. ಮೊದಮೊದಲು ಮದುವೆಯಾಗುವ ಅಗತ್ಯವು ತನಗೆ ಬೀಳಲಿಕ್ಕಿಲ್ಲವೆಂದು ಅಲಕ್ಷ್ಯ ಮಾಡಿದನು. ಬರುಬರುತ್ತಾ ತಾಯಿಯ ಕಷ್ಟಪತ್ರವು ಒತ್ತಾಯಿಸಿಕೊಂಡು ಬರಲು, ಆಗ ತಾನೇ ಅವನು ಸರಿಯಾದ ಎಚ್ಚರಕ್ಕೆ ಬಂದುದು! ತನ್ನ ಮದುವೆ ಅಗತ್ಯ ನ್ಯಾಯಕ್ಕೆ ಬೀಳುವುದೆಂಬ ಅರಿವು ಆಗ ತಾನೇ ಎಚ್ಚರಾಗಲಾರಂಭಿಸಿತ್ತು. ಮದುವೆಯಾಗದೇ ಇರುವುದೂ ನಮ್ಮ ತಾಯಿಯ ಮನಸ್ಸನ್ನು ಮುರಿಯುವುದೂ ಸಮ--ಎಂದು ಆಗ ತಾನೇ ತಿಳಿಯಿತು. ತಾಯಿಯ ಮನಸ್ಸನ್ನು ಮುರಿಯುವುದು ಮಾತ್ರ ಅವನ ಹುಟ್ಟಿನಿಂದಾಗುವ ಗುಣವಲ್ಲ. ಹಾಗಾದರೆ ಮದುವೆಗೆ ಒಪ್ಪಿಗೆಯನ್ನೀಯಲೇ ಬೇಕು.—

ಕೂಡಲೇ ಅವನ ಮನಸ್ಸು ಭಾವನಾತರಂಗದಲ್ಲಿ ವಿಹರಿಸಲಾರಂಭವಾಯಿತು ತಾನು ಕಣ್ಣಾರೆ ಕಂಡು—ಕಿವಿಯಾರೆ ಕೇಳಿರುವ ಅನೇಕ ಸಂಸಾರಿಗಳ ಚಿತ್ರಗಳನ್ನು ನೆನೆದುಕೊಂಡನು ಆಹಾ! ಕಂಡು ಕೇಳಿದುದರಲ್ಲಿ ಪರಸ್ಪರ ಹೊಂದಿಕೆಯಿಲ್ಲದ ಸಂಸಾರಗಳೇ ಬಹಳ! ಅಯ್ಯೋ! ತನ್ನ ಬಾಳಿಕೆಯ ಜತೆಗೆ ಎಂತಹಳು ಬರುವಳೊ! ತನ್ನ ಲೇಖನ ವ್ಯವಸಾಯಕ್ಕೆ ಕೀಸರಿಡುವಳೊ! ಚಿತ್ರವನ್ನು ಕೆಡಿಸುವಳೊ! ಕವಿತೆಕಟ್ಟಲು ಬಿಡದೆ ಬರೀ ಕಾಡುವಳೊ!—ಅಥವಾ ನಿಜವಾದ ಸಹಾಯಿನಿಯಾದ-ಸರಿಯಾದ ಸಹಚಾರಿಣಿಯಾದ ಜತೆಗಾತಿಯೇ ಕೂಡುವಳೊ? ಅದೃಷ್ಟವನ್ನು ಯಾರು ಕಂಡಿರುವರು?—

ಆಹಾ! ಕಮಲೆ! ಕಮಲೆ!—ಹೃತ್ತಳದ ಪದರುಗಳೆಡೆಯಲ್ಲಿ ಅಡಗಿದ್ದ ಕಮಲೆಯ ಮುಖವು ಆಗ ತಾನೇ ಮೇಲೇಳುತ್ತ ಹಣಿಕಿ ಹಾಕಲಾರಂಭವಾದುದು! ಅವನಿಗೆ ತಕ್ಕ ಕಲಾವಿಲಾಸಿನಿಯಾದ ಕೆಳದಿಯೆಂದರೆ ಅವಳೇ ಸರಿ! ಅವಳಂತಹ ಜತೆಗಾತಿಯು ಹೊಂದಿಕೆಯಾದರೇನೇ ಅವನ ಬಾಳುವೆ ಧನ್ಯವಾದೀತು! ಏಕೆ? ಕಮಲೆಯನ್ನು ಮದುವೆಯಾಗಬಾರದೆ? ಅಂತಹ ಭಾಗ್ಯವಿದೆಯೆ? ಒಡನೆಯೆ ಅಂತರ ಮಹದ್ಭಾಗ್ಯವು ಬಂದಂತೆಯೇ—ಕಮಲಾಬಾಯಿಯ ಗಂಡನಾದಂತೆಯೇ—ಅವ

ಳೊಂದಿಗೆ ಸಾಹಿತ್ಯಸಲ್ಲಾಪಗಳಲ್ಲಿ ಮಗ್ನವಾದಂತೆಯೋ--ಅವಳೊಂದಿಗೆ ಕಲಾವಿಲಾಸಗಳಲ್ಲಿ ತೇಲಿಹೋದಂತೆಯೋ ಕನಸು--ನೆನಸುಗಳನ್ನು ಕಂಡು, ಮೋಸಹೋಗಿ ನಿಟ್ಟುಸಿರು ಬಿಟ್ಟಿದ್ದನು. ಯೋಚನಾತರಂಗದಲ್ಲಿ ಅವಳ ಲಾಭವು ಇಸಜನ್ಮಕ್ಕೆ ದೂರವೆಂದೇ ತೋರುತ್ತಿತ್ತು. ಅವಳ ದೇಶ-ಬೇರೆ, ಜಾತಿ-ಬೇರೆ, ಇಷ್ಟರಲ್ಲಿ ಮದುವೆಯೂ ಆಗಿರಬಹುದು. ಇದನ್ನು ವಿಚಾರಿಸಿ ತಿಳಿಯುವುದಾದರೂ ಹೇಗೆ? ನಾಚಿಕೆ! ದಾಕ್ಷಿಣ್ಯ! ಕೇಳಿದವರು ಏನಾದರೂ ಅಪಾರ್ಥವನ್ನು ಕಲ್ಪಿಸಿಕೊಂಡಾರು! ಅವಳನ್ನು ಅಗಲಿದಂದಿನಿಂದ ಪತ್ರವ್ಯವಹಾರವನ್ನು ನಡೆಯಿಸುತ್ತ ಇದ್ದಿದ್ದರೆ ಒಂದೊಂದು ರೀತಿ ಎನ್ನಬಹುದಿತ್ತು. ಅಲ್ಲದೆ ಕಮಲೆಯ ತಂದೆ ಒಂದು ರೀತಿಯ ವಕ್ರಸ್ವಭಾವಿ. ಅದಾದಾಗಲೆಂದು ಪತ್ರವನ್ನು ಬರೆದರೂ 'ಕಮಲೆಗೆ ಮದುವೆಯಾಗಿ ಹೋಯಿತೆ' ಎಂಬ ಸಮಾಚಾರವು ಬಂದರೆ-- ಆ ವೇದನೆಯನ್ನು ಪರಿಹರಿಸಿಕೊಳ್ಳಲಾದೀತೆ? ಇಲ್ಲ--ಇಲ್ಲ! ಅವಳು ಮನೋದೇವಿಯಂತೆ ಅಂತರ್ಯದಲ್ಲೆ ಇರಲಿ. ಅವಳ ಬಹಿರಾಶೆಯನ್ನು ಬಿಡಲೇಬೇಕು.—

ಈ ಬಗೆಯ ಯೋಚನೆಯ ಮೂಟೆಯನ್ನು ಕಟ್ಟುತಿರುವಾಗಲೇ ಲಕ್ಷ್ಮಮ್ಮನ ಒತ್ತಾಯದ ಪತ್ರವೊಂದು ಆವನ ಮನಸ್ಸು ಕರಗುವ ಹಾಗೆ ಬಂದಿತ್ತು. ಮಾಡುವುದೇನು? ಅದೃಷ್ಟದಲ್ಲಿದ್ದಂತಾಗಲಿ. ತಾಯಿಯ ಮನಸ್ಸಿಗಾದರೂ ತೃಪ್ತಿಯಾಗಲಿ!—ಎಂಬ ವಿರಕ್ತಿಭಾವದಿಂದ ವಿವಾಹಕ್ಕೆ ಒಪ್ಪಿಕೊಂಡು, ಎಲ್ಲಾ ಸಿದ್ಧತೆಯನ್ನೂ ಮಾಡುವಂತೆ ಬರೆದು ಹಾಕಿಬಿಟ್ಟನು.

ಹಾಗೆ ಹಾಕುವಾಗ ಬದಿಗೆ ಸರಿಸಿಟ್ಟ ಕಮಲೆಯ ವಿಚಾರ ಮತ್ತೆ ಶಿಥಿಲವಾಗುತ್ತ ಸುಳಿದಾಡಲಾರಂಭವಾಯಿತು. ಏನೇ ಆಗಲಿ, ಕಮಲೆಯ ಸಂಗತಿಯನ್ನು ತಿಳಿದುಕೊಂಡಮೇಲೆಯೇ ಮದುವೆ; ಅವಳಿಗೆ ಮದುವೆಯಾಗದಿದ್ದರೆ ಭಗೀರಥ ಪ್ರಯತ್ನದಿಂದಾದರೂ ಅವಳನ್ನೇ ವರಿಸಬೇಕು. ತಾಯಿಯ ಮುಂದೆ ನಾಚಬಾರದು. ಆಶೆಯೋ-ನಿರಾಶೆಯೋ ತೇಲಿಯೇ ಹೋಗಲಿ!' ಎಂದು ಗಟ್ಟಿಮನಸ್ಸು ಮಾಡಿಕೊಂಡು, ತನ್ನ ಹೃದ್ಗತವನ್ನು ಬಿಚ್ಚಿ ಮತ್ತೆ ತಾಯಿಗೆ ಬರೆದನು.—

ಸರಿ. ಲಕ್ಷ್ಮಮ್ಮನು ಉಪಾಯದಿಂದ ಅವನನ್ನು ಊರಿಗೆ ಬರಮಾಡಿಕೊಂಡೂ ಬಿಟ್ಟಳು. ಅದೊಂದು ಸಜೀವ-ನಿರ್ಜೀವ ಸ್ಥಿತಿಯಲ್ಲಿದ್ದ ಆಶೆಯು ಕೂಡ ನಿರಾಶಾನಲದಿಂದ ಸುಟ್ಟು ಬೂದಿಯೂ ಆಯಿತು! ಕಮಲೆ ಈಗ ವಿವಾಹಿತೆಯಾಗಿ ಮಗುವಿನ ತಾಯಿಯಾಗಿ ಸುಖಸಲ್ಲಾಪಗಳಲ್ಲಿ ಮಗ್ನಳಾಗಿರುವ ಸಹೋದರೀ ಸಮಾನತೆಯಾಗಿ ಹೋದಳು! ಅವಳೀಗ ಪರಸ್ತ್ರೀ! ಪರಸ್ತ್ರೀ!! ಪರಸ್ತ್ರೀ!!!—ಇನ್ನೇನು?

ಮೊದಲಿನ ಆಲೋಚನೆಯೇ ಸರಿ. ತಾಯಿಯ ಮನಸ್ಸು ಮುರಿಯುವಂತಿಲ್ಲ. ಮದುವೆಯ ಉರುಲು ತಲೆಗೆ ಸೇರಾಗಿ ಸಿದ್ಧವಾಗಿ ನಿಂತಿದೆ!—

ಸೂರ್ಯನು ಮುಳುಗಿದನು. ಕತ್ತಲೆಗಳು ಸಂಸಾರದ ಸುಳಿಗಳಂತೆ ಅವನ ಸುತ್ತುಮುತ್ತ ಕವಿದುಕೊಂಡು ಬರಲಾರಂಭಿಸಿವೆ. ಆ ಕತ್ತಲೆಯ ಕಾಳತನವನ್ನು ಕೊಂಚವಾದರೂ ನಿವಾರಿಸೋಣವೆಂದು ನಕ್ಷತ್ರಗಳೆಲ್ಲ ಒಟ್ಟಾಗಿ ಮಿನುಗಬೇಕೆಂದು ಪ್ರಯತ್ನಿಸಿದರೂ, ಆಗಸದಂಚಿನಲ್ಲಿ ಸೇರಿಕೊಂಡು ಸುಮ್ಮನಿದ್ದ ಜಲಧರಗಳು ಗಜಿಬಿಜಿಗೊಂಡು ಮೇಲೆದ್ದೆದ್ದು ಸಂಕಟಪರಂಪರೆಗಳಂತೆ ಆ ನಕ್ಷತ್ರಗಳನ್ನು ಮುಚ್ಚಿಕೊಳ್ಳುತ್ತಿದ್ದುವು. ಸೊಂಯ್ಯ ಸೊಂಯ್ಯನೆ ಮಾರುತವು ಬೀಸಲಾರಂಭವಾಯಿತು!—

"ಅಣ್ಣಾ! ಅಣ್ಣಾ! ಎಂಬ ಕೃಷ್ಣನ ಕರೆ ಶೀನುವನ್ನು ಎಚ್ಚರಿಸಿತು!

ಹೃದಯಾಂತರಾಳದ ಕರುಳುಗಳೆಡೆಯಲ್ಲಿ ಸಿಕ್ಕಿಕೊಂಡ, ಯಾವುದೋ ಒಂದು ವಸ್ತುವನ್ನು ಕಿತ್ತು ಹೊರಗೆಳೆದು ಬಿಸುಟನೋ ಎಂಬಂತೆ, ಬಹಳ ಉದ್ದವಾದ ಒಂದು ಉಸಿರು ಶೀನುವಿನ ಮೂಗಿನೊಳಗಣಿಂದ ಹೊರಗೆದ್ದು ಹೋಯಿತು! ಪುನಃ ಮತ್ತೊಂದು ನಿಟ್ಟುಸಿರು—ಮೂಲಾವಶೇಷವಾಗಿ ಕಿತ್ತುಹಾಕಿದ ಹಾಗೆ! ಹೌದು, ಕಮಲೆಯನ್ನೆ ಕಿತ್ತುಹಾಕಿರಬೇಕು! ಪರನಾರಿಯಾದವಳನ್ನು ಸ್ವಂತ ಹೃನ್ಮಂದಿರದೊಳಗೆ ಅಡಗಿಸಿಟ್ಟುಕೊಳ್ಳಬಹುದೆ? ನ್ಯಾಯವೆ? ನೀತಿಯೆ?

## ೬. ಅಯ್ಯೋ!—ಇದೇನು?

ನಡೆಗೊಂಬೆಯಂತಹ ಶೀನುವನ್ನು ಸಾಗಿಸಿಕೊಂಡು ಒಂದು ಪುಟ್ಟ ಪರಿವಾರವು ಕಣ್ವತೀರ್ಥದ ಕಡೆಗೆ ಹೊರಟಿತ್ತು. ರಾಮಾ ಜೋಯಿಸರೇ ಆ ಪರಿವಾರದ ಮುಂದಾಳು. ಮೊದಲೇ ಲಕ್ಷ್ಮಮ್ಮ ಬಡವೆ. ಆದುದರಿಂದ ಊರವರನ್ನೆಲ್ಲ ಕರಕೊಂಡು ಹೋಗುವಂತಿರಲಿಲ್ಲ. ಭಾವಂದಿರು ತಾವು ಹೊರಡದೆ ತಮ್ಮ ಮಕ್ಕಳಿಬ್ಬರನ್ನು ಮಾತ್ರ ಕಳುಹಿಸಿದ್ದರು. ವೆಂಕಟ್ರಾಯಣ್ಣನು ಬರಲೇ ಇಲ್ಲ ಲಕ್ಷ್ಮಮ್ಮನ ತಂಗಿಯ ಗಂಡನೊಬ್ಬ, ಗ್ರಾಮ ಮೊಕ್ತೇಸರ ವೀರಪ್ಪಯ್ಯನೊಬ್ಬ, ಪುರೋಹಿತರೊಬ್ಬರು, ಸಾಮಾನು ಹೊರುವ ಇಬ್ಬರು ಕೂಲಿಯವರು,—ಇಷ್ಟೇ ಸರಿ ಈ ಸಣ್ಣ ಪರಿವಾರವು ಮಂಗಳೂರಿನಲ್ಲಿ ರೈಲು ಹತ್ತಿತು. ಹುಡುಗೀ ಕಡೆಯವರು ಬೆಳಗಿನ ರೈಲಿನಲ್ಲಿ ಹೋಗಿರುವರೆಂದು ರಾಮಾಜೋಯಿಸರು ಹೇಳಿದ್ದರು. ಮದುವೇ ಮುಹೂರ್ತ ಮಧ್ಯರಾತ್ರಿಯ ಮೇಲೆ ಎರಡುಗಂಟೆಗಿತ್ತು.

ಇವರು ಕಣ್ವಾಶ್ರಮವನ್ನು ತಲುಪಿದಾಗ ಹೊತ್ತು ಇಳಿದು ಹೋಗಿತ್ತು. ಕೃಷ್ಣಪಕ್ಷದ ಕತ್ತಲೆ ತನ್ನ ಸಾಮ್ರಾಜ್ಯವನ್ನು ಸಂಸ್ಥಾಪನೆ ಮಾಡಿತ್ತು. ಕಣ್ವಾಶ್ರಮವು ಲಾಂದರಗಳಿಂದಲೂ ದೊಂದಿಯ ಕಾಲು ದೀಪಗಳಿಂದಲೂ ಬೆಳಗುತ್ತಿತ್ತು. ಆ ಬೆಳಕಿನಲ್ಲಿ ಎಡತಾಕಿಕೊಂಡು ವಧುವಿನ ಕಡೆಯ ಪ್ರಮುಖರು ಕೆಲವರು ವರನ ಕಡೆಯವರಿಗೆ ಎಲ್ಲಾ ಅನುಕೂಲತೆಗಳನ್ನು ಕಲ್ಪಿಸಿಕೊಟ್ಟರು. ಪುರೋಹಿತರು, ಪೂಜಾರಿಗಳು, ಮೇಳದವರು ಎಲ್ಲರೂ ಸಿದ್ಧರಾಗಿದ್ದರು.

ಕೆಲವರು ಹೊರಗೆ ಬಂದು ಆಕಾಶವನ್ನು ನೋಡುತ್ತ ತರ್ಕವಿತರ್ಕಗಳನ್ನು ಮಾಡುತ್ತಿದ್ದರು. ಶಾಂತಶುಭ್ರವಾದ ಸಾಂದ್ರಪ್ರಕಾಶಾಕಾಶದಲ್ಲಿ ಲಕ್ಷೋಪಲಕ್ಷ ನಕ್ಷತ್ರಗಳು ಮಿನುಗುತ್ತಿದ್ದುವು. ಅದನ್ನು ನೋಡಿ ಮಳೆ ಬರಲಾರದೆಂದು ಕೆಲವರಂದರು. ಆದರೆ ನೈಋತ್ಯ ಮೂಲೆಯಲ್ಲಿ ಆಗೊಮ್ಮೆ ಈಗೊಮ್ಮೆ ಮಿಂಚುತ್ತಿತ್ತು. ಮತ್ತೂ ನೋಡಿದರೆ ಅಲ್ಲಿ ಅಡಗಿಕೊಂಡಿರುವ ಕಪ್ಪುಕಪ್ಪಾದ ನೀರ್ಮೋಡಗಳ ರಾಶಿಯೊಂದು—ಅಡಗಿ ಹೊಂಚುತಿರುವ ಭಯಂಕರ ರಾಕ್ಷಸನೋ—ಎಂಬಂತೆ ತೋರುತ್ತಿತ್ತು.

ಆದು ಕದಲುವ ಲಕ್ಷಣವಿಲ್ಲದಿದ್ದುದರಿಂದ ಮಳೆ ಬರಲಿಕ್ಕಿಲ್ಲವೆಂದೇ ಬಹುಮಟ್ಟಿಗೆ ತೋರಿತು. ಹಾಗೊಂದು ವೇಳೆ ಮಳೆಯೇ ಬಂದರೂ--ಮದುವೆಯ ಕಾಲಕ್ಕೆ ಏನೂ ಬಾಧಕವಿರಲಿಲ್ಲ. "ಮಳೆ ಬಂದರೆ ಒಳ್ಳೆಯ ಶಕುನ" ಎಂದೂ ಹೇಳುವುದುಂಟು. ಇರಲಿ.

ವಧುವಿನ ವಸತಿ ಅಲ್ಲಿಗೆ ಸ್ವಲ್ಪ ದೂರದಲ್ಲಿ ಇನ್ನೊಂದು ಕಟ್ಟಡದಲ್ಲಿತ್ತು. ನಾರಾಯಣಯ್ಯನೂ ರಾಮಾ ಜೋಯಿಸರೂ ಲಾಂದರವನ್ನು ಹಿಡಿದುಕೊಂಡು ಇಲ್ಲಿಗೂ ಅಲ್ಲಿಗೂ ಎಡತಾಕಿಕೊಂಡಿದ್ದರು. ವೀರಪ್ಪಯ್ಯನು ಬೀಡಿಯ ಮೇಲೆ ಬೀಡಿಯನ್ನು ಸೇದಿ ಸೇದಿ ಹಾಕುತ್ತಾ ಒಳ್ಳೆ ಜೋರಿನಿಂದ ಅವರಿವರೊಡನೆ ಪಟ್ಟಾಂಗ ಹೊಡೆಯುತ್ತಿದ್ದನು. ವಧುವಿನ ತಂದೆ ಮುಕುಂದರಾಯರು ಈ ದಿನದ ರೈಲಿನಲ್ಲಿ ತಪ್ಪದೆ ಬರುವೆವೆಂದು ಕಾಗದ ಹಾಕಿದ್ದರಂತೆ. ಆದಕ್ಕಾಗಿ ಅವರನ್ನು ಕರಕೊಂಡು ಬರಲು ಇಬ್ಬರು ಯುವಕರು ರೈಲುವೇ ಸ್ಟೇಶನ್ನಿಗೆ ಹೋಗಿದ್ದರು ಅವರ ದಾರಿಯನ್ನು ನಿರೀಕ್ಷಿಸಿಕೊಂಡಿರುವಾಗ ಆ ಯುವಕರಿಬ್ಬರು ಮಾತ್ರ ಹಿಂದಿರುಗಿ ಬಂದು, "ರೈಲು ಬಂದು ಹೋಯಿತು, ಮುಕುಂದರಾಯರು ಮಾತ್ರ ಬರಲಿಲ್ಲ'' ಎಂಬ ಸುದ್ದಿಯನ್ನು ತಿಳಿಸಿದರು! ಇದರಿಂದ ಎಲ್ಲರಿಗೂ ಯೋಚನೆಗಿಟ್ಟಿತು. ''ರಜೆ ಸಿಕ್ಕುವುದಕ್ಕೆ ತುಂಬ ತಕರಾರು ಬಿದ್ದಿದೆಯೆಂದೂ, ಹೇಗಾದರೂ ಮಾಡಿ ಮುಹೂರ್ತದ ವೇಳೆಗೆ ತಪ್ಪದೆ ಬಂದು ಸೇರುವೆನೆ''ಂದೂ ಅವರ ಕಾಗದ ಬಂದಿತ್ತು--ಈಗ ಬಾರದುದನ್ನು ನೋಡಿ, ರಜೆ ಸಿಕ್ಕಲಿಲ್ಲವೋ--ರೈಲು ತಪಿಹೋಯಿತೋ--ಮತ್ತೇನಾದರೂ ಆಯಿತೋ ಎಂದು ನಾನಾ ಸಂದೇಹಗಳು ಸುಳಿದಾಡಿಕೊಂಡುವು. ಇದನ್ನು ಕೇಳಿ ಲಕ್ಷ್ಮಮ್ಮನೂ ಚಿಂತೆಪಟ್ಟಳು. ಆಗ ರಾಮಾ ಜೋಯಿಸರೊಂದಿಗೆ ನಾರಾಯಣಯ್ಯ ಅವಳ ಬಳಿಗೆ ಬಂದು--''ಲಕ್ಷ್ಮಮ್ಮನವರೆ! ಏನು ಕಾರಣವೋ ಮುಕುಂದರಾಯರು ಬರಲಿಲ್ಲ.

ರಾಮಾ ಜೋಯಿಸರೇ ಮೊದಲಾದವರು "ಅದೇ ಸೂಕ್ತವಾದುದೆ"ಂದು ಅನುಮೋದಿಸಿದರು.

ಮುಹೂರ್ತಕಾಲವು ಸಮೀಪಿಸುತ್ತಾ ಬರುತ್ತಿದೆ. ಮಧ್ಯರಾತ್ರಿ ಕಳೆಯುತ್ತಾ ಹೋಗುತ್ತಿದೆ ವೀರಪ್ಪಯ್ಯ ರಿಸ್ಟ್‌ವಾಚನ್ನು ನೋಡುತ್ತಾ ತಿರುಗುತ್ತಿದ್ದಾನೆ. ಸುತ್ತುಮುತ್ತಲೂ ನೀರವ ರಜನಿ! ನಿದ್ರಾಮುದ್ರಿತ ಸ್ತಬ್ಧೀಭಾವದ ಪ್ರಕೃತಿ! ಇದ್ದಕ್ಕಿದ್ದ ಹಾಗೆ ಮೆಲ್ಲಮೆಲ್ಲನೆ ನೀರ್ಗಾಳಿಯ ಬೀಸಾಟಕ್ಕೆ ಪ್ರಾರಂಭವಾಯಿತು! ನೈಋತ್ಯ ಮೂಲೆಯಲ್ಲಿದ್ದ ಕಾರ್ಮೋಡವು ಮೆಲ್ಲಮೆಲ್ಲನೆ ಕದಲಲಾರಂಭವಾಯಿತು! ಮರಬಳ್ಳಿಗಳು ಮೆಲ್ಲಮೆಲ್ಲನೆ ನಡುಗಲಾರಂಭಿಸಿದುವು! ನಕ್ಷತ್ರಗಳು ಬೆದರಿ ಚಂಚಲವಾಗಲಾರಂಭಿಸಿದುವು! ಮಿಂಚು ಮೆಲ್ಲಮೆಲ್ಲನೆ ಪ್ರಕಾಶಮಾನವಾಗಲಾರಂಭಿಸಿದುವು! ಕಿವಿಗೊಟ್ಟು ಆಲಿಸಿದರೆ ಮೆಲ್ಲಮೆಲ್ಲನೆ ಗುಡುಗುವುದೂ ಕೇಳುತ್ತಿದ್ದಿತು!

ನಮ್ಮ ಕಲ್ಯಾಣಕಾರ್ಯ ಕಲಾಪಿಗಳು ಈ ಪ್ರಕೃತಿ ಪರಿವರ್ತನೆಯ ಕಡೆಗೆ ಲಕ್ಷ್ಯಗೊಡಲಿಲ್ಲ. ಮಂಗಳವಾದ್ಯವು ನಿಶ್ಶಬ್ದತಾ ವಾತಾವರಣವನ್ನು ಭೇಧಿಸಿಕೊಂಡು ಸ್ವರಹೊರಡಿಸಲಾರಂಭಿಸಿತ್ತು. ಅದರೊಂದಿಗೆ ಮೇಳದ ಸಪ್ಪಳವೂ ಸೇರಿತು ಪುರೋಹಿತರ ಮಂತ್ರೋಚ್ಚಾರಣೆ ಹಾಕಲಾರಂಭವಾಯಿತು. ಮಹಾತ್ಮನಾದ ಕಣ್ವಮುನಿಯ ಇದಿರಿನಲ್ಲಿ ಹೋಮಾಗ್ನಿ ಹೊತ್ತಿ ಹೊಗೆಯಡರಿತು. ವರಪೂಜಾದಿ ಕಾರ್ಯಗಳು ಆಗಲೇ ಚಿಟಿಕೆನಿಂದ ನೆರವೇರಿಹೋಗಿದ್ದುವು. ಚಲಿಸುವ ಬೊಂಬೆಯಂತಹ ಶೀನು ಪುರೋಹಿತರ ಕೈಬೊಂಬೆಯಾಗಿ ಮಾರ್ಪಟ್ಟಿದ್ದನು ಬಸವಣ್ಣನ ಹಾಗೆ ಪುರೋಹಿತರು ಹೇಳುವಂತೆ ಕೇಳುತ್ತಿದ್ದನು ಅಕ್ಕಪಕ್ಕದಲ್ಲಿದ್ದ ಹಂಗುಸರೂ ಪುರೋಹಿತರೂ ಅವನನ್ನು ನಗಿಸಿ ಉಲ್ಲಾಸಗೊಳಿಸಬೇಕೆಂದು ಒಂದೆರಡು ನಗೆಮಾತುಗಳನ್ನು ಆಡಿ ನೋಡಿದರು. ಮದುಮಗನ ಮುಖದಲ್ಲಿ ನಗುವಿನ ಕಳೆಯೇ ಉದಯಿಸಲಿಲ್ಲ. "ಇನ್ನೆಷ್ಟು ಹೊತ್ತೋ ಜತೆಸೇರಲಿಕ್ಕೆ—ಎಂದು ಬೇಜಾರೇನೋ ಪಾಪ! ವಧುವಿನ ಮುಖವನ್ನು ನೋಡಿದನಂತರವೇ ವರನ ಮುಖವು ನಕ್ಕೀತಷ್ಟೆ! ಬೇಗನೇ ಮುಗಿಸಿಬಿಡಿರಿ ಪುರೋಹಿತರೆ! ಮುಹೂರ್ತವು ಬಂತು!" ಎಂದನು ವೀರಪ್ಪಯ್ಯ.

ಬಂತು ಮುಹೂರ್ತ ಕಾಲ ಚದರಿದವರೆಲ್ಲರೂ ಆ ವರಾಂಡದಲ್ಲಿ ಒಟ್ಟುಗೂಡಲಾರಂಭಿಸಿದರು. ಕೆಲವು ಗಂಡುಸರೊಂದುಕಡೆ, ಕೆಲವು ಹೆಂಗುಸರೊಂದುಕಡೆ. ಹೀಗೆ ಹಲವು ಮಂದಿ ಕೂಡಿದಂತಾಯಿತು. ಆಕಾಶದಲ್ಲಿಯೂ ಮೇಘಗಳು ಒಂದನ್ನೊಂದು ಕೂಡಿಕೊಳ್ಳುತ್ತ—ಗುಡುಗು ಮಿಂಚುಗಳ ದನಿ–ಬೆಳಕಿನೊಂದಿಗೆ ಮೇಲೆ ಮೇಲೇರಿ ತಾರಕೆಗಳನ್ನು ಮರೆಯಿಸಿಕೊಂಡು--ಮುಚ್ಚಿಗೆ ಹಾಕುತ್ತಿದ್ದುವು.—

ಪುರೋಹಿತರ ಆಜ್ಞೆಯಂತೆ ವರನು ಎದ್ದುನಿಂತನು. ಅವನಿದಿರಿನಲ್ಲಿ ಪರದೆ ಹಿಡಿಯಲ್ಪಟ್ಟಿತು. ಹೆಂಗುಸರ ನಡುವಿನಿಂದ ಸಾಲಂಕಾರ ಕನ್ಯೆ ಮುಂದೆ ಬರುತ್ತಿದ್ದಳು. ವಧುವಿನ ಕೈಯಲ್ಲಿ ಹೂವಮಾಲೆ ಕೊಡಲಾಯಿತು. ವರನ ಕೈಯಲ್ಲಿಯೂ ಹಾಗೆಯೆ ಕೊಡಲಾಯಿತು. ವಧೂವರರಿಗೆ ನಡುವೆ ಒಂದು ಪರದೆ ಮಾತ್ರ ಅಡ್ಡ.

ಹೊರಗೆ ಬೀಸುವ ಬಿರುಗಾಳಿಯಿಂದ ಆ ಪರದೆ ಅತ್ತಿತ್ತ ಸರಿದಾಡುತ್ತಿದ್ದಿತು. ಮಾಲೆಮಾಲೆ ಜೋಲಡುತೇಳುತಿರುವ ದೊಂದಿಯ ಪ್ರಕಾಶವನ್ನು ಮೀರಿಸಿಕೊಂಡು ಮಿಂಚುತ್ತಿದ್ದುವು ಮಿಂಚು. ಮಂಗಳವಾದ್ಯಗಳ ಸ್ವರವನ್ನು ಮೀರಿಕೊಂಡು ಗರ್ಜಿಸುತ್ತಿದ್ದಿತು ಗುಡುಗು.—

ಲಕ್ಷ್ಮಮ್ಮನು ಆ ಮಂಗಲ ದೃಶ್ಯವನ್ನು ನೋಡಬೇಕೆಂದು ಎದ್ದೆದ್ದು ನಿಂತು ಇಣುಕುತ್ತಿದ್ದಳು. ಕನ್ಯೆಗೆ ಅಡ್ಡವಾಗಿ ಯಾರು ಯಾರೋ ನಿಂತಿದ್ದುದರಿಂದ ಅವಳಿಗೇನೂ ಕಾಣಿಸದೆ ಹೋಯಿತು. ಸಮೀಪಕ್ಕೆ ಬಂದು ನಿಂತರೂ ಅದೇ ಹಾಡಾಯಿತು.—

ಇನ್ನೊಂದೆಡೆಯಲ್ಲಿ ನೋಡುತ್ತಿದ್ದ ಕೃಷ್ಣನು ತಟ್ಟನೆ ದುಃಖಾಶ್ಚರ್ಯ ಪರವಶನಾಗಿ ಏನೋ ಗೊಣಗುತ್ತ-ಅವಸರವಸರವಾಗಿ ತಾಯಿಯನ್ನು ಹುಡುಕುತ್ತ ತಿರುಗಾಡಲಾರಂಭಿಸಿದನು. ಕಾರ್ಗಾಲದ ಪ್ರಕೃತಿಯ ಭೀಷಣ ಶಬ್ದದಿಂದಲೂ--ಮಂತ್ರೋಚ್ಚಾರ--ಮಂಗಳವಾದ್ಯಗಳ ಘನಸ್ವಾನದ ವಿಕೃತಿಯಿಂದಲೂ--ಆ ಕೃಷ್ಣನ "ಅಮ್ಮ! ಅಮ್ಮ!" ಎಂಬ ಭಯಚಕಿತಾರ್ತನಾದವು ಅಡಗಿಯೇ ಹೋಯಿತು!

"ಅಮ್ಮ! ವರನ ಕೊರಳಿಗೆ ಮಾಲೆಯನ್ನು ಹಾಕು." ಎಂದು ವಧುವಿನ ಪಕ್ಕದಲ್ಲಿದ್ದ ನಾರಾಯಣಯ್ಯ ಹೇಳಿದರು. ಪರದೆ ಸರಿಯಿತು!

ಮಂತ್ರಗಳೂ--ಮೇಳಗಳೂ ಜೋರುಜೋರಾಗಿ ಮೊರೆಯುತಿರಲು ವಧು ವರನ ಕೊರಳಿಗೆ ಮಾಲೆಯನ್ನು ಹಾಕಿದ ತತ್ಷಣದಲ್ಲಿ ಉದ್ಯತ್ತೀಕ್ಷ್ಣವಾದೊಂದು ವಿದ್ಯುತ್ತಿನ ಹಿಂದೆಯೇ—"ಖಟಖಟಖ್ಖಡಾಲ್—" ಎಂದು ಸಿಡಿಲು ಹೊಡೆದು--ಭೂಮಿ ಗಡಗಡನೆ ನಡುಗಿ ಹೋಯಿತು! ಮರುಕ್ಷಣವೇ ಎಲ್ಲರೂ ಸ್ತಂಭಿತರಾದರು! ಹೆದರಿ—ಪಾರಾದರು!

"ಹೂಂ, ಶೀನು! ವಧುವಿನ ಕೊರಳಿಗೆ ಮಾಲೆಹಾಕು!" ಎಂದರು ರಾಮಾ ಜೋಯಿಸರು ಅವಸರದ ನಡುಗು ದನಿಯಿಂದ.

ಶೀನು ನಡುಗುವ ಕೈಗಳಿಂದ ಮಾಲೆಯನ್ನೆತ್ತಿ ವಧುವಿನ ಕೊರಳಿಗೆ ಹಾಕಲಿರುವಾಗ--ಭಯಂಕರವಾದ ಆ ಪ್ರಕೃತಿಯೇ ರೂಪುಗೊಂಡು ನಟ್ಟದಿರಿನಲ್ಲಿ ನಿಂತಿರುವಂತೆ ಅವನ ಕಣ್ಣಿಗೆ ಕಟ್ಟಿತು! ಅವನ ಉಂಗುಷ್ಠದಿಂದ ನೆತ್ತಿಯವರೆಗೆ ಜುಮುಗುಟ್ಟಿಕೊಂಡು ಹೋಯಿತು! ಕಣ್ಣು ಕತ್ತಲೆ ಕವಿಯಿತು! ತಲೆ ತಿರುಗಿತು! ಮಿದುಳು ಬಿಸಿಯಾಯಿತು! ಹೂಮಾಲೆ ಕೈತಪ್ಪಿ ನೆಲಕ್ಕೆ ಬೀಳುತ್ತಿತ್ತು! ಅವನೂ ಕಾಲ್ನಡುಗಿ ಆಧಾರ ತಪ್ಪಿ ಬೀಳುವುದರಲ್ಲಿದ್ದನು!—

ಹೂಮಾಲೆ ನೆಲಕ್ಕೆ ಬೀಳದಂತೆ ರಾಮಾ ಜೋಯಿಸರು ಲಾಘವದಿಂದ ವಧುವಿನ ಕೊರಳಿಗೆ ಸಿಕ್ಕಿಸಿದರು. ಉತ್ತರಕ್ಷಣವೇ ವರನ ಹಿಂದೆ ನಿಂತು ಅವನು ಬೀಳದಂತೆ ಗಟ್ಟಿ ಹಿಡಿದು ನಿಂತರು. ಆದುದರಿಂದ ವರನು ಪದಾಧಾರ ತಪ್ಪಿರುವನೆಂದು ಯಾರಿಗೂ ತಿಳಿಯಲಿಲ್ಲ.

ಬಿರುಗಾಳಿ ಆಕಾಶವನ್ನು ಕೆತ್ತಿಕೊಂಡು—ಬ್ರ್ರ್ರಭರ್ರನೆ ಮಳೆಯನ್ನು ಜರಿಸಿ ಕೆಡವಲಾರಂಭಮಾಡಿತು!

ಈ ಭಯಂಕರವಾದ ಪರಿಸ್ಥಿತಿಯಲ್ಲಿ--ಶೀನುವಿಗೆ ತಾನು ಭೂಮಿಯನ್ನು ಬಿಟ್ಟು ಆಕಾಶದಲ್ಲಿರುವಂತೆಯೂ--ತನ್ನ ದೇಹವು ಹತ್ತಿಯ ಹಾಗೆ ಹಗುರಾದಂತೆಯೂ--ತಾನೊಂದು ಘೋರವಾದ ಸ್ವಪ್ನವನ್ನು ಕಾಣುತ್ತ—ನಿರಾಧಾರವಾಗಿ ಮಲಗಿರುವಂತೆಯೂ--ತೋರಿತು. ಬೆದರಿ ಚಂಚಲವಾದ ಮನಸ್ಸಿನಲ್ಲಿ ನೂರಾರು ಛಾಯಾಕಲ್ಪನೆಗಳು ಮಿಂಚುತ್ತಿದ್ದುವು. ಅವನು ಖಂಡಿತವಾಗಿ ಮೂರ್ಛೆಯಲ್ಲೆ ಇದ್ದನು. ಪುರೋಹಿತರ ಮಂತ್ರ-ಮಾತುಗಳೂ -- ಮೇಳಧ್ವನಿಯೂ -- ಪ್ರಕೃತಿಯ ಅಲ್ಲೋಲಕಲ್ಲೋಲವೂ

ಒಂದಾಗಿ ಸೇರಿ, ಬಹುದೂರ ಗುಡ್ಡದ ಬುಡದಲ್ಲಿ ಕೇಳುವಂತಿದ್ದುವು—ಅವನ ಕಿವಿಗೆ!

ರಾಮಾ ಜೋಯಿಸರು ಗಡಿಬಿಡಿಯಿಂದ ಪುರೋಹಿತರ ಕಿವಿಯಲ್ಲಿ—"ಹುಂ, ಜಲ್ದಿ! ಧಾರೆ ಶಾಸ್ತ್ರ ಮುಗಿಸಿರಯ್ಯ. ಇವನ ಭಾರವೆಲ್ಲಾ ನನ್ನ ಮೇಲಿದೆ ಗೊತ್ತೆ?" ಎಂದು ಪಿಸುಗುಟ್ಟಿದರು.

"ಹೂಂ--ವರನ ಚಿಕ್ಕಮ್ಮ ಮುಂದೆ ಬರಲಿ!" ಎಂದು ಪುರೋಹಿತರು ಗಂಟಲು ಹರಿದುಕೊಂಡು ಕೂಗಿಕೊಂಡರು.

ವಧೂವರರ ಸುತ್ತು ಮುತ್ತು ಬೇಕಾದವರ ಗುಂಪು ಸೇರಿತು. ನಾರಾಯಣಯ್ಯನೂ ಅವರ ಪತ್ನಿಯೂ ಕೂಡಿ, ಪುರೋಹಿತರ ಮಂತ್ರಗಳ ಗಡಿಬಿಡಿಯಲ್ಲಿಯೇ ಧಾರೆಯನ್ನು ಎರೆದು ಬಿಟ್ಟರು! ಆಮೇಲಿನ ಕಾರ್ಯಕ್ರಮಗಳು ನಿಮಿಷಮಾತ್ರದಲ್ಲಿ ಮುಗಿದೇ ಹೋದುವು. ವರನು ಮೂರ್ಛಿತನಾಗಿ ಒರಗಿದ್ದನು!—

"ಝೋ! ಝೋ!" ಎಂದು ಜಿರಿಗಟ್ಟಿ ಮಳೆ ಸುರಿಯಲಾರಂಭವಾಗಿತ್ತು. ತೆರೆಗಾಳಿಯಿಂದ ಚೀರ್ಹನಿಗಳು ಒಳಗೆಲ್ಲ ಹಾರುತ್ತಿದ್ದುವು. ಹೋಮಾಗ್ನಿ ಆರುತ್ತ-ಉರಿಯುತ್ತ-ಹೊಗೆಯನ್ನು ಕಾರಿಕಾರಿ ಸುಳಿಸುತ್ತ-ಸಿಟ್ಟಿನಿಂದ ಸಿಡಿಮಿಡಿಗೊಳ್ಳುವಂತಿತ್ತು.—

ಜೋಯಿಸರ ಹೆಗಲಿಗೆ ಒರಗಿ ಕುಳಿತಿರುವ ತನ್ನ ಮಗ-ಮದುಮಗ ಶೀನುವನ್ನು—ಲಕ್ಷಮ್ಮನು ನೋಡಿದಳು. ಕಣ್ಣು ಮುಚ್ಚಿ ಕುಳಿತಿದ್ದಾನೆ! ಅಚೇತನಾವಸ್ಥೆಯಲ್ಲಿದ್ದ ಅವನ ಕೈಯಿಂದ-ಪುರೋಹಿತರು-ಕರಿಗುಂಡಾ ಕಾರಿಣಿಯಾದ ವಧುವಿನ ಕೈಯಿಂದ—ನೀರು ಹಾಕಿಸಿ ಅರ್ಘ್ಯಬಿಡಿಸಿ ಜಟಪಟನೆ ಹೋಮ ಮಾಡಿಸುತ್ತಿದ್ದಾರೆ—

"ಅಯ್ಯೊ! ಏನಾಯಿತಪ್ಪ ಶೀನು?—" ಎಂದು ಕರುಣಾರ್ತ ಸ್ವರದಿಂದ ಕೂಗಿದಳು ಲಕ್ಷಮ್ಮ.

"ಹಾ! ತೆಗೆದರು ನನ್ನಣ್ಣನನ್ನು ಪಾಪಿಗಳು!" ಎಂದು ಕೃಷ್ಣನು ಚೀರಿದನು.

ಜೋಯಿಸರು ಅರಚುವ ಕಂಠದಿಂದ—"ಏನೂ ಗಾಬರಿಯಿಲ್ಲ!

ಗಾಬರಿಯಿಲ್ಲ! ಹೋಮದ ಹೊಗೆಯಿಂದ ಕಣ್ಣು ಕತ್ತಲೆ ಬಂದಿರಬೇಕು ಅಷ್ಟೇ! ಅಷ್ಟೇ!" ಎಂದರು.

ಹೆಂಗುಸರಿಗೆ ಎಲ್ಲಿ ಎಲ್ಲಿ ಯಾವ ಯಾವ ಆಭರಣಗಳನ್ನು ಇಡ ಬಹುದೋ ಅಲ್ಲಿಯೆಲ್ಲ ಆಯಾ ಆಭರಣಗಳನ್ನು ಧರಿಸಿಕೊಂಡು ಬೆಲೆ ಬಾಳುವ ಶೀರೆ-ರವಕೆಗಳಿಂದ ಸಾಲಂಕೃತಳಾಗಿ ಮದುಮಗ ಶೀನುವಿನ ಪಕ್ಕದಲ್ಲಿ ಕುಳಿತ ವಧುವಿನ ಮೂರ್ತಿ ಸಂಪೂರ್ಣವಾಗಿ ಲಕ್ಷ್ಮಮ್ಮನ ಕಣ್ಣಿಗೆ ಬಿತ್ತು. ಮುಖವು ಅವನತವಾಗಿದ್ದುದರಿಂದ ಅದು ಮಾತ್ರ ಸರಿಯಾಗಿ ಕಾಣಲಿಲ್ಲ. ಆದರೂ ತನ್ನ ಮಗನನ್ನು ನುಂಗಲಿಕ್ಕಾಗಿ ಅವನ ಪಕ್ಕದಲ್ಲಿ ಕುಳಿತಿರುವ ಪಿಶಾಚಿಯಂತೆ ಅವಳಿಗೆ ತೋರಿತು! ಜೋಯಿಸ-ಪುರೋಹಿತರು ಮಂತ್ರ-ಮಾಟಗಳಿಂದ ಆ ಪಿಶಾಚಿಯನ್ನು ಸೃಷ್ಟಿಸಿರುವಂತೆ ತೋರಿತು.

"ಅಯ್ಯೋ!-ಇದೇನು!-ಇದು ಯಾರ ಹುಡುಗಿ?—" ಎಂದು ವಿಕೃತ ಕಂಠದಿಂದ ಗಟ್ಟಿಯಾಗಿ ಅರಚಿದಳು ಲಕ್ಷ್ಮಮ್ಮ.

ಕೂಡಿದ ಜನರೆಲ್ಲ ಗಲಾಟೆ ಮಾಡಿದರು.

"ಲಕ್ಷ್ಮಮ್ಮನಿಗೆ ಬುದ್ಧಿ ಭ್ರಂಶವಾಯಿತೋ ಏನೊ!"

"ಮೊದಲು ತಾನೇ ನೋಡಿ ಮಾಡಿದ್ದು?"

"ಏನು–ಲಕ್ಷ್ಮಮ್ಮಾ! ಹೀಗೆಕೆನ್ನುವಿರಿ?"

"ಏನೋ ಪಾಪ!–ಸಾಲಂಕಾರ ಕನ್ಯಾದಾನ, ಖರ್ಚಿಲ್ಲದ ಗಂಟೆ ನಿಂವ ಬರುವ ಹುಡುಗಿ ಅಂತ ಉಬ್ಬಿಹೋಗಿ ಸರಿಯಾಗಿ ನೋಡಿಲ್ಲವೋ ಏನೋ!"

"........................."

ಈ ಬಗೆಯಾಗಿ ಸುತ್ತುಮುತ್ತಲೂ ಅನೇಕ ಕಂಠಗಳು ಅನೇಕ ಬಗೆಯಾಗಿ ಸ್ವರಹೊರಡಿಸಿದುವು.

ಆ ಅಂಧಕಾರ ಮಯವಾದ ಮಧ್ಯರಾತ್ರಿಯಲ್ಲಿ—"ಝೋಝೋ" ಎಂದು ಮಳೆ ಸುರಿಯುತ್ತಿರುವ ಪ್ರಕೃತಿಯ ಶಬ್ದವು ಪಿಶಾಚಿಗಳ ಆರ್ಭಟೆಯಂತೆಯೂ, ಕಣ್ಣುಕೋರೈಸುವಂತಹ ಮಿಂಚುಗಳು ಅವುಗಳ ಕಠೋರ ವೀಕ್ಷಣದಂತೆಯೂ, [illegible] ಸಿಡಿಲುಗಳು ಅವುಗಳ ಕಂಠ

ಸ್ವರದಂತೆಯೂ, ಅಲ್ಲಿದೊಂದಿ ಲಾಂದರಗಳ ಬೆಳಕಿನಲ್ಲಿ ಸೇರಿದವರೆಲ್ಲ ಕೊಳ್ಳಿಯ ದೆವ್ವಗಳಂತೆಯೂ, ತಾನು ತನ್ನ ಮಗನೊಂದಿಗೆ ಪುಣ್ಯಕರವಾದ ಕಣ್ವಾಶ್ರಮದ ದಾರಿ ತಪ್ಪಿ ದೆವ್ವದ ಬೀಡಿನಲ್ಲಿ ಸಿಕ್ಕಿಬಿದ್ದಂತೆಯೂ, ಇವೆಲ್ಲಾ ಒಟ್ಟಾಗಿ ಸೇರಿ ಕುಕ್ಕಿ ಕುಕ್ಕಿ ಚಿತ್ರಹಿಂಸೆ ಮಾಡಿ ತನ್ನನ್ನೂ ತನ್ನ ಮಗನನ್ನೂ ತಿನ್ನುತಿರುವಂತೆಯೂ ಲಕ್ಷಮ್ಮನಿಗೆ ತೋರಿತು. "ಅಯ್ಯೋ! ಕೊಂದರು! ಕೊಂದರು!—" ಎಂದು ತೊದಲುತ್ತಾ ಅವಳೂ ಮೂರ್ಛಿತೆಯಾಗಿ ಬಿದ್ದಳು.

"ಹಾ! ಮಲಗಿಸಿರಿ! ಗಾಳಿಹಾಕಿರಿ! ನೀರೆರಚಿರಿ!—" ಎಂದು ಕೆಲವರು ಕೂಗಿದರು.

"ಈ ಮಳೆ ಗಾಳಿಯಲ್ಲಿ ಶೈತ್ಯೋಪಚಾರವಲ್ಲ! ಉಷ್ಣೋಪಚಾರ! ಎಲ್ಲಿ ಬಿಸಿನೀರು ತನ್ನಿ! ಶಾಕಕೊಡಿರಿ!—" ಎಂದು ಮತ್ತೆ ಕೆಲವರು ಕೂಗಾಡಿದರು.

"ಪುಣ್ಯಕ್ಕೆ ವಿಧಿಯೆಲ್ಲಾ ಮುಗಿಯಿತಲ್ಲ!" ಎಂದು ಸಮಾಧಾನದ ಶ್ವಾಸವು ಪುರೋಹಿತರ ಬಾಯಿಯಿಂದ ಹೊರಟಿತು.

"ಅದೇ ನೋಡಿ—ಪುರೋಹಿತರೆ, ಕಣ್ವಾಶ್ರಮದ ಮಹಿಮೆಯೆಂದರೆ!" ಎಂದರು ರಾಮಾ ಜೋಯಿಸರು ತೇಕುತ್ತಾ.

"ಏನೊ!—ಪಾಪದವರ ಕುತ್ತಿಗೆಗೆ ಹಾಕಿದರು ಉರಲು!" ಎಂದರು ಕೆಲವರು ತಮಾಷೆಗಾರರು.

"ಏನಿದು ರಾಮಾ ಜೋಯಿಸರೆ? ಏನಾದರೂ ಮೋಸಗೀಸ ವಿಲ್ಲವಷ್ಟೆ? "ಒಂದು ತೋರಿಸಿ—ಒಂದು ಮಾಡಿದಿರಾ ಹೇಗೆ?—" ಎಂದು ಅಧಿಕಾರವಾಣಿಯಿಂದ ಪ್ರಶ್ನಿಸಿದರು ಲಕ್ಷಮ್ಮನ ಕಡೆಯ ಗಂಡುಸರಿಬ್ಬರು.

"ಛಿಛಿ! ಶಾಂತಂ ಪಾಪಂ!! ಎಲ್ಲಾ ಕಣ್ಣಾರೆ ಕಾಣಿಸಿ ಲಕ್ಷಮ್ಮನು ಒಪ್ಪಿಕೊಂಡೇ ಮಾಡಿಸಿದ್ದಲ್ಲವೆ? ಛೆಕ್! ಹಾಗೆಲ್ಲಾದರೂ ಉಂಟೆ? ಆದರೆ ಶೀನು ಮಾತ್ರ ಹುಡುಗಿಯನ್ನು ನೋಡಲೇ ಇಲ್ಲ! ನೋಡುವುದೇ ಇಲ್ಲವೆಂದು ಹಟದೊಟ್ಟದ್ದೂ ನಿಮಗೆಲ್ಲಾ ಗೊತ್ತೇ ಇದೆ. ಮುಖ್ಯ ಹುಡುಗಿ ಸ್ವಲ್ಪ ಸುಮಾರು ಎಂತಲೇ—ಖರ್ಚು ಹೆಣ್ಣಿನ ಕಡೆಗೇ ಒಪ್ಪಿಸಿಕೊಂಡು—ಸಾಲಂಕಾರ ಕನ್ಯಾದಾನವೆಂದು ಮೊದಲೇ ಹೇಳಿಬಿಟ್ಟದ್ದು!" ಎಂದು ರಾಮಾ ಜೋಯಿಸರು ಭಡಾಯಿಸಿಬಿಟ್ಟರು.

“ ಹಾಗಾದರೆ ಲಕ್ಷಮ್ಮನಿಗೇನಾಯಿತು? ಶೀನುವಿಗೇನಾಯಿತು?”

“ ಆಗುವುದಿನ್ನೇನು? ನೀವೆಲ್ಲಾ ರಾಕ್ಷಸರು ಸೇರಿ ನಮ್ಮ ಸರ್ವ ನಾಶ ಮಾಡಿದಿರಿ ಜೋಯಿಸರೆ!” ಎಂದು ಸಂತಾಪದಿಂದ ಉರಿಯುತ್ತ ಹುಡುಗ ಕೃಷ್ಣನು ಗುಡುಗಿದನು.

ದೊಡ್ಡವರು ಅವನ ಮೋರೆಯನ್ನು ಟಕಮಕನೆ ನೋಡಿದರು.

“ಹುಡುಗಾ! ಇಂತಹ ನಾಲ್ಕು ಮಂದಿ ಮರ್ಯಾದಸ್ಥರು ಕೂಡಿದ ಈ ಸ್ಥಳದಲ್ಲಿ ತಿಳಿಗೇಡಿತನದ ಮಾತುಗಳನ್ನಾಡಬೇಡ! ಮಾತಾಡಲಿಕ್ಕೆ ಬಾರದಿದ್ದರೆ ಸುಮ್ಮನಿರಬೇಕು!’ ಎಂದರು ರಾಮಾ ಜೋಯಿಸರು, ಹುಬ್ಬೇರಿಸಿ ತೀಕ್ಷ್ಣದೃಷ್ಟಿಯಿಂದ ಕೃಷ್ಣನನ್ನು ನೋಡುತ್ತಾ.

“ ಒಳ್ಳೆಯ ಮರ್ಯಾದಸ್ಥರಯ್ಯಾ ನೀವುಗಳು! ಹೀಗೆ ಹೆದರಿಸಿಬಿಟ್ಟರೆ ಹೆದರುವರೆಂದು ಮಾಡಿದ ಹಾಗಿದೆ! ಖಂಡಿತವಾಗಿ ತಿಳಿಯಿರಿ! ನಾನೂ ಅಣ್ಣನೂ ಈ ಮದುವೆಯನ್ನು ಖಂಡಿತವಾಗೆ ಒಪ್ಪಲಾರೆವು! ನನ್ನ ಅಣ್ಣನಿಗೆ ಮದುವೆಯೇ ಆಗಿಲ್ಲ!” ಎಂದನು ಕಡುಗೋಪದ ಕೃಷ್ಣ.

“ ಛೀ ಬಾಯಿ ಮುಚ್ಚು ಕೃಷ್ಣ! ಸಾಕು ನಿನ್ನ ಕಾನೂನು. ಮದುವೇಂದರೇನು, ಹುಡುಗಾಟಾಂತ ಮಾಡಿದ್ದೀ!” ಎಂದು ಗದರಿಕೆಯ ನುಡಿಯನ್ನು ಹಾರಿಸಿದರು ಗ್ರಾಮಮೊಕ್ತೇಸರ ವೀರಪ್ಪಯ್ಯ.

“ ಕೃಷ್ಣ! ಸುಮ್ಮನಿರು ನೀನು! ಆದದ್ದಾಯಿತು. ಇನ್ನು ಮೇಲೆ ಎಲ್ಲಾ ನಿಧಾನವಾಗಿ ಇತ್ಯರ್ಥ ಮಾಡುವ.” ಎಂದು ಅವನ ಚಿಕ್ಕಪ್ಪ ಎಂದರು.

ಅಷ್ಟರಲ್ಲಿ ಮಳೆಯ ಅಬ್ಬರವು ನಿಲ್ಲುತಿದ್ದಿತು. ಗಾಳಿಯೂ ನಿಲ್ಲುತ್ತ ಮೇಲುಭಾಗದಲ್ಲಿ ಜೋರಾಗಿ ಬೀಸುತಿರುವಂತೆ ಮೇಘಗಳು ಹಗುರಾಗಿ ವೇಗವಾಗಿ ಓಡಿಹೋಗುತ್ತಿದ್ದುವು. ನಕ್ಷತ್ರಗಳು ಮತ್ತೆ ಮಿನುಗಲಾರಂಭಿಸಿದ್ದುವು. ಲಘುಮೇಘಗಳು ಓಡಿಹೋಗಿ ಚಂದ್ರನಿಗೆ ಸುದ್ದಿ ಮುಟ್ಟಿಸುವವೋ ಎಂಬಂತೆ, ಕೃಷ್ಣದಶಮಿಯ ರೇಖಾಚಂದ್ರನು, ಮೂಡಣ ಕೋಡಿಯ ಬುಡದಿಂದ, ಎಚ್ಚೆತ್ತುಕೊಂಡು ನಿದ್ರಾಮುದ್ರಿತವಾದ ಕ್ಷುದ್ರ ದೃಷ್ಟಿಯಿಂದ ಪ್ರಪಂಚವನ್ನು ನೋಡುತ್ತಿದ್ದನು. ಅವನ ದೃಷ್ಟಿಪಾತದ ರಜತರೇಖೆಗಳು ಗಳಗಳನೆ ಹರಿಯುವ ನೀರ ಮೇಲೆ, ಲೊಟಪಟನೆ

ನೀರನ್ನು ತೊಟ್ಟಿಕ್ಕುವ ಮರಗಳ ಎಲೆಗಳ ಮೇಲೆ,ತೆಂಗಿನ ಗರಿಗಳಮೇಲೆ, ಮೇಲೆ ಆಗಸದಲ್ಲಿ ಓಡಿಹೋಗುತಿರುವ ಹಗುರು ಮೋಡಗಳ ಮೇಲೆ, ಕೆಳಗೆ ಮತ್ತೆಲ್ಲಲ್ಲಿಯೂ ಬೀಳುತ್ತ–ರಜನೀರಮಣಿ ವಿಚಿತ್ರಳಾಗಿದ್ದಳು; ವಿಲಕ್ಷಣಳಾಗಿದ್ದಳು. ಮಳೆ ಗಾಳಿ ಮುಂತಾದುವು ಪೂರಾನಿಂತುವು.

"ಛಿ! ಹಾಳು ಸ್ವಪ್ನ!" ಎನ್ನುತ್ತಾ ಶೀನು ಅರಿವಿಗೆ ಬಂದನು. ಸುತ್ತುಮುತ್ತು ನೋಡಿ–ಹಗಲೋ–ರಾತ್ರಿಯೋ–ತಿಳಿಯದೆ–"ಇದೇನು? ನೀವೆಲ್ಲಾ ಯಾರು? ಇನ್ನೂ ನನಗೆ ಸ್ವಪ್ನವೇ—ಅಮ್ಮ ಎಲ್ಲಿ?—" ಎನ್ನುತ್ತಾ ಎದ್ದುನಿಂತನು. ಹಾಗು ಮತ್ತೆ ಸುತ್ತು ಮುತ್ತೂ ನೋಡಿ —"ಅಹಾ! ಇಲ್ಲ! ಆ ಪಿಶಾಚಿ ಇಲ್ಲ! ಓಹೊ! ನಡೆದುದೆಲ್ಲಾ ಸತ್ಯ ವಾಗಿಯೂ ಸ್ವಪ್ನವೇ ಸರಿ. ಈಗ ಎಷ್ಟು ಗಂಟೆ? ಇನ್ನೂ ಬೆಳಗಾಗಿಲ್ಲವೆ?"

"ಇಲ್ಲ ಅಣ್ಣಾ! ಬೆಳಗಾಗಿಲ್ಲ-ರಾತ್ರಿ! ಘೋರರಾತ್ರಿ! ನಿನಗೆ ಸ್ವಪ್ನವು ಕಟ್ಟಲಿಲ್ಲ. ಮದುವೆಯಾಯಿತು—" ಎಂದನು ಕೃಷ್ಣ.

"ಏನೇನು?—" ಎಂದು ಶೀನು ತನ್ನ ದೇಹಾಲಂಕಾರಗಳನ್ನು ನೋಡಿಕೊಂಡು ಒಂದು ನಿಮಿಷ ಸ್ತಬ್ಧನಾಗಿ "ಹಾಗಾದರೆ ಸತ್ಯವೇನು ಕೃಷ್ಣ?"

"ಸತ್ಯ!—ಅಣ್ಣಾ! ಸತ್ಯ! ತಾಯಿ ಪೂರಾ ಮೋಸಹೋದಳು. ಅಕೋ ನೋಡು, ತಾಯಿಯ ಅವಸ್ಥೆಯನ್ನು!"

ಇಬ್ಬರೂ ತಾಯಿಯ ಬಳಿಗೆ ಹೋಗಿ ಉಪಚರಿಸಿ "ಅಮ್ಮ! ಅಮ್ಮ!" ಎಂದು ಕರೆದು ಎಬ್ಬಿಸಿದರು.

ಲಕ್ಷ್ಮಮ್ಮನು ಎದ್ದು ಶೀನುವನ್ನು ನೋಡಿ—"ಏನಪ್ಪಾ ಶೀನು! ಇದೇನು–-ಸ್ವಪ್ನವೋ—ದೃಷ್ಟಾಂತವೋ!" ಎಂದು ಕನವರಿಸಿ ಕೊಂಡಳು.

"ಸ್ವಪ್ನವಲ್ಲ ಅಮ್ಮ! ಖಂಡಿತವಾಗಿಯೂ ಅಣ್ಣನಿಗೆ ಮದುವೆಯೇ ಆಯಿತು!"

"ಆಯಿತೇ!"

"ಎಲ್ಲಿ ವಧು ಇಲ್ಲಿಗೆ ಬರಲಿ! ವಧೂವರರು ಲಕ್ಷ್ಮಮ್ಮನ ಕಾಲಿಗೆ ಅಡ್ಡಬೀಳಲಿ!" ಎಂದರು ಗಟ್ಟಿಯಾಗಿ ರಾಮಾ ಜೋಯಿಸರು.

ಶೀನುವಿನಷ್ಟೆ ಎತ್ತರವಾದ ಮೂರ್ತಿ. ಬಣ್ಣ ಕರ್ರಂಗಪ್ಪು; ಕಾಯವು ಸ್ಥೂಲ; ದೇಹಪರಿಮಾಣಕ್ಕೆ ಅಸಮಂಜಸವಾದ ಅಗಲವಾದ ದೊಡ್ಡ ಮುಖ; ಗುಳ್ಳೆಯೊಂದೆದ್ದಿರುವ ಕಿರುಹಣೆ; ಉಬ್ಬಿದ ರೆಪ್ಪೆಗಳಿಂದ ಮುಚ್ಚಿ ಹೋಗಿರುವ ಸಣ್ಣ ಸಣ್ಣ ಕಿಡಿಗಣ್ಣುಗಳು; ಗಿಡ್ಡ ಚಟ್ಟೆ ಮೂಗು; ದಪ್ಪ ತುಟಿಯು ಓರೆಯಾಗಿರುವ ಬಾಯಿ; ಆ ಬಾಯಿಯ ಇಕ್ಕೆಲಗಳ ಗಲ್ಲಗಳು ಕುಂಬಳಕಾಯಿಯಂತೆ ಉಬ್ಬಿವೆ; ಅತ್ತಿತ್ತ ಪುಟ್ಟ ಕಿವಿಗಳು; ಮುಖವು ಹಾಗೆಯೇ ಭುಜದ ಮೇಲೆ ಕುಳಿತಿರುವಂತೆ ಕಾಣದ ಕುತ್ತಿಗೆ; ಕೈಕಾಲುಗಳೆಲ್ಲ ದಿಂಡುಗಳಂತೆ ಗುಂಡು ಗುಂಡು; ಅಡಿಯಿಂದ ಮುಡಿಯ ವರೆಗೆ ನಡುಬಡವಿಲ್ಲದ ಏಕಪ್ರಕಾರವಾದ ಅಂಡಾಕಾರದ ಮೂರ್ತಿ! ಮೂಗಿಗೆ ಬೊಟ್ಟು ಬುಲ್ಲಾಕು, ಕಿವಿಗಳಿಗೆ-ಕೊಪ್ಪು-ಬುಗುಡಿ-ಬೆಂಡೋಲೆ-ಲೋಲಾಕ್ಕು, ಕುತ್ತಿಗೆಗೆ ಅಡ್ಡಿಗೆ–ಹಾರ–ಪದಕಗಳು, ಕೈಗಳಿಗೆ ಬಳೆ ವಂಕಿಗಳು, ಸೊಂಟಕ್ಕೆ ಪಟ್ಟಿ,–ಕಾಲಿಗೆ ಗೆಜ್ಜೆ, ಉಟ್ಟ ಜರತಾರಿಯ ಸೀರೆ–ಆಹ! ಇಂತಹ ಸಾಲಂಕಾರ ವಧು ನೆಲವನ್ನು ಗುದ್ದುವಂತೆ ನಡೆಯುವ ತನ್ನ ಸಹಜವಾದ ನಡಿಗೆಯಿಂದ, ಲಕ್ಷಮ್ಮನ ಬಳಿಗೆ ಬಂದು ಶೀನುವಿನ ಪಕ್ಕದಲ್ಲಿ ನಿಂತು, ಅತ್ತೆಯ ಕಾಲಿಗೆ ಪೊಡಮಟ್ಟಳು.

ಶೀನು ದೂರ ಸರಿದನು. ಲಕ್ಷಮ್ಮ—"ಅಯ್ಯೋ! ಇದು ಯಾವ ಹುಡುಗಿ?" ಎಂದಳು.

"ಹಾಗಂದರೆ?" ಎಂದರು ನಾರಾಯಣಯ್ಯ.

"ನಾನು ನೋಡಿದ ಹುಡುಗಿಯಲ್ಲವಲ್ಲ?" ಲಕ್ಷಮ್ಮನೆಂದಳು.

ನಾರಾಯಣಯ್ಯನು ರಾಮಾ ಜೋಯಿಸರ ಮುಖವನ್ನು ಚುರುಚುರನೆ ನೋಡುತ್ತ, ಕೋಪದಿಂದ ಹುಬ್ಬು ಸುರುಗಿಸಿಕೊಂಡು—"ಏನಿದು ಜೋಯಿಸರೆ! ಅವೊತ್ತು ನನ್ನ ಮನೆಗೆ ಹುಡುಗಿಯನ್ನು ನೋಡಲಿಕ್ಕೆ ಇವರನ್ನಲ್ಲವೇ ನೀವು ಕರಕೊಂಡು ಬಂದದ್ದು? ಇವರು ಈ ಹುಡುಗಿಯನ್ನು ನೋಡಿ ಒಪ್ಪಿಗೆಯಿತ್ತು ಮಾತಾಡಲಿಲ್ಲವೆ?" ಎಂದು ಗರ್ಜಿಸಿದರು.

"ಇಲ್ಲವೇ ಮತ್ತೆ? ಹುಡುಗಿಯನ್ನು ನೋಡಿ 'ನಿನ್ನ ಹೆಸರೇನಮ್ಮ?' ಎಂದು ಮಾತು ಕೂಡಾ ಆಡಿಸಿದ್ದಾರೆ! ಹುಡುಗಿ 'ಸುಂದರಿ'

ಎಂದು ಉತ್ತರ ಕೂಡಾ ಕೊಟ್ಟಿರುತ್ತಾಳೆ! ಈಗ ನೀವು ಹೇಳುವುದೇನಿದು ಲಕ್ಷ್ಮಮ್ಮಾ?'' ಎಂದು ಕುಟುಕಿರಿದರು ರಾಮಾ ಜೋಯಿಸರು.

“ಅಯ್ಯೋ! ನಾನು ಮಾತಾಡಿಸಿದ್ದು ಇನ್ನೊಂದು ಹುಡುಗಿಯನ್ನು!” ಎಂದಳು ಲಕ್ಷ್ಮಮ್ಮ.

“ಈ ಹುಡುಗಿಯನ್ನು ನೀವು ನೋಡಲೇ ಇಲ್ಲವೆ?” ಎಂದು ಸವಾಲು ಬಿಟ್ಟರು ರಾಮಾ ಜೋಯಿಸರು.

“ನೋಡಿ–ಯಾರೋ ಏನೋಂತ ಮಾಡಿದೆ—'' ಎಂದು ಕಂಗಾಲಾದಳು ಲಕ್ಷ್ಮಮ್ಮ.

ರಾಮಾ ಜೋಯಿಸರು—“ಅರ್ಥ ಉಂಟೇ ಅಮ್ಮಾ ನಿಮ್ಮ ಮಾತಿಗೆ? ಈ ಹುಡುಗಿಯನ್ನು ಬಾವಿಕಟ್ಟೆಯಲ್ಲೇ ಮೊದಲು ನೋಡಿದ್ದೀರಿ. ಆಮೇಲೆ ನಾರಾಯಣಯ್ಯ ಸಮೀಪಕ್ಕೂ ಕರೆದಿದ್ದಾರೆ! ನಿಮ್ಮ ಇದಿರು ನಿಂತಿದ್ದಾಳೆ! ನೀವು ಮಾತಾಡಿಸಿಯೂ ಇದ್ದೀರಿ! ಇಷ್ಟೆಲ್ಲಾ ಆಗಿ ಈಗ ಹೀಗೆ ಹೇಳಬಹುದೆ?''

“ಅದು–ಅದು! ನಾನು ಇನ್ನೊಂದು ಹುಡುಗಿಯನ್ನು—'' ಎಂದು ದಿಕ್ಕು ತೋರದೆ ತೊದಲುತ್ತಿದ್ದಳು ಲಕ್ಷ್ಮಮ್ಮ.

“ಎಷ್ಟು ಮಾತ್ರಕ್ಕೂ ನಾವು ಈ ಮದುವೆಯನ್ನು ಒಪ್ಪಲಾರೆವು! ನೀವು ನಮ್ಮ ತಾಯಿಯನ್ನು ಮೋಸಮಾಡಿದ್ದೀರಿ. ಬೇಕಾದ್ದು ಆಗಲಿ! ನಾವಂತೂ ಒಪ್ಪಲಾರೆವು!” ಎಂದು ಗರ್ಜಿಸಿದನು ಕೃಷ್ಣ.

“ಏನೂಂತ ಮಾಡಿದ್ದೀರಿ ಲಕ್ಷ್ಮಮ್ಮ! ಮರ್ಯಾದಸ್ಥರ ಮರ್ಯಾದೆ ಕಳೆಯುವ ಹಾಗೆ ಮಾತಾಡುತ್ತೀರಾ? ಹುಡುಗಿಯನ್ನು ನೋಡಿರಿ ಏನು ಕಡಮೆ ಮಾಡಿದ್ದೇವೇ ಅಂತ?—'' ಎಂದು ಜಬರಿಸುತ್ತಿದ್ದರು ನಾರಾಯಣಯ್ಯ.

ಈ ಬಗೆಯಾಗಿ ಸ್ವಲ್ಪ ವಾಗ್ವಾದವು ನಡೆಯಿತು. ಒಂದು ಸಣ್ಣ ಪಂಚಾಯಿತಿಯೂ ಆಯಿತು. ಆ ಪಂಚಾಯತಿಯಲ್ಲಿ, ಲಕ್ಷ್ಮಮ್ಮನು ಮೋಸ ಹೋದಳೇ ಹೊರತು, ಯಾರೂ ಮೋಸಮಾಡಲಿಲ್ಲ ಎಂದು ಬಹುಮತದ ತೀರ್ಮಾನವಾಯಿತು. ಪಾಪ! ಸಾಧು ಲಕ್ಷ್ಮಮ್ಮನಿಗೆ ಸೊಸೆ ಬರುತ್ತಾಳೆಂಬ ಸಂಭ್ರಮವು ಹೋಗಿ ಬುದ್ಧಿಭ್ರಮಣವಾಗುವ ಕಾಲವು ಬಂತು! ಅಯ್ಯೋ!!

## ೭. ಹೊಕ್ಕು ಹೊರಡದ ಸೊಸೆ

ಮರು ದಿನವೇ ಲಕ್ಷ್ಮಮ್ಮನ ಮನೆಯಲ್ಲಿ ಗೃಹಪ್ರವೇಶವನ್ನು ಜರುಗಿಸ ಬೇಕೆಂದು ಮೊದಲು ಗೊತ್ತುಮಾಡಲ್ಪಟ್ಟಿತ್ತು. ಆದರೆ ಲಕ್ಷ್ಮಮ್ಮನ ಮನಃಸ್ಥಿತಿಯೂ ದೇಹಸ್ಥಿತಿಯೂ ಕೆಟ್ಟುಹೋದುದರಿಂದ, ಗೃಹಪ್ರವೇಶದ ವಿಷಯದಲ್ಲಿ ಚರ್ಚೆಯುಂಟಾಯಿತು. ಲಕ್ಷ್ಮಮ್ಮನನ್ನು ಕೇಳಿದರೆ ದಿಕ್ಕೆಟ್ಟ ಅವಳು "ನನಗೊಂದೂ ಗೊತ್ತಿಲ್ಲ, ನಾನೇ ನನ್ನ ಮಗನ ಕುತ್ತಿಗೆಯನ್ನು ಕೊಯ್ದೆನು! ಅಯ್ಯಯ್ಯೋ! ನನಗೆ ಕೂಡಲೇ ಮರಣ ಬರಬಾರದೇ!" ಎಂದು ಪ್ರಲಾಪಿಸಿಬಿಟ್ಟಳು.

ತಾಯಿಯ ಕರುಣಾಜನಕವಾದ ಅವಸ್ಥೆ ಶೀನುವಿನ ಹೃದಯವನ್ನು ಸೀಳಿತು. ಈ ಮೊದಲು ತನ್ನ ಮೇಲೆ ಕವಿದ ಘೋರವಾದ ಅವಸ್ಥೆಯನ್ನು ನೆನೆದು—ಆ ರಾತ್ರಿಯ ಗಭೀರ ಭೀಷಣವಾದ ಗಾಢಾಂಧಕಾರದೊಳಗೆ ನುಸುಳಿ ಎಲ್ಲಿಗಾದರೂ ಪಲಾಯನ ಮಾಡಿ ಆಜನ್ಮ ಮರೆಯಾಗಿ ಹೋಗಬೇಕೆಂಬ ವಿಚಾರವು ಅವನ ಮನಸ್ಸಿನಲ್ಲಿ ಬಂದಿತ್ತು. ಆಗಲೇ ತಾಯಿಯ ಶೋಚನೀಯವಾದ ಅವಸ್ಥೆ ದೃಷ್ಟಿಗೋಚರವಾಯಿತು. ಅವನ ಮಾತೃನಿಷ್ಠೆ ಅಖಂಡವಾದುದು. ತನ್ನ ಹಿತಕ್ಕಾಗಿಯೇ ದುಃಖವನ್ನು ಕವಿಯಿಸಿಕೊಂಡ ಸರಳ ಮನಸ್ಸಿನ ಸಾಧು ತಾಯಿಯನ್ನು ನೋಡದೆ ಬಿಟ್ಟು, ತಾನು ಮಾತ್ರ ವ್ಯೂಹಗುರು ಮಾಡಿಕೊಂಡು ಓಡಿ ಹೋಗಲಾರದವನಾದನು. ಮನಸ್ಸಿನಲ್ಲಿ ಒಂದು ಬಗೆಯ ಧೈರ್ಯವನ್ನು ತಂದುಕೊಂಡು ತಾಯಿಯ ಬಳಿಗೆ ಹೋಗಿ,—"ಅಮ್ಮಾ! ನೀನು ದುಃಖಿಸಬಾರದು! ಶಾಂತಳಾಗಮ್ಮ! ನನ್ನ ಮನಸ್ಸ್ಥಿತಿಯನ್ನು ನಾನು ನಿನಗೆ ಮೊದಲೇ ಹೇಳಿಬಿಟ್ಟಿದ್ದೇನಲ್ಲವೆ? ಮದುವೆಯೇ ನನಗೆ ಬೇಡಿತ್ತು. ಎಂತಹ ಕನ್ಯೆಯಾದರೂ ನನಗೆ ಸಂತೋಷವಾಗಲಿಕ್ಕಿಲ್ಲವೆಂದು ನನಗೆ ಗೊತ್ತೇಯಿತ್ತು. ಈಗಂತೂ ಶಾಸ್ತ್ರಕ್ಕಾದರೂ ಒಂದು ಮದುವೆಯಾಯಿತಲ್ಲ. ಬಿಡು ಇನ್ನು ಚಿಂತೆ! ಈ ಮದುವೆಯಿಂದ ನಾನು ದಃಖಪಡುವುದೂ ಇಲ್ಲ, ಸಂತೋಷಪಡುವುದೂ ಇಲ್ಲ. ನಾನು ನಿತ್ಯದುಃಖದಲ್ಲಿ ಮುಳುಗುವಂತಾಯಿತೆಂದಲ್ಲವೇ ನೀನೀಗ ದುಃಖಪಡುವುದು? ಇಲ್ಲಮ್ಮ; ನೀನು ನನ್ನನ್ನು ಕುರಿತು ದುಃಖಿಸಬೇಡಮ್ಮ. ಅಮ್ಮ! ನಿನ್ನ ದುಃಖವನ್ನು

ನೋಡಿ ನಾನೆಂದಿಗೂ ಸಹಿಸಲಾರೆನು! ಅಮ್ಮ! ನೀನೇನು ಮಾಡೀ? ನಾನೇನು ಮಾಡೇನು? ಯಾರೇನು ಮಾಡಿಯಾರು? ನನ್ನ ಅದೃಷ್ಟದಲ್ಲಿದ್ದಂತೆಯೇ ಆಯಿತೆಂದು ನಾನು ಸಮಾಧಾನ ಮಾಡಿಕೊಂಡಿದ್ದೇನಮ್ಮ" ಎಂದೀರೀತಿಯಾಗಿ ಸಮಾಧಾನ ಮಾಡಿದನು.

ಆ ಮೇಲೆ ಅವನು ರಾಮಾ ಜೋಯಿಸರನ್ನು ಕುರಿತು—"ಅಯ್ಯ ಮಹಾತ್ಮರೆ! ಈಗ ನಮ್ಮ ಮನಸ್ಸು ನೆಮ್ಮದಿಯಾಗಿಲ್ಲ. ಗೃಹಪ್ರವೇಶವನ್ನು ಮುಂದುವರಿಸೋಣ" ಎಂದನು.

ಅದುವರೆಗೆ ಸ್ತಬ್ಧನಾಗಿದ್ದ ಶೀನು ಈಗ ಜವಾಬುದಾರಿಯನ್ನು ವಹಿಸಿಕೊಂಡು ಮಾತಾಡುವುದನ್ನು ನೋಡಿ ಎಲ್ಲರಿಗೂ ಆಶ್ಚರ್ಯವಾಯಿತು. ಆದರೆ ಗೃಹಪ್ರವೇಶವನ್ನು ಮುಂದುವರಿಸಲು ನಾರಾಯಣಯ್ಯನು ಒಪ್ಪಲಿಲ್ಲ "ಹಾಗೇನಾಯಿತೀಗ? ವಿವಾಹ ವಿಧಿಯ ಉತ್ತರ ಭಾಗವಾದ ಗೃಹಪ್ರವೇಶವನ್ನು ಮುಂದುವರಿಸುವುದೆಂದರೆ ಅರ್ಥವೇನು? ಅದೂ ಜರುಗಿ ಹೋಗಲೇಬೇಕು" ಎಂದು ಹಟಹಿಡಿದನು.

ಆಗ ಚಿಕ್ಕಪ್ಪನು ಶೀನುವನ್ನು ಕುರಿತು—"ಶೀನಪ್ಪಾ! ಮುಂದೆಯೋ ಹಿಂದೆಯೋ ಆ ಕ್ರಮವು ಜರುಗದೆ ಏನೂ ಹೋಗುವುದಿಲ್ಲ. ಆದದ್ದು ಆಗಿಯೇ ಹೋಯಿತಲ್ಲ? ಇನ್ನು ಎಷ್ಟೋ ಮಾತಾಡಿಕೊಂಡರೂ ಎಷ್ಟೋ ಹೇಳಿಕೊಂಡರೂ ಏನೂ ಪ್ರಯೋಜನವಿಲ್ಲ. ನೀನು ಧೈರ್ಯವನ್ನು ವಹಿಸಿಕೊಂಡದ್ದು ನೋಡಿ ನನಗೆ ಸಂತೋಷವಾಯಿತು. ಗೃಹಪ್ರವೇಶಕ್ಕೆ ಮನೆಯಲ್ಲಿ ಎಲ್ಲಾ ಸಾಹಿತ್ಯ ಸನ್ನಾಹಗಳೂ ಆಗಿವೆಯಷ್ಟೆ? ಈಗ ಅವನ್ನು ನಿಲ್ಲಿಸುವುದರಿಂದ ಮುಂದೆ ನಷ್ಟ ತಾನೆ? ಆದ್ದರಿಂದ ಮನಸ್ಸು ಗಟ್ಟಿಮಾಡಿಕೊ. ಜರುಗಿ ಹೋಗಲಿ" ಎಂದರು.

"ಆಯಿತು! ಇಡೀ ಮುಳುಗಿದ ಮೇಲೆ ಮಳೆಯೇನು–ಚಳಿಯೇನು? ಏನೇನಾಗುವುದೋ ಎಲ್ಲವೂ ಆಗಿಹೋಗಲಿ" ಎಂದನು ಶೀನು.

ಹೀಗೆಲ್ಲಾ ಜರುಗುವಾಗ ಬೆಳಗಾಗಿ, ಜಗತ್ಸಾಕ್ಷಿಯಾದ ಸೂರ್ಯನಾರಾಯಣನು ಮೂಡಿ, ಚೆಂಗಿರಣ ಮೂಲಕವಾಗಿ ರಾತ್ರಿಯಲ್ಲಿ ನಡೆದ ಗಭೀರ ಭೀಷಣ ಪ್ರಸಂಗಗಳನ್ನು ಪತ್ತೆಮಾಡಲಾರಂಭಿಸಿದನು. ಆಗ ತಂತಿಯವನೊಬ್ಬನು ಒಂದು ಟೆಲಿಗ್ರಾಮನ್ನು ತಂದು ನಾರಾಯಣಯ್ಯನಿಗೆ

ಕೊಟ್ಟನು. ಅದು ಮುಕುಂದರಾಯರ ತಂತಿ! ಅನಿವಾರ್ಯ ಕಾರಣ ದಿಂದಾಗಿ ತನಗೆ ಬರಲಿಕ್ಕೆ ಆಗಲಿಲ್ಲೆಂದೂ ತನ್ನ ಸ್ಥಾನದಲ್ಲಿ ನೀವೇ ನಿಂತು ಕೆಲಸವೆಲ್ಲಾ ಮುಗಿಸಿಬಿಡಿರೆಂದೂ ವಿವರವಾಗಿ ಕಾಗದ ಹಾಕಿರುತ್ತೇನೆಂದೂ ಆ ತಂತಿಯಲ್ಲಿತ್ತು! ಸರಿ.

ಆಮೇಲೆ ಕಣ್ವತೀರ್ಥದಿಂದ ಎಲ್ಲರೂ ಹೊರಡುವ ಎತ್ತುಗಡೆ ನಡೆಯಿಸಿದರು. ಅದೇ ದಿನ ಸಾಯಂಕಾಲ "ಕಿರುಗಟ್ಟೆಯ" ಲಕ್ಷ್ಮಮ್ಮನ ಮನೆಯಲ್ಲಿ ಹೊಸಸೊಸೆಯ ಗೃಹಪ್ರವೇಶವು ಜರುಗಿತು. ಆ ಮೇಲೆ ಹುಡುಗಿಯನ್ನು ಮೂರು ದಿನಗಳವರೆಗೆ ಗಂಡನ ಮನೆಯಲ್ಲೆ ಬಿಡುವುದು ಪದ್ಧತಿ. ಆ ಪ್ರಕಾರ ಮರುದಿನ ದ್ವಾದಶಿಯ ಔತಣದ ಪಾರಣೆಯಾದ ಮೇಲೆ ಎಲ್ಲರೂ ಅವರವರ ಪಾಡಿಗೆ ತೆರಳಲಾರಂಭಿಸಿದರು. ನಾರಾಯಣಯ್ಯ ಹುಡುಗಿಯ ತಂದೆಯ ಸ್ಥಾನವನ್ನು ವಹಿಸಿಕೊಂಡು, ಹೇಳತಕ್ಕ ಬುದ್ಧಿಯ ಮಾತುಗಳನ್ನು ನಾಠ ಹೇಳಿ ತೀರಿಸಿ, "ಅಬ್ಬ! ಒಮ್ಮೆಗೆದ್ದೆನು! ಇನ್ನು ಈ ಹುಡುಗಿಗೂ ನನಗೂ ಋಣಮುಗಿಯಿತಪ್ಪ!" ಎಂದು ತನ್ನೊಳಗೆ ತಾನೇ ಅಂದುಕೊಂಡು ಹೊರಟು ಹೋದನು. ಲಕ್ಷ್ಮಮ್ಮನ ಸೊಸೆ ಸುಂದರಿಯೊಂದಿಗೆ ಸುಂದರಿಯ ಅಜ್ಜಿಯೂ ಲಕ್ಷ್ಮಮ್ಮನ ಮನೆಯಲ್ಲಿ ಕುಳಿತಿತು.

ಮಾಡುವುದೇನು? ವ್ಯಥಾಜನಕವಾದ ಎರಡು ರೂಪಗಳೇ ಮನೆಯೊಳಗೆ ಬಂದು ಕುಳಿತುವು. ಕೃಷ್ಣನಿಗಂತೂ ಅವುಗಳು ಪೀಡೆಗಳಾಗಿಯೇ ತೋರಿದುವು. ಥಕ್ಕನೆ ತಾವು ಯಾವುದೋ ಪರಕೀಯರ ಮನೆಯೊಳಗೆ ವಾಸವಾಗಿರುವಂತೆ ಆತನಿಗೆ ತೋರಿತು. ಅಣ್ಣನ ಮುಖವನ್ನು ನೋಡಿದರೆ ಹೃದಯದೊಳಗೆ ಹುದುಗಿದ ಚಿಂತೆಯ ಛಾಯೆ ಅಲ್ಲಿ ಮೂಡದೆ ಹೋಗಲಿಲ್ಲ. ಆದರೆ ಮದುವೆಯಾಗಿ ಹೋಯಿತು! ಹೆಂಡತಿಯ ವಿಷಯ! ಬಾಯಿಬಿಟ್ಟು ಏನೂ ಹೇಳುವಂತಿಲ್ಲ. "ಅತ್ತಿಗೆ" ಎಂದು ಕರೆಯಲು ತಮ್ಮನಿಗೂ ಸಂಕಟವಾಗುತ್ತಿದೆ. "ಹೆಂಡತಿ" ಎನ್ನಲು ಅಣ್ಣನಿಗೂ ನಾಚಿಗೆ. "ಸೊಸೆ" ಎನ್ನಲು ಅತ್ತೆಗೆ ಬಾಯಿಯೇ ಏಳುವುದಿಲ್ಲ!

ಕೃಷ್ಣನು ಅಣ್ಣನೊಡನೆ ರಹಸ್ಯವಾಗಿ ಏನೇನೋ ಮಾತಾಡಿದನು.— "ಅಣ್ಣಾ! ನಿನ್ನ ರೂಪಾಕಾರಕ್ಕೆ ತೀರಾ ಹೊಂದಿಕೆಯಿಲ್ಲದ ಈ ಮಾರಿಯನ್ನು

ತೊಲಗಿಸಲಿಕ್ಕೆ ಇನ್ನೇನೂ ಉಪಾಯವಿಲ್ಲವೆ?--" ಎಂದು ಕೇಳಿದನು. ಗಟ್ಟಿಮನಸ್ಸು ಮಾಡಿಕೊಂಡು ಶೀನು—"ತಮ್ಮ! ಅದೆಲ್ಲ ಇನ್ನು ಮೇಲೆ ಸಾಧ್ಯವಿಲ್ಲಪ್ಪ. ಅದೂ ನಮ್ಮಂತಹ ಸಾಧುಗಳಿಂದ ಆಗತಕ್ಕ ಕೆಲಸವೂ ಅಲ್ಲ. ಅದೃಷ್ಟವು ಪಾಲುಮಾಡಿ ಕೊಟ್ಟಿದನ್ನು ಅನುಭವಿಸಿಯೇ ತೀರಬೇಕು ನೋಡು. ಕುರುಡ-ಕುರೂಪ-ಮೂಕತ್ವ-ಅಂಗಹೀನತ್ವ ಮೊದಲಾದವುಗಳು ಹೇಗೆ ದೈವದತ್ತ ಫಲವಾಗಿ ತ್ಯಜಿಸಿಬಿಡಲು ಸಾಧ್ಯವಿಲ್ಲವೋ ಹಾಗೆಯೇ ಇದನ್ನೂ ತ್ಯಜಿಸಲು ಸಾಧ್ಯವಿಲ್ಲದಾಗಿದೆ. 'ನನ್ನ ಹೆಂಡತಿ' ಎಂಬ ಹೆಸರು ಆವಳಿಗೂ, 'ಅವಳ ಗಂಡ' ಎಂಬ ಹೆಸರು ನನಗೂ ಏನು ಮಾಡಿದರೂ ತಪ್ಪಿ ಹೋಗುವಂತಹುದಲ್ಲ ದೈವದತ್ತವಾದ ಮಾನಾಪಮಾನಗಳನ್ನು ಅನುಭವಿಸಿಯೇ ತೀರಬೇಕು. ಅಲ್ಲದೆ, ತಮ್ಮಾ! ಇದು ನನಗೆ ಮಾತ್ರ ಹೊಸದಾಗಿ ಬಂತೆಂದೂ ನೀನು ತಿಳಿಯಬೇಡ; ಆ ಕೆಳಗಟ್ಟೆ ವೆಂಕಪ್ಪ ಎಷ್ಟು ಚಂದವಾಗಿದ್ದಾನೆ! ಅವನ ಹೆಂಡತಿ ಹ್ಯಾಗಿದ್ದಾಳೆ ಭದ್ರಕಾಳೀ ಹಾಗೆ! ಹಾಗೆಯೇ ಬೈಲುಬೀಡು ಸಾವಿತ್ರಿ ಎಷ್ಟು ಸುಂದರಿ! ಅವಳ ಗಂಡ ಗಂಟುಮೋರೆ ವೆಂಕಟಪ್ಪ ಹ್ಯಾಗೆ ಕಾಗೆಯ ಹಾಗಿದ್ದಾನೆ! ಹೀಗಲ್ಲಾ ಪರಸ್ಪರ ವಿರುದ್ಧವಾದ ಜತೆ ಎಷ್ಟೋ ಉಂಟು.—" ಎಂದು ಮಂತಾಗಿ ತಿಳಿಸಿ ಹೇಳಿದನು. ಆದರೂ ಸಹನಶಕ್ತನಲ್ಲದ ತರುಣ ಕೃಷ್ಣನು ವಿವಾಹ ವಿಚ್ಛೇದನ-ಬಲಪ್ರಯೋಗ-ವಿಷಪ್ರಯೋಗ-ಮೊದಲಾದ ಕುಯುಕ್ತಿ ಕುಹಕ ಯುಕ್ತಿಗಳನ್ನು ಹೊರದೆಗೆಯದೆ ಬಿಡಲಿಲ್ಲ. ಅದೆಲ್ಲವನ್ನೂ ಶೀನು ಖಂಡಿಸಿ ಶಾಂತಿಮಾರ್ಗದಲ್ಲಿಯೇ ನಡೆಯಬೇಕೆಂದು, ಒತ್ತೊತ್ತಿ ಹೇಳಿ ಅವನನ್ನು ಸಮಜಾಯಿಸುವಾಗ, ಕೃಷ್ಣನಿಗೆ ಅಣ್ಣನ ಮೇಲೆ ಸ್ವಲ್ಪ ಸಿಟ್ಟೂ ಬಂತು.

ಅಜ್ಜಿ ಯಾವ ವಿಧವಾಗಿ ಮಾತಾಡುತ್ತಿದ್ದಳೆಂದರೆ, ತನ್ನ ನಿರ್ಬಲವಾದ ನಡುಗುವ ರಾಗದ ದನಿಯಿಂದ—"ಲಕ್ಷ್ಮಮ್ಮಾ! ಇದೆಲ್ಲಾ ದೇವರ ಆಟನೋಡಿ! ಅಲ್ಲದೆ ನಾವೆಲ್ಲಾ ಬೇಕಂತ ಮೋಸ ಮಾಡಿಲ್ಲಮ್ಮಾ! ನಮ್ಮ ಹುಡುಗೀಗೆ ನಿಮ್ಮ ಮಗನ ಕೈಹಿಡಿಯ ಬೇಕೂಂತ ಹಣೇಲಿ ಬರೆದಿದ್ದರೆ ತಪ್ಪಿಹೋದೀತಾ?—" ಎನ್ನುತ್ತಿದ್ದಾಗ ಲಕ್ಷ್ಮಮ್ಮನು ಸಿಟ್ಟಿನಿಂದ—"ಸಾಕಜ್ಜೀ-ನಿಮ್ಮ ಮಾತು! ಮೋಸಾ-ಮಾಯೆ ಮಾಡಿಲ್ಲಾಂತ

ಹೇಳ್ತೀರಲ್ಲಾ! ನಿಮ್ಮ ರಾಮಾ ಜೋಯಿಸರು ಈ ಹುಡುಗೀನ ಕುರಿತು ಏನೇನೋ ಹೊಗಳಿ ಹೊಗಳಿ ಹೇಳಿದರಲ್ಲಾ! ಎಲ್ಲಾ ಸತ್ಯ ಅಲ್ಲವೇ?” ಎಂದು ಕೆದರಿದಳು.

“ಕೋಪ ಮಾಡಬೇಡೇ ಲಕ್ಷಮ್ಮಾ! ಹುಡುಗೀಗೆ ಏನು ಕಡಿಮೆ ಯಾಯಿತೇ? ರೂಪ--ಆಕಾರ–ಅದಕ್ಕೆ ಯಾರೇನು–ಮಾಡಿಯಾರು? ದೇವರು ಮಾಡಿದ್ದು ಅದು. ಮತ್ತೆ ನೋಡು. ಎಲ್ಲದರಲ್ಲೂ ಚುರುಕಿ ದ್ದಾಳೆ. ಎಂಟನೇ ಕ್ಲಾಸು ಕಲಿತಿದ್ದಾಳೆ. ವಿದ್ಯಾಬುದ್ಧಿ ಎಲ್ಲಾ ಉಂಟು. ರೂಪಾ ಸ್ವಲ್ಪ ಹಿಂದೇ ಅಂತಲೇ ಚಿನ್ನಾ ಬಣ್ಣಾ ಬೇಕಾದಷ್ಟು ಕೊಟ್ಟಿ ದ್ದೇವಲ್ಲಮ್ಮ?” ಎಂದು ಅಜ್ಜಿ ಕಾನೂನು ತೆಗೆದಳು.

“ಸುಟ್ಟಿತು ನಿಮ್ಮ ಚಿನ್ನಾ ಬಣ್ಣಾ! ಯಾರಿಗೆ ಬೇಕದು? ಕರ ಕೊಂಡು ಹೋಗಿಬಿಡಿ–ಚಿನ್ನಾ ಬಣ್ಣದ ನಿಮ್ಮ ಹುಡುಗೀನ!” ಎಂದು ಕೂಗಿದಳು ಲಕ್ಷಮ್ಮ.

“ಇನ್ನು ಹೀಗೆಂದರೆ ಹ್ಯಾಗೆ ನಡದೀತು ಲಕ್ಷಮ್ಮಾ? ನ್ಯಾಯವಾ? ನೀತಿಯಾ? ಹುಡುಗಿಗೇನು ಕೇಳುವವರೇ ಇಲ್ಲಾಂತಲಾ?” ಎಂದು ಮುದುಕಿ ಬಿಟ್ಟುಕೊಡದೆ ಸವಾಲು ಕೇಳಲಾರಂಭಿಸಿದಳು.

“ಎಲ್ಲಿ? ಯಾರಿದ್ದಾರೆ? ಹುಡುಗಿಯ ಅಪ್ಪ ಮುಖಕೂಡಾ ಕಾಣಿಸಲಿಲ್ಲವಷ್ಟೆ? ಅದೆಲ್ಲಾ ನಿಮ್ಮ ಒಳಗುಟ್ಟು! ಎಲ್ಲಾ ಈಗೀಗ ತಿಳಿ ಯುತ್ತೆ!”

“ಓಹೊ! ಅವರಲ್ಲಿ ಗುಟ್ಟೋ ಅಂತೀಯಾ? ಆ ಗುಟ್ಟು ಇಷ್ಟೆ; ನೀವು ಈಗ ಹ್ಯಾಗೆ ಸೊಸೇನ ಕುರೂಪಿ ಕುರೂಪೀಂತ ಬೇಡಾಂತೀರಾ, ಹಾಗೆಯೇ ಹುಡುಗಿಯ ಅಪ್ಪನೂ ಮಗಳು ಕುರೂಪಿ ಕುರೂಪೀಂತ ನನ್ನ ಹತ್ತಿರವೇ ಬಿಟ್ಟುಬಿಟ್ಟಿದ್ದ. ಮೂರು ವರ್ಷದ ಮಗುವಾದಾಗಿನಿಂದಲೇ ಇದು ತಂದೆಯ ಮುಖ ನೋಡಲಿಲ್ಲ. ಆದರೆ ತಂದೆ ಹಿಂದಿನಿಂದ ಮಗ ಳನ್ನು ವಿಚಾರಿಸಿಕೊಂಡೇ ಇದ್ದಾನೆ. ಈಗ ಇವಳ ಮದುವೇ ಖರ್ಚು, ಬಂಗಾರ, ವಸ್ತ್ರ, ಎಲ್ಲಾ ನನ್ನ ಅಳಿಯನದೇ. ಇಂಥ ಮಗು ಹುಟ್ಟಿದ ಕರ್ಮಕ್ಕೆ ಅವನಿಷ್ಟು ಮಾಡಬೇಕಾಯಿತು. ಬೇಕಾದರೆ ಲಕ್ಷಮ್ಮ, ಈಗ ನೀನು ಈ ಸೊಸೆ ನನಗೆ ಬೇಡಾಂತ ಬಿಟ್ಟುಹಾಕಿ ನೋಡು,—ಆಗ

ಗೊತ್ತಾಗುತ್ತೆ ಇವಳ ಅಪ್ಪನು ಇವಳನ್ನು ವಿಚಾರಿಸುತ್ತಾನೋ ಇಲ್ಲ ವೋಂತ!"

"ಓಹೋ! ಹೆದರಿಸುತ್ತೀರಾ ನಮ್ಮನ್ನ?"

"ಹೆದರಿಸೋದಿಲ್ಲ ಲಕ್ಷ್ಮಮ್ಮ. ಇದ್ದ ಸಮಾಚಾರ ನಿಮಗೆ ತಿಳೀಲೀ ಅಂತ ಹೇಳೋದು!"

"ಅಪ್ಪಿದ್ದರೆ ಮಗಳನ್ನು ಧಾರೇ ಎರೆದು ಕೊಡಲಿಕ್ಕೆ ಯಾಕೆ ಬರಲಿಲ್ಲ—ಆ ಅಪ್ಪ?"

"ಹೇಗೂ ಮದುವೆ ನಡೆಯುತ್ತೇಂತ ಗೊತ್ತಿದ್ದರಿಂದಲೇ ಉದಾಸೀನ ಮಾಡಿದ!"

"ಓಹೊ! ಹ್ಯಾಗಾದರೂ ಒಮ್ಮೆ ಗಂಡ ಬಂದರೆ ಸಾಕಿತ್ತು ನಿಮ್ಮ ಬೆಳೆದ ಹುಡುಗಿಗೆ!"

"ಹೆಣ್ಣು ಹೆತ್ತಮೇಲೆ ಅದೇ ಅಲ್ಲವೇ ನಮ್ಮ ಮಹಾಚಿಂತೆ!"

ಇದನ್ನು ಕೇಳುತ್ತಾ ಹೊರಗಿದ್ದ ಶೀನು—"ಹುಂ, ಆ ಹೆಣ್ಣಿಗೆ ಒಂದು ಗಂಡು ಬಂದರೆ ಸಾಕಿತ್ತಾದರೆ ನನಗೊಂದು ಹೆಣ್ಣು ಸಿಕ್ಕಿದರೆ ತೀರಿತ್ತು! ಆಗಿ ಹೋಯಿತಲ್ಲ ಆ ಕೆಲಸ. ಇನ್ನು ನಿಶ್ಚಿಂತೆ!" ಎಂದು ತನ್ನೊಳಗೆ ಅಂದುಕೊಂಡನು.

ಲಕ್ಷ್ಮಮ್ಮನ ಸೊಸೆ ಸುಂದರಿ, ಅಜ್ಜಿ ಹೇಳಿದಂತೆ ಚುರುಕಾಗಿಯೇ ಇದ್ದಳು. ನಾಮ ಮಾತ್ರ ಸುಂದರಿಯಾದ ಆ ಸುಂದರಿಯನ್ನು 'ಸುಂದರಿ' ಎಂದು ಸಂಬೋಧಿಸಲು ನಮಗೇ ಸಂಕೋಚವಾಗುತ್ತದೆ. ಆದರೆ ಮಾಡುವುದೇನು? ಅವಳ ಹೆಸರೇ ಸುಂದರಿ. ಮದುವೆಯ ಕಾಲದಲ್ಲಿ 'ವಧು'—'ಮದುಮಗಳು' ಎಂದು ಸಂಬೋಧಿಸಲ್ಪಟ್ಟರೂ ಅತ್ತೆಯ ಮನೆಗೆ ಬಂದ ಮೇಲೆ ಮದುವೆಯ ಹುಡುಗಿಯಾಗಿರಲಿಲ್ಲ; ಹೆಂಗುಸು. ಹದಿನೆಂಟು ವರ್ಷದ ಹೆಂಗುಸಾಗಿದ್ದಳು. ಹೊಚ್ಚಹೊಸತಾಗಿ ಅತ್ತೆಯ ಮನೆಗೆ ಬಂದ ಈ ಭಾರೀ ದೊಡ್ಡ ಸೊಸೆ, ದಾಕ್ಷಿಣ್ಯದಿಂದ ಹೆದರಿಕೊಂಡು ಕುಳಿತುಕೊಳ್ಳುವವಳಾಗಿರಲಿಲ್ಲ. ಲಕ್ಷ್ಮಮ್ಮನು ಅಡಿಗೆ ಮಾಡುವಾಗ "ಅತ್ತೇ ಬಿಡಿ, ನಾ ಮಾಡುತ್ತೇನೆ" ಎನ್ನುತ್ತಾ—ಮುಂದೆ ಬರುವಳು. ಪಲ್ಯಕಾಯಿ ಹೆಚ್ಚಲಿಕ್ಕೆ ತಾನೂ ಕುಳಿತುಕೊಳ್ಳುವಳು. "ತೆಂಗು—ಬಾಳೆ

ಗಿಡಗಳಿಗೆ ನೀರು ಹಾಕಬೇಕೆ?'' ಎಂದು ಕೇಳಿ ಕೇಳಿ ಹಾಕುವಳು. ಲಕ್ಷ್ಮಮ್ಮನು ಕಲಗಚ್ಚನ್ನು ಎತ್ತಿಕೊಂಡು ಹೋಗುವಾಗ '' ಇತ್ತಕೊಡಿ ಅತ್ತೆ'' ಎಂದು ತಾನೇ ಎತ್ತಿಕೊಂಡು ಹೋಗುವಳು. ಮನೆ ಗುಡಿಸುವಳು, ಎಂಜಲು ಸಾರಿಸುವಳು—ಹೀಗೆ ಎಲ್ಲ ಕೆಲಸಗಳಲ್ಲಿಯೂ ಲಕ್ಷ್ಮಮ್ಮತ್ತೆಗೆ ಸಹಾಯವಾಗಲು ಉಮೇದಿನಿಂದ ಮುಂದೆ ಬರುತ್ತಿದ್ದಳು. ಆಗ ಲಕ್ಷ್ಮಮ್ಮ— ''ಬೇಡ ಬಿಡೇ! ಈಗಲೇ ಏನವಸರ? ಹೊಸತಾಗಿ ಅತ್ತೆ ಮನೆಗೆ ಬಂದಿದ್ದೀಯಷ್ಟೆ. ನನಗೆ ಕೂಡದಾಗ ನೀನೇ ಮಾಡುವಿಯಂತೆ'' ಎನ್ನುವಳು. ಅದಕ್ಕೆ ಸೊಸೆ, ಮಸಿಗಳ ರಾಶಿಯಲ್ಲಿ ತುಂಬೆಯ ಮಾಲೆ ತೋರುವಂತೆ ಹಲ್ಲುಗಳನ್ನು ತೋರಿಸುತ್ತ ''ಈಗಲೇ ಅಭ್ಯಾಸ ಆದರೆ ತಾನೇ ಅತ್ತೇ, ಮುಂದೆ ಎಲ್ಲಾ ಗೊತ್ತಾಗುತ್ತೇ—'' ಎಂದು ಉತ್ತರ ಕೊಡುವಳು. ಅಜ್ಜಿಯೂ ಅದಕ್ಕೆ ಅನುಸಾರವಾಗಿಯೇ ಹೇಳುವಳು. "ಮಗೂ! ಸುಂದರೂ! ಇನ್ನು ನಿನಗೆ ಇದೇ ಸ್ವಂತ ಮನೆ. ತಂದೆ ಮನೆ, ತಾಯಿ ಮನೆ ಎಲ್ಲಾ ನಿನಗಿನ್ನು ಇದೇ. ಅತ್ತೆಗೂ ಗಂಡನಿಗೂ ಹಾಗೇ ಚಂದಾಗಿರು ಮಗಳೇ. ನಿನ್ನ ಗಂಡ ಬಾಳ ಸಾಧು. ಬಂಗಾರದಂತ ಗುಣ. ಇಂತಾ ಗಂಡನ್ನ ಪಡೆಯಬೇಕಾದರೆ ನೀನು ಎಷ್ಟು ಪುಣ್ಯಮಾಡಿದ್ದಿಯೋ ಮಗು? ಮೊದಲೇ ಹುಣ್ಣಾಗಿರುವ ಅವನ ಮನಸ್ಸು, ಸರಿಯಾಗುವ ಹಾಗೆ ನಡಕೋ ತಾಯೀ! ಲಕ್ಷ್ಮಮ್ಮಾ! ಬೇಗನೇ ನಿನ್ನ ಮಗನಿಗೆ ಪ್ರಸ್ತಾ ಮಾಡಿಬಿಡು. 'ಆ ಸಂತೋಷ ಕೂಡಾ ನೋಡಿಕೊಂಡು ನಾನು ಕಣ್ಣು ಮುಚ್ಚಿಬಿಡುತ್ತೇನೆ.'' ಎಂಬುದು ಆಗಾಗ ಕೇಳಬರುವ ಅಜ್ಜಿಯ ರಾಗವಾಗಿತ್ತು. ಹೀಗೆ ರಾಗ ಎಳೆಯುತ್ತಾ ಮೂರು ದಿನಗಳ ಮೇಲೆ, ಸುಂದರಿಯನ್ನು ಅತ್ತೆಯ ಮನೆಯಲ್ಲೇ ಬಿಟ್ಟು ಅಜ್ಜಿ ಕೊಳ್ಳಾಜೆಗೆ ಹೊರಟುಹೋದಳು. ಆಗ ಕ್ರಮಪ್ರಕಾರ ಸುಂದರಿಯನ್ನು ಕರಕೊಂಡೇ ಹೋಗಬೇಕಿತ್ತು. ಆ ಕ್ರಮವನ್ನು ಲಕ್ಷ್ಮಮ್ಮನು ಹೇಳಿದುದಕ್ಕೆ ಅಜ್ಜಿ— '' ಹೌದೂ! ಇನ್ನು ಎಲ್ಲಿಗೇಂತ! ಕರಕೊಂಡು! ಹೋಗೋದು ಲಕ್ಷ್ಮಮ್ಮ? ಹುಡುಗೀನ ಬಿಟ್ಟೇಬರಬೇಕೂಂತ ನಾರಾಯಣಯ್ಯ ಖಂಡಿತ ಹೇಳಿದ್ದಾನೆ. ನನಗೇನು ಅಧಿಕಾರ ಉಂಟಮ್ಮಾ ಅಲ್ಲಿ? ಮದುವೆ ಆಗುವವರೆಗೆ ನಾರಾಯಣಯ್ಯನ ಮೇಲೆ ಭಾರ ಇತ್ತು. ಸೋದರ ಮಾವನಾದ

ರೇನಾಯಿತು! ತಂದೆಗೇ ಬೇಡಾಗಿರುವ ಮಗಳ ಮೇಲೆ ಅವನಿಗೆ ಎಷ್ಟು ಪ್ರೀತಿಯಿದ್ದೀತಮ್ಮ?"

"ಹಾಗಾದರೆ ಇನ್ನು ಈ ಹುಡುಗಿಗೆ ತಂದೆ ತಾಯಿ ಮನೇಂತ ಒಂದು ಜಾಗಸಹ ಇಲ್ಲೇ ಇಲ್ಲಾಂತಾಯಿತು?''

"ಹಾಂ, ತಂದೆ ಊರಿಗೆ ಬಂದರಲ್ಲವೇ ತಂದೇ ಮನೇಂತ ಅನ್ನ ಲಿಕ್ಕೆ? ಮುಕುಂದರಾಯ ತನ್ನ ಎಲ್ಲ ಹಕ್ಕನ್ನೂ ಮಾರಿಕೊಂಡು ಪರ ದೇಶದಲ್ಲೇ ಇದ್ದಾನೆ, ದೊಡ್ಡ ಅಧಿಕಾರೀ ಹಾಗೆ."

"ಓಹೊ! ರಾಮಾ ಜೋಯಿಸರು ಭಾರೀ ಭಾರೀ ಹೇಳಿದರಲ್ಲಾ? ಮಾವನಿಂದ ಶೀನೂಗೆ ಭಾರೀ ಭಾರೀ ಸಹಾಯವಾಗುತ್ತೆ—ಹಾಗೇ ಹೀಗೇಂತ?"

"ಹೌದು ಮತ್ತೆ! ನಾವೇ ಹಾಗೆ ಅವರಿಂದ ಹೇಳಿಸಿದ್ದು. ಇನ್ನು ಮುಚ್ಚುಮರೆಯಾಕಮ್ಮಾ? 'ಸಾವಿರ ಸುಳ್ಳಾದರೂ ಹೇಳಿ ಮದುವೆ ಮಾಡಬೇಕೂಂತ' ಹೇಳೋದಿಲ್ಲವೆ? ಆದರೂ ನಾವು ಆ ರೀತಿ ಸಾವಿರ ಸುಳ್ಳೆಲ್ಲಾ ಎಲ್ಲಿ ಹೇಳಿದ್ದೇವೆ?''

ಹೀಗೆ ಮುದುಕಿ ಇದ್ದ ಮಾತನ್ನೆ ಎತ್ತಿ ಹೊಡೆಯುವಂತೆ ಹೇಳಿ ದುದರ ಮೂಲಕವಾಗಿ ಇಷ್ಟು ಸಂಗತಿ ಗೊತ್ತಾಯಿತು:—

ಮುಕುಂದರಾಯರೆಂಬವರು ಆ ಪ್ರಾಂತದ ಒಬ್ಬರು ಧನಿಕರು. ಕಾಲೇಜಿನಲ್ಲಿ ಉಚ್ಚಶಿಕ್ಷಣವನ್ನು ಪಡೆದ ಪಟ್ಟಾಧಾರಿಗಳು. ಸರಕಾರೀ ಇಲಾಖೆಯಲ್ಲಿ ದೊಡ್ಡದೊಂದು ಹುದ್ದೆಯನ್ನು ನಿರ್ವಹಿಸಿಕೊಂಡಿದ್ದರು. ಅವರಿಗೆ ಆ ಅಜ್ಜಿಯ ಮಗಳು ವೆಂಕಟಮ್ಮನನ್ನು ಕೊಟ್ಟಿತ್ತು. ಆ ವೆಂಕ ಟಮ್ಮ ಕುರೂಪಿಯಾಗಿದ್ದುದರಿಂದ ಮುಕುಂದರಾಯರಿಗೆ ಆ ಹೆಂಡತಿಯ ಮೇಲೆ ಏನೂ ಮಮತೆ ಇರಲಿಲ್ಲ ಆ ಅನಿಷ್ಟ ಸ್ಥಿತಿಯಲ್ಲಿಯೇ ವೆಂಕಟ ಮ್ಮನು ಮೊದಲೊಂದು ಗಂಡು ಶಿಶುವನ್ನೂ ಆ ಮೇಲೊಂದು ಹೆಣ್ಣು ಶಿಶು ವನ್ನೂ ಹೆತ್ತಿದ್ದಳು. ಬಹಳ ಮುಂದಾಲೋಚನೆ ಮಾಡಿಯೇ ಆ ಹೆಣ್ಣು ಮಗುವಿಗೆ "ಸುಂದರಿ" ಎಂದು ಹೆಸರಿಟ್ಟಿದ್ದರು. ಆ ವಿಕಾರ ರೂಪದ ಹೆಣ್ಣುಮಗುವನ್ನು ನೋಡಿ ಮುಕುಂದರಾಯರಿಗೆ ವ್ಯಥೆ ಅಷ್ಟಿಷ್ಟಲ್ಲ ವಂತೆ! ಹೆಂಡತಿಯನ್ನು ಕಂಡರೇ ಆಗಲಿಲ್ಲವಂತೆ! ಈ ಸುಂದರಿ

ಶಿಶುವನ್ನು ವಿಷಹಾಕಿ ಕೊಂದುಬಿಡಲಿಕ್ಕೂ ಪ್ರಯತ್ನಪಟ್ಟಿದ್ದರಂತೆ! ಈ ವಿಷಯದಲ್ಲಿಯಂತೂ ಆ ವಿಷವು ದಂಪತಿಗಳಿಗೆ ದೊಡ್ಡ ಜಗಳವೇ ಆಯಿತಂತೆ! ಈ ವಿಕಾರವಾದ ಹೆಣ್ಣುಮಗುವಿಗೆ 'ತಂದೆ' ಎನ್ನಿಸಿಕೊಳ್ಳಲಿಕ್ಕೇ ಮುಕುಂದರಾಯರಿಗೆ ನಾಚಿಕೆಯಾಗುತ್ತಿತ್ತಂತೆ! ಆದರೆ "ಹೆತ್ತವಳಿಗೆ ಹೆಗ್ಗಣವೂ ಮುದ್ದೇ!" ಎಂಬಂತೆ ವೆಂಕಟಮ್ಮನು ಮೂರುವರ್ಷದ ಈ ಸುಂದರಿ ಶಿಶುವಿನೊಂದಿಗೆ ತೌರುಮನೆಯನ್ನು ಸೇರಿಬಿಟ್ಟಳು. ಅಥವಾ ಮುಕುಂದರಾಯರೇ ತಮ್ಮ ಬಳಿಯಿಂದ ಹಾಗೆ ಹೊರಡಿಸಿಬಿಟ್ಟರು. ಆ ಮೇಲೆ ಇನ್ನು ಊರಿನಲ್ಲಿಯೇ ಇದ್ದರೆ, ಆ ಅನಿಷ್ಟದ ಶಿಶು ಬಳೆದಂತೆ ತಂದೆ-ಮಗಳ ಸಂಬಂಧವೂ ಬಲಿತುಕೊಂಡೇ ಹೋಗುವುದೆಂದೂ, ಇಂತಹ ಸುಂದರಿಯ ತಂದೆಯೆಂದು ಎಲ್ಲರೂ ತನ್ನನ್ನು ಬೆರಳೆತ್ತಿ ಹೀಯಾಳಿಸುವರೆಂದೂ ಬಗೆದು, ಮಹಾಮಾನಧನರಾದ ಮುಕುಂದರಾಯರು ತಮ್ಮ ಊರಲ್ಲಿರುವ ಮನೆ ಮಾರುಗಳ ಹಕ್ಕೆಲ್ಲವನ್ನೂ ಮಾರಿ, ಹಣವಾಗಿ ಮಾಡಿಕೊಂಡು, ಊರನ್ನೆ ಬಿಟ್ಟು ದೂರ ಅನಂತಪುರದತ್ತ ಕಡೆಗೆ ಹೋಗಿ ಸೇರಿಕೊಂಡುಬಿಟ್ಟರು. ಹಾಗೆಯೆ ಸರಕಾರೀ ಉದ್ಯೋಗದ ಮೇಲೆ ಊರಿಂದೂರಿಗೆ ತಿರುಗಾಡಿಕೊಂಡೇ ಇದ್ದರು. ಆದರೂ ಅವರ ಮುಖ್ಯ ನಿವಾಸಸ್ಥಾನವು ಅನಂತಪುರವೇ ಆಗಿತ್ತು. ಸುಂದರಿಯ ತಾಯಿ ವೆಂಕಟಮ್ಮ ತೌರುಮನೆಯಲ್ಲಿಯೇ ಕಾಯಿಲೆ ಬಿದ್ದು ತೀರಿಹೋದಳು. ನಾರಾಯಣಯ್ಯನ ಮೇಲುವಿಚಾರಣೆಯಲ್ಲಿ ಅಜ್ಜಿಯ ಪದರಿನಲ್ಲಿ ಹುಡುಗಿ ಸುಂದರಿ ಬಳೆದಳು. ಆದರೆ ನಾರಾಯಣಯ್ಯನು ಮುಕುಂದರಾಯರನ್ನು ಸುಮ್ಮನೆಯೇನೂ ಬಿಟ್ಟರಲಿಲ್ಲ. "ಬಂದು ನಿಮ್ಮ ಮಗಳು ಸುಂದರಿ ಬಾಯಿಯನ್ನು ನಿಮ್ಮ ಮನೆಗೆ ಕರಕೊಂಡು ಹೋಗಿ; ಇಲ್ಲದಿದ್ದರೆ ಅವಳ ವಿದ್ಯಾಭ್ಯಾಸಕ್ಕೆ, ಹೊಟ್ಟೆ-ಬಟ್ಟೆಗೆ ಮುಂತಾಗಿ ಖರ್ಚಿಗೆ ಕಳುಹಿಸಿಕೊಡಿ—" ಎಂದು ಮುಕುಂದರಾಯರನ್ನು ಹಿಂಡುವ ಪತ್ರಗಳನ್ನು ಹೊರಡಿಸಿದರು. ಅಂತಹ ಕುರೂಪ ಸುಂದರಿಗೆ ತಾನು 'ತಂದೆ' ಎಂಬ ಹೆಸರನ್ನು ಅಡಗಿಸಿಕೊಳ್ಳಲಿಕ್ಕಾಗಿ ಮುಕುಂದರಾಯರು ಹಣದ ಲೆಕ್ಕವನ್ನು ಸಹಾ ನೋಡುವವರಾಗಿರಲಿಲ್ಲ. ನಾರಾಯಣಯ್ಯನೊಡನೆ ವೈರ ಮಾಡಿಕೊಳ್ಳದೆ, ಚೆಲೋ ರೀತಿಯಿಂದಲೇ-ಅವರು ಕೇಳಿದಂತೆ

ಹಣವನ್ನು ಕಳುಹಿಸಿಕೊಡುತ್ತಾ ಬಂದರು. ಕಡೆಗೆ ಸುಂದರಿ ವಿವಾಹದ ವಯಸ್ಸನ್ನೂ ದಾಟುತ್ತ ಬರುವಾಗ–ಯಾವ ವರಂದಿರೂ ಆ ವಧುವನ್ನು ಮೆಚ್ಚುವವರಾಗಿಲ್ಲದಿರುವಾಗ–ಹಾಗೆಯೇ ಸುಂದರಿ ಹದಿನೇಳು ವರ್ಷಗಳ ವರೆಗೂ ಬಳಿದುಹೋದಾಗ—"ಈ ಹುಡುಗಿಗೆ ಮದುವೆ ಮಾಡಲು ನನ್ನಿಂದ ಸಾಧ್ಯವಿಲ್ಲ; ನೀವೇ ಅತ್ತ ಎಲ್ಲಿಯಾದರೂ ಸಾಟಿಮಾಡಿಸಿ ಬಿಡಿರಿ" ಎಂದು ನಾರಾಯಣಯ್ಯ ಮುಕುಂದರಾಯರಿಗೆ ಬರೆದು–"ಇಂತಹರ ಮಗಳು ಹಾಗಿದ್ದಾಳೆ–ಹೀಗಿದ್ದಾಳೆ, ಇನ್ನೂ ಮದುವೆಯಾಗಿಲ್ಲ–ಎಂದು ಊರೆಲ್ಲಾ ಗುಣುಗುಣು ಎನ್ನುತ್ತಿದೆ." ಎಂದು ಬಜಾಯಿಸಿ ಬರೆದಾಗ, "ಏನಾದರೂ ಊರಲ್ಲಿ ಬಿಟ್ಟಿರುವ ತಮ್ಮ ಕೊಳಕು ಊರಲ್ಲೇ ಇರಬೇಕು; ಅದನ್ನೊಂದು ಗಂಡನ ಮನೆಗೆ ದೂಡಿಸುವವರೆಗೆ ತನಗೆ ಹೆಸರು ತಪ್ಪಲಾರದು—ಪೀಡೆ" ಎಂದು ಮುಕುಂದರಾಯರು ಭಾವಿಸಿಕೊಂಡು—"ನಾರಾಯಣ ಬಾವ! ನೀವೇ ಏನಾದರೂ ತಂತ್ರಮಾಡಿ! ಸಾವಿರ ಸುಳ್ಳಾದರೂ ಹೇಳಿರಿ, ಈ ಒಂದು ಪುಣ್ಯ ಕಾರ್ಯಕ್ಕೆ. ನನ್ನ ಮಗಳನ್ನು ಇಷ್ಟು ಕಾಲ ನೀವು ಸಾಕಿದುದಕ್ಕೆ, ನೀವೇ ಆದರದೊಂದು ಮದುವೆಯ ಗಡಿಯನ್ನೂ ದಾಟಿಸಿ ನನ್ನ ಹೆಸರನ್ನು ಉಳಿಸಿರಿ; ಹಣದ ಆಶೆಯನ್ನು ಹಚ್ಚಿರಿ. ನಗನಟ್ಟುಗಳನ್ನು ತೊಡಿಸಿರಿ.—" ಎಂದು ಒತ್ತಿಯೊತ್ತಿ ಬರೆದು ಹಾಕಿದರು. ಸರಿ. ನಾರಾಯಣಯ್ಯನು ಈ ಪುಣ್ಯಕಾರ್ಯಕ್ಕೆ ಅಘಟಿತ ಘಟನಾ ಸಮರ್ಥರಾದ ರಾಮಾ ಜೋಯಿಸರನ್ನು ಹಿಡಿದರು. ಅವರು ಇಂತಹ ಇಂದ್ರಜಾಲದ ಬಲೆಗೆ ಸಿಕ್ಕಿಸಿ ಹಾಕಲು, ಸಾಧುಗಳಾದ ಲಕ್ಷಮ್ಮ-ಶ್ರೀನಿವಾಸರೇ ಯೋಗ್ಯ ಪಕ್ಷಿಗಳೆಂದು ಆರಿಸಿಕೊಂಡರು. ಇಂತಹ ಮೋಸದ ಮದುವೆಗಳಿಗೆಲ್ಲಾ ಕಣ್ವತೀರ್ಥವೇ ತಕ್ಕ ಕ್ಷೇತ್ರವೆಂದು ರಾಮಾ ಜೋಯಿಸರು ಹರಿಕೆಯ ಸುಳ್ಳು ಕತೆಯನ್ನು ಕಲ್ಪಿಸಿದ್ದರು.

ಅದುವರೆಗೆ ನಾರಾಯಣಯ್ಯನು ಸುಂದರಿಯ ಕಾರಣದಿಂದ ಧನವಂತರಾದ ಮುಕುಂದರಾಯರನ್ನು ಚೆನ್ನಾಗಿ ಹಿಂಡಿಕೊಂಡು ತೃಪ್ತರಾಗಿದ್ದರು. ಆ ಬಗೆಯ ಆಶೆಗೆ ತೃಪ್ತಿಯೆಂಬುದಿಲ್ಲದಿದ್ದರೂ, "ಸುಂದರಿ ಪಾಪ–ಹೇಗೂ ಕುರೂಪಿಣಿ. ಮದುವೆ ಮಾಡಿಕೊಟ್ಟರೂ–ಗಂಡನಿಂದ

ಖಂಡಿತವಾಗಿ ಪರಿತ್ಯಕ್ತಳೇ ಆದಾಳು, ಅಂತಹ ಕಷ್ಟ ಕಾಲವು ಬಂದರೆ ಅವಳ ಜೀವನೋಪಾಯಕ್ಕೊಂದು ಮಾರ್ಗವಾಗಲಿ, ತನ್ನದೇನು ಹೋಯಿತು ? ಎಲ್ಲಾ ಇವಳ ಅಪ್ಪನಿಂದಲೇ ಹಿಂಡಿ ಹೆಚ್ಚಾದ ಹಣ–'' ಎಂಬೀ ಬಗೆಯಾದ ಕೀಳ್ಮೆಯಲ್ಲಿಯ ದಾನ ಬುದ್ಧಿಯಿಂದ, ಕನ್ಯೆಯನ್ನು ಸಾಲಂಕಾರವನ್ನಾಗಿ ಮಾಡಿ ಧಾರೆಯೆರೆದ ಜಿಪ್ಪದ್ದರು. ಆದರೆ ಮುಕುಂದ ರಾಯರು ಧಾರೆಯೆರೆದು ಕೊಡಲಿಕ್ಕೆ ಬರುವಂತೆ ತೋರಿಸಿಕೊಂಡದ್ದೆಲ್ಲವೂ ಸ್ವಪ್ನವೆಯೇ ಸರಿ. ಅದು ನಟನೆಯೆಂದು ತಿಳಿಯಬಾರದೆಂದು–ನಾರಾಯಣಪ್ಪನೂ ಮುಕುಂದರಾಯರೂ ಮೊದಲೇ ಪತ್ರಮೂಲಕವಾಗಿ ಗೊತ್ತುಪಡಿಸಿಕೊಂಡಂತೆ ತಂತಿ–ಪತ್ರಗಳು ಬಂದಿದ್ದುವು.

‘ ಇನ್ನೇನೂ ಭಯವಿಲ್ಲ–ಇವರು ಕೇವಲ ನಾಟಕಗಳು’—ಎಂಬ ವಿಷಯವು ಗೊತ್ತಾಗಿಹೋದುದರಿಂದ ಆ ಅಜ್ಜಿಗೆ ತುಂಬಾ ಹರ್ಷವಾಗಿತ್ತು. ಇನ್ನು ಸತ್ಯವನ್ನು ಹೊರಗೆ ಹಾಕುವುದರಿಂದ ಏನೂ ಬಾಧಕವಿಲ್ಲವೆಂದೂ, ಇನ್ನೂ ತಾವು ಮುಚ್ಚಿಟ್ಟುಕೊಂಡು, ಅನ್ಯಪ್ರಕಾರವಾಗಿ ಸತ್ಯವು ಹೊರಬಿದ್ದರೆ, ತಾವು ಮೋಸವೇ ಮಾಡಿದೆವೆಂದು ಲಕ್ಷ್ಮಮ್ಮಾದಿಗಳು ಅಪವಾದ ಹೊರಿಸಿ ಜರೆದಾರೆಂದೂ, ಅದರಿಂದ ತನ್ನ ಮೊಮ್ಮಗಳು ಮುಂದಕ್ಕೆ ಕಷ್ಟಪಡಬೇಕಾದೀತೆಂದೂ, ಹಾಗೆ ತಿಳಿಯುವ ಮೊದಲೇ ಮಾಡಿದ ತಪ್ಪು-ಒಪ್ಪುಗಳನ್ನೂ ಇದ್ದ ಕತೆಯನ್ನೂ ತನ್ನ ಬಾಯಿಯಿಂದಲೇ ಹೇಳಿಬಿಡುವುದು ಲೇಸಾದುದೆಂದೂ ಭಾವಿಸಿಕೊಂಡು, ಚಾಣಾಕ್ಷಳಾದ ಆ ಅಜ್ಜಿ ಮೇಲೆ ಹೇಳಿದ ಸಾರಾಂಶಗಳನ್ನು ಹೊರಗೆ ಹಾಕಿದಳು. ಬಳಿಕ '' ಪ್ರಸ್ತಕ್ಕೆ ಮುಹೂರ್ತವಿಟ್ಟು ತಿಳಿಸಬೇಕು. ಲಕ್ಷ್ಮಮ್ಮಾ! ಬದುಕಿದ್ದರೆ ಅದೊಂದನ್ನು ನೋಡುವ ಬಯಕೆಯುಂಟು!'' ಎಂದು ಹೇಳಿ, ತಾನೊಬ್ಬಳೇ ಬಸ್ಸು ಹತ್ತಿ ಕೊಳ್ಳಾಜೆಗೆ ಹೊರಟುಹೋದಳು. ಹುಟ್ಟಿದಂದಿನಿಂದ ಅವರಿಗೆ ಎಡೆಬಿಡದೆ ಕಾಪಾಡಿದ ಆ ಕೊಂಡಾಟದ ಅಜ್ಜಿಯನ್ನು ಅಗಲುವಾಗ, ಅತ್ತಿತ್ತ ಸುಂದರಿ ಬಾಯಿಯ ಸಣ್ಣ ಸಣ್ಣ ಕಣ್ಣುಗಳು ಬಾತುಹೋದುವು. ಅಜ್ಜಿಗೂ ಹಾಗೆಯೆ! ಆ ನೆರಿಗೂಡಿದ ಗುಳಿಗಲ್ಲಗಳು ಸುಕ್ಕುಗಟ್ಟಿದ ಒಣಗಣ್ಣಿನೊಳಗಣಿಂದ ಹೊರಟ ನೀರಿನ ಒರತೆಯಿಂದ ನೆನೆದುಹೋದುವು. '' ಮುದ್ದೂ ಸುಂದರೂ! ಗಂಡನಿಗೆ

ಆಗೋ ಹಾಗೂ ಅತ್ತೆ ಮೆಚ್ಚೋ ಹಾಗೂ ಇರಮ್ಮಾ! ಇಬ್ಬರೂ ಒಳ್ಳೇವರು ಸಿಕ್ಕಿದ್ದಾರೆ ನಿನಗೆ! ನಾನಿಂ ಹೋಗಿಬರುತ್ತೇನೆ ಬದುಕಿದ್ದರೆ ನಿನ್ನ ಪ್ರಸ್ತಾ ನೋಡೇನು!—' ಎಂದು ಹೇಳಬೇಕಾದರೆ ಆ ಹಣ್ಣು ಹಣ್ಣು ಮುದುಕಿಗೆ ಕಷ್ಟವಾಗಿ ಗಂಟಲು ಕಟ್ಟಿಹೋಯಿತು. ಹೀಗೆ ಮುದುಕಿ ಹೊರಟುಹೋದಳು. ಆದರೆ ಅವಳ ಕೋರಿಕೆಯಂತೆ ಮೊಮ್ಮಗಳು ಸುಂದರಿಯ ಪ್ರಸ್ತವು ಆಗಲೂ ಇಲ್ಲ; ಮುದುಕಿ ಬದುಕಲೂ ಇಲ್ಲ!—ಅಂದರೆ ಮುಂದೆ ನಾಲ್ಕೈದೇ ದಿನಗಳಲ್ಲಿ ಆ ಮುದುಕಿ ಸತ್ತುಹೋದ ವರ್ತಮಾನವನ್ನು ಕೇಳಿದೆವು.

---

## ೮. "ಅಯ್ಯೋ-ಅಮ್ಮಾ!—"

ದುಃಖ-ಭಯ-ಕೋಪ-ಅವಮಾನ-ಭವಿಷ್ಯತ್ ಘೋರಕಲ್ಪನೆ-ಸುಕುಮಾರನ ಜೀವನವೇ ಹಾಳಾಯಿತಲ್ಲಾ!—ಎಂಬ ಪಶ್ಚಾತ್ತಾಪ-ಸಂತಾಪ ಮೊದಲಾದ ಹೃದಯಕ್ಷೋಭಕವಾದ ನಾನಾಭಾವಗಳು ಒಂದುಗೂಡಿ ತಲೆಗೇರಿ ಶೀನುವಿನ ವಿವಾಹಕಾಲದಲ್ಲಿ ಲಕ್ಷ್ಮಮ್ಮನು ಮೂರ್ಛಿತೆಯಾಗಿ ಬಿದ್ದಿದ್ದಳಷ್ಟೆ? ಆಮೇಲೆ ನಿಧಾನವಾಗಿ ಆ ನಾನಾ ಭಾವನೆಗಳ ಏಕೋವೇಗವು ಇಂಗಿ ಸ್ವಸ್ಥಳಾದಂತೆಯೂ ತೋರಿದ್ದಳಲ್ಲವೇ? ಆದರೆ ಮನಸ್ಸಿನೊಳಗೇ ಅವು ತಳವೂರಿ ಒಂದರ ಮೇಲೊಂದಾಗಿ ಅವಳನ್ನು ಶೋಷಣೆ ಮಾಡಿಕೊಂಡೇ ಇದ್ದುವು. ತನ್ನ ಹಿರಿಯ ಮಗನಿಗೆ ಇದೊಂದು ಪಿಶಾಚಿ ಸ್ವರೂಪದ ಹೆಣ್ಣು ಗಂಟುಬಿತ್ತಲ್ಲಾ ಎಂದು ಒಳಗೊಳಗೇ ಬೆಂದುಬೆಂದು ಬೇಗುದಿಗೊಳ್ಳುತ್ತಲೇ ಇದ್ದಳು. ಆಹಾ! ವಿವಾಹಕ್ಕೆ ಮೊದಲು ಅವಳು ಎಂತೆಂತಹ ಮನೋಮಂಡಿಗೆಗಳನ್ನು ತಿಂದಿದ್ದಳು!—ಹೇಗೆ ಹೇಗೆ ಆಕಾಶ ಗೋಪುರಗಳನ್ನು ಕಟ್ಟಿದ್ದಳು! ತನ್ನ ಸೊಸೆ ಹೇಗಿರಬೇಕಿತ್ತು! ಅವಳೊಡನೆ ತನ್ನ ಮಗನ ಮೇಳ ಹೇಗೆ ಕೂಡಬೇಕಿತ್ತು! ಅವರಿಬ್ಬರೂ ಅಕಸ್ಮಾತ್ ಏಕಾಂತದಲ್ಲಿ ಸಂಧಿಸುವಂತೆ ಅವಳು ಹೇಗೆ ಯುಕ್ತಿಯನ್ನು ಹೂಡಬೇಕಿತ್ತು! ಅವರ ಸರಸಾಲಾಪಗಳಿಗೆ ಹೇಗೆ ಎಡೆ ಕೊಡಬೇಕಿತ್ತು! ಆಮೇಲೆ ಶೀನು ತನ್ನ

ಮನವೊಪ್ಪಿದ ಮಡದಿಯೊಂದಿಗೆ ಪರವೂರಿಗೆ ಹೊರಡುತ್ತಾನೆ; ಆಗ ತಾಯಿಯಾದ ತಾನೂ ಬರುವೆನೆಂದು ಹೇಗೆ ಹೇಳಬಹುದಿತ್ತು! ಮಾತೃ ಭಕ್ತನಾದ ಶೀನು ತನ್ನನ್ನು ಬಿಟ್ಟುಹೋದಾನೆ? ಇಲ್ಲ ಇಲ್ಲ! ಆಮೇಲೆ ಪರವೂರಿನಲ್ಲಿ ಅವರಿಬ್ಬರ ಸುಖಸಂಸಾರದ ನೋಟ! ಸೊಸೆಯ ಬಸಿರು! ಅವಳ ಬಯಕೆ! ಅವಳ ಬಾಣಂತಿತನ! ಅನಂತರ–ಅಹಹ! ಮೊಮ್ಮಗನ ದರುಶನ!—ಅಯ್ಯೋ! ಅದೆಲ್ಲವೂ ಬರಿಯ ಗಗನನಗರಿಯೇ ಆಯಿತು! ಈಗ ಬಂದಿರುವ ಸೊಸೆಯನ್ನು ನೋಡಿದರೆ, ಆ ಬಗೆಯ ಯಾವ ಸಂಕಲ್ಪಗಳಿಗೂ ಮನಸ್ಸೊಪ್ಪದು. ಅವಳ ವಿಕಳ ಮೂರ್ತಿಯನ್ನು ನೋಡಿದೊಡನೆ ಬೇರೆಕಡೆಗೆ ತಿರುಗೋಣವೆನಿಸುತ್ತೆ. ಮಾತಾಡಿಸು ವುದೇ ಬೇಡೆನ್ನಿಸುತ್ತೆ. ಅವಳು ಬಡಿಸಿದರೆ ಊಟವು ಸೇರದು; ಅವಳು ಮುಟ್ಟಿದುದನ್ನು ತಿನ್ನಲು ಓಕರಿಕೆ ಬರುವಂತಾಗುತ್ತೆ. ಇದೆಲ್ಲಾ ಹೆಚ್ಚಾಗಿ ಒಡೆದು ಕಾಣುವುದು ಕೃಷ್ಣನ ಮೇಲೆ. ಅವಳು ಬಡಿಸಲು ಬಂದರೆ ಕೃಷ್ಣನು ಉಣ್ಣದೆ ಎದ್ದು ಹೋಗುವನು. ಅವಳು ಅಡುಗೆ ಮಾಡಿರುವ ಳೆಂದು ಗೊತ್ತಾದರೆ ಕೃಷ್ಣನು ಉಪವಾಸ. "ಅದೇಕೆ ಕೃಷ್ಣ ಹೀಗೆ ಮಾಡುತ್ತಿ?" ಎಂದು ಲಕ್ಷ್ಮಮ್ಮನು ಸ್ವಲ್ಪ ಕೇಳಿದರೆ ಸಾಕು, ಮುಂಗೋಪಿ ಯಾದ ಕೃಷ್ಣನು ತಾಯಿಯ ಮೇಲೆಯೇ ಹಾರಿಬೀಳುವನು. ಆಗ ಶೀನು ತಮ್ಮನನ್ನು ಸಮಜಾಯಿಸಬೇಕಾಗುತ್ತಿತ್ತು- ಆಗ ಕೃಷ್ಣನು ಅಣ್ಣನಿಗೆ ಕೂಡಾ—"ಸಾಕು ಬಿಡಣ್ಣ! ನಿನ್ನಿಂದ ಏನಾದೀತು? ಋಷಿಗಳ ಹಾಗೆ ಕೂತುಕೊಳ್ಳಲಿಕ್ಕಾದೀ! ನಾನಾಗುತ್ತಿದ್ದರೆ ಇಂಥಾ ಮಾರಿ ಹೆಂಡತಿ ಯನ್ನು ಮಾರಿಯೋಡಿಸುವ ಹಾಗೆ ಹೊಡೆದೋಡಿಸುತ್ತಿದ್ದೆ!—" ಎಂದು ಮರ್ಮಾಹತವಾಗಿ ಹೇಳಿಬಿಡುತ್ತಿದ್ದನು. ಇದರಿಂದ ಶೀನುವಿನ ಎದೆ ಒಳಗಿಂದೊಳಗೇ ಗುಂಜುಗೊಳ್ಳುತ್ತಿತ್ತು.

ಪಾಪ!—ಇದಕ್ಕೆ ಸುಂದರಿ ಏನು ಮಾಡಿಯಾಳು? ಮೈದುನನಿಗೆ ತನ್ನ ನೋಟ ಮಾಟಗಳು ಹಿಡಿಯಲಿಲ್ಲವಲ್ಲಾ–ಎಂದು ಮೊದಮೊದಲ ದುಃಖಿಸಿಕೊಂಡಳು; ಅವನ ಕಣ್ಣಿಗೆ ಮಾತ್ರ ಬೀಳದ ಹಾಗೆ ಇರಲಾರಂ ಭಿಸಿದಳು. ಬರಬರುತ್ತ ಆ ಭಯ–ಶೋಕಗಳು ಸಂತಾಪವಾಗಿ ಪರಿಣ ಮಿಸಲಾರಂಭಿಸುತ್ತಿದ್ದವು. ಈ ಸಂಧಿಯಲ್ಲಿ ಕೃಷ್ಣನು ಏಳನೆಯ

ಕ್ಲಾಸಿನಲ್ಲಿ ಫೇಲಾಗಿ ಶಾಲೆಯನ್ನು ಬಿಟ್ಟು, ಆ ಊರಿನ ಒಂದು ದೊಡ್ಡ ಭಂಡ ಸಾಲೆಯಲ್ಲಿ ಗುಮಾಸ್ತೆಯ ಕೆಲಸಕ್ಕೆ ಕುಳಿತನು. ಅವನಿಗೆ ಅತ್ತಿಗೆಯ ದೃಶ್ಯವೇ ಅಸಹನೀಯವಾಗಿ ಒಂದೊಂದು ದಿನ ಮನೆಗೇ ಬಾರದೆ ಕಾಲವನ್ನು ಕಳೆಯುತ್ತಿದ್ದನು.

ಈ ವಿರುದ್ಧ ವಿಧಾನದಿಂದಾಗಿ ಲಕ್ಷ್ಮಮ್ಮನ ನೊಂದ ಪ್ರಕೃತಿಗೆ ಪ್ರಬಲವಾದ ಪೆಟ್ಟು ಬಿತ್ತು. ಮೊದಲೇ ಸಂಧಿವಾತದ ಸೆಳೆತದಿಂದ ನೋಯುತಿರುವ ದೇಹ; ಆದರ ಮೇಲೆ ಮಗನ ಮದುವೆಯಿಂದಾದ ನಿರಾಶಾಜೀವನ ಕಲ್ಪಕವಾದ ಆಘಾತ; ಕೃಷ್ಣನ ಮಾಗ್ಘಾತ! ಶೀನುವಿನ ಮುಖದ ಮೇಲೆ ಮೂಡಿರುವ ಅಂತಸ್ಸಂತಾಪದ ಹೊಗೆಯ ನೋಟ; ಈ ಎಲ್ಲಾ ತಾಪಗಳು ಒಂದಾಗಿ ನೇರಿ ಲಕ್ಷ್ಮಮ್ಮನ ಕಷ್ಟ-ಕೃಶ-ಕಾಯ-ಮನಸ್ಸುಗಳನ್ನು ಅಂಟಿಕೊಂಡಿತು. ಆದರ ಜ್ವಾಲೆಯಿಂದಾಗಿ ಜ್ವರವು ಬಂತು. ಆಯಿತು; ಅವಳು ಹಾಸಿಗೆಯನ್ನೇ ಹಿಡಿದಳು.

ಇನ್ನು ಮನೆಯನ್ನು ನಡೆಯಿಸುವ ಹಿರಿಯರು ಬೇರೆಯಾರಿದ್ದಾರೆ? ಮನೆ-ದನ-ತೋಟಗಳ ಕೆಲಸವೆಲ್ಲ ಸುಂದರಿ-ಗೌರಿ-ಶೀನುಗಳ ಪಾಲಿಗೇ ಬಿತ್ತು. ಗೌರಿಯೂ ಶಾಲೆಯನ್ನು ಬಿಟ್ಟುಬಿಟ್ಟಳು. ಕೃಷ್ಣನು ತಾಯಿಯ ಅಸೌಖ್ಯವನ್ನು ನೋಡಿ, ಮನೆಯಲ್ಲಿಯೇ ಹೆಚ್ಚು ಸಮಯವಿದ್ದು ವಿಚಾರಿಸಿಕೊಳ್ಳುತಲಿದ್ದರೂ, ಸುಂದರಿ ಕಣ್ಣಿಗೆ ಬೀಳುತ್ತಲೇ ಏನಾದರೊಂದು ರಗಳೆಯನ್ನು ಎಬ್ಬಿಸಿಯೇ ಹೋಗುತಿದ್ದನು. ಆ ಊರಿನಲ್ಲಿ ಪ್ರಸಿದ್ಧರಾಗಿದ್ದ ವೆಂಕುಪಂಡಿತರ ಔಷಧವು ಲಕ್ಷ್ಮಮ್ಮನಿಗೆ ನಡೆಯುತ್ತಿದ್ದಿತು. ಔಷಧ ಪಥ್ಯಗಳಿಗೆ, ಶೀನು ಹೊಸಪೇಟೆಯಲ್ಲಿ ಸಂಪಾದಿಸಿಕೊಂಡು ಬಂದ ಉಳಿದ ದುಡ್ಡೆಲ್ಲಾ ಖರ್ಚಾಗಿ ಕೃಷ್ಣನ ಅಲ್ಪ ಸಂಪಾದನೆಯೂ ಕರಗಿಹೋಗುತ್ತಿದ್ದಿತು. ಆದರೆ ಮನೋರೋಗಕ್ಕೆ ಮದ್ದಿದೆಯೆ? ಲಕ್ಷ್ಮಮ್ಮನ ರೋಗವು ದಿನೇ ದಿನೇ ಏರಿಕೊಂಡೇ ಹೋಯಿತು. ಅವಳು ಈ ಹಲವು ಚಿಂತೆಗಳಿಂದಂಟಿದ ಮೂಲವ್ಯಾಧಿಯಿಂದ ತೇರ್ಗಡೆಹೊಂದಿಯಾಳೆಂಬ ಭರವಸೆ ಯಾರಿಗೂ ಇರಲಿಲ್ಲ. ನಮಗೂ ಇಲ್ಲ; ನಿಮಗೂ ಇಲ್ಲ! ಹಾಗೆಂದು ಔಷಧ ಮಾಡದೆ ಬಿಡಲಿಕ್ಕೂ ಇಲ್ಲ!—

"ನಮ್ಮ ತಾಯಿಯನ್ನು ತೆಗೆಯಲಿಕ್ಕಾಗಿಯೇ ಈ ಹೆಣ್ಣು ಬಂತು!" ಎಂದು, ಕೃಷ್ಣನು ಬಾಯಿಬಿಟ್ಟೇ ಒಮ್ಮೆ ಅಂದನು.

ಈ ಕ್ರೂರ ವಾಕ್ಯವು ಸುಂದರಿಯ ಕಿವಿಗೆ ಬಿತ್ತು—ಗಾಯದ ಮೇಲೆ ಬರೆಕೊಟ್ಟ ಹಾಗೆ! ಕೃಷ್ಣನ ಮೇಲೆ ರೋಷವನ್ನು ಅಡಗಿಸಿಟ್ಟುಕೊಂಡಿದ್ದ ಅವಳ ಬಾಯಿ ಸುಮ್ಮನಿರದೆ, "ನಾನು ವಿಷ ಹಾಕಿದೆನೇ ನಿಮ್ಮ ತಾಯಿಗೆ?" ಎಂದೇಬಿಟ್ಟಿತು

"ಓಹೋ! ಶೂರ್ಪನಖಿಯ ಹಾಗೆ ಆರಭಾಯಿ ಕೊಡಲಿಕ್ಕೂ ಪ್ರಾರಂಭಿಸಿಬಿಟ್ಟೆಯಾ? ಅತ್ತಿಗೆ—ಗಿತ್ತಿಗೇ ಎಂಬ ಗೌರವ ಗಿವುರವ ಒಂದೂ ನನ್ನ ಹತ್ತಿರ ಸಿಕ್ಕಲಿಕ್ಕಿಲ್ಲಾ! ಎಚ್ಚರಿಕೆ! ನಿನ್ನ ಗಂಡನ ಹಾಗೆ ದೇವರಲ್ಲ ನಾನು! ಮನುಷ್ಯ!—" ಎಂದು ಪ್ರಾರಂಭಿಸಿದನು ಕೃಷ್ಣ.

"ಅದೇನು? ನನ್ನ ನೋಡಿದರೆ ನೀನು ಹಾಗೆ ಉರಿಯೋದೇನು? ನಾನು ಅಂತಾದ್ದೇನು ಮಾಡಿದೆ?—" ಎಂದು ಸುಂದರಿ ಪುನಃ ಪ್ರತ್ಯುತ್ತರ ಕೊಡುವಾಗ—ಕೃಷ್ಣನು ಕಣ್ಣುಗಳಿಂದ ಕಿಡಿಗಳನ್ನುಗುಳುತ್ತ ಬಾಯಿಗೆ ಬಂದ ಹಾಗೆ ಅವಳನ್ನು ಬಯ್ಯಲಾರಂಭ ಮಾಡಿದನು. ಸುಂದರಿ ಕೋಪಸಂತಾಪಗಳಿಂದ, ಕಣ್ಣು ಮೂಗು ಬಾಯಿಗಳಿಂದ ಅಳಲಾರಂಭ ಮಾಡಿದಳು. ಈ ಕೋಲಾಹಲವು ಒಳಗೆ ಹಾಸಿಗೆಯಲ್ಲಿ ಮಲಗಿದ್ದ ಬಡ ಲಕ್ಷ್ಮಮ್ಮನ ಕಿವಿಗೆ ಬಿದ್ದು ಎದೆಯೊಡೆಯಿತು "ಅಯ್ಯೋ! ನಾರಾಯಣ! ನಾನೇನು ಮಾಡಲೀ! ಯಾಕೆ ನೋಡಿದೆ! ಯಾಕೆ ಮಾಡಿದೆ! ಹಾ! ನನ್ನ ಪ್ರಾಣ ಹ್ಯಾಗೆ ಹೋದೀತು! ಅಯ್ಯೋ!—' ಎಂದು ಪ್ರಲಾಪಿಸಿದಳು.

ಅಂದು ಬಹಳ ದುರ್ದಿನವಾಗಿತ್ತು. ಮೊದಲೆ ಮಳೆಗಾಲ; ಅದರ ಮೇಲೆ ಪಶ್ಚಿಮ ಘಟ್ಟದ ಪಶ್ಚಿಮ ಪ್ರಾಂತದ ಕರಾವಳಿಯ ಸೀಮೆ; ಅದರ ಮೇಲೆ ಅಂದಿನ ದಿನ ದಿನಪತಿಯ ದರುಶನವೇ ಇಲ್ಲದ ದುರ್ದಿನ! ಬೆಳಗ್ಗಿನಿಂದಲೂ ಏಕಪ್ರಕಾರವಾಗಿ ಆಕಾಶದ ನಾಲ್ಕು ಸುತ್ತಿನಿಂದಲೂ ಮುಚ್ಚಿಗೆ ಹಾಕಿ ಕವಿದಿದ್ದ ಕಾಳಮೇಘಗಳು ಅವಿರಾಮವಾಗಿ ಮಳೆಯನ್ನು ಸುರಿಸಿಕೊಂಡೇ ಇದ್ದುವು. ರೂಪುಗೊಂಡ ಕಾರ್ಗಾಲವು ರೆಪ್ಪೆಯನ್ನು ಮುಚ್ಚಿ ಮುಚ್ಚಿ ಬಿಡಿಸುವಂತೆ ಮಧ್ಯೆ ಮಧ್ಯೆ ಮಳೆಯು ಒಂದೊಂದು ನಿಮಿಷ--ಅರೆಯರೆ ನಿಮಿಷ--ಒಂದೆರಡು ಕ್ಷಣ--ನಿಂತುನಿಂತು ಸುರಿಯುತ್ತಿದ್ದಿತು. ಗುಡುಗಿಲ್ಲ ಮಿಂಚಿಲ್ಲ; ಭೂಮಿಯಿಂದೆದ್ದಂತಹ ಒಂದು ತರದ

ಹುಯ್ಯಾಲಿ ಮಾತ್ರ ವರ್ಷಧಾರೆಯನ್ನು ವಾರೆವಾರೆಯಾಗಿ ಮಾಡಿಕೊಂಡು—ಎಲ್ಲೆಲ್ಲಿಗೋ ಓಡಿ ಓಡಿ ಅಲ್ಲಲ್ಲಿ ಮಾಯವಾಗುತ್ತಾ ಇತ್ತು. ಆಗ ಆ ವರ್ಷಾಕಾಲದ ನೀರಧಾರೆಗಳು ಸೂರ್ಯನಿಲ್ಲದ ಹಗಲು ಬೆಳಕಿನಿಂದ ಮಂಜಿನ ಪ್ರಕಾಶವನ್ನು ತಳೆದು ಗಾಳಿಯ ಒತ್ತೋಡಾಟದಿಂದ ಉಲ್ಲಾಸಗೊಂಡು ತೆರತೆರೆಯಾಗಿ ವಕ್ರವಕ್ರವಾಗಿ ಮೇಲೂ ಕೆಳಗೂ ಮುಂದೆಯೂ ಹಿಂದೆಯೂ "ಝೋರೋ!—ಝೋರೋ!—" ಎಂಬ ಧ್ವನಿಯಿಂದ ಉಲ್ಲಾಸವಾಗಿ ನರ್ತನ ಮಾಡುವಂತೆ ಕಾಣುತ್ತಿತ್ತು. ನಡುನಡುವೆ ಆ ಧಾರೆಗಳು ದೂರ ಓಡಿಹೋಗಿ ನಿಂತಂತೆ ನಿಲ್ಲುತ್ತಿದ್ದುವು. ಕೂಡಲೆ ಇನ್ನೊಂದೆಡೆಯಿಂದ ಓಡಿ ಬರುವಂತೆ ಬರುತ್ತಿದ್ದುವು; ಬಂದು ಹಾಗೆಯೇ ಓಡಿಹೋಗುತ್ತಿದ್ದುವು, ಅವುಗಳನಟ್ಟಿಸಿಕೊಂಡು ಇನ್ನೊಂದು ಧಾರಾಸಮೂಹವು ಓಡಿ ಬರುತ್ತಿತ್ತು. ಹಾಗೆಯೇ ಒಂದೇಸವನೆ ಸುರಿಯಲಾರಂಭವಾಗುತ್ತಿತ್ತು. ಎಲ್ಲಿ ನೋಡಿದರಲ್ಲಿ ನೀರು. ಕೆರೆ-ಬಾವಿ-ಗದ್ದೆ-ತೋಟ-ನದಿ-ದಾರಿ-ಕೇರಿ-ಬೀದಿ-ಎಲ್ಲಾ ಸಜೀವವಾದ ಜಲಮಯ! ಊರೆಲ್ಲ ಹೇಗೂ ಖಾಲಿಯಾಗಿಹೋಗಿರುವಂತೆ ಪ್ರಾಣಿಗಳ ಶಬ್ದವೇ ಇಲ್ಲ. ಎಲ್ಲರೂ ತಮ್ಮ ತಮ್ಮ ಮನೆಯೊಳಗೇ ಏನೂ ತೋರದೆ ಕುಳಿತುಕೊಂಡು, ಇಂತಹ ದಿಕ್ಕು ತೋರದ ಮಳೆಗಾಲಕ್ಕಾಗಿ ಮೊದಲೇ ಸಂಗ್ರಹ ಮಾಡಿಟ್ಟಿದ್ದ ಹುರಿದ ಖಾರದ ಸಂಡಿಗೆಗಳೋ--ಹುಣಸೇ ಬೀಜಗಳೋ--ಮೊದಲಾದವುಗಳನ್ನು ಒಂದೊಂದಾಗಿ ತಿನ್ನುತ್ತಿದ್ದರು. ಕಾಗೆ ಮೊದಲಾದ ಹಕ್ಕಿಪಕ್ಕಿಗಳೂ ಎಲ್ಲಿ ಸೇರಿರುವವೋ ಏನೋ! ಎಲ್ಲಿ ನೋಡಿದರಲ್ಲಿ ಮಳೆಯೇ ಮಳೆ! ಅದರ ಇದಿರಿಲ್ಲದ ಏಕಚ್ಛತ್ರಾಧಿಪತ್ಯ! ಆ ಮಳೆಯಲ್ಲಿ ಕೊಡೆಗಳನ್ನು ಹಿಡಿದುಕೊಂಡು ಶೀನು ವೆಂಕುಪಂಡಿತರೂ ಮನೆಗೆ ಬಂದರು. ಶೀನು ಜಗುಲಿಯನ್ನು ಏರುತಿರುವಾಗಲೇ ತಾಯಿ ಲಕ್ಷ್ಮಮ್ಮನ, ಮೇಲೆ ಹೇಳಿದ ಆರ್ತಪ್ರಲಾಪವು ಅವನ ಕಿವಿಗೆ ಬಿತ್ತು.

ಆ ದಿನ ಲಕ್ಷ್ಮಮ್ಮನ ರೋಗಾವಸ್ಥೆ ಸ್ವಲ್ಪ ಜೋರಾಗಿತ್ತು. ಏನೋ ವಿಕೋಪ ಸ್ಥಿತಿಗೆ ಏರಿದಂತೆ ತೋರುತ್ತಿತ್ತು. ಅಂತೆಯೇ ಶೀನು ವೆಂಕು ಪಂಡಿತರನ್ನು ಕರಕೊಂಡು ಬಂದನು. ಬಂದವನೇ ಅವಳ ಚೀರ್ದನಿಯನ್ನು ಕೇಳಿ ಧಾವಿಸಿ ಹೋಗಿ ಅವಳ ಹಾಸಿಗೆಯ ಬಳಿಯನ್ನು

ಸೇರಿದನು. ಕೃಷ್ಣನೂ ಓಡಿಬಂದನು. ಇಬ್ಬರೂ "ಅಮ್ಮ--ಅಮ್ಮ--" ಎಂದು ಗಾಬರಿಯಿಂದ ಕರೆಯುತ್ತಿದ್ದರು. ಲಕ್ಷಮ್ಮನಿಗೆ ಸ್ಮರಣೆಯಿದ್ದಿಲ್ಲ. ಕಣ್ಣು ಮುಚ್ಚಿತ್ತು. ಜೋರಾಗಿ ಶ್ವಾಸವನ್ನು ಬಿಡುವ ಸದ್ದು ಮಾತ್ರ ಕೇಳಿಬರುತ್ತಿತ್ತು. ಅದೇ ಊರ್ಧ್ವಶ್ವಾಸವಾಗಿರಬೇಕು. ಶೀನುವಿನ ಕಣ್ಣುಗಳಲ್ಲಿ ಇದ್ದಕ್ಕಿದ್ದ ಹಾಗೆ ನೀರು ತುಂಬಿಸೂಸಿತು. ಆರ್ದ್ರನೇತ್ರದಿಂದ ಪಂಡಿತರನ್ನು ನೋಡಿ—" ಪಂಡಿತರೆ!—?" ಎಂದನು.

ಪಂಡಿತರು ಹಿಂಜರಿಯುತ್ತ ಲಕ್ಷಮ್ಮನ ಕೈನಾಡಿಯನ್ನು ಹಿಡಿದು ನೋಡಿದರು. ಶೀನು-ಕೃಷ್ಣ-ಗೌರಿಯರ ದೃಷ್ಟಿಗಳು ಪಂಡಿತರ ಮುಖದ ಮೇಲೆಯೇ ನೆಟ್ಟುಹೋದುವು. ಸುಂದರಿಯೂ ಮೆಲ್ಲಮೆಲ್ಲನೆ ಆ ಪ್ರದೇಶಕ್ಕೆ ಬರುತ್ತಿದ್ದಳು ಶೋಕದ ಛಾಯೆ ಅವಳ ಮುಖದಲ್ಲಿಯೂ ಮೂಡಿತ್ತು. ಅವಳು ಸಮೀಪದಲ್ಲಿ ಬಂದು ನಿಂತುದು ಕೃಷ್ಣನಿಗೆ ಗೊತ್ತಾಗುತ್ತಲೇ, ಅವನು ಹುಬ್ಬು ಸುರುಗಿಸಿಕೊಂಡು ಅವಳನ್ನು ಕ್ಷುದ್ರದೃಷ್ಟಿಯಿಂದ ನೋಡುತ್ತ " ಯಮದೂತಿಯ ಹಾಗೆ ಇಲ್ಲಿಗೇಕೆ ಬಂದಿ? ತೊಲಗತ್ತ!" ಎಂದು ದಟ್ಟಿಸಿದನು.

" ಸುಮ್ಮನಿರು ಕೃಷ್ಣ! " ಎಂದನು ಶೀನು.

ಸುಂದರಿ ಮೂಕವಾಗಿ ಶೋಕಮಾಡಿಕೊಳ್ಳುತ್ತ ದೂರ ಅಡುಗೆಯ ಮನೆಯ ಬಾಗಿಲಿನ ಎಡೆಯಲ್ಲಿ ಹೋಗಿನಿಂತಳು. ಅತ್ತೆ ಈಗಲೋ ಮತ್ತೆಯೋ ಎಂಬ ಸ್ಥಿತಿಯಲ್ಲಿದ್ದಾರೆ! ತನ್ನ ಆಗಮನವೇ ಅವರ ಮರಣಾವಸ್ಥೆಗೆ ಮೂಲಹೇತುವೆಂಬುದು ಅವಳ ಮನಸ್ಸನ್ನು ಚುರುಚುರನೆ ಬಾಧಿಸುತ್ತಿತ್ತು. ಯಾರೇನಂದರೂ ಒಮ್ಮೆ ಸಾಹಸ ಮಾಡಿ ಹೋಗಿ, ಕಡೆಯ ಬಾರಿ ಅತ್ತೆಯ ಪಾದವನ್ನು ಹಿಡಿದು ಕ್ಷಮೆ ಕೇಳಿಕೊಳ್ಳಬೇಕೆಂದು ಒಮ್ಮೆ ಅನ್ನಿಸಿತವಳಿಗೆ. ಏನೆಂದು ಕ್ಷಮೆ ಕೇಳುವುದು? ಹಾಗೆ ಹೋಗಿ ಕಾಲು ಮುಟ್ಟಿದರೆ, ಮೂಲಕಾರಣಳಾದ ತನ್ನ ಘೋರ ರೂಪವು ಕಣ್ಣಿಗೆ ಕಟ್ಟಿ, ಕ್ಷುದ್ರವಾದ ಲಕ್ಷಮ್ಮನ ದೇಹದಿಂದ ಅಲ್ಪವಾದ ಪ್ರಾಣವು ಕೂಡಲೇ ಹೊರಟುಹೋದರೆ—ಅವಳೇ ಅತ್ತೆಯನ್ನು ಹತ್ಯಮಾಡಿದ ಹಾಗಾದೀತು! ಕೃಷ್ಣನು ಬೇರೆ ಅವಳನ್ನು 'ಯಮದೂತಿ' ಎಂದು ಅಂದೂ ಆಯಿತಲ್ಲ? 'ಆಗಲಿ! ಏನಾಗುವುದೋ ಆಗಲಿ. ತಾನು ದೂರವಿರುವುದೇ ಲೇಸು'

–ಎಂದು ಭಾವಿಸಿಕೊಂಡು ಸುಂದರಿ ಆ ಬಾಗಿಲೆಡೆಯಲ್ಲಿ ನಿಂತು ಇಣಿಕು ತಿದ್ದಳು.

ಪಂಡಿತರ ಮೋರೆಯಲ್ಲಿ ನಿರಾಶೆಯ ಗೆರೆಗಳು ಕಾಣಿಸಿದುವು. ಶೀನೂ ಕೃಷ್ಣರು ಹತಾಶರಾಗಿ—"ಅಯ್ಯ! ಏ–ನು?" ಎಂದರು.

ಪಂಡಿತರು ದುಃಖತಾಡಿತ ಸ್ವರದಿಂದ—"ಆಯುಷ್ಯವಿಲ್ಲ! ಧನ್ವಂತರಿ ಕೈಮೀರಿ ಹೋಯಿತು —" ಮುಂದೆ ನುಡಿಯಲು ಪಂಡಿತರ ಬಾಯಿ ಬಿಗಿದು ಹೋಯಿತು.

"ಅಯ್ಯೊ! ಅಮ್ಮ! ಇಷ್ಟು ಬೇಗನೇ ಹೊರಟುಹೋಗಲಾರಂಭಿಸಿದಿಯಾ?" ಎಂದು ಕೂಗಿದನು ಶೀನು. ಅವನ ತುಂಬಿದ ಕಣ್ಣುಗಳಿಗೆ ಪಂಡಿತರ ಮುಖವು ಕಾಣಿಸಲಿಲ್ಲ.

ಕೃಷ್ಣನು ತಡವರಿಸುವ ನಾಲಗೆಯನ್ನು ಆಡಿಸುತ್ತ—"ಪ–ಪ–ಪಂಡಿತರೆ! ಏ–ಏ–ಏನಾ–ದರೂ ಮಾಡಿ— ?"

"ಅಯ್ಯಾ ಕೃಷ್ಣರಾಯರೆ! ಇನ್ನು ಎಂತಹ ಸರ್ಜನರೇ ಬಂದರೂ ಪ್ರಯೋಜನವಾಗದು. ಆಯುಷ್ಯ ತೀರುವಾಗ ಯಾರೇನು ಮಾಡಲಾದೀತು ಹೇಳಿ?" ಎಂದರು ಪಂಡಿತರು.

ಲಕ್ಷ್ಮಮ್ಮನ ದೇಹವು ಅಲುಗಾಡಿತು. ಮಾಲಿಕೊಂಡಿದ್ದ ಕೊರಳನ್ನು ನೇರಾಗಿಸುವ ಅವಳ ಪ್ರಯತ್ನವನ್ನು ನೋಡಿ ಶೀನೂ ನೆಟ್ಟಗೆ ಮಾಡಿದನು. ಗುಳಿಯೊಳಗೆ ಮುಚ್ಚಿದ್ದ ಅವಳ ಕಣ್ಣುಗಳು ತೆರೆದುವು. ಮಂದದೃಷ್ಟಿಯನ್ನು ನಿಧಾನವಾಗಿ ತಿರುಗಿಸುತ್ತ ಕೃಷ್ಣನ ಮೋರೆಯನ್ನು ನೋಡಿದಳು.

"ಅಮ್ಮ—" ಎಂದು ಕರೆದನು ಕೃಷ್ಣ.

ಲಕ್ಷ್ಮಮ್ಮನ ನೋಟವು ಮತ್ತೆ ಗೌರಿಯ ಮುಖದ ಮೇಲೆ ಬಿತ್ತು. ಕೂಡಲೇ ಆ ಬಾಲೆ ದುಃಖದ ಕಟ್ಟೊಡೆದು "ಅಮ್ಮ-ಅಮ್ಮಾ-ಆ-ಆ!–" ಎಂದು ರೋದನ ಮಾಡಲಾರಂಭಿಸಿದಳು.

"ಮಗು, ಅಳಬೇಡ–ಕಂದ!—" ಎಂದೇನೋ ಮಾತಾಡಲಿಕ್ಕೆ ಲಕ್ಷ್ಮಮ್ಮನ ನಾಲಗೆಗೆ ಬಲವಿರಲಿಲ್ಲ. ನಿರ್ಬಲವಾದ ಕೈಯನ್ನೆತ್ತಿ ಸನ್ನೆ ಮಾಡಿದಳು. "ದೇವರಿದ್ದಾನೆ! ನಿನ್ನನ್ನು ಕಾಪಾಡಲಿ! ಅಳಬೇಡ!" ಎಂದು ಅದರ ಅರ್ಥ. ಗೌರಿಗೂ ಅದು ತಿಳಿಯಿತು. ಶೀನು—"ಅಳ

ಬೇಡ ಗೌರಿ.” ಎಂದನು. ಆದರೆ ಅವನ ಕಣ್ಣಿನಲ್ಲಿ ನೀರು ಸುರಿಯುತ್ತಲೇ ಇತ್ತು. ಗೌರಿ ರೋದನವನ್ನು ಹತ್ತೊತ್ತಿಕೊಂಡಳು.

ಲಕ್ಷಮ್ಮನು ಗೌರಿಯ ಕೈಗಳನ್ನು ತನ್ನ ಎದೆಯ ಮೇಲೆ ಇಟ್ಟುಕೊಂಡಳು. ಅವಳ ದೃಷ್ಟಿ ಶೀನುವಿನ ಮುಖದ ಮೇಲೆ ನಿಂತಿತು. ಅಲ್ಲೇ ನಿಂತುಹೋಯಿತು. ಕಣ್ಣಕೊನೆಗಳಲ್ಲಿ ನೀರೂ ತುಂಬಿತು. ಆ ಕಂಬನಿಯನ್ನು ಶೀನು ಮೆಲ್ಲನೆ ಒರಸಿ ಗದ್ಗದ ಕಂಠದಿಂದ—“ಅಮ್ಮ! ಏನಾಗುತ್ತಮ್ಮ? ಏನು ಬೇಕಮ್ಮ?” ಎಂದನು.

ಲಕ್ಷಮ್ಮನು ಮೆಲ್ಲನೆ ಬಾಯಿತೆರೆದಳು. ಶೀನು ಸ್ವಲ್ಪ ಗಂಗಾತೀರ್ಥವನ್ನು ಬಾಯಿಗೆರೆದನು. ಅದನ್ನು ಗುರುತಿಸಿಕೊಂಡು ಲಕ್ಷಮ್ಮನು—“ಶೀನು! ನನ್ನ ಮಗು! ನಾನು ಹೋಗುತ್ತೇನೆ! ಬದುಕಿ ನಾನು ನಿನ್ನ ಸುಖವನ್ನು ಹಾಳುಮಾಡಿದೆ. ಮದುವೆಯೇ ಬೇಡಾಂತ ನೀನು ಅಂದಿ! ನಾನೇ ನಿನ್ನ ಎಳೆದು ಹಾಳುಮಾಡಿದೆ! ಅಯ್ಯೋ! ಸ್ವಸ್ಥವಾಗಿ ಕವೀಕಟ್ಟಿಕೊಂಡು–ಹಕ್ಕೀ ಹಾಗೆ ಸಂತೋಷವಾಗಿದ್ದ ನಿನ್ನನ್ನು ನಾನೇ ಹಾಳುಮಾಡಿದೆ! ಇನ್ನು ನಿನಗೆ ಆ ಸಂತೋಷವು ಬಂದೀತೆ? ಅಯ್ಯೋ! ಶೀನಪ್ಪಾ! ಕಡೇವರೆಗೆ ನಿನ್ನನ್ನು ದುಃಖದಲ್ಲಿ ಮುಳುಗಹಾಕಿ ನಾನು ಹೋಗುತ್ತೇನಲ್ಲಾ!—” ಎಂದು ಆರ್ತಸ್ವರದಿಂದ ಹೇಳುವಾಗ, ಶೀನು ಮುಖವನ್ನು ಆ ಕಡೆಗೆ ತಿರುಗಿಸಿಕೊಂಡು ಕಣ್ಣೀರನ್ನು ಒರೆಸಿಕೊಂಡ.

“ಇಲ್ಲ–ಅಮ್ಮ ಇಲ್ಲ. ನಾನು ದುಃಖಪಡುತ್ತೇನೆಂದು ನೀನು ತಿಳಿಯುವುದೇ ಬೇಡ ಅಮ್ಮ. ಅಮ್ಮ! ನಾನು ಮೊದಲಿನ ಹಾಗೆಯೇ ಇರುತ್ತೇನೆ! ಹಕ್ಕೀಹಾಗೆಯೇ ಇರುತ್ತೇನೆ. ಖಂಡಿತವಾಗಿಯೂ--ಅಮ್ಮಾ! ನಿನ್ನ ಚರಣ ಸಾಕ್ಷಿಯಾಗಿಯೂ ಮದುವೆಯಾಯಿತಲ್ಲಾ--ಅಂತ ನಾನು ಎಂದೂ ವ್ಯಸನಪಡುವುದಿಲ್ಲ. ಕವೀಕಟ್ಟುತ್ತ ಮೊದಲಿನ ಹಾಗೆಯೇ ಇರುತ್ತೇನೆ! ಈಗ ನಾನು ಅಳುವುದು--ಅಮ್ಮಾ! ನೀನು ನಮ್ಮನ್ನೆಲ್ಲಾ ಬಿಟ್ಟು—” ಎನ್ನುವಷ್ಟರಲ್ಲಿ ಅವನ ಗಂಟಲು ದುಃಖದಿಂದ ಕಟ್ಟಿಯೇ ಹೋಯಿತು.

ಮುಂದೇನೋ ಮಾತಾಡಲು ಲಕ್ಷಮ್ಮನ ನಾಲಗೆ ಕದಲಿತು. ಶಬ್ದವೇನೋ ಗಂಟಲಲ್ಲಿಯೇ ಹೊರಟಿತು. ಅರ್ಥವಾಗಲಿಲ್ಲ. ತುಟಿಗಳ

ಕೊನೆಯಲ್ಲಿ ಶುಷ್ಕವಾದ ಮುಗುಳು ನಗುವೊಂದು ಹೊಳೆದು ಹೋಯಿತು. ಕಣ್ಣು ಪ್ರಕಾಶಹೀನವಾಯಿತು. ಊರ್ಧ್ವಶ್ವಾಸವು ಮೇಲೆ ಮೇಲೆ ಹೊರಡಲಾರಂಭವಾಯಿತು.--

ಅಪರಾಹ್ನದ ಸಮಯ! ಮಳೆ ಒಂದೇ ತೆರನಾಗಿ ಬರುತ್ತಿದೆ. ಲಕ್ಷ್ಮಮ್ಮನ ಅಂತ್ಯಾವಸ್ಥೆಯನ್ನು ಕೇಳಿ ನೆರೆಹೊರೆಯವರು ನೆರವಾಗಲು ಬಂದರು. ಲಕ್ಷ್ಮಮ್ಮನನ್ನು ನೆಲದಲ್ಲಿ ಮಲಗಿಸಲಾಯಿತು. ಶೀನೂ-ಕೃಷ್ಣಂದಿರು ತಮ್ಮ ಕಣ್ಣುಗಳಿಂದ ನೀರನ್ನು ತೊಟ್ಟಿಕ್ಕುತ್ತ, ತಾಯಿಯ ಬಾಯಿಗೆ ಗಂಗಾತೀರ್ಥವನ್ನು ಬೊಟ್ಟುಬೊಟ್ಟಾಗಿ ಬಿಟ್ಟರು. ಲಕ್ಷ್ಮಮ್ಮನು ಒಮ್ಮೆ ಕಣ್ಣು ತೆರೆದು ಎಲ್ಲರನ್ನೂ ನೋಡಿದಳು ಶೀನುವನ್ನು ನೆಟ್ಟುನೋಡಿದಳು! ಶೀನು ಕಡು ದೃಢೀಭಾವದಿಂದ ತಾಯಿಯ ಮುಖದ ಬಳಿಯಲ್ಲಿ ಮುಖವಿಟ್ಟು—"ಅಮ್ಮಾ! ದೇವರ ಬಳಿಗೆ ಹೋಗು! ನಾರಾಯಣ! ನಾರಾಯಣ!" ಎಂದು ಹೇಳಿದನು. ಲಕ್ಷ್ಮಮ್ಮನು ಹಾಗೆಯೇ ಮುಗುಳ್ನಗುತ್ತ--ಎಲ್ಲರನ್ನೂ ಒಮ್ಮೆ ನೋಡಿ--ಕೈಗಳನ್ನು ಜೋಡಿಸಿ ಎದೆಯ ಮೇಲಿಟ್ಟುಕೊಂಡು ಎಲ್ಲರಿಗೂ ನಮಸ್ಕಾರವನ್ನು ತೋರಿದಳು ಅವಳ ಗಂಟಲಲ್ಲಿ ಊರ್ಧ್ವಶ್ವಾಸಗಳ ನಡುನಡುವೆ "ನಾ-ರಾ-ಯ-ಣ—" ಎಂಬ ಉಚ್ಚಾರವು ಅಸ್ಪಷ್ಟವಾಗಿ ಹೊರಡುತ್ತಿತ್ತು. ದೃಷ್ಟಿ ಶೀನುವಿನ ಮೇಲೆಯೇ ನೆಟ್ಟು ಮಂದಮಂದವಾಗುತ್ತಾ ಹೋಯಿತು! ಶೀನು ಅವಳಿಗೆ ದುಃಖವಾಗಬಾರದೆಂದು ಕೈಜೋಡಿಸಿಕೊಂಡು—ಮಹಾಕಷ್ಟದಿಂದ ಪ್ರಸನ್ನಭಾವವನ್ನು ಮುಖದಲ್ಲಿ ತಂದುಕೊಂಡು ನೋಡುತ್ತಿದ್ದನು. ಹಾಗೆಯೇ ಲಕ್ಷ್ಮಮ್ಮನ ..... . . . ಯಿತು!

ಸುಂದರಿ ದೂರದಿಂದ ಓಡಿಬಂದು—"ಹಾ! ಅತ್ತೆ—"ಎಂದು ಮುಂದೆ ಮಾತು ಹೊರಡದೆ ಅತ್ತೆಯ ಪಾದದ ಬಳಿಯಲ್ಲಿ ಅಡ್ಡಬಿದ್ದಳು. ಆಗ ಅವಳ ಅತ್ತೆಯ ಜೀವನ ಚರಿತ್ರೆ ಪರಿಸಮಾಪ್ತವಾಗಿ ಹೋಗಿತ್ತು.

# ೯. ಕೃಷ್ಣನ ಕಲಹ

ಶೀನು ಕೆಲಸವನ್ನು ಬಿಟ್ಟು ಮನೆಯಲ್ಲಿ ಕುಳಿತುಕೊಳ್ಳಲಿಕ್ಕೆ ಪ್ರಾರಂಭಮಾಡಿ ಸುಮಾರು ಏಳು ತಿಂಗಳಾಗಿ ಹೋಯಿತು. ಮದುವೆಯ ನಿಮಿತ್ತವಾಗಿ ಊರಿಗೆ ಬರಮಾಡಲ್ಪಟ್ಟ ಅವನು ಮದುವೆಯಾಗಿ, ತಾಯಿ ಕಾಯಿಲೆಯಲ್ಲಿ ಬಿದ್ದು, ಊರಿನಲ್ಲಿಯೇ ನಿಲ್ಲಬೇಕಾಯಿತು. ಮುಖ್ಯವಾಗಿ ಅವನು ತಾಯಿಯ ಆರೈಕೆಗಾಗಿಯೇ ನಿಂತಿದ್ದನು. ಅಂತಹ ತಾಯಿ ಈಗ ಹೊರಟುಹೋದಳು. ಅವನ ಹೃದಯವನ್ನು ಕವರುವವರು ಆ ಮನೆಯಲ್ಲಿ ಇನ್ನು ಯಾರಿದ್ದಾರೆ? ಅವನ ಭವಿಷ್ಯತ್ ವಾತಾವರಣದಲ್ಲಿ ಮುಂದೆ ಬಹುದೂರದಲ್ಲಿ ಮಸಕುಮಸಕಾಗಿ ದಿವ್ಯಸುಂದರವಾದ–ಸೌರಭಸಮನ್ವಿತವಾದ ಉದ್ಯಾನವನವೊಂದು ಅವನನ್ನು ಆಮಂತ್ರಿಸುವಂತೆ ಕಲ್ಪನೆಯನ್ನು ಕಾಣುತ್ತಿದ್ದನು. ಕನ್ನಡ ತಾಯಿಯ ದಿವ್ಯಭವನವದು! ಕಳಾದೇವಿಯ ಲಲಿತೋದ್ಯಾನವದು! ಅಲ್ಲಿಗೆ ಹೋಗಿ ಮುಟ್ಟಬೇಕೆಂಬ ಯೋಚನೆಯನ್ನು ಅವನು ತಾಳಿದ್ದನು. 'ಮುಂದೆ ಬದುಕಿರುವಷ್ಟು ದಿನವೂ ಆ ಲಲಿತೋದ್ಯಾನ–ಭವನಗಳಲ್ಲೇ ವಿಹರಿಸಿಕೊಂಡಿರಬೇಕು; ಅದಕ್ಕಿಂತ ಹೆಚ್ಚಿನ ಆನಂದವನ್ನೀಯುವ ಸ್ಥಾನವು ತನಗಿನ್ನು ಬೇರೆ ಇಲ್ಲ'—ಎಂಬುದು ಅವನ ನಿರ್ಧಾರವಾಗಿತ್ತು. ಈ ನಿರ್ಧಾರಕ್ಕೆ ಅನುಗುಣವಾದ ಕಾರ್ಯಗಳೇ ಅವನ ಪ್ರಕೃತಿಯಲ್ಲವೆ? ಈ ಪ್ರಕೃತಿಗೆ ತಕ್ಕ ಪ್ರಭಾವ, ಪ್ರಭಾವಕ್ಕೆ ತಕ್ಕ ಕಾರ್ಯ, ಕಾರ್ಯಕ್ಕೆ ತಕ್ಕ ನಿರ್ಧಾರ; ಇದರಲ್ಲಿ ಏನೂ ಆಶ್ಚರ್ಯವಿಲ್ಲ.

'ಕಾಲ'ವೆಂಬ ದಿವ್ಯವಾದ ಔಷಧದ ಲೇಪನದಿಂದ ಮಾತೃವಿಯೋಗ ದುಃಖವು ಅಂತರಂಗದಲ್ಲಿ ಅಡಗಿಹೋಗುತ್ತ ಬರುವ ಸಮಯ; ಅಂದರೆ, ಲಕ್ಷ್ಮಮ್ಮನು ತೀರಿಹೋಗಿ, ಅವಳ ಸ್ಮಶಾನಯಾತ್ರೆಯಾದಿಯಿಂದ ಹನ್ನೊಂದನೆಯ ಔರ್ಧ್ವದೈಹಿಕ ಕರ್ಮಗಳು ಯಥಾಸಾಂಗವಾಗಿ ನೆರವೇರಿ, ಎರಡುವಾರಗಳು ಕಳೆದುಹೋಗಿವೆ. ಮನೆಯಲ್ಲಿ ಗೌರಿ-ಕೃಷ್ಣ–ಶೀನು–ಸುಂದರಿ ಇಷ್ಟೇ ಮಂದಿ. ಇವರೆಲ್ಲರಿಗಿಂತ ಹಿರಿಯಳೂ-ಗುರುಸಮಾನೆಯೂ ಮನೆಯಜಮಾನಿಯೂ ಪೂಜ್ಯಳೂ ಆದ ಲಕ್ಷ್ಮಮ್ಮನ

ಮರೆಯಿಂದ, ಆ ಮನೆ ಚಂದ್ರನಿಲ್ಲದ ಮೇಘಾವೃತ ರಾತ್ರಿಯಂತೆ ದುಃಖಾವೃತವಾಗಿದೆ. ಹೇಗೋ ಏನೋ--ಲಕ್ಷ್ಮಮ್ಮನ ಕಾರ್ಯವಿಭಾಗ ಗಳನ್ನು ಆದಷ್ಟು ಸುಂದರಿಯೇ ನಿರ್ವಹಿಸಿಕೊಳ್ಳಲಾರಂಭಿಸಿದ್ದಾಳೆ. ಹನ್ನೆರಡು ವರ್ಷದ ಬಾಲೆಯಾದ ಗೌರಿ ತಾಯಿಯ ವಿಯೋಗದಿಂದ--ಹಸುವನ್ನು ಅಗಲಿದ ಕರುವಿನಂತೆ ಕೃಶಳಾಗಿ ಕರುಣಾಜನಕವಾಗಿದ್ದಾಳೆ. ಬಾಡಿ ಬತ್ತಿಹೋಗಿರುವ ಕೃಷ್ಣನು ಈಗ ಮೆಲ್ಲನೆದ್ದು ತನ್ನ ಗುಮಾಸ್ತಿಯನ್ನು ಕೈಕೊಂಡು ಬಂಡಸಾಲೆಗೆ ಹೋಗಲಾರಂಭಿಸಿದ್ದಾನೆ. ಅತ್ತಿಗೆಯ ಮೇಲೆ ರೋಸಿಕೊಂಡು ಯಾವಾಗಾದರೊಮ್ಮೆ ಮನೆಗೆ ಬಂದು ಹೋಗುತ್ತಿದ್ದಾನೆ ಅಷ್ಟೆ. ಅಣ್ಣನೊಡನೆಯೂ ಅವನು ವಿಶೇಷವಾಗಿ ಮಾತಾಡುತಿದ್ದಿಲ್ಲ. ಹೆಚ್ಚಾಗಿ ಗೌರಿಯೊಡನೆ ಮಾತಾಡಿ ಹೋಗುತಿದ್ದನು.

ಮದುವೆಯಾಗುವುದಕ್ಕಿಂತ ಮೊದಲು ಕೃಷ್ಣನಿಗೆ ಅಣ್ಣನ ಮೇಲೆ ತುಂಬಾ ಪ್ರೀತಿ ಇತ್ತು. ಆದರೆ ಅತ್ತಿಗೆಯ ಆಗಮನದಿಂದ ಅವನ ಆ ಪ್ರೀತಿ ಬದಲಾವಣೆಯಾಗಲಾರಂಭಿಸಿತ್ತು. ತನ್ನ ಇಚ್ಛೆಯಿಲ್ಲದೆ, ತನಗೇನೂ ಹೊಂದಿಕೆ ಕೂಡಾ ಇಲ್ಲದೆ, ಮೋಸದಿಂದ ಕೂಡಿ, ಸಿಕ್ಕಿಸಲ್ಪಟ್ಟ ಆ ಹುಡುಗಿಯೆಂಬ ಹೆಂಗುಸನ್ನು ಅಣ್ಣನು ತ್ಯಜಿಸಿಬಿಡಬೇಕೆಂಬುದು ಅವನ ಖಂಡಿತವಾದ ಮತ. ಅವನ ದುರ್ಭೀಷಣವಾದ ಆಲೋಚನೆಗಳಿಗೆಲ್ಲ ಸಾಧುವೂ ಪಾಪಭೀರುವೂ ಆದ ಅಣ್ಣನು ಒಪ್ಪದೇ ಹೋದುದರಿಂದ ಅಣ್ಣನ ಮೇಲೆ ಅವನಿಗೆ ಕೋಪವುಂಟಾಯಿತು. ತರುಣನಾದರೂ ದೊಡ್ಡವರ ಆಲೋಚನೆಗಳೂ ವ್ಯಾವಹಾರಿಕಜ್ಞಾನ-ಚಾತುರ್ಯಗಳೂ ಅವನ ಮನಸ್ಸಿನಲ್ಲಿ ಓಡಾಡಲಾರಂಭಿಸಿದ್ದುವು. ಅಂತೆಯೇ ಅವನು ಅಣ್ಣನಿಗೆ ದುರಾಲೋಚನೆಗಳನ್ನು ಕೊಟ್ಟು ವಿಫಲನಾಗಿ ಕುಪಿತನಾಗಿದ್ದನು. "ಇನ್ನು ಅಣ್ಣನ ದಾರಿ ಬೇರೆ-ತನ್ನ ದಾರಿ ಬೇರೆ." ಎಂದು ಆ ಮುಂಗೋಪಿಯೂ ದುಡುಕುಗಾರನೂ ಆದ ಕೃಷ್ಣನು ಬಾಯಿಬಿಟ್ಟು ಹೇಳಲಿಕ್ಕೆ ಪ್ರಾರಂಭಿಸಿದುದೂ ಕೆಲವರ ಕಿವಿಗೆ ಬಿದ್ದಿತ್ತು. ಅಣ್ಣನೊಡನೆ ಕೆಲವು ಮಾತುಗಳನ್ನು ಖಂಡಿತವಾಗಿ ಹೇಳಿಬಿಡಬೇಕೆಂದೂ ಆಗ ತಾನೇ ಅಣ್ಣನು ಅತ್ತಿಗೆಯನ್ನು ತ್ಯಜಿಸಿದರೂ ತ್ಯಜಿಸಿಯಾನೆಂದೂ ಕಡೆಯ ಎಣಿಕೆಯನ್ನು ಹಾಕಿಕೊಂಡಿದ್ದನು. ಆದರೆ ಮನೆಗೆ ಬಂದು ಅಣ್ಣನ ಶಾಂತವಾದ

ಮುಖವನ್ನು ನೋಡುತ್ತಲೇ '' ಛೆ, ಈಗ ಬೇಡ, ತಾಯಿ ತೀರಿಹೋಗಿ ಇನ್ನೂ ತಿಂಗಳಾಗಿಲ್ಲ; ಅಷ್ಟರೊಳಗೆ ನಾನಾಗಿ ಜಗಳತೆಗೆಯಬಾರದು, ನೋಡೋಣ! ಅಣ್ಣನು ಹೊರಗಣಿಂದ ಮೂಢನ ಹಾಗಿದ್ದರೂ ಒಳಗೆ ಒಳ್ಳೇ ತಿಳಿವಳಿಕೆಯುಳ್ಳವನೇ ಸರಿ! ಉದ್ಯೋಗವಿಲ್ಲದೆ ಹೀಗೆ ಎಷ್ಟು ದಿನ ಸುಮ್ಮನೆ ಬರಿಮನೆಯಲ್ಲಿ ನಿಂತಾನು? ಅವನೇ ಮಾತು ಕೆದರಲಿ'' ಎಂದುಕೊಂಡು ಕಾಲವನ್ನು ಕಾಯುತಿರುವಾಗ—

'' ಕೃಷ್ಣ! ಏನಪ್ಪ? ಬಹಳ ಅರ್ಜಂಟಾಗಿ ಹೋಗಬೇಕೊ?" ಎಂದು ಶೀನು ತಮ್ಮನನ್ನು ಕದಲಿಸಿದನು.

ಸಾಯಂಕಾಲದ ಸಮಯವದು. ಸಂಜೆಯ ರಾಗವನ್ನು ತಳೆದ ಗದ್ದೆಯ ಹುಲ್ಲುಗಳನ್ನು ಗೌರಿಯೂ ಸುಂದರಿಯೂ ನೇರಿ ಕೊಯ್ಯುತಿದ್ದರು. ಮನೆಯಲ್ಲಿ ಆ ಬಂಧುದ್ವಯರ ಹೊರತು ಮತ್ತಾರೂ ಇರಲಿಲ್ಲ. ಕೃಷ್ಣನು ಈಗ ಹೊರಟುಹೋದರೆ ಮತ್ತೆ ನಾಳೆಯೋ ನಾಡಿದ್ದೋ ಬರುವನಷ್ಟೆ!

ಅಂಗಳವಿಳಿಯುತಿದ್ದ ಕೃಷ್ಣನು ಅಣ್ಣನ ಕರೆಯನ್ನು ಕೇಳಿ—"ಅರ್ಜಂಟೇನೂ ಇಲ್ಲ; ಹೋಗಬೇಕು-ಅಷ್ಟೆ. ಏಕೆ?" ಎಂದು ತಿರುಗಿ ನಿಂತು ಕೇಳಿದನು.

'' ಇವತ್ತು ಮನೆಯಲ್ಲೇ ಇರಬಾರದೇನೊ? ನಿಧಾನವಾಗಿ ಮಾತಾಡುವ.''

ಕೃಷ್ಣನು ಒಂದು ಕಾಲನ್ನು ಮೆಟ್ಟಿಲಿನ ಮೇಲೆಯೂ ಇನ್ನೊಂದು ಕಾಲನ್ನು ಅಂಗಳದಲ್ಲಿಯೂ ಇಟ್ಟುಕೊಂಡು—"ಅಂಥಾದ್ದೇನಿದೆ ಅಣ್ಣಾ, ಮಾತಾಡಲಿಕ್ಕೆ? ಹಾಗೇನಾದರೂ ಇದ್ದರೆ ಈಗಲೇ ಹೇಳಿಬಿಡು, ಹೋಗಬೇಕು ನಾನು."

'' ಆಗಲಿ, ಹೋಗುವಿಯಂತೆ; ಸ್ವಲ್ಪ ಹೊತ್ತು ಕೂತು ಕೇಳಿ ಹೋಗು.''

"ಅಷ್ಟು ಮುಖ್ಯ ಏನಣ್ಣಾ ಸಮಾಚಾರ?--" ಎಂದು ಎಳೆಯುತ್ತಾ, ಕೃಷ್ಣನು ಜಗುಲಿಯ ಮೇಲೇರಿ ಕೊಡೆಯನ್ನು ದಳಿಗೆ ಸಿಕ್ಕಿಸಿ, ಅಣ್ಣನ ಬದಿಯಲ್ಲಿ ಕುಳಿತನು.

"ಮುಖ್ಯವಾದದ್ದು-ವಿಶೇಷವಾದದ್ದೂಂತ ಹಾಗೇನೂ ಇಲ್ಲ. ಮಳೆಗಾಲ, ಇನ್ನು ಸ್ವಲ್ಪ ಹೊತ್ತಿಗೆಲ್ಲಾ ಮಳೆ ಪ್ರಾರಂಭವಾಗುವ ಹಾಗೆ ಕಾಣುತ್ತಾವುಂಟು. ರಾತ್ರಿಯ ಹೊತ್ತಿನಲ್ಲಿ ಬೇರೆ ಕಡೆಯಲ್ಲಿ ನೀನು—"

"ಅದೆಲ್ಲ ನನಗೆ ಗೊತ್ತುಂಟಣ್ಣ."

"ನನ್ನ ಮೇಲೆ ನಿನಗೆ ಇಷ್ಟು ಕೋಪವೇಕೆ ಕೃಷ್ಣಾ?"

"ಕೋಪ? ನಿನ್ನ ಮೇಲೆ ನನಗೆ ಏನೂ ಕೋಪವಿಲ್ಲಣ್ಣ."

"ಮತ್ತೆ ನಾನು ಕರೆದರೂ ಇರಲಿಕ್ಕೆ ಇಷ್ಟವಿಲ್ಲದವನ ಹಾಗೆ ಹೋಗುವಿಯಲ್ಲವ್ವಾ? ಮೊದಲು ನಿನಗೆ ನಾನೆಂದರೆ ತುಂಬಾ ಪ್ರೀತಿಯಿತ್ತು! ನನ್ನನ್ನು ಬಿಟ್ಟು ಉಣ್ಣಲಾರಿ, ನನ್ನನ್ನು ಬಿಟ್ಟು ತಿನ್ನಲಾರಿ, ನನ್ನನ್ನು ಬಿಟ್ಟು ಎಲ್ಲಿಗೂ ಹೋಗಲಾರಿ!—"

"ಹೌದು ನಿಜವೇ ಅಣ್ಣ. ನಾನೀಗ ತುಂಬಾ ವ್ಯತ್ಯಾಸವಾಗಿರುವೆನು ನಿಜ. ಆದರೆ ಅದು ನಿನ್ನ ಮೇಲೆ ಸಿಟ್ಟಿನಿಂದ, ಅಲ್ಲವೇ ಅಲ್ಲ!-"

"ಸರಿ, ಅದೂ ತಿಳಿಯಿತು! ನನ್ನ ಗ್ರಹಚಾರವಶಾತ್ ನನಗೆ ಗಂಟುಬಿದ್ದ ನಿನ್ನ ಅತ್ತಿಗೆಯನ್ನು ನೋಡಿದರೆ ನಿನಗೆ ಆಗುವುದಿಲ್ಲ?"

ಕೃಷ್ಣನು ಮೌನ.

"ಅದಕ್ಕಾಗಿ ಕೃಷ್ಣ!—ಈ ಬಗೆಯ ಸಿಟ್ಟು ತಾಪಗಳೆಲ್ಲ ಎಷ್ಟು ದಿನ ಹೇಳು?"

"ಅದೇ ನಾನೂ ಕೇಳೋದು-ಎಷ್ಟು ದಿನಾ ಅಂತ?"

"ಹಾಗೆಂದರೆ?"

"ಆ ಅತ್ತಿಗೇ ಎಂಬ ಸ್ವರೂಪವು ಇದ್ದಲ್ಲಿ ನಾನು ಇರಲಾರೆ!"

ಶೀನೂ ಮೌನ.

"ಅಣ್ಣ!-ನಾನು ನಿನಗೆ ಮೊದಲೇ ಹೇಳಿದೆ! ನಾನು ಹೇಳುವುದಕ್ಕಿಂತಲೂ ಮೊದಲೇ ನಿನಗೆ ಗೊತ್ತಾಗಬೇಕಿತ್ತು! ಮೊತ್ತಮೊದಲಿಗೆ ನೀನೇ ಹೋಗಿ ವಧುವನ್ನು ನೋಡಬೇಕಿತ್ತು. ಹೋಗಲಿ, ಮದುವೆಯ ಕಾಲದಲ್ಲಿಯಾದರೂ-ನೀನು ಧೈರ್ಯ ಮಾಡಿ "ಇದು ಮೋಸದ ಮದುವೆ! ಎಷ್ಟು ಮಾತ್ರಕ್ಕೂ ನಾನೊಪ್ಪಲಾರೆನು." ಎಂದು ಗರ್ಜಿಸಿ ಓಡಿಯೇ ಹೋಗಿ ಬಿಡಬೇಕಿತ್ತು-ಆಗುವುದಾಗಲೀಂತ! ಏನಾಗುತ್ತಿತ್ತು

ಸ್ವಲ್ಪ ಗಡಿಬಿಡಿಯಾಗಿ ಕಡೆಗೆ, ಮೋಸಗಾರತೇ ಮರ್ಯಾದೆ ಕಳೆದು ಕೊಂಡು ಹೋಗುತಿದ್ದರು! ಅದೂ ಹೋಗಲಿ; ಆ ಮೇಲೆಯೂ ನಾನು ಹೇಳಿದ ಯುಕ್ತಿ ಒಂದೂ ನಿನಗೆ ಸರಿಹೋಗಲಿಲ್ಲ. ಆದರೂ ಅಣ್ಣ! ಇನೂ ಹೇಳುತ್ತೇನೆ. ನನಗೆ ನೀನು ಒಬ್ಬನೇ ಅಣ್ಣ. ನೀನು ಒಳ್ಳೆಯ ಅನುರೂಪಿಣಿಯಾದ ಹೆಂಡತಿಯೊಂದಿಗೆ ಬಾಳುವ ಸೌಭಾಗ್ಯವನ್ನು ನೋಡಬೇಕೆಂದು ನಾನು ತುಂಬಾ ಆಶೆಯನ್ನು ಇಟ್ಟುಕೊಂಡಿದ್ದೇನೆ. ಅಣ್ಣಾ! ಪಾಪಕಾರ್ಯಗಳಿಗೆಲ್ಲಾ ಒಪ್ಪದೇ ಇರುವಷ್ಟು ನಿನ್ನ ಮನಸ್ಸು ಪುಣ್ಯಶೀಲವಾಗಿದ್ದರೆ, ಮೊದಲು ಈ ಘೋರ ಸ್ವರೂಪಿಣಿಯ ಬಾಯಿಗೆ ನ್ಯಾಯವಾಗಿ ಕೊಡುವ ತುತ್ತನ್ನು ಕೊಟ್ಟು ಮನೆಯಿಂದ ಹೊರಗೆ ಹಾಕು. ಆ ಮೇಲೆ ನೀನು ತಕ್ಕ ಕನ್ಯೆಯೊಡನೆ ವಿವಾಹ ಮಾಡಿಕೊ! ಮತ್ತೆಲ್ಲ ನಾನಿದ್ದೇನೆ ನೋಡು. ಒಂದು ವೇಳೆ ಇದು ನಮ್ಮ ಶಕ್ತಿಗೆ ಮೀರಿದ ಕಾರ್ಯ, ಎರಡೆರಡು ಹೆಂಡತಿಯರಿಗೆ ಹೊಟ್ಟೆಗೆ ಬಟ್ಟೆಗೆ ಕೊಡುವುದು ಸಾಮಾನ್ಯವೇ ಅಂತ ಕುಗ್ಗಬೇಡ ಅಣ್ಣ! ದೇವರ ಸಹಾಯವಿದ್ದರೆ ಎಲ್ಲ ಸರಿಯಾಗುತ್ತೆ."

ಶೀನು ಮುಗುಳುನಗುತ್ತ—"ಒಳ್ಳೆಯ ಆಲೋಚನೆ ಹೇಳಿದಿಯಪ್ಪ! ನನ್ನ ಮೇಲಿರುವ ನಿನ್ನ ಅಮಿತವಾದ ಪ್ರೀತಿಯೇ ಈ ರೀತಿಯಾಗಿ ನಿನ್ನಿಂದ ಮಾತಾಡಿಸಿತು. ಆದರೆ ಕೃಷ್ಣ! ತಾಯಿ ಕೂಡಾ ನನ್ನ ಮೇಲಣ ಅತಿಶಯವಾದ ಪ್ರೀತಿಯಿಂದಲೆ ನನಗೆ ಇಷ್ಟವಿಲ್ಲದಿದ್ದರೂ ಹಟಹಿಡಿದು ಮದುವೆ ಮಾಡಿಸಿದಳು. ನನಗೆ ಹೆಂಡತಿ ಕುರೂಪಿಯಾದಳಲ್ಲಾ ಎಂಬ ಚಿಂತೆಯೇ ಇಲ್ಲ ನೋಡು! ಇನ್ನು ಮೇಲೆ ಮದುವೆ-ಮದುವೆ ಎಂಬ ತೊಂದರೆಯೇ ಬಾರದಂತೆ ಶಾಸ್ತ್ರಕ್ಕೊಂದು ಮದುವೆಯಾಯಿತಲ್ಲಾ ಎಂದು-ತುಂಬ ಸಮಾಧಾನವೇ ಆಯಿತು ನನಗೆ! ಇನ್ನು ನನಗೆ ಮದು ವೆಯೂ ಬೇಡ, ಅದರ ಸುಖವೂ ಬೇಡ!"

"ಹಾಗಾದರೇನು? ಎಂದೆಂದಿಗೂ ಈ ಕುರೂಪಿ ಹೆಂಡತಿ ಯೊಂದಿಗೇ ಬಾಳುವೆ ಸಾಗಿಸುವಿಯೇನು?"

"ಅದೂ ಇಲ್ಲ!"

"ಮತ್ತೆ?"

" ಮತ್ತೇನು? ಸುಂದರಿ ಅವಳಷ್ಟಕ್ಕೆ ಇದ್ದುಕೊಳ್ಳಬೇಕು; ನಾನು ನನ್ನಷ್ಟಕ್ಕೆ ಇರುತ್ತೇನೆ. ಬೇಗದಲ್ಲಿ ನೀನು ನಿನಗೆ ಒಪ್ಪುವ ಒಂದು ಹುಡುಗಿಯೊಡನೆ ಮದುವೆಯಾಗಿ—"

"ಸರಿ ಸರಿ! ನಾನು ಮದುವೆ ಮಾಡಿಕೊಂಡು ಈ ವಿಕಾರಾಕಾರದ ಅತ್ತಿಗೆಯೊಂದಿಗೆ ಒಟ್ಟಿಗಿರಬೇಕೆ?"

" ಯಾಕಾಗದು ಕೃಷ್ಣಾ? ಮನೆಗೆಲಸಗಳನ್ನೆಲ್ಲಾ ನಿರ್ವಹಿಸಲಿಕ್ಕೆ ಒಂದು ಗಟ್ಟಿಯಾದ ಜನವಾಯಿತೋ ಇಲ್ಲವೋ?"

" ಚಂದಾಗಿ ಹೇಳಿದಿಯಣ್ಣಾ! ಆಹಾ! ಇಂತಾ ಪಿಶಾಚಿ ಸ್ವರೂಪವು ಇರುವ ಮನೆಗೆ ಯಾರು ತಾನೇ ಹುಡುಗಿಯನ್ನು ಕೊಟ್ಟಾರು? ಅದಂತೂ ಹಾಗಿರಲಿ; ಮುಖ್ಯ ನನಗೇ ಈಗ ಈ ಮನೆಯಲ್ಲಿರುವುದಕ್ಕೆ ರೋಸಿ ಕೊಂಡಲ್ಲವೇ ನಾನು ಮನೆಬಿಟ್ಟು ಹೋಗಿಬಿಡೋದು?"

" ಹೀಗೆ ರೋಸಿಕೆ ತಾಳಿದರೆ ಹೇಗವ್ವಾ? ಒಂದೇ ಹೊಟ್ಟೆಯಲ್ಲಿ ಹುಟ್ಟಿದ ಮೇಲೆ, ಒಬ್ಬರ ಸುಖ–ದುಃಖಗಳ ಪಾಲನ್ನು ಇನ್ನೊಬ್ಬರೂ ಕೊಂಚ ಹಂಚಿಕೊಳ್ಳುತ್ತ ನಡೆಯುವುದಲ್ಲವೇ ಒಗ್ಗಟ್ಟು ಅಂದರೆ?"

" ಅಣ್ಣಾ! ಈ ಬಗೆಯ ನ್ಯಾಯದ ಎಲ್ಲೆಯನ್ನು ಮೀರಿಹೋದ ಮಾತಿದು! ಅಣ್ಣಾ! ನೀನು ಹೇಗೂ ಹೆಂಡತಿಯೊಂದಿಗೆ ಬಾಳುವೆ ಮಾಡು ವುದಿಲ್ಲಾಂತ ಹೇಳುತ್ತಿ; ಬೇರೆ ಮದುವೆಯೂ ಬೇಡೆನ್ನುತ್ತಿ ಹೋಗಲಿ; ಈ ಸುಂದರಿಯನ್ನು ಮನೆಯಿಂದ ಏಕೆ ಹೊರಗೆ ಹಾಕಬಾರದು?"

" ಹೊರಗೆ ಅಂದರೆ?"

" ಅಂದರೆ?"

" ಅಂದರೆ—ಎಲ್ಲಿಗೆಂತ? ಅವಳ ಅಜ್ಜಿ ತೀರಿದಳು, ಮಾವ ವೈಜಾಡಿಸಿಕೊಂಡುಯಿತು;—ಇನ್ನೆಲ್ಲಿಗೆ ಹೊಗಿಸುವುದು?"

" ಆ ಸುಖ–ದುಃಖ ನಮಗೇಕಣ್ಣಾ? ಯಾರಿಲ್ಲದಿದ್ದರೆ ಅವರ ಅಪ್ಪನ ಮನೆಗಾದರೂ ಹೋಗಲಿ–ಇಲ್ಲದಿದ್ದರೆ ಪರರಚಾಕರಿ ಮಾಡಿಯೋ ಬೀಡಾರ ನೋಡಿಯೋ ಕಾಲಕಳೆಯುತ್ತೆ. ಅಥವಾ ಬಾವೀಗೆ ಬಿದ್ದು ಸಾಯಲಿ!"

" ಛೆ, ಇದೆಲ್ಲ ಒಂದು ಮಾತೇ ಕೃಷ್ಣ? ಹಾಗೆಲ್ಲಾ ಅನ್ಯಾಯ

ವಾದರೆ ಮುಂದೆ ನಾವೇ ಜವಾಬುದಾರರಾಗಬೇಕಾದೀತು! ಅವಳ ವಾರಸರನ್ನು ಇದಿರಿಗೆ ಬರಿಸಿ-ಪಂಚಾಯಿತಿ ಮಾಡಿಸಿ, ಇವಳನ್ನು ಅವರ ಸ್ವಾಧೀನತೆಗೆ ಒಪ್ಪಿಸಬೇಕು. ಅದಕ್ಕೆ ವಾರಸರು ತಾನಿದ್ದೇನೆಂದು'ಮುಂದೆ ಬರುವವನು ಬೇಕಲ್ಲ?"

"ಇವರ ಅಪ್ಪನೊಬ್ಬ ಎಲ್ಲಿಯೋ ಅಡಗಿದ್ದಾನಲ್ಲಾ ಮಾಯಾವಿ! ಅವನನ್ನೆ ಎಳೆಯುವುದು ಮುಂದೆ!"

"ಆ ಧನವಂತ ಆಸಾಮಿ.ಗೆ ತಕ್ಕ ಹಾಗೆ ನಾವೂ ಇದ್ದರೆ ಆದೀತು! ಇಲ್ಲದೆ ಅವನು ಸುಲಭದಲ್ಲಿ ಸಿಕ್ಕಿಬೀಳುವುನೆಂದು ತಿಳಿದಿಯಾ?"

"ಯಾರೂ ಕೇಳುವವರಿಲ್ಲಾಂದ ಮೇಲೆ-ಕಸಪರಿಕೆ ತಕ್ಕೊಂಡು ಓಡಿಸಿಬಿಟ್ಟರೆ ಏನಾಗುತ್ತೆ?"

"ಆಗ ಅಡಗಿದ್ದ ವಾರಸರೆಲ್ಲ ಅವಳನ್ನೆತ್ತಿ ನಮ್ಮನ್ನು ಒತ್ತಲು ಮುಂದೆ ಬರುತ್ತಾರೆ!"

ಕೃಷ್ಣನು ಗಂಭೀರ ಭಾವದಿಂದ ಮೌನವನ್ನು ತಾಳಿದನು

ಮತ್ತೆ ಶೀನೂ ಹೇಳಿದನು:—"ಅದಿರಲಿ ತಮ್ಮ, ಆ ವಿಷಯದಲ್ಲಿ ನಾನು ಅವಳೊಂದಿಗೆ ಮಾತಾಡಿ ನೋಡುತ್ತೇನೆ. ಈ ಮನೆಯನ್ನು ಬಿಟ್ಟು ಹೋಗಲಿಕ್ಕೆ ಅವಳ ಆಕ್ಷೇಪವೇನೂ ಇಲ್ಲದಿದ್ದರೆ ಒಳ್ಳೆಯದೇ ಆಯಿತಲ್ಲ? ಆದರೆ ಅನ್ಯಾಯವು ಮಾತ್ರ ನನ್ನ ಕೈಯಿಂದ ಜರುಗಲಾರದು. ಕೃಷ್ಣ, ನಾನು ಈಗ ನಿನ್ನನ್ನು ನಿಲ್ಲಿಸಿದ್ದು ಯಾಕೆಂದು ಕೇಳು: ನಾನು ಕೆಲಸ ಬಿಟ್ಟು ಬಂದು ಏಳು ತಿಂಗಳಾಯಿತು, ಇನ್ನೂ ಮನೆಯಲ್ಲಿ ಏನೂಂತ ಕೂತುಕೊಳ್ಳುವುದು? ಹಣವೂ ಬರಿದಾಯಿತು. ಆದುದರಿಂದ ಇನ್ನು ಸಂಪಾದನೆಗೆ ಹೊರಟು ಹೋಗಬೇಕೂಂತ ಮಾಡಿದ್ದೇನೆ. ಮನೆಯ ಹತ್ತಿರವೇ ಇದ್ದು ಎಲ್ಲವನ್ನೂ ನೋಡಿಕೊಳ್ಳುವ ಭಾರವು ನಿನ್ನ ಮೇಲೆಯೆ ಬಿದ್ದ ಹಾಗಾಗುತ್ತೆ—ನಿನಗೆ ಇಲ್ಲಿಯೇ ಕೆಲಸ ಸಿಕ್ಕಿಹೋದುದರಿಂದ."

"ಅದೇನಣ್ಣ? ನಿನಗೆ ಮಾತ್ರ ಈ ಮನೆಯ ಜವಾಬುದಾರಿಕೆಯಿಲ್ಲವೇನು?"

"ಇಲ್ಲದೆ ಉಂಟೆ? ನಿನಗಿಂತ ನನಗೇ ಹೆಚ್ಚಿನ ಜವಾಬುದಾರಿಕೆ

ಯೆಂಬುದನ್ನೂ ಬಲ್ಲೆ. ಆದರೆ ನೋಡು, ಪ್ರಾರಂಭದಿಂದಲೇ ನನಗೆ ಈ ಅಡುಗೆಯ ಕೆಲಸದ ದಾರಿ ಅಂಟಿಹೋಯಿತು. ಈ ಕೆಲಸದಿಂದ ಪರವೂರಿನಲ್ಲಿಯೇ ಒಳ್ಳೆಯ ಸಂಪಾದನೆಯಾಗುತ್ತದಲ್ಲದೆ, ನಮ್ಮ ಊರಿನಲ್ಲಿ ಏನೂ ಇಲ್ಲ. ಅದೂ ಹುಡುಕಿ ನೋಡಿಯಾಯಿತು. ಅಂತೆಯೇ ನಾನು ಮತ್ತೆ ಈಗ ಮೊದಲಿದ್ದ ಕಡೆಗೇ ಹೋಗಬೇಕಾಯಿತು. ನೀನಾದರೋ ಪ್ರಾರಂಭದಿಂದಲೂ ಊರಲ್ಲಿಯೇ ಇದ್ದು-ಎಲ್ಲಾ ವಿಷಯವನ್ನೂ ಬಲ್ಲವನು. ಅಂತೆಯೆ ಹೇಳಿದೆ."

"ಓಹೊ! ಒಳ್ಳೆಯದು. ಹಾಗಾದರೆ ಹೆಂಡತಿಯನ್ನು ಸಹಾ ಕರಕೊಂಡು ಹೋಗುವಿಯಷ್ಟೆ?"

"ಈಗ? ನಾನು? ಛೆಛೆ!"

"ಮತ್ತೆ?"

"ಹೋಗಿ-ಸಂಪಾದಿಸಿ-ಕೈಯಲ್ಲಿ ಕಾಸು ಕೂಡಿದ ಮೇಲಾಯಿತು ಆ ಮಾತು!"

"ಹಾಗಾದರೆ ಎಲ್ಲಾ ನನ್ನ ತಲೆ ಮೇಲೆ ಹಾಕಿ ಹಾರಿಹೋಗುವ ಆಲೋಚನೆ ನಿನ್ನದು! ಭೇಷ್!"

"ಹೀಗಂದರೆ ಹೇಗೆ ತಮ್ಮ?"

"ನೀನು ಮಾತ್ರ ಹೀಗೆ-ಇಷ್ಟು ದೊಡ್ಡ ನಿನ್ನ ಹೆಂಡತಿಯನ್ನು ಮನೆಯಲ್ಲಿ ಬಿಟ್ಟು, ನೆಮ್ಮದಿಯಾಗಿ ಹೋಗಿಬಿಡುವೆನೆಂದರೆ ಹೇಗೆ ಅಣ್ಣ!"

ಶೀನು ವಿಚಾರ ಗಾಂಭೀರ್ಯದಿಂದ ಮೌನಮುದ್ರೆಯನ್ನು ತಾಳಿದನು. ಕೃಷ್ಣನೂ ಹಾಗೆಯೆ ಕೋಪ--ಗಾಂಭೀರ್ಯ ಭಾವದಿಂದ ಬಿಮ್ಮಗಿದ್ದನು.

"ಹಾಗಾದರೆ ಹೇಗೆ ಮಾಡಬೇಕು?" ಎಂದು ಪ್ರಶ್ನೆಯನ್ನು ಕೇಳಿದನು ಶೀನು.

"ಹೇಗೆ ಮಾಡಬೇಕೋ ಹಿರಿಯನಾದ ನೀನೇ ಹೇಳಣ್ಣ!"

"ನನ್ನ ಹಿರಿಯತನಕ್ಕೆ ಬೆಂಕಿಬಿತ್ತು! ನಾನು ಮೂಢನಾಗಿ ಹೋಗಿದ್ದೇನೆ!"

"ಬಹಳ ಲೇಸೇ ಆಯಿತು!—ಆಯಿತು ಹಾಗಾದರೆ, ನಾನು ಹೇಳುವ ಕಡೆಯ ಉಪಾಯವನ್ನಾದರೂ ಕೇಳುವಿಯಾ?"

"ಏನದು?"

"ಇದನ್ನು ನಿನ್ನೊಡನೆ ಹೇಳಬೇಕೂಂತ ಬಹಳ ದಿವಸಗಳಿಂದ ಎಣಿಸಿ ಕೊಂಡಿದ್ದೆ."

"ಹೇಳು, ಕೇಳೋಣ?"

"ಬರೀ ಕೇಳಿದರೆ ಪ್ರಯೋಜನವಿಲ್ಲ!"

"ಹುಂ?"

"ಒಂದೋ ನೀನು ಹೆಂಡತಿಯನ್ನು ಕರಕೊಂಡೇ ಹೋಗಬೇಕು-"

"ಸಾಧ್ಯವಿಲ್ಲ!"

"ಹಾಗಾದರೆ ಅವಳನ್ನು ನೀನು ಮನೆಯಿಂದ ಹೊರಗೆ ಹಾಕಿ ಎಲ್ಲಿಗೆ ಬೇಕಾದರೂ ಹೋಗು!"

"ಅದೂ ಸಾಧ್ಯವಿಲ್ಲ!"

"ಹಾಗಾದರೆ ಇನ್ನು ಕಟ್ಟಕಡೆಯ ಉಪಾಯ! ಹೇಗೂ ಮುಂದೆ ಆಗುವಂತಾದ್ದು—ಈಗಲೇ ಆಗಿಹೋಗಲಿ!"

"ಏನು ಆಗಲಿ?"

"ಪಾಲು!"

"ಪಾಲು?"

"ಹುಂ. ಈಗಲೇ ಪಾಲು ಮಾಡಿಕೊಳ್ಳೋಣ. ಆ ಮೇಲೆ ನಿನ್ನ ಹಂಗು ನನಗಿಲ್ಲ, ನನ್ನ ಹಂಗು ನಿನಗಿಲ್ಲ! ಯೋಚಿಸಿ ನೋಡು ಅಣ್ಣ! ಹೀಗೆ ಮಾಡದೆ ನೀನು ಹೊರಟುಹೋಗಲು ಸಾಧ್ಯವೇ ಇಲ್ಲ!"

ಶೀನು ಯೋಚಿಸುತ್ತ—"ಪಾಲು ಮಾಡಿಕೊಂಡು ಅನುಭವಿಸು ವಷ್ಟು ಏನುಂಟಪ್ಪಾ? ತಕ್ಕಷ್ಟಾದರೂ ಇರುವ ಆಸ್ತಿಯೆ? ಮನೆಯೆ? ಮಾರೆ? ಇರುವುದೊಂದು ಚೂರು ಮಾತ್ರ."

"ಅದೇನೇ ಇರಲಿ ಅಣ್ಣ; ಚೂರೋ—ಚಾರೊ!—ಇದ್ದುದನ್ನೆ ಹಂಚಿಕೊಳ್ಳೋಣ.—"

ಕೃಷ್ಣನು ಒತ್ತೊತ್ತಿ ಹೇಳಿದ ಮಾತನ್ನು ಕೇಳಿ ಶೀನು ದೊಡ್ಡ

ಚಿಂತೆಗೆ ಒಳಗಾದನು. ಕೃಷ್ಣನು ಮತ್ತೊಮ್ಮೆ ಹಾಗೆಯೇ ಹೇಳಿ ಹೊರಟು ಹೋದನು. ಹೀಗೆ ಅಣ್ಣನ ಮೇಲೆ ಭಾರವನ್ನೆ ಹಾಕಿಬಿಟ್ಟರೆ ಆ ಹೆಂಡತಿಯ ಮಹಾಭಾರವನ್ನು ತಾಳಲಾರದೆ ಅವಳನ್ನು ಹೇಗಾದರೂ ತ್ಯಜಿಸಿ ಬಿಡುವನೆಂದು ಕೃಷ್ಣನು ತೆಗೆದ ಯುಕ್ತಿಯದು. ಅಲ್ಲದೆ ಅಣ್ಣನು 'ಹೇಗಾದರೂ ಹೋಗಲಿ' ಎಂಬ ಸ್ವಾರ್ಥಸುಖದ ಚಿಂತೆಯಿಂದೇನೂ ಅಲ್ಲ. ಇರಲಿ.

ಹೊತ್ತು ಮುಳುಗಿತು, ಕತ್ತಲೆಯಾಯಿತು. ಹುಲ್ಲಿಗೆ ಹೋದ ಹುಡುಗಿಯರು ಮನೆಗೆ ಬಂದು ದೀಪವನ್ನು ಬೆಳಗಿಸಿದರು. ಶೀನುವಿನ ಹೃದಯದೊಳಗೆ ಕವಿದ ದುಗುಡಗತ್ತಲೆಯಲ್ಲಿ ಮಂದವಾಗಿ ಬೆಳಗುತ್ತಿದ್ದ ಭವಿಷ್ಯತ್ಸೂಚಕವಾದ ಜೀವನಜ್ಯೋತಿ, ಸಹೋದರನ ವಾಗ್ಘಾತಜನ್ಯ ಚಿಂತಾವಾತದಿಂದ ಬಲವಾಗಿ ಕುಣಿದಾಡುತಿದ್ದಿತು.

---

## ೧೦. ಶೀನೂ-ಸುಂದರಿಯರು

ಅದೇ ದಿನ ಸುಮಾರು ಮಧ್ಯರಾತ್ರಿ. ಕೃಷ್ಣಪಕ್ಷವಾದುದರಿಂದ ಕಗ್ಗತ್ತಲೆ. ಒಂದು ದೊಡ್ಡ ಮಳೆ ಆಗಲೇ ಬಂದು ನಿಂತುಹೋಗಿತ್ತು. ಮಳೆಯ ನೀರು ಭೂಮಿಯ ಮೇಲೆ ಹರಿದೋಡುತಿರುವ ಶಬ್ದವೂ ವೃಕ್ಷಗಳಿಂದ ತೊಟ್ಟಿಕ್ಕುವ ನೀರಿನ ತಟಪಟ ಶಬ್ದವೂ ಹೊರತು ಮತ್ತಾವ ಶಬ್ದವೂ ಇಲ್ಲ. ಕೆರೆಗಟ್ಟ ಗ್ರಾಮದ ನಿವಾಸಿಗಳೆಲ್ಲರೂ ಚಳಿಯಿಂದ ಮುಸುಕು ಹಾಕಿಕೊಂಡು ಗಾಢವಾದ ನಿದ್ರೆಯಲ್ಲಿ ಪರವಶರಾಗಿ ಬಿದ್ದಿದ್ದರು ಶೀನುವಿನ ಮನೆಯಲ್ಲಿ ನಡುಕೋಣೆಯಲ್ಲಿ ಲಾಂದರವೊಂದು ಸಣ್ಣ ಜೀವಮಾತ್ರವಿರುವಂತಹ ದೀಪವನ್ನು ಹಿಡಿದಿಟ್ಟುಕೊಂಡು ಕುರು ಕುರು ಕಣ್ಣುಗೂರುವ ಹಾಗಿತ್ತು. ಅಲ್ಲೊಂದು ಬದಿಯಲ್ಲಿ ಹುಡುಗಿ ಗೌರಿ ಜಮಖಾನೆಯಲ್ಲಿ ಮಲಗಿದ್ದಳು. ಅವಳ ಹೊರಳುವಿಕೆಯಿಂದ ಜಮಖಾನೆಯ ಮೇಲೆ ಹಾಸಿದ್ದ ವಸ್ತ್ರಗಳು ಚಲ್ಲಾಪಿಲ್ಲಿಯಾಗಿ, ಅವಳ ದೇಹವು ಅರ್ಧ ಜಮಖಾನೆಯಲ್ಲಿಯೂ ಅರ್ಧ ನೆಲದಲ್ಲಿಯೂ ಚಾಚಿಕೊಂಡಿತ್ತು. ಹೊದ್ದ ವಸ್ತ್ರವು ಅರ್ಧ ಅವಳ ದೇಹವನ್ನು ಸುತ್ತಿಕೊಂಡು ಉಳಿದರ್ಧ

ನೆಲದಲ್ಲಿ ಹೊರಳಿತ್ತು. ಆ ಬಾಲೆ ಚಳಿಯ ಪರಿವೆಯಿಲ್ಲದೆ ಪ್ರಗಾಢವಾದ ನಿದ್ರೆಯಲ್ಲಿ ಮುಳುಗಿಹೋಗಿದ್ದಳು. ಅದೇ ಕೋಣೆಯ ಪಡುಭಾಗದಲ್ಲಿ ಚಾಪೆಯಲ್ಲಿ ವಸ್ತ್ರವನ್ನು ಹಾಸಿಕೊಂಡು ಮಲಗಿರುವ ಬೃಹದಾಕಾರದ ಸ್ತ್ರೀ ಮೂರ್ತಿಯೇ ಸುಂದರಿ. ಅವಳಿಗೆ ನಿದ್ದೆ ಬರಲಿಲ್ಲವೆಂದು ತೋರುತ್ತೆ. ಅವಳ ಮೂಗಿನಿಂದ ಉದ್ದವಾದೊಂದು ಉಸಿರು 'ಸೂ' ಎಂದು ಹೊರಟಿತು. ಅದರೊಂದಿಗೆ ಅವಳೂ ಎದ್ದು ಕುಳಿತಳು. ಸ್ವಲ್ಪ ಹೊತ್ತು ಯೋಚನೆ ಮಾಡಿದಳು. ಎದ್ದು ನಿಂತಳು. ಮಸಕಾದ ಬೆಳಕಿನಲ್ಲಿ ಕಣ್ಣಿಟ್ಟು ಗೌರಿಯ ನಿದ್ರಾವಸ್ಥೆಯನ್ನು ನೋಡಿ ಮನಗಂಡಳು. ಬಳಿಕ ಮೆಲ್ಲನೆ ಕಿಟಿಕಿಯ ಬಳಿಗೆ ಬಂದು, ಹೊರಗೆ ಇಣಿಕಿಹಾಕಿದಳು. ಹೊರಗೇನಿದೆ? ಕೇವಲ ಗಾಢಾಂಧಕಾರ. ಆ ಕಿಟಕಿಯ ಬುಡದಲ್ಲಿ ಹೊರಗಣ ಚಾವಡಿಯ ಕೋಣೆಯಲ್ಲಿ ನಮ್ಮ ಶೀನು ಮಲಗಿದ್ದನು. ಆದರೆ ಕತ್ತಲೆಯಲ್ಲಿ ಅವನು ದೃಷ್ಟಿಗೋಚರನಾಗಲಿಲ್ಲ ಸುಂದರಿ ಅಲ್ಲೊಂದು ನಿಟ್ಟುಸಿರು ಬಿಟ್ಟು ಹಿಂಜರಿದು ತುಸು ಹೊತ್ತು ಹಾಗೆಯೆ ನಿಂತಳು. ಮತ್ತೆ ಮೆಲ್ಲನೆ ಬಾಗಿಲ ಬಳಿಗೆ ಸರಿದಳು. ಬಾಗಿಲು ಸುಮ್ಮನೆ ಸರಿದಿತ್ತು ಮಾತ್ರ. ಅದನ್ನು ತೆರೆದರೆ ಕಾಲಿಡುವುದು ಚಾವಡಿಗೆ. ಚಾವಡಿಯಿಂದ ಶೀನು ಮಲಗಿದ್ದ ಕೋಣೆಗೆ ಬಾಗಿಲು ಇತ್ತು. ಸುಂದರಿ ಬಾಗಿಲು ತೆರೆಯಲು ಕೈಚಾಚಿದರೂ ತೆರೆಯುವಷ್ಟು ಸಾಹಸವು ಬಾರದೆ ಹೋಯಿತು. ಮತ್ತೆ ಹಿಂಜರಿದು ತನ್ನ ಚಾಪೆಯಲ್ಲೆ ಉಸ್ಸೆಂದು ಕುಳಿತಳು ಸುಮ್ಮನೆ ಮೇಲೆ ನೋಡಿದಳು. ಮತ್ತೆ ನಿಟ್ಟುಸಿರು ಬಿಟ್ಟಳು.

ಪಾಪ! ಅವಳಿಗೆ ಗಂಡನೊಬ್ಬನು ಸಿಕ್ಕಿಬಿದ್ದರೂ ಗಂಡನ ಸುಖವನ್ನು ಅವಳಿನ್ನೂ ಸವಿದಿರಲಿಲ್ಲ ಗಂಡನೊಡನೆ ಸರಸಲಾಪ ಅವಳಿನ್ನೂ ಮಾಡಿರಲಿಲ್ಲ. ಅವಳೇನು ಎಳೆ ಹುಡುಗಿಯೆ, ಕನ್ಯೆಯೆ—ಮುಂದೆ ಸವಿದೇನು ಎಂಬ ಕನಸು ಕಾಣಲಿಕ್ಕೆ? ಆ ಬಗೆಯ ಕನಸುಗಳನ್ನೆಲ್ಲ ಹಿಂದೆಯೆ ಕಂಡುಕೊಂಡಾಯಿತವಳು. ಹದಿಮೂರನೆಯ ವಯಸ್ಸಿಗೆಲ್ಲಾ ಅವಳು ದೊಡ್ಡವಳಾದರೂ—ಮದುವೆಯಾಗಬೇಕಾದರೆ ಹದಿನೇಳನೆಯ ವಯಸ್ಸಿನವರೆಗೆ ಕಾಯಬೇಕಾಯಿತು. ಆಗೆಲ್ಲಾ "ಹೇಗೂ ತನಗೆ ಮದುವೆಯಾಗುತ್ತೆ, ಆಗ ಹೀಗೆ ಹೀಗೆ ಸುಖಪಟ್ಟೇನು" ಎಂದು ಕನಸು

ಕಂಡಿದ್ದಳು. ಸಾಮಾನ್ಯವಾಗಿ ಹುಡುಗಿಯರ ಹತ್ತಿರ "ಏನಮ್ಮಾ–ನೀನು ಮದುವೆ ಮಾಡಿಕೊಳ್ಳುತ್ತೀಯಾ?" ಎಂದು ಕೇಳಿದರೆ, ಆ ಹುಡುಗಿಯರು–"ಇಲ್ಲ–ಅಬ್ಬೆ! ನನಗೆ ಮದುವೆ ಬೇಡ!" ಎಂಬ ಭಾವವನ್ನೆ ಸೂಚಿಸುತ್ತಾರಷ್ಟೆ? ಅದು ಲಜ್ಜೆಯಿಂದಲೇ ಆಗಿರಲಿ! ಆದರೆ ನಮ್ಮ ಸುಂದರಿ ಹಾಗಲ್ಲ; 'ಯಾವಾಗ ತನಗೆ ಮದುವೆಯಾದೀತೋ. ಯಾವಾಗ ತಾನು ಗಂಡನ ಅಂಕಶಾಯಿನಿಯಾದೇನೋ' ಎಂದು ತವಿಸಿಕೊಂಡೇ ಇದ್ದಳು ಅಂತೆಯೆ "ಏನೇ ಸುಂದರಮ್ಮ, ನಿನಗಿನ್ನೂ ಮದುವೆಯ ಯೋಗವು ಬರಲಿಲ್ಲವಲ್ಲೇ?" ಎಂದು ಯಾರಾದರೂ ಕೇಳಿದರೆ,—ಸುಂದರಿ ತನ್ನ ಗುಳ್ಳೀ ಗಂಟುಬ್ಬಿದ ಮೋರೆಯನ್ನು ಅಂಕುಡೊಂಕಾಗಿ ಕೊಂಕಿಸಿಕೊಳ್ಳುತ್ತ "ನಾನೇನು ಮಾಡಲಿ? ಅಪ್ಪನಂತೂ ನನ್ನ ಕುರೂಪೀಂತ ನೋಡವೆ ಬಿಸಾಡಿಬಿಟ್ಟ! ತಾಯಿಯೂ ಇಲ್ಲ! ಈ ಪರಮಾವನು ಯಾಕೆ ಮಾಡಿಯಾನು ನನ್ನ ಮದುವೆ? ನೋಡಲಿಕ್ಕೆ ಬರುವ ಗಂಡು ಗಂಡಂದಿರೆಲ್ಲ ನನ್ನನ್ನು ನೋಡಿದ ಕೂಡಲೆ ಹೋಗಿಬಿಡುತ್ತಾರೆ ಸುದ್ದಿಯಿಲ್ಲದೆ! ಹಾಗೇನಾಗಿದೆಯವ್ವ ನನಗೆ? ಎಲ್ಲಾ ಹುಡುಗೇರ ಹಾಗೆ ಕೈಬಾಯಿ–ಕಣ್ಣು–ಮೂಗು–ಕಿವಿ–ಕಾಲು ನನಗಿಲ್ಲವೇನು? ನನಗಿಂತ ಸಾವಿರ ಪಾಲು ವಿಕಾರವಾಗಿರುವ ಹೆಂಗುಸರಿಗೆ ಕೂಡಾ ಮದುವೆಯಾಗಿ ಮಕ್ಕಳಾಗ ಹ್ಯಾಗಿದ್ದಾರೆ ಸುಖವಾಗಿ! ನನಗೆ ಎಂದಿಗೋ ಆ ಭಾಗ್ಯ?" ಎಂದು ಬಾಯಿಬಿಟ್ಟು ಹೇಳಿ ದುಃಖಿಸುತ್ತಿದ್ದಳು. ತನಗೊಂದು ಮದುವೆಯಾಗಲೇ ಬೇಕೆಂಬ ಭಾವನನ್ನು ಅವಳು ನಿರ್ಲಜ್ಜ ಭಾವದಿಂದ ಸೂಚಿಸುತ್ತಿದ್ದಳು. ಆಶೆಯ ಹೃದಯದಿಂದ ತನಗೆ ಇಂತಹ ಗಂಡನು ದೊರೆತಾನು, ಇಂತಹ ರೀತಿಯಾಗಿ ತನ್ನೊಂದಿಗೆ ರಮಿಸಿಯಾನು, ತಾನು ಇಂತಿಂತಹ ರೀತಿಯಾಗಿ ಅವನೊಡನೆ ರಮಿಸುವೆನು–ಎಂದು ಏನೇನೊ ನಾನಾ ತರದ ಕಲ್ಪನೆಗಳ ಕನಸು ನೆನಸುಗಳನ್ನು ಕಂಡುಕೊಂಡಿದ್ದಳು. ಆ ಕನಸುಗಳು ನಿಜವಾದ ನನಸಾಗುವ ಲಕ್ಷಣಕ್ಕೆ ತಿರುಗಬೇಕಾದರೆ, ಅಂದರೆ ಒಂದು ಮದುವೆಯಾಗಬೇಕಾದರೆ ವರ್ಷಗಳ ಮೇಲೆ ವರ್ಷಗಳನ್ನು ಮಿಡುಕಿಕೊಂಡೇ ಕಳೆಯಬೇಕಾಯಿತು. ಹೆಂಗುಸರಿಗೆ ಕುರೂಪಿಗಳಾದರೂ ಯೌವನ ಕಾಲದಲ್ಲಿ ಸಾಮಾನ್ಯವಾಗಿ ಅದೊಂದು ಬಗೆಯ ಪುರುಷ

ವಶೀಕರವಾದ ಮೋಹಕತ್ವವು ಕಿಂಚಿತ್ತಾದರೂ ಬರುವುದುಂಟಷ್ಟೆ? ನಮ್ಮ ನಾಮಮಾತ್ರ ಸುಂದರಿಗೆ ಪಾಪ, ಹಾಗಿರಲಿಲ್ಲ! ಅವಳನ್ನು ನೋಡಿದ ಪುರುಷನಿಗೆ. ಇದು ಯಾವುದೋ ಶಿವಗಣ ಸಂಸಾರಸಂಬಂಧಿ ಯಾಗಿರಬೇಕೆಂಬ ಭಾವನೆ ಹುಟ್ಟಿ, ಭಯವೂ ವಿಸ್ಮಯವೂ ವಿಚಿತ್ರವೂ ಎನಿಸುತ್ತಿತ್ತು. ಈ ಹೆಂಗುಸಿನ ಮೂರ್ತಿಯನ್ನು ವಿಚಿತ್ರ ಜಂತುಪ್ರದರ್ಶ ನಾಲಯದಲ್ಲಿ ಇರಿಸಬಹುದೆಂದು ಕೆಲವರೂ, ಫಿಲಿಂ ಕಂಪೆನಿಯಲ್ಲಿ ಸೇರಿಸಿದರೆ ಕೊಳ್ಳೆಹಣ ಲಾಭವಾದೀತೆಂದು ಕೆಲವರೂ, ಮಾತಾಡಿ ಕೊಂಡಿದ್ದರು. ಇಂತೊಪ್ಪುವ ಆ ದಿವ್ಯ ಸುಂದರ ಕೃಷ್ಣಯುವತೀ ವಿಗ್ರಹಕ್ಕೆ ವಿವಾಹದ ಯೋಗವು ಬಹಳ ನಿಧಾನವಾಗಿ ಕೂಡಿತು. ವಿವಾಹವೇ ಆಗಲಿಕ್ಕಿಲ್ಲವೆಂದು ಬಹಳ ಮಂದಿ ಖಂಡಿತವಾಗಿ ಹೇಳಿಕೊಂಡಿದ್ದರೂ, ಬ್ರಹ್ಮನೊಬ್ಬನು ಗಂಡನನ್ನು ಸೃಷ್ಟಿಸದೆ ಬಿಡಲಿಲ್ಲವೆಂಬ ಗುಟ್ಟು ಆ ಪಾಮರರಿಗೇನು ಗೊತ್ತು? ಆ ಗಂಡನೆಂಬ ಪ್ರಾಣಿಯನ್ನು ಹುಡುಕಿ ಹಿಡಿವ ಪ್ರವೀಣರು ಬ್ರಹ್ಮನ ಬಾಂಧವರಂತಹ ನಮ್ಮ ರಾಮಾ ಜೋಯಿಸರು! ಶೀನುವಿನ ವರ್ಣನೆ ಆ ರಾಮಾ ಜೋಯಿಸರ ಬಾಯಿಂದ ಹೊರಟುದನ್ನು ಕೇಳಿ, ಮದುವೆ–ಮದುವೆ ಎಂದು ಬಾಯಿ ತೆರೆದುಕೊಂಡಿದ್ದ ಸುಂದರಿಗೆ ಪರಮಾನಂದವಾಯಿತು. ಲಕ್ಷಮ್ಮನು ಹುಡುಗಿಯನ್ನು ನೋಡಲಿಕ್ಕೆ ನಾರಾಯಣಯ್ಯನ ಮನೆಗೆ ಬಂದಾಗ, ಇವಳು ಬಾವಿಕಟ್ಟೆಯಲ್ಲಿದ್ದು ಗಿಡಗಳಿಗೆ ನೀರು ಸೇದಿ ಹಾಕುತ್ತಾ ಲಕ್ಷಮ್ಮನ ಬಳಿಗೆ ಬಂದು–ಅವಳು "ಹೆಸರೇನೆ"ಂದು ಕೇಳಿದಾಗ "ಸುಂದರಿ" ಎಂದು ಇವಳು ಉತ್ತರ ವಿತ್ತಲ್ಲಿಯವರೆಗಣ ಭಾಗವನ್ನು ನಾಟಕದ ನಟನೆಯಂತೆ, ಬಹಳ ಚಂದಾಗಿ ನಟನೆ ಮಾಡಿ ಯಶಸ್ವಿನಿಯಾಗಿ ಈಗ ಗಂಡನ ಮನೆಗೆ ಬಂದು ಸೇರಿ ಹೋಗಿದ್ದಾಳೆ

ಮದುವೆಗೆ ಮೊದಲು 'ಮದುವೆಯಾದರೆ ತೀರಿತು, ಸುಖಪಟ್ಟೇನು' ಎಂದು ಭಾವಿಸಿಕೊಂಡಿದ್ದಳು. ಮದುವೆಯಾದ ಮೇಲೆ ಈಗ–ಗಂಡನ ಮನಸ್ಸನ್ನು ಒಲಿಸುವುದು ಹೇಗೆ? ತಾನು ಮುಂದೆ ಕಂಡ ಕನಸುಗಳನ್ನು ನನಸನ್ನಾಗಿ ಮಾಡಿಕೊಳ್ಳುವುದು ಹೇಗೆ?—ಎಂಬ ಚಿಂತೆಗೆ ಪ್ರಾರಂಭ ವಾಗಿತ್ತು. "ಅನುಗಾಲವು ಚಿಂತೆ ಜೀವಕ್ಕೆ" ಎಂಬ ಪುರಂದರದಾಸರ

ವಚನವು ಸತ್ಯವಾಯಿತು. ಗಂಡನನ್ನು ಪ್ರಸನ್ನೀಕರಿಸಿಕೊಳ್ಳಬೇಕೆಂತಲೇ ಅತ್ತೆಗೆ ಸಂತೋಷವಾಗುವಂತೆ ವಿಧೇಯಳಾಗಿ ವರ್ತಿಸಲಾರಂಭಿಸಿದ್ದಳು. ಎಲ್ಲ ಕೆಲಸಗಳಲ್ಲಿಯೂ 'ನಾಮುಂದೆ-ನಾಮುಂದೆ' ಎಂದು ಉಮೇದು ತೋರಿಸಿದಳು. ಆದರೆ ಶೀನು ಅವಳಿಗೆ ಏನೂ ಶಹಭಾಸ್‌ಗಿರಿಯನ್ನು ಕೊಡಲಿಲ್ಲ. ಅವಳು ಶೀನುವಿನ ಸುತ್ತುಮುತ್ತೂ ಹೆಚ್ಚುಹೆಚ್ಚಾಗಿ ಸುಳಿದಾಡಿಕೊಂಡಿದ್ದಳು. ಶೀನುವಿಗೆ ಬಡಿಸುವುದೂ ಅವಳೆ; ಕಾಫಿ ತೆಗೆದುಕೊಂಡು ಬಂದು ಇಡುವುದೂ ಅವಳೆ; ಶೀನು ಬಟ್ಟೆ ಒಗೆಯುತ್ತಿದ್ದರೆ, "ಇರಲಿ ಬಿಡೀ, ನಾನು ಒಗೀತೇನೆ" ಎಂದು ಮಾತು ತೆಗೆಯುತ್ತಿದ್ದಳು. ಹಲವು ಸಂದರ್ಭಗಳಲ್ಲಿ ಬೇಕೆಂದು ಅವನೊಡನೆ ಮಾತಾಡುವ ಪ್ರಯತ್ನ ಮಾಡಿದ್ದಳು. ಆದರೆ ಶೀನು ಅವಳೊಡನೆ ಮಾತಾಡುತ್ತಲೂ ಇದ್ದಿಲ್ಲ, ಮೌನವಾಗಿಯೂ ಇದ್ದಿಲ್ಲ; ನೋಡಲೂ ಇಲ್ಲ, ನೋಡದೆಯೂ ಇರಲಿಲ್ಲ. ಅಗತ್ಯಬಿದ್ದರೆ ಮಾತಾಡುತ್ತಿದ್ದನು. ಕಣ್ಣಾಗಿ ಕಂಡರೆ ನೋಡುತಿದ್ದನು. ಅರ್ಥಾತ್ ಮಧ್ಯಮಾವಸ್ಥೆಯಲ್ಲಿ ನಡೆಯುತ್ತಿದ್ದನು. ಅವನಿಗೆ ಅವಳ ಮೇಲೆ ಎಳ್ಳಷ್ಟೂ ಪ್ರೇಮವಿಲ್ಲ, ರವೆಯಷ್ಟೂ ಆದರವಿಲ್ಲ;—ಇರುವ ಸಂಭವವೂ ಇಲ್ಲ. ಅವನ ಹೃದಯವೆಲ್ಲಾ ಕಲಾಮಯ, ಕಾವ್ಯಮಯ. ಕಲಾದೇವತೆಗೆ ಸಂಬಂಧಿಸಿದ ಯಾವುದಾದರೊಂದು ಗುಣವು ಅವಳಲ್ಲಿರುತ್ತಿದ್ದರೆ, ಅವಳ ಮೇಲೆ ಅವನಿಗೆ ಕಿಂಚಿತ್ತಾದರೂ ಪ್ರೇಮಾದರಗಳು ಹುಟ್ಟುತ್ತಿದ್ದುವೋ ಏನೊ! ಅದು ಯಾವುದೂ ಅವಳಲ್ಲಿರುವಂತೆ ಶೀನುವಿಗೆ ತೋರಲಿಲ್ಲ. ಅವಳಲ್ಲಿರುವುದೆಲ್ಲ ವಿಕೃತ ಕಳೆ, ವಿಕೃತ ಭಾವ, ವಿಕೃತ ಆಕಾರ. ಇದು ಶೀನುವಿಗೆ ಹೇಗೆ ಸೇರೀತು? ಅವನ ಆ ವಿರಕ್ತಭಾವವು ಆ ತುಂಬುಜವ್ವನೆಯ ವಿರಹೀ ಹೃದಯವನ್ನು ಕುದಿಸಲಾರಂಭಿಸಿತ್ತು. ಅವನ ಅಂತರನುರಕ್ತಿ ಅವಳಲ್ಲಿ ಅಂತಸ್ತಾಪವನ್ನು ಹುಟ್ಟಿಸಿತ್ತು.

ಮದುವೆಯಾದ ಮೇಲೆ ಲಕ್ಷಮ್ಮನು ಕಾಯಿಲೆಯಲ್ಲಿ ಬಿದ್ದುದರಿಂದ, ಆ ವಿಚಿತ್ರ ನವದಂಪತಿಗಳಿಗೆ ಶೋಭನ-ಪ್ರಸ್ತವಾವುದೂ ಜರುಗಲಿಲ್ಲ. ಜರುಗಿಸಬೇಕೆಂಬ ಉತ್ಸಾಹವಾದರೂ ಯಾರಿಗಿತ್ತು? ಅದು ಸುಂದರಿಗೆ ಮಾತ್ರವೇ ತುಂಬ ಇತ್ತು. ಆದರೆ ಅವಳೇನು ಮಾಡಿಯಾಳು? ಒಳಗೊಳಗೇ ವಿರಹವೇದನೆಯನ್ನು ಅನುಭವಿಸುತ್ತ, ಶೀನುವನ್ನು ಮದನ-

ಮೋಹನನಾಗಿ ಭಾವಿಸುತ್ತ, ಕಂಡಕಂಡ ಎಡೆಗಳಲ್ಲೆಲ್ಲ ಅವನನ್ನೆ ತೃಷ್ಣಾರ್ತದೃಷ್ಟಿಯಿಂದ ನೋಡುತ್ತ, ಆ ನೋಟಕ್ಕೆ ಆಕಸ್ಮಾತ್ ಅವನ ಕಣ್ಣೋಟವು ಸೇರಿದರೆ, ಸುಹಾಸವನ್ನು ಬೀರಿ, ಓರೆಬಾಯಿಯ ಕೊನೆಗಳನ್ನು ಕಿಸಿದು, ಲಜ್ಜೆಯಿಂದ ಮೋರೆಯನ್ನು ತಗ್ಗಿಸುತ್ತ, ಕಾಲನಿರೀಕ್ಷಣೆ ಮಾಡುತ್ತಿದ್ದಳು. ರಾತ್ರಿಯಿಡೀ ಅನುಭವಿಸುವ ಅವಳ ವಿರಹ ತಾಪವು ಅವಳಿಗೇ ಗೊತ್ತು! ಹೊರಡುವ ಸಿಡಿನಿಡಿದಾದ ಅವಳ ನಿಟ್ಟುಸಿರುಗಳ ಲೆಕ್ಕವು ದೇವರಿಗೇ ಗೊತ್ತು!

ಲಕ್ಷಮ್ಮನು ತೀರಿಹೋದ ಮೇಲೆ, ಆ ದುಃಖವು ದಿನ-ಕಾಲ ಪರಂಪರೆಯ ಪರದೆಗಳೊಳಗೆ ಮರೆಮರೆಯಾಗಿ ಹೋದಹಾಗೆ, ಅವಳ ವಿರಹ ಭಾವ ಪ್ರದರ್ಶನಕ್ಕೆ ಸ್ವಲ್ಪ ಹೆಚ್ಚಿನ ಸ್ವಾತಂತ್ರ್ಯವು ಸಿಕ್ಕಿದ ಹಾಗಾಯಿತು. ಸಿಕ್ಕದೇನು? ಕೃಷ್ಣನು ಹೊರಗಿನಿಂದ ಹೊರಗೇ ಹೋಗಲಾರಂಭಿಸಿದ ಮೇಲೆ, ಮನೆಯಲ್ಲಿ ಅವಳಾಯಿತು, ಅವಳ ಅವನಾಯಿತು! ಗೌರಿ ಬಾಲೆ-ಆಡುವ ಹುಡುಗಿ! ಆದುದರಿಂದ ಸುಂದರಿಗೆ ಸಹಜವಾಗಿ ಗಂಡನೊಡನೆ ಮಾತಾಡುವ ಪ್ರಸಂಗವು ಬರುತ್ತಿತ್ತು. ಆದರೆ ಶೀನು ಹೆಚ್ಚಾಗಿ ಗೌರಿಯ ಮುಖಾಂತರವಾಗಿಯೆ, ಅವಳಿಗೆ ಉತ್ತರವನ್ನು ಕೊಡಿಸುತ್ತಿದ್ದನು. ಇದೆಲ್ಲ ಅವಳಿಗೆ ಅಸಹನೀಯವಾಗಿತ್ತೆಂದು ಹೇಳಬೇಡವಷ್ಟೆ? ಅವಳು ಅವನೊಡನೆ ಏಕಾಂತ ಸಂಬಂಧವನ್ನು ಬಳೆಯಿಸಬೇಕೆಂದು—ಏಕಾಂತ ವಾಕ್ಯಗಳನ್ನು ಆಡಬೇಕೆಂದು ಪ್ರತಿನಿಮಿಷವೂ ಹೊಂಚುಹಾಕಿಕೊಂಡಿದ್ದಳು. ಅದಕ್ಕೆ ತಕ್ಕ ಸಂಧಿ ಇದುವರೆಗೂ ದೊರೆತಿರಲಿಲ್ಲ. ಅಂತಹ ಸಂಧಿಯೊಂದು ಉಂಟಾಗುವಂತೆ ಅವಳೊಂದು ಉಪಾಯವನ್ನು ಮಾಡಿದ್ದಳು.

ಬಹಿರಂಗದ ತಾಯಿ ತೀರಿ ಹೋಗಿ ಅಂತರಂಗದ ತಾಯಿಯಾಗಿ ಮಾರ್ಪಟ್ಟ ಮೇಲೆ, ಶೀನು ತನ್ನ ತಾಯಿಯ ಚಿತ್ರವನ್ನು ಕಾಗದದ ಮೇಲೆ ಚಿತ್ರಿಸಲಾರಂಭಿಸಿದ್ದನು. ಲಕ್ಷಮ್ಮನ ಭಾವಚಿತ್ರಗಳೇನೂ ಇದ್ದಿಲ್ಲ. ಶೀನು ತನ್ನ ಅಂತಸ್ಥದಲ್ಲಿ ಮೂಡಿದ್ದ ತಾಯಿಯ ಚಿತ್ರವನ್ನೆ ಧ್ಯಾನ-ಸ್ಮರಣ-ಶಕ್ತಿಯಿಂದ ಚಿತ್ರಿಸಲಾರಂಭಿಸಿದ್ದನು. ಎಂತಹ ಚಿಂತಾಸಂತೋಷಗಳ ಮಧ್ಯದಲ್ಲಿದ್ದರೂ ಅವುಗಳು ತಲೆಯಲ್ಲಿ ತುಂಬಿ ಭಾರ

ವಾಗುತ್ತಲೆ, ಅವುಗಳನ್ನು ಜರ್ರನೆ ಕೆಳಗಿಳಿಸಿಕೊಂಡು, ಯಾವುದಾದ ರೊಂದು ಕಲಾರಾಧನೆಗೆ ಪ್ರಾರಂಭಿಸಿ ಬಿಡುವುದು ಶೀನುವಿನ ಪ್ರಕೃತಿ. ಆದರಂತೆ ಮನೆಯಲ್ಲಿ ಸುಮ್ಮನೆ ಕುಳಿತು ಸಮಯವನ್ನು ಕಳೆಯಲಾರದೆ, ತಾಯಿಯ ಚಿತ್ರವನ್ನು ಚಿತ್ರಿಸಿಕೊಳ್ಳಬೇಕೆಂಬ ಸ್ಫೂರ್ತಿ ಅವನಿಗೆ ಹುಟ್ಟಿತು. ಎರಡು ದಿನಗಳಿಂದ ಬರೆಯಲಾರಂಭಿಸಿದ್ದನು. ಬೆಳಗ್ಗೆ ಎಂಟು ಗಂಟೆಯ ಸುಮಾರಿಗೆ ಅವನು ಆ ಕೆಲಸಕ್ಕೆ ಕುಳಿತುಬಿಡುವುದನ್ನು ಸುಂದರಿ ನೋಡಿದ್ದಳು. ಆ ಚಿತ್ರವು ನಿನ್ನೆಗೆ ಅರ್ಧ-ಮುರ್ಧವಾಗಿತ್ತು ಸುಂದರಿ ಶೀನುವನ್ನು ತನ್ನ ಕೈಬಲೆಯೊಳಗೆ ಸಿಕ್ಕಿಸುವ ಉದ್ದೇಶದಿಂದ, ನಿನ್ನೆ ಆ ಪಟವನ್ನು ಅವನಿಟ್ಟ ಸ್ಥಳದಿಂದ ಅಪಹರಿಸಿ ಎಲ್ಲಿಯೋ ಅಡಗಿಸಿ ಟ್ಟಿದ್ದಳು. ಶೀನು ಬೆಳಗ್ಗೆ ಆ ಚಿತ್ರದಕಾಗದವನ್ನು ಹುಡುಕುತ್ತಾ ತನ್ನೊಡನೆ ವಿಚಾರಿಸುವನೆಂದೂ—ಆಗ ಬಾಲೆ ಗೌರಿ ರಂಜೆಯ ಹೂವನ್ನು ಹೆಕ್ಕಲಿಕ್ಕಾಗಿ ಹೊರಟು ಹೋಗುವ ಸಮಯವಾದುದರಿಂದ, ಗಂಡನೊಡನೆ ಇಷ್ಟಾನುಸಾರವಾಗಿ ಮಾತಾಡಬಹುದೆಂದೂ ಬಗೆದು ಅವಳು ಆ ಚೇಷ್ಟೆಯ ಯುಕ್ತಿಯನ್ನು ತೆಗೆದಿದ್ದಳು. ಆದರೆ ಬೆಳಗ್ಗೆ ಶೀನು ಆ ಪಟದ ಗೊಡವೆಗೇ ಹೋಗದೆ, ಕ್ಷೌರಮಾಡಿಕೊಳ್ಳಲಿಕ್ಕೆ ಹೋದನು. ಮತ್ತೆ ಆ ದಿನವಿಡೀ ಆ ಚಿತ್ರದ ಕಡೆಗೆ ಅವನ ಗಮನ ಹೋಗಲಿಲ್ಲ. ಸಾಯಂಕಾಲವಾಯಿತು, ರಾತ್ರಿಯಾಯಿತು ಮಧ್ಯರಾತ್ರಿಯೂ ಆಯಿತು. ಈ ಸಮಯದಲ್ಲಿ ಸುಂದರಿಯ ಅವಸ್ಥೆಯನ್ನು ಕುರಿತು ಆಗಲೇ ಹೇಳಲಾರಂಭಿಸಿದ್ದೇವೆ.

ಅವಳು ನಿಟ್ಟುಸಿರಿನ ಮೇಲೆ ನಿಟ್ಟುಸಿರನ್ನು ಬಿಟ್ಟು ಚಾಪೆಯಲ್ಲಿ ಬಿದ್ದುಕೊಂಡಳು. ಸ್ವಲ್ಪ ಹೊತ್ತಿನಲ್ಲಿ ಹೊರಗಿನ ಕೋಣೆಯಲ್ಲಿ "ಭುರ್" ಎಂದು ಬೆಂಕಿಕಡ್ಡಿ ಗೀಚಿದ ಶಬ್ದವೂ ಪ್ರಕಾಶವೂ ಆಯಿತು. ಸುಂದರಿ ಧಡಕ್ಕನೆ ಎದ್ದು ಕುಳಿತಳು. ಕೋಣೆಯಲ್ಲಿ ಶೀನು ಲಾಂದರವನ್ನು ಹಚ್ಚಿದನೆಂದು ಗೊತ್ತಾಯಿತು. ಈ ಅಪರ ರಾತ್ರಿಯಲ್ಲಿ ಅವನು ಲಾಂದರವನ್ನು ಹಚ್ಚಿಕೊಂಡು ಮಾಡುವುದೇನೊ! ನಿದ್ದೆ ಬರಲಿಲ್ಲವೇ ಅವನಿಗೆ? ಹೇಗೆ ಬಂದೀತು? ಗತಸಾಯಂಕಾಲದಲ್ಲಿಯೇ ಕೃಷ್ಣನಿಗೂ ಅವನಿಗೂ ಮುಖ್ಯವಾದ ಸಂಭಾಷಣೆ ನಡೆದಿತ್ತು. ಕೃಷ್ಣನು ಅವನ ಮನಸ್ಸು ನೋಯು

ವಂತೆ ಮಾತಾಡಿದ್ದನು. ಪಾಲು ಮಾಡಿಕೊಳ್ಳಬೇಕೆಂದು ಕೃಷ್ಣನು ಹಟ ಹಿಡಿದಿದ್ದನು. ಪಾಲು ಮಾಡಿಕೊಂಡ ಮೇಲೆ ಸುಂದರಿಯ ಭಾರವೆಲ್ಲ ಶೀನುವಿನ ತಲೆಯ ಮೇಲೆಯೇ ಒಮ್ಮೆಲೆ ಬೀಳುತ್ತೆ. ಪರಊರಿನಲ್ಲಿ–ಪರ ಚಾಕರಿ ಮಾಡಿ ಹೊಟ್ಟೆ ತುಂಬಿಕೊಳ್ಳಬೇಕಾದ ಆತನು ಈ ವಿಕಾರವಾದ ಹೆಂಡತಿಯ ಭಾರವನ್ನು ಹೊರುವ ಬಗೆ ಹೇಗೆ? ಮದುವೆಯೇ ಬೇಡ ವೆಂದಿದ್ದ ತಾನು ಈ ಮದುವೆಗೆ ಏಕೆ ಒಪ್ಪಿಗೆ ಕೊಟ್ಟೆನು? ತಾಯಿಯ ಸಂತೃಪ್ತಿಗಾಗಿ ಒಪ್ಪಬೇಕಾಯಿತು! ಆದರೆ ಈಗ ನೋಡಿದರೆ, ತಾಯಿಯ ಮನಸ್ಸು ಮುರಿದಿದ್ದರೂ ಚಿಂತೆಯಿದ್ದಿಲ್ಲ, ಮದುವೆಗೆ ಒಪ್ಪಲೇಬಾರ ದಿತ್ತು–ಎನಿಸುತ್ತೆ. ಒಪ್ಪಿದರೂ ತಾನೇ ಖುದ್ದು ಹೋಗಿ ಹುಡುಗಿಯ ನ್ನೊಮ್ಮೆ ನೋಡಬೇಕಿತ್ತು. ನಿಜ. ಆದರೆ, ಹಾಗೆ ಮಾಡಲಿಕ್ಕೆ ತಾಯಿಯ ಮೇಲೆ ಅವಿಶ್ವಾಸವಿದ್ದರೆ ತಾನೆ? ತಾಯಿಯಾದರೂ ಈ ನವತರುಣಿ ಯನ್ನು ಬೇಕೆಂದು ನೋಡಿ ಒಪ್ಪಿ ಮಾಡಿದುದೂ ಅಲ್ಲವಲ್ಲಾ! ಹಾಗಾ ದರೆ ತಪ್ಪು ಯಾರದು? ನಾರಾಯಣಯ್ಯ--ರಾಮಾ ಜೋಯಿಸ--ಎಂಬ ವಂಚಕ ಶಿರೋಮಣಿಗಳದು! ಆಹಾ! ಅವರಿಗೆ ಏನು ಶಾಸನ ಮಾಡ ಬಹುದು? ತಮ್ಮನು ಹೇಳುವಂತೆ ಮದುವೆಯ ಏತತ್ಸಮಯದಲ್ಲೆ ನಿರಾ ಕರಿಸಿ ಓಡಿಹೋಗಬೇಕಿತ್ತು. ಆದರೆ ಆಗ ತಕ್ಕಷ್ಟು ವ್ಯವಧಾನವೂ- ಧೈರ್ಯವೂ ಇಲ್ಲದೆ ಮೋಸವಾಗಿ ಹೋಯಿತು! ಅಯ್ಯೊ! ಆ ಕೆಟ್ಟ ಸ್ಥಿತಿಯಲ್ಲಿಯೇ ಮದುವೆಯ ಶಾಸ್ತ್ರಗಳನ್ನು ಮುಗಿಸಿಬಿಟ್ಟರು ದುರುಳರು.

ಅನ್ಯಾಯದಲ್ಲಿ ನ್ಯಾಯವನ್ನು ತಂದಿಟ್ಟರು ಆ ಚಾಂಡಾಲರು! ಅಯ್ಯೋ! ಅದೃಷ್ಟವೆ! ಗಂಟುಬಿದ್ದ ಸ್ತ್ರೀಯಾದರೂ ಸಾಧಾರಣ ಸ್ತ್ರೀಯಂತಿದ್ದರೆ, ಕಟ್ಟಿಕೊಂಡ ಕರ್ಮಕ್ಕೆ ಹೇಗಾದರೂ ಮನಸ್ಸಮಾಧಾನ ಮಾಡಿಕೊಂಡು ಸಂಸಾರಸಾಗಿಸಿಕೊಂಡಿರಬಹುದಿತ್ತು. ಕೊಂಚ ವಾದರೂ ಕಲಾಗುಣದವಳೇನಾದರೂ ಗಂಟುಬೀಳಬಾರದಿತ್ತೆ? ಆಗ ದುರದೃಷ್ಟದಲ್ಲೇ ಅದೃಷ್ಟವೆಂದು ಹಿಗ್ಗಿಕೊಳ್ಳಬಹುದಿತ್ತು. ಇದಾದರೋ ಕೇವಲ ದುರದೃಷ್ಟದ ಮೂಟೆಯೇ ಆಯಿತು! ಹೇಗಪ್ಪಾ ಇದರ ನಿವಾ ರಣೆ!–-ಎಂಬಿವೇ ಮೊದಲಾದ ಉತ್ತರಗಾಣದ ಯೋಚನೆಗಳಿಂದ ಶೀನು ವಿನ ತಲೆ ಭ್ರಮಣ ಮಾಡುತಿರುವಾಗ-ನಿದ್ದೆ ಹೇಗೆ ಬಂದೀತು? ತಾಯಿಯ

ಚರಮಾಲಾಪವು ಅವನ ಕಿವಿಗೆ ಕೇಳಿಸಲಾರಂಭವಾಯಿತು. ‘ಸ್ವಸ್ಥವಾಗಿ ಕವೀಕಟ್ಟಿಕೊಂಡು ಹಕ್ಕೀ ಹಾಗೆ ನಾನು ಸಂತೋಷವಾಗಿರಬೇಕೆಂಬುದೇ ತಾಯಿಯ ಕೋರಿಕೆ! ಅಲ್ಲದೆ ಇಂತಹ ಕುರೂಪ ಸುಂದರಿಯೊಂದಿಗೆ ಬಾಳುವೆ ಮಾಡಿಕೊಂಡಿರಬೇಕೆಂದು ಲಕ್ಷ್ಮಮ್ಮನು ಕೋರಿರಲಿಲ್ಲ. ಆದುದರಿಂದ ಹೆಂಡತಿಯನ್ನು ತ್ಯಜಿಸಿಬಿಟ್ಟರೂ ನಾನು ದೋಷಿಯಾಗಲಾರೆನು. ಆದರೆ ಹೇಗೆ ತ್ಯಜಿಸಬೇಕು? ಎಲ್ಲಿಗೆ ತ್ಯಜಿಸಬೇಕು? ಆ ಜವ್ವನೆಯಾದರೋ ಅತಿಯಾದ ಕಾಮತೃಷ್ಣಾಲಾಲಸವಾದ ಅನಿಮಿಷ ನೇತ್ರದಿಂದ ನನ್ನನ್ನು ನೋಡುತಿದ್ದಾಳೆ! ಹಾ! ಧರ್ಮಸಂಕಟದಲ್ಲಿ ಸಿಕ್ಕಿಬಿದ್ದೆನಲ್ಲಾ! ಏನು ಮಾಡಲಿ?—’’

ಯೋಚಿಸಿ ಯೋಚಿಸಿ ಸಾಕಾಗಿ ಹೋಯಿತು. ನಿದ್ದೆಯೋ ಬರಲೇ ಒಲ್ಲದು; ಕಣ್ಣೋ ಪಿಳಿಪಿಳಿ ಇಷ್ಟು ದೊಡ್ಡದಾಗಿ ತೆರೆದುಕೊಂಡಿದೆ; ಯೋಚನೆಗೋ ಅಂತ್ಯವೇ ಕಾಣುವುದಿಲ್ಲ; ಕೂಡಲೇ ಅವನ ಪ್ರಕೃತಿ ಸ್ವಭಾವವು ಜಾಗ್ರತವಾಯಿತು; ಈ ಅನಂತವಾದ ಯೋಚನೆಗಳನ್ನು ಸ್ವಲ್ಪ ಹೊತ್ತು ಮರೆತು ಆ ಮೇಲೆ ಯೋಚಿಸೋಣವೆಂದು ಮನಸ್ಸನ್ನು ಬುದ್ಧಿಯ ಅಧೀನಕ್ಕೆ ತಂದುಕೊಂಡು ಯೋಚನೆಯನ್ನು ಚಿತ್ರಕಲೆಯ ಕಡೆಗೆ ತಿರುಗಿಸಿಕೊಂಡನು. ಚಿತ್ರಿಸಲಾರಂಭಿಸಿದ್ದ ತಾಯಿಯ ಚಿತ್ರವು ಕೂಡಲೇ ನೆನಪಿಗೆ ಬಂತು. ಹಗಲಿನಲ್ಲಿ ಆ ಚಿತ್ರವನ್ನು ಮುಟ್ಟಿರಲಿಲ್ಲ. ಕಣ್ಣು ಹೇಗೂ ಸಿಚ್ಚಳವಾಗಿದೆ. ದೀಪದ ಬೆಳಕಿನಲ್ಲಿ ಆ ಚಿತ್ರವನ್ನು ಕೊಂಚ ತೀಡುತ್ತಾ, ಪೂಜ್ಯಳಾದ ಮಾತೆಯ ಸೇವೆಯನ್ನಾದರೂ ಮಾಡೋಣವೆಂದು ಭಾವಿಸಿ, ಬೆಂಕಿಪೆಟ್ಟಿಗೆಯನ್ನು ಗೀಚಿ ಲಾಂದರವನ್ನು ಬೆಳಗಿಸಿದನು. ಬಳಿಕ ಟ್ರಂಕುಪೆಟ್ಟಿಗೆಯನ್ನು ತೆರೆದನು. ಮೇಲೆಯೇ ಇಟ್ಟಿದ್ದ ಆ ಚಿತ್ರದ ಕಾಗದವು ಇರಲಿಲ್ಲ. ಅಲ್ಲಿ ಇಲ್ಲಿ ಬೆಳಕನ್ನು ಹರಡಿಸುತ್ತ ಹುಡುಕಲಾರಂಭಿಸಿದನು.

## ೧೧. "ಇತಿ ನಿನ್ನ ನಿರ್ಭಾಗ್ಯ ಅಣ್ಣ"

ಆ ಬಗೆಯ ಸುಸಂಧಿ ಇಂತಹ ಒಳ್ಳೆಯ ಸಮಯದಲ್ಲಿ ದೊರೆತೀತೆಂದು ಸುಂದರಿ ಭಾವಿಸಿಯೇ ಇರಲಿಲ್ಲ. ಕಿಟಕಿಯಿಂದ ಶೀನುವಿನ ಹುಡುಕಾಟವನ್ನು ನೋಡಿ ಹಿರಿಹಿರಿ ಹಿಗ್ಗಿದಳು. ಬಳಿಕ ಬೆಕ್ಕಿನ ಹೆಜ್ಜೆಯಿಂದ ಅಡಿಗೆಯ ಮನೆಗೆ ನುಸುಳಿದಳು ಕತ್ತಲೆಯಲ್ಲಿ ಎಲ್ಲಿಯೋ ಪರಡಿ, ಏನನ್ನೋ ಕೈಗೆತ್ತಿಕೊಂಡು, ಮೆಲ್ಲನೆ ಹೊರಗೋಣೆಯ ಬಾಗಿಲನ್ನು ತೆರೆದು ಚಾವಡಿಗೆ ಇಳಿದು ಶೀನುವಿನ ಕೋಣೆಯನ್ನು ಹೊಕ್ಕಳು. ಹಾಗೆಯೇ ಬಾಗಿಲನ್ನೂ ಇಕ್ಕಿಕೊಂಡಳು. ಆಗ ಸ್ವಲ್ಪ ಬಾಗಿಲು ಸದ್ದಾಗಲು ಶೀನು—"ಯಾರು—ಗೌರಿ?" ಎಂದು ಲಾಂದರವನ್ನೆತ್ತಿಕೊಂಡು ತಿರುಗಿ ನೋಡಿ—ಪೂತನಿಯಂತಹ ಸುಂದರಿಯನ್ನು ನೋಡಿ "ಓ:! ನೀನು?" ಎಂದು ಮೋರೆಯನ್ನು ಆ ಕಡೆಗೆ ತಿರುಗಿಸಿಕೊಂಡನು.

ಅವಳು ಅವನ ತೀರ ಬಳಿಗೆ ಬಂದು ನಿಂತು—"ನಾನಾದರೇನು? ನನ್ನ ಮುಖಾ ಕೂಡಾ ನೋಡಬಾರದೆ?" ಎಂದಳು ಸಣ್ಣದನಿಯಿಂದ-ನಗುವಿನ ಕಿರುದೆರೆಯೊಂದಿಗೆ.

ಶೀನು ಲಾಂದರವನ್ನು ಪೆಟ್ಟಿಗೆಯ ಮೇಲಿಟ್ಟು—"ನೀನು ಯಾಕೆ ಬಂದಿ?" ಎಂದನು ಅವಳನ್ನು ನೋಡದೆಯೆ.

"ಯಾಕೆ ಅಂದರೆ—ನಿಮ್ಮ—ನಾನು—ಅಲ್ಲಾ—ಏನೋ—ನೀವು ಹುಡುಕುವಹಾಗೆ ಇತ್ತೂಂತ-ನಾನು-ನಿದ್ದೆ-ಇಲ್ಲಾ-ಎಚ್ಚರಿಕೆಯಲ್ಲಿ ಗೊತ್ತಾಯ್ತು! ಅದಕ್ಕೆ ನಾನು—ನಾನು—" ಎಂದು ಏನು ಮಾತಾಡಬೇಕೆಂದು ತಿಳಿಯದೆ ಸುಂದರಿಯ ನಾಲಿಗೆ ತಡವರಿಸಿಕೊಂಡಿತು. ಎದೆ ಗಡಗಡನೆ ಹೊಡೆದುಕೊಳ್ಳುತ್ತಿತ್ತು.

"ಆಯಿತಾಯಿತು. ಏನೂ ಇಲ್ಲ—ಹೋಗಿ ಮಲಗು!"

"ಅಲ್ಲಾ! ನೀವು ಏನೋ ಹುಡುಕುತ್ತೀರಿ, ಏನೂಂತ ಹೇಳಬಾರದಾ?"

"ಅದೆಲ್ಲ ನಿನಗೇಕೆ? ನೀನು ಹೋಗಿ ಮಲಗು!"

"ಅದೇನು ನಾನು ಇಲ್ಲಿರೋದು ನಿಮಗೆ ಅಷ್ಟು ಕಷ್ಟಾಗುತ್ತೊ?"

ಮಾತಿನ ಪ್ರಾರಂಭದ ವರೆಗೆ ಮಾತ್ರವೇ ಅಧೈರ್ಯದ ಬಲ, ಆ ಮೇಲೆ ಧೈರ್ಯವುಂಟಾಗುತ್ತದೆ ಅಂತೆಯೆ ಸುಂದರಿಗೆ ಸ್ವಲ್ಪ ಧೈರ್ಯವು ಬರಲಾರಂಭಿಸಿತ್ತು. ಅವಳ ಮಾತಿಗೆ ಪ್ರತ್ಯುತ್ತರವನ್ನೀಯದೆ, ಬಗ್ಗಿ ಹುಡುಕುವವನಂತಿದ್ದನು ಶೀನು.

“ ಅಲ್ಲಾ, ನೀವು ಹುಡುಕುವುದೇನೂಂತ ನನ್ನ ಕೇಳಿದರೆ ಗೊತ್ತಾದೀತು! ಎಂದು ಸುಂದರಿ ಮುಗುಳುನಗುತ್ತಾ ಹೇಳಿದಳು.

“ ನಿನಗೇನು ಗೊತ್ತು ?” ಎನ್ನುತ್ತಾ ಶೀನು ಅವಳ ಮುಖವನ್ನು ನೋಡಿದನು.

“ ನನಗೆ ಗೊತ್ತುಂಟು. ಇಗೊಳ್ಳಿ ! ಇದೇ ಅಲ್ಲವೋ ನೀವು ಹುಡುಕೋದು ?” ಎಂದು ಸುಂದರಿ ಹಿಂದೆ ಅಡಗಿಸಿ ಹಿಡಿದುಕೊಂಡಿದ್ದ ಚಿತ್ರದ ಕಾಗದವನ್ನು ಮುಂದೆ ನೀಡಿದಳು.

“ ಅಯ್ಯೊ ! ಹಾಳುಮಾಡಿದಿ!” ಎಂದು ಉದ್ಗರಿಸಿ ಶೀನು ಅವಳ ಕೈಯಿಂದ ಆ ಕಾಗದವನ್ನು ಕಸಿದುಕೊಂಡನು. ಮಡಚದೆ ಇಟ್ಟಿದ್ದ ಆ ಕಾಗದವನ್ನು ನಾಲ್ಕೈದು ಮಡಕೆಯಾಗಿ ಮಡಿಸಿ ಹಿಡಿದಿದ್ದಳು. ಪಟದ ಮೇಲೆಲ್ಲಾ ಮಡಕೆಯ ಗೆರೆಗಳು ಬಿದ್ದಿದ್ದುವು. ಮಾತ್ರವಲ್ಲದೆ ಹೊಗೆಯ ಹಲಗೆಯಲ್ಲಿ ಇಟ್ಟುದರಿಂದ ಅಲ್ಲಲ್ಲಿಗೆ ಕಪ್ಪುಕಪ್ಪು ಮಸಿ ಅಂಟಿಕೊಂಡಿತ್ತು. ಆ ಅವಸ್ಥೆಯನ್ನು ನೋಡಿ ಶೀನು ತುಂಬಾ ವೇದನೆಗೊಂಡು—“ ಅಯ್ಯೊ ! ಹೋಯಿತು ! ಹಾಳಾಗಿಯೇ ಹೋಯಿತು !” ಎಂದು ಮತ್ತೊಮ್ಮೆ ಉದ್ಗಾರತೆಗೆದನು.

“ ಹಾಗೇನಾಯಿತು ಈಗ ? ” ಎಂದಳು ಸುಂದರಿ ಹುಡುಗಾಟಿಕೆಯ ನಗುವನ್ನು ನಗುತ್ತ.

“ ನಿನ್ನ ತಲೆ ! ನೀನು ಇದನ್ನು ಏಕೆ ತೆಗೆದಿ ? ”

“ ಬೇಕಾಗಿ ”

“ ಅಂದರೆ ? ”

“ ಹಾಗೇಕೆ ಸಿಟ್ಟುಮಾಡುತ್ತೀರೀಂದರೆ ? ಹುಡುಗರು ಚಿತ್ರ ಬರೆಯುವ ಹಾಗೆ ಏನಿದು ಯಾವಾಗಲೂ ಬರೆಯೋದೂಂತ ? ”

"ನಾನು ಏನು ಮಾಡಿದರೆ ನಿನಗೇನು? ನೀನು ಯಾಕೆ ನನ್ನ ತಂಟೆಗೆ ಬರಬೇಕು?"

"ಜೇಕು! ನಿಮ್ಮ ತಂಟೆಗೆ ಅಂದರೆ?—"

ಸುಂದರಿ ಲಜ್ಜೆಯನ್ನು ತೋರಿ, ಓರೆ ನೋಟವನ್ನು ಬೀರಿ, ಉಂಗಷ್ಠವನ್ನು ಗೀರಿ,—"ನೋಡೀಂದರೆ! ನಮಗೆ ಮದುವೆಯಾಯಿತು; ಎಲ್ಲಾ ಆಯಿತು! ನೀವು ಯಾವಾಗಲೂ ಬರಕೊಂಡೇ ಕೂತರೆ ನಾನೇನು ಮಾಡಬೇಕು? ನನ್ನ ಹತ್ತಿರ ಮಾತು-ಕತೆ ಏನೂ ಆಡೋದಿಲ್ಲ ನೀವು? ನನಗೆ ನೀವೇ ಗತಿ-ಅಲ್ಲವಾ? ನಾನು ಈಗ ನಿಮ್ಮ ಪಾದಕ್ಕೆ ಬೀಳ್ತೀನೆ! ನನ್ನ ತಪ್ಪೇನಿದ್ದರೂ ಕ್ಷಮಿಸಿ! ನನ್ನ ರಕ್ಷಣೆ ಮಾಡೀ!" ಎಂದು ದುಃಖದಿಂದ ನಡುಗುವ ದನಿಯಿಂದ ಹೇಳುತ್ತಾ ಗಂಡನ ಪಾದಕ್ಕೆ ಅಡ್ಡ ಬಿದ್ದಳು. ಆಗ ಶೀನು ತಟ್ಟನೆ ಹಿಂಜರಿಯದಿರುತಿದ್ದರೆ ಅವಳ ಕಣ್ಣೀರು ಅವನ ಪಾದದ ಮೇಲೆ ಇಳಿಯುತಿತ್ತು.

ಅಸಹ್ಯದಿಂದ ಹಿಂಜರಿದು ಶೀನು—"ಛೀ! ಏನಿದು? ನಿನಗೇನಾಯಿತು?" ಎಂದನು.

ಸುಂದರಿ ಎದ್ದು ಒಯ್ಯಾರದಿಂದ ತಲೆತಗ್ಗಿಸಿ ನಿಂತುಕೊಂಡು,—"ಏನಾಯಿತೂಂತ ನಾನೇನು ಹೇಳಲೀ? ನನಗೆ-ನಾ-ಚಿಕೆಯಾಗುತ್ತೆ! ನಾನು ಸಣ್ಣ ಹುಡುಗಿಯೇ? ನೋಡೀಂದರೆ? ನಮಗೆ ಒಂದು ಮದುವೆ ಮಾತ್ರ ಆಯಿತಲ್ಲದೆ ಮತ್ತೆ-ಪ್ರಸ್ತ-ಗಿಸ್ತಾಂತ ಒಂದೂ ಆಗಲಿಲ್ಲ! ನೀವು-ನನ್ನ—"

"ಸಾಕು ಸಾಕು! ಎಲ್ಲಾ ಗೊತ್ತು! ಹೋಗತ್ತ!"

ಚಂಡಿತನದ ಸುಂದರಿ ಮೊಂಡಿಯ ಧೈರ್ಯದಿಂದ ಬಿಗಿಯಾಗಿ—"ಉಹಂ! ಇಲ್ಲ! ನಾನು ಹೋಗಲಾರೆ! ನೋಡಿ! ಗಲಾಟೆಯಿಲ್ಲದ ಮಧ್ಯ ರಾತ್ರಿ! ಎಲ್ಲರೂ ಮಲಗಿಬಿಟ್ಟಿದ್ದಾರೆ! ಏನೂಂದ್ರೆ? ಉಂ? ನಾನು ಈಗ ಇಲ್ಲಿಯೇ ಮಲಗಬೇಕೂಂತ ಬಂದೆ! ಏನು ಮಲಗಿದರೆ? ನಾನು ನಿಮ್ಮ ಹೆಂಡತಿಯಲ್ಲವೋ? ಪ್ರಸ್ತ ಆಗದಿದ್ದರೆ ಇಲ್ಲ! ನಮಗೆ ದೊಡ್ಡವರಿಗೆ ಪ್ರಸ್ತ ಯಾಕೆ?"

"ಛಿಛಿ! ನಿನಗೆ ಹುಚ್ಚು ಹಿಡಿಯಿತು! ಒಳ್ಳೆಯ ಮಾತಿನಲ್ಲಿ ಹೋಗುವಿಯಾ—ಬಾಯಿಗೆ ಬಂದ ಹಾಗೆ ಬೊಗಳುವಿಯಾ?"

"ಎಲ್ಲಿಗೆ ಹೋಗಲಿ ನಾನು?"

"ನಿನ್ನ ಕೋಣೆಗೆ, ನಿನ್ನ ಚಾಪೆಗೆ."

"ಇಲ್ಲ! ಇಲ್ಲೆ ಮಲಗುತ್ತೇನೆ. ನಿಮ್ಮ ಹಾಸಿಗೆಯಲ್ಲೆ ಮಲಗುತ್ತೇನೆ! ಏನು ಮಾಡುತ್ತೀರೋ ಮಾಡಿ! ಹೊಡೆಯಿರಿ! ಗುದ್ದಿರಿ! ಚಿವುಟಿರಿ! ನುಂಗಿರಿ! ಕಚ್ಚಿರಿ!—ಹಂ—" ಎನ್ನುತ್ತಾ ಸುಂದರಿ ಧಡಕ್ಕನೆ ಶೀನುವಿನ ಹಾಸಿಗೆಯಲ್ಲಿ ಮಲಗಿದಳು ಮಾಡಿನ ಕಡೆಗೆ ಮುಖವನ್ನು ಚಾಚಿ!

"ಛಿ:! ಛಿ:!—"ಎನ್ನುತ್ತಾ ಶೀನು ಬಿರಬಿರನೆ ಹೊರಗೆ ನಡೆದನು ಆದರೆ ಹೊಸ್ತಿಲವನ್ನು ದಾಟುವುದರೊಳಗೆ, ಬಳೆಗಳ ಕಣಕಣದೊಂದಿಗೆ ಬಲವಾದ ಗುಂಡುಗೈಯೊಂದು ಅವನ ಬಡರಟ್ಟೆಯನ್ನು ಹಿಡಿದು ಹಿಂದಕ್ಕೆಳೆಯಿತು. ಪಾಪ! ಶೀನು ಸೌವಳು ಮೈಯವನು, ಆದರೂ ಹೀಗೆ ಎಳೆಯಲ್ಪಟ್ಟೇನೆಂದು ತಿಳಿದಿದ್ದರೆ ಹಾಗೆ ಸಿಕ್ಕುಬೀಳುತ್ತಿರಲಿಲ್ಲ. ಅಂತೆಯೆ ಸುಲಭವಾಗಿ ಒಳಕ್ಕೆ ಎಳೆಯಲ್ಪಟ್ಟನು. ಅವಳು ಅವನನ್ನು ಜಗ್ಗಿ ಚಾಪೆಯ ಮೇಲೆ ಕೆಡವಿ—"ಏನೊಂದರೆ-ಅಷ್ಟು ಕೋಪ ನನ್ನ ಮೇಲೆ ನಿಮಗೆ? ಎಷ್ಟು ದಿನಾಂತ ನಾನು ಸುಮ್ಮನಿರೋದು? ಅಲ್ಲಾ! ನಿಮ್ಮಂತಾ ಸುಂದರನಾದ ಗಂಡ ನನಗಿದ್ದೂ-ಅಹಹ!-" ಎನ್ನುತ್ತಿನ್ನುತ್ತ "ಅಯ್ಯಾ! ಎನ್ನರಸೆ! ನನ್ನ ಬಂಗಾರ ಗೊಂಬೆ! ನಿನ್ನನ್ನು ಇನ್ನು ನಾನು ಬಿಟ್ಟೇನೆ? ಆಹಾ! ನನ್ನ-ನನ್ನ-ನನ್ನ ಪ್ರಾಣ!-ಪದಕಾ!—" ಎಂದು ಪರವಶಳಾಗಿ ಪಟಗುಡುತ್ತ-ಅವನ ಸರ್ವಾಂಗದ ಮೇಲೆಯೂ ಮುತ್ತಿನ ಮಳೆಯನ್ನೆ ಸುರಿಸಿಬಿಟ್ಟಳು! ಈ ಗಡಿಬಿಡಿಯಲ್ಲಿ ಶೀನುವಿನ ಕೈಯಲ್ಲಿದ್ದ ಆ ಚಿತ್ರದ ಕಾಗದವು ಮುದ್ದೆಮುದ್ದೆಯಾಗಿ ಹೋಯಿತು!

ಪ್ರತಿಯೊಂದು ಸಲಕ್ಕೂ ಶೀನು—"ಅಯ್ಯೊ! ರಾಕ್ಷಸಿ! ತಡೆಯೇ! ನನ್ನ ಕೊಲ್ಲಬೇಡ! ತಿನ್ನಬೇಡ! ಹಾ! ಸತ್ತೆ-ಸತ್ತೆ!" ಎಂದು ಅರಚಿಕೊಂಡನು. ಗಟ್ಟಿಯಾಗಿ ಅರಚಿಕೊಂಡರೆ ಗೌರಿಗೆ ಎಲ್ಲಿ ಎಚ್ಚರವಾಗಿ ತನಗೆ ಅವಮಾನವಾಗುವುದೋ ಎಂಬ ಭೀತಿ ಬೇರೆ.

ಪಾಪ! ಭಾರ್ಯಾಭೂತದ ಕೈಯಲ್ಲಿ ಸಿಕ್ಕಿಬಿದ್ದಂತಾಯಿತು! ಹೀಗೆ ಸಿಕ್ಕಿಬಿದ್ದೇನೆಂದೂ ಆ ಭೂತಕ್ಕೆ ಇಷ್ಟು ಶಕ್ತಿಯಿದ್ದೀತೆಂದೂ ಅವನು ಊಹಿಸಿರಲಿಲ್ಲ. ಅವಳ ಬೃಹದಾಕಾರದ ಶಕ್ತಿಯ ಇದಿರಿಗೆ ಅವನೊಬ್ಬ ಕ್ಷುಲ್ಲಕನಂತಾಗಿದ್ದನು. ಆದರೆ ಲಘುದೇಹಿಯಾದ ಶೀನು ಕೂಡಲೆ ಸಾವರಿಸಿಕೊಂಡೆದ್ದು ಸಂಧಿಸಾಧಿಸಿ ಹಾರಿ ದೂರಸರಿದು ನಿಂತನು. ಹಾಗೆಯೇ ತನ್ನ ಉಭಯ ಕರಗಳನ್ನು ಸೇರಿಸಿ ವಂದನೆ ಮಾಡುತ್ತ—"ಮಹಾತಾಯೆ! ಶೌರಿ! ಮಾಯೆ! ಭದ್ರಕಾಳಿ! ಚಂಡಿ! ಚಾಮುಂಡಿ! ಸಾಕಮ್ಮಾ! ನಿನ್ನ ದಯೆ! ಸಾಕು ಸಾಕು! ಹೋಗು ಹೋಗು!" ಎಂದು ಸ್ತುತ್ಯವಾದ ನಿರಾಕರಣೆಯನ್ನು ತೋರಿದನು.

ಸುಂದರಿ ಎದ್ದು ನಿಂತು—"ಏನಿದೇನಿದು? ನನ್ನ ಅಮ್ಮಾ ಅಂತೀರಲ್ಲ? ಎಲ್ಲಾದರೂ ಉಂಟಾ? ನಾನು ಎಲ್ಲಿಗೆ ಹೋಗಬೇಕಂತೀರಿ? ಯಾರಿದ್ದಾರೆ ನನಗೆ?"

"ನಿನ್ನ ಅಪ್ಪನ ಮನೆಗೆ ಹೋಗಮ್ಮಾ! ನಿನ್ನಂತಾ ಮಹಾತಾಯಿಗೆ ಜನ್ಮವಿತ್ತ ನಿನ್ನ ಮಹಾತ್ಮನಾದ ಅಪ್ಪನ ಮನೆಗೆ ಹೋಗು!"

"ಎಲ್ಲಿದ್ದಾನೋ ನನ್ನ ಅಪ್ಪ! ನನ್ನ ಮುಖಾ ಕೂಡಾ ನೋಡದ ಅಪ್ಪ! ಅವನು ಸಾಯಲಿ! ನನಗಿನ್ನು ನೀವೇಗತಿ! ನಿಮ್ಮ ಪಾದವೇಗತಿ! ಬನ್ನಿಬನ್ನೀಂದರೆ! ನಿಮ್ಮ ಆಟ ಸಾಕೂಂದರೆ! ಬರೋದಿಲ್ಲ? ಅಂ?–ಅಂ?" ಎನ್ನುತ್ತಾ ಸುಂದರಿ ಮತ್ತೆ ಎದ್ದು ಬರುವುದನ್ನು ನೋಡಿ ಶೀನು ಲಘುವದಿಂದ ಕೋಣೆಯ ಹೊರಗೆ ಹಾರಿದನು. ಹಾಗೆಯೆ ನಡುಮನೆಯೊಳಗೆ ಹೊಕ್ಕನು. ಸುಂದರಿಯೂ ಅವನ ಬೆಂಬಿದ್ದಿದ್ದಳು. ಹೀಗೆ ಬೆಂಬೀಳಬಹುದೆಂದು ತಿಳಿದೇ ಅವನು ಆ ಕೋಣೆಯೊಳಗೆ ಹೊಕ್ಕಿದ್ದನು. ಸುಂದರಿ ಮೊದಲು ಮಲಗಿದ್ದ ಕೋಣೆಯದು.

"ಇಲ್ಲಿಗೆ ಯಾಕೆ ಬಂದಿರಿ?' ಸುಂದರಿ ಶೀನುವಿನ ಗಲ್ಲವನ್ನು ಹಿಡಿದು-ಪ್ರೇಮದಿಂದ ಪಿಸುವಾಗಿ ಕೇಳಿದಳು.

"ಮತ್ತೆ ನನ್ನ ಕೋಣೆಯಲ್ಲಿ ದೀಪವುಂಟಲ್ಲಾ?" ಎಂದನು ಶೀನು.

"ಇಲ್ಲಿಯೂ ಕುರುಕುರು ಲಾಂದರವುಂಟು ನಂದಿಸಿಬಿಡಲಾ?"

"ಬೇಡ ಬೇಡ! ಇಲ್ಲಿ ಹೇಗೂ ಕತ್ತಲೆಯೇ ಆಗಿದೆ!"

"ಅಬ್ಬ! ಎಷ್ಟು ನಾಚಿಕೆ ನಿಮಗೆ? ಹೆಂಗುಸಿಗಿಂತಲೂ ಹೆಚ್ಚು! ಇಲ್ಲಿ ಮತ್ತೆ ಗೌರಿ ಮಲಗಿದ್ದಾಳಲ್ಲಾ?"

"ಅವಳಿಗೆ ಗಾಢನಿದ್ರೆ ಬಂದಿದೆ ಚಿಂತೆಯಿಲ್ಲ!"

"ಹುಂ, ಆಯ್ತು. ಮತ್ತೆ ನಿಂತಿದ್ದೀರಲ್ಲ? ಮಲಗಿ ನನ್ನ ಚಾಪೇಲಿ, ಬನ್ನಿ." ಸುಂದರಿ ಸಲಿಗೆಯಿಂದ, ಅಂದೇ ಕ್ಷೌರವಮಾಡಿಸಿದ ಶೀನುವಿನ ನಯವಾದ ಗಲ್ಲವನ್ನು ಸವರುವಾಗ, "ನೀನು ಮೊದಲು ಮಲಗು—" ಎಂದು ಶೀನು ಸುಂದರಿಯನ್ನು ಅವಳ ಚಾಪೆಗೆ ದೂಡಿದನು.

ಸುಂದರಿ ಚಾಪೆಗೆ ಕುಸಿಯುತ್ತ—"ಬಾಗಿಲು?"

"ನಾನು ಹಾಕುತ್ತೇನೆ" ಎಂದವನೇ ಶೀನು ತಟಕ್ಕನೆ ಹೊರಗೆ ಹಾರಿ ಬಾಗಿಲೆಳೆದು ಹೊರಗಿನಿಂದ ಚಿಲಕವನ್ನು ಸಿಕ್ಕಿಸಿಬಿಟ್ಟನು.

"ಅಬ್ಬ! ಬ್ರಹ್ಮರಾಕ್ಷಸಿಯ ಕೈಯಿಂದ ಪಾರಾದ ಹಾಗಾಯಿತು!" ಎಂದೊಂದು ಗೆಲುವಿನ ದೀರ್ಘ ಶ್ವಾಸವು ಅವನ ಹೃದಯದಿಂದ ಎದ್ದು ಹೋಯಿತು

ಬಳಿಕ ಅವನು ತನ್ನ ಕೋಣೆಯನ್ನು ಸೇರಿ ಬಾಗಿಲು ಹಾಕಿಕೊಂಡನು ಕಿಟಕಿಯಿಂದ ಸುಂದರಿ ಇಣಿಕುತ್ತ—"ಅಯ್ಯೊ! ನನಗೆ ಮೋಸ ಮಾಡಿದಿರಿ? ಯಾಕೆ? ನನ್ನ ಮೇಲೆ ನಿಮಗೆ ಏನೂ ಪ್ರೀತಿಯಿಲ್ಲವಾ?-ಹಾ! ಭಗವಂತ! ನಾರಾಯಣ!—" ಎಂದು ಕೇಸರಗೊಡಲಾರಂಭಿಸಿದಳು. ಶೀನು ಕಿಟಕಿಯ ಬಾಗಿಲನ್ನೆ ಹಾಕಿಬಿಟ್ಟನು. ಆದರೂ ಕಿಟಕಿಯ ಬಾಗಿಲಿನ ಮೇಲೆ ಆಗುವ ಸದ್ದುಗಳಿಂದ ಆ ವಿಲಕ್ಷಣ ವಿರಹಿಣಿ ಸ್ವಲ್ಪ ಹೊತ್ತು ಅಲ್ಲಿಯೆ ಇದ್ದಂತೆ ತಿಳಿಯಿತು. ಆ ಮೇಲೆ ಧುಡಮ್ಮನೆ ಅವಳು ಚಾಪೆಯಲ್ಲಿ ಬಿದ್ದ ಸದ್ದು—ನಿಟ್ಟುಸಿರಿನ ಸುಯಿಲು-ಅಳುಗೊರಳಿನ ದುಸುಭುಸುರುಗಳು-ಕೇಳಿಕೊಂಡಿದ್ದುವು.

ಶೀನು ಅವುಗಳಿಗೇನೂ ಲಕ್ಷ್ಯವೀಯದೆ—"ಹೆ! ಪರಮಾತ್ಮ! ನನ್ನನ್ನು ಹೇಗಾದರೂ ಪಾರುಮಾಡಪ್ಪಾ!" ಎಂದು ಸ್ಮರಿಸುತ್ತ ಒಂದು ಚಿಕ್ಕ ಕೈಪೆಟ್ಟಿಗೆಯೊಳಗೆ ಅಗತ್ಯವಿರುವ ಸಾಮಾನುಗಳನ್ನು ತುಂಬಿಕೊಳ್ಳಲಾರಂಭ ಮಾಡಿದನು. ಏನಿದು? ಪಲಾಯನ ಮಾಡುವ ಉದ್ದೇಶವಿರದಹುದೆ? ಇರಬಹುದು. ಅಲ್ಲದೆ ಇಂತಹ ಪಿಶಾಚಿ ಪತ್ನೀ ಬಾಧೆಯ

ಇದಿರಿನಲ್ಲಿ ಯಾವ ನರಗಂಡನು ಸುಳಿದಾಡಿಕೊಂಡಿದ್ದಾನು? "ಇನ್ನೂ ಸ್ವಲ್ಪ ಯೋಚಿಸಿ ಪಲಾಯನ ಮಾಡೋಣವೆಂದು ಭಾವಿಸಿದ್ದೆನು. ಈಗಲೇ ಓಡಿಸುತ್ತಿದೆ ನನ್ನ ಭಾರ್ಯಾ ಭೂತ!" ಎಂದು ಬಾಯಿಬಿಟ್ಟೇ ಹೇಳಿಕೊಂಡನು.

ದೊಡ್ಡದೊಂದು ಟ್ರಂಕು ಪೆಟ್ಟಿಗೆಯಲ್ಲಿ ಅವನಿಗೆ ಬೇಕಾದ ಹಲವು ವಸ್ತುಗಳಿದ್ದವು. ಅವೆಲ್ಲವೂ ಕಲಾಸಾಹಿತ್ಯ ಸಂಬಂಧಿಯಾಗಿ ಪುಸ್ತಕ ಪತ್ರಾದಿಗಳೇ ಸರಿ! ಪೆನ್ಸಿಲು-ಕಾಗದ-ಬಣ್ಣಗಳು-ಬ್ರಶ್ಶಗಳು. ಮುಂತಾದುವೇ ಹೊರತು ಬಟ್ಟೆಬರೆಗಳಲ್ಲ. ಅವುಗಳನ್ನೆಲ್ಲಾ ಕೆಳಗೆ ಹಾಕಿ ಬಿಡಿಸಿ ತಾನು ಬರೆದಿಟ್ಟ ಮುಖ್ಯವಾದ ಗ್ರಂಥಗಳನ್ನೆಲ್ಲಾ ಚಿಕ್ಕ ಕೈಪೆಟ್ಟಿಗೆಗೆ ಸೇರಿಸಿದನು. ಕೆಟ್ಟು ಹೋದ ತಾಯಿಯ ಚಿತ್ರ ಮೊದಲಾದ ಕೆಲವು ಚಿತ್ರಗಳ ಕಾಗದಗಳೂ ಕೈಪೆಟ್ಟಿಗೆಯೊಳಗೆ ಸೇರಿದುವು. ಆ ಪೆಟ್ಟಿಗೆಯಲ್ಲಿ ಹಿಡಿಯದ ಇನ್ನೂ ಕೆಲವು ಅಗತ್ಯವಿದ್ದ ಪುಸ್ತಕಗಳನ್ನು ಜಮಖಾನೆಯಲ್ಲಿ ಅಣಿಗೊಳಿಸಿಟ್ಟು ಚಿಕ್ಕ ಲಘುವಾದ ಒಂದು ಹಾಸಿಗೆ ಸುರುಳಿಯ ಹಾಗೆ ಸುತ್ತಿ ಬಿಗಿದನು. ಅಗತ್ಯವಿಲ್ಲದ ಕರಡು ಪುಸ್ತಕಗಳನ್ನು ಆ ದೊಡ್ಡ ಟ್ರಂಕಿನಲ್ಲೆ ಸೇರಿಸಿದನು. ಬಳಿಕ ಇದ್ದ ರೊಕ್ಕವನ್ನು ಎಣಿಸಿ ನೋಡುವಾಗ ಐದು ರೂಪಾಯಿಯ ಒಂದು ನೋಟೂ ಸ್ವಲ್ಪ ಚಿಲ್ಲರೆಯೂ ಮಾತ್ರವೇ ಇತ್ತಷ್ಟೆ. "ಸಾಕು. ದೇವರಿದ್ದಾನೆ." ಎಂದುಕೊಂಡು ಅದನ್ನು ಜೇಬಿಗೆ ಹಾಕಿಕೊಂಡನು. ಹೀಗೆ ಹೊರಡಲು ಸಿದ್ಧನಾಗಿ, ಬಾಗಿಲು ತೆರೆದು ಅಂಗಳಕ್ಕೆ ಬಂದು ಆಕಾಶದಲ್ಲಿರುವ ನಕ್ಷತ್ರಗಳನ್ನು ನೋಡಿ—"ಈಗ ಸರೀ ಒಂದು ಗಂಟೆಯಿದ್ದೀತು. ನಿರ್ಜನವಾದ ಬೀದಿಯಲ್ಲಿ ಈಗ ನಡೆಯಬಾರದು. ಮೂರು ಗಂಟೆಯ ಸಮಯಕ್ಕೆ ಹೊರಟರೆ ಬೆಳಗಾಗುವಾಗ ಮಂಗಳೂರನ್ನು ಸೇರಬಹುದು." ಎಂದು ಯೋಚಿಸಿಕೊಂಡು ಮತ್ತೆ ಕೋಣೆಯೊಳಗೆ ಹೊಕ್ಕು ಬಾಗಿಲು ಹಾಕಿಕೊಂಡು, ಒಂದು ಕಾಗದವನ್ನೂ ಫೌಂಟನ್ ಪೇನಾವನ್ನೂ ತೆಗೆದುಕೊಂಡು, ಲಾಂದರ ಬೆಳಕಿನಲ್ಲಿ ಕುಳಿತು ಹೀಗೊಂದು ಪತ್ರವನ್ನು ಬರೆಯಲಾರಂಭಿಸಿದನು:—

"ಚಿರಂಜೀವಿ ಕೃಷ್ಣನಿಗೆ ನಿನ್ನ ನಿರ್ಭಾಗ್ಯನಾದ ಅಣ್ಣ ಶೀನೂ ಹೃತ್ಪೂರ್ವಕವಾಗಿ ಮಾಡುವ ಅನೇಕ ಆಶೀರ್ವಾದಗಳು.

ಪ್ರಿಯ ತಮ್ಮ! ಈ ಕಾಗದವು ನಿನಗೆ ಸಿಕ್ಕುವಾಗ ನಾನು ಬಹು ದೂರದಲ್ಲಿ ಹೊರಟುಹೋಗುತ್ತಿರಬಹುದು. ಪ್ರಕೃತ ನನ್ನವರಾಗಿ ನನಗೆ ಈ ಪ್ರಪಂಚದಲ್ಲಿ ಉಳಿದಿರುವವರೆಂದರೆ ನೀನು ಮತ್ತು ತಂಗಿಯಾದ ಗೌರಿ ಮಾತ್ರ. ನೀವಿಬ್ಬರೂ ನನ್ನ ಮೇಲೆ ಅಪಾರವಾದ ಭಕ್ತಿ–ಪ್ರೀತಿ–ವಿಶ್ವಾಸ ಗಳನ್ನು ಇಟ್ಟಿರುವಿರಿ. ತಮ್ಮ! ನೀನು ನನ್ನೊಡನೆ ಮಾತಾಡಿದುದೆಲ್ಲಾ ನನ್ನ ಮೇಲಣ ಪ್ರೀತಿಯಿಂದಲೇ ಎಂದು ನಾನು ಅರಿತಿದ್ದೇನೆ. ನೀನು ವ್ಯಾವಹಾರಿಕ ವಿಷಯಗಳಲ್ಲಿ ನನಗಿಂತಲೂ ಹೆಚ್ಚು ಬಲ್ಲವನಾಗಿರುತ್ತೀ. ಅಂತಹ ನಿನ್ನನ್ನೆ ಮನೆಗೆ ಬಾರಲೀಸದಂತಹ ಯೋಗವು ನನ್ನ ಅವಿವೇಕ ದಿಂದ ಘಟಿಸಿತು. ಅದರ ನಿವಾರಣೆಗೆ ನನಗೆ ಬೇರೆ ಯಾವ ದಾರಿಯೂ ತೋರದೆ ಇದ್ದ ಕಾರಣ, ನಿನಗೆ ಸರ್ವಸ್ವಾತಂತ್ರ್ಯವನ್ನೂ ಬಿಟ್ಟುಕೊಟ್ಟು ನಾನು ಹೊರಟುಹೋಗಿರುತ್ತೇನೆ. ನನ್ನ ಹೆಂಡತಿ ಎಂಬ ಸುಂದರಿಯ ವಿಷಯದಲ್ಲಿ ಕೂಡಾ ನಾನು ಏನೂ ನಿವೃತ್ತಿಯನ್ನು ಮಾಡಲಾರದವ ನಾಗಿ ಹೋಗಿದ್ದೇನೆ. ಅಪ್ಪಾ! ಇದು ನಿನಗೆ ತುಂಬಾ ಸಿಟ್ಟನ್ನುಂಟು ಮಾಡಬಹುದು. ಮಾಡುವುದೇನು? ಅವಳ ಅದೃಷ್ಟದಲ್ಲಿದ್ದಂತೆ ಅವಳ ಗತಿಯಾದೀತು! ನೀನು ನಿನ್ನ ಇಷ್ಟಾನುಸಾರವಾಗಿ ಎಲ್ಲವನ್ನೂ ವ್ಯವಸ್ಥೆ ಗೊಳಿಸುವಿ ಎಂದು ನಂಬಿರುತ್ತೇನೆ ಅಂತೆಯೆ ಮನೆ-ಮಾರು-ತೋಟ-ಗದ್ದೆ ಮುಂತಾದ ಯಾವತ್ತೂ ಆಸ್ತಿಯಲ್ಲಿ ಇನ್ನು ಮೇಲೆ ನನಗೆ ಏನೂ ಹಕ್ಕು ಸ್ವಾತಂತ್ರ್ಯವಿಲ್ಲ; ಎಲ್ಲವನ್ನೂ ನಿನಗೆ ಬಿಟ್ಟುಕೊಟ್ಟಿರುತ್ತೇನೆ. ತಮ್ಮ! ನೀನು ನನ್ನ ಮೇಲಣ ಸಿಟ್ಟನ್ನು ನುಂಗಿಕೊಂಡು ಕಾರುಣ್ಯವನ್ನು ಹೊಂದು! ನನ್ನನ್ನು ಹುಡುಕುವಗೊಡವೆಗೆ ಮಾತ್ರ ಹೋಗಬೇಡ. ನಾನು ಈ ಪ್ರಪಂಚದಲ್ಲಿ ಹಕ್ಕಿಯ ಹಾಗೆ ನೆಮ್ಮದಿಯಾಗಿಯೇ ಇರುತ್ತೇ ನೆಂದು ದೃಢವಾಗಿ ನಂಬಿ ಸಂತೋಷವಾಗಿರು. ಸಾಧ್ಯವಾದರೆ ನೀನು ನನ್ನನ್ನು ಮರೆತುಬಿಡಬೇಕೆಂದು ಕೇಳಿಕೊಳ್ಳುತ್ತೇನೆ. ನಾನೂ ನಿಮ್ಮೆಲ್ಲ ರನ್ನೂ ಮರೆಯಬೇಕೆಂಬ ಪ್ರಯತ್ನದಿಂದಲೇ ಹೋಗುತ್ತಿದ್ದೇನೆ. ಅದು ಸಾಧ್ಯವೋ ಅಸಾಧ್ಯವೋ ದೇವರೇ ಬಲ್ಲನು! ಈಗಂತೂ ನಿನ್ನನ್ನೂ ಗೌರೀ ಬಾಲೆಯನ್ನೂ ತೊರೆದು ಹೋಗುವುದೆಂದರೆ ಬಹಳ ಕಷ್ಟಕರವಾಗಿದೆ. ಹೇಗಾದರೂ ಮಾಡಿಕೊಂಡು ಹೋಗಲಾರಂಭಿಸಿದ್ದೇನೆ. ಗೌರಿಗೂ

ನಿನಗೂ ಮೇಲೂ ಮೇಲು ಮಂಗಳವಾಗುತಿರಲೆಂದು ನಿರಂತರವೂ ಆಶೀರ್ವಾದಗಳನ್ನು ಮಾಡುತ್ತಿದ್ದೇನೆ ಇತಿ ನಿನ್ನ ನಿರ್ಭಾಗ್ಯ ಅಣ್ಣ.—

"ಶೀನು"

---

## ೧೨. ಭೂತೋಚ್ಚಾಟನೆ

ಹೀಗೆ ಪತ್ರವನ್ನು ಬರೆದಿಟ್ಟು ಶೀನಣ್ಣನು ಹೊರಟು ಹೋಗುವನೆಂದು ಕೃಷ್ಣನು ಊಹಿಸಿಯೇ ಇರಲಿಲ್ಲ. ಬೆಳಗ್ಗೆ ಅವನು ಬಂಡಸಾಲೆಯಲ್ಲಿ ಕೆಲಸ ಮಾಡುತ್ತಿದ್ದಾಗ ಅವನನ್ನು ಕುರಿತು ಕೆಲವರು, "ಏನಯ್ಯಾ ನಿಮ್ಮಣ್ಣನನ್ನು ನೋಡಿದಿರಾ?" ಎಂದರು. "ಏನು? ನಿಮಗೂ ಅವನಿಗೂ ಜಗಳವಾಯಿತೆ?" "ನಿಮ್ಮಣ್ಣ ಓಡಿ ಹೋದನೊ?" "ಹುಡುಕಿಸಿರಯ್ಯಾ ಕೃಷ್ಣರಾಯರೆ!" "ಏನೋ ಪಾಪ, ಹಾಳು ಹೆಂಡತಿಯನ್ನು ಕಟ್ಟಿಕೊಂಡು ಹಾಳಾಗಿ ಹೋದ ಪಾಪ!" "ಬುದ್ಧಿ ಕೆಟ್ಟು ಹುಚ್ಚುಕೂಡಾ ಹಿಡಿದೀತು. ಶೀನು ಬಹಳ ಪಾಪದವನು ಕೃಷ್ಣಯ್ಯಾ! ಮೊದಲು ನೀವು ಕೆರೆಬಾವಿಗಳನ್ನು ಹುಡುಕಿಸುವುದು ಒಳ್ಳೆಯದು" " . ....."

ಈ ಹಲವು ಬಗೆಯ ಮಾತುಗಳಿಂದ ಕಿವಿ ತುಂಬಿದ ಕೃಷ್ಣನು ಭೀತಿ-ಶಂಕಾ-ಕುತೂಹಲಗಳಿಂದ ಬೇಗಬೇಗನೆ ಮನೆಗೆ ಬಂದನು. ಸುಂದರಿ ಜಗಲಿಯ ಕಂಬದ ಬುಡದಲ್ಲಿ ನಿಂತುಕೊಂಡು "ಅಯ್ಯೋ! ದೇವರೆ! ಇನ್ನು ಯಾರು ಗತಿ! ಎಲ್ಲಿಗೆ ಹೋದರೋ! ಏನಾದರೊ! ಅಯ್ಯೋ! ಅಯ್ಯೋ!—" ಎಂದು ಸತ್ತರೆ ಅಳುವ ಹಾಗೆ ಅಳುತ್ತಿದ್ದಳು. ಅಕ್ಕಪಕ್ಕದ ಮನೆಯವರು ಅಲ್ಲಿಗೆ ಬಂದು—"ಎಲ್ಲಿಗೂ ಹೋಗಲಿಕ್ಕಿಲ್ಲ ಪಾಪ! ಯಾಕೆ ಹೀಗೆ ಅಳುತ್ತೀ? ಏನೂ ಹೆದರಬೇಡವೆ ಅಮ್ಮಾ!" ಎಂದು ಸಮಾಧಾನ ಹೇಳುತ್ತಿದ್ದರು.

ಕೃಷ್ಣನನ್ನು ನೋಡುತ್ತಲೇ ಸುಂದರಿಯ ರೋದನವು ತಾರಕಕ್ಕೇರಿತು.—"ಹಾ! ಕೃಷ್ಣಾ! ಮೈದುನಾ! ಅಣ್ಣ ಇಲ್ಲಪ್ಪಾ! ನಿನ್ನಣ್ಣ ಇಲ್ಲಪ್ಪಾ! ನನ್ನನ್ನು ಬಿಟ್ಟು ಹೋದರೊ! ನನ್ನ ಸೌಭಾಗ್ಯ ಹೋಯಿತೋ!

ಅಯ್ಯೋ! ಕೃಷ್ಣಾ! ನಿನ್ನ ಕಾಲಿಗೆ ಬೀಳ್ತೀನಪ್ಪಾ! ನನ್ನ ಸೌಭಾಗ್ಯವನ್ನು ಹ್ಯಾಗಾದರೂ ಹುಡುಕಿ ತಾರಪ್ಪಾ!–" ಎಂದು ಕಣ್ಣು–ಮೂಗು–ಬಾಯಿ–ಕಂಠಗಳಿಂದ ರೋದನ ಮಾಡಿದಳು. ಮೊದಲೇ ಅಕ್ರಾಳ-ವಿಕ್ರಾಳವಾಗಿದ್ದ ಅವಳು ಈಗ ಬೀಭತ್ಸಾಕಾರಿಣಿಯಾಗಿ ಕಾಣುತ್ತಿದ್ದಳು.

ಕೃಷ್ಣನು ಅವಳನ್ನು ಗದರಿಸುತ್ತ—"ಸಾಕು ನಿನ್ನ ರಂಭಾಟ! ಮುಚ್ಚು ಬಾಯಿ! ಗೌರಿ! ಏನಾಯಿತೇ? ಅಣ್ಣನು ಯಾವಾಗ ಹೋದದ್ದು?" ಎಂದು ಕೇಳಿದನು.

ಗೌರಿಯೂ ದುಃಖಸದ್ಗದಿತವಾದ ಕಂಠದಿಂದ—"ಏನೋ ಗೊತ್ತಿಲ್ಲಣ್ಣಾ! ನಿನ್ನೆ ರಾತ್ರಿ ಅಣ್ಣ ಅವನ ಕೋಣೆಯಲ್ಲಿಯೇ ಮಲಗಿದ್ದ. ಅತ್ತಿಗೆಯೂ ನಾನೂ ನಡುಮನೆಯಲ್ಲಿ ಮಲಗಿದ್ದೆವು ಬೆಳಗಾದ ಮೇಲೆ ನಾವು ಎದ್ದು ಬಾಗಿಲು ತೆರೆಯಬೇಕಂತ ನೋಡುವಾಗ ಹೊರಗೆ ಚಿಲುಕ ಹಾಕಿತ್ತು. ಯಾರು ಚಿಲಕ ಹಾಕಿದ್ದೋಂತ ಗೊತ್ತಾಗದೆ "ಅಣ್ಣಾ–ದೊಡ್ಡಣ್ಣಾ" ಅಂತ ಎಷ್ಟು ಕರೆದರೂ ಅಣ್ಣನ ಸ್ವರ ಕೇಳಲೇ ಇಲ್ಲ. ಅಣ್ಣನ ಕೋಣೆಯ ಕಿಟಕಿಯ ಬಾಗಿಲು ಕೂಡಾ ಮುಚ್ಚಿತ್ತು. ನಮ್ಮ ದೊಂಬೇ ಕೇಳಿ, ಆಚೆಮನೆ ರುಕ್ಕು ಬಂದು ಬಾಗಿಲು ತೆಗೆದಳು. ಹೊರಗೆ ಬಂದು ನೋಡುವಾಗ ಅಣ್ಣನ ಕೋಣೆಗೂ ಚಿಲುಕ ಹಾಕಿತ್ತು. ಒಳಗೆ ಅಣ್ಣನೂ ಇಲ್ಲ–ಅವನ ಅಂಗಿ ವಸ್ತ್ರವೂ ಇಲ್ಲ!" ಎಂದಳು.

"ಆಯಿತು! ಬಹಳ ಚಂದಾಯಿತು! ಇಷ್ಟೂ ಆದದ್ದು ಈ ಪಿಶಾಚಿಯಿಂದ! ಥೂ ನನ್ನ ಮನೆ 'ಲಕ್ಷ್ಮಿ' ಗಂಡನನ್ನೇ ಮನೆಯಿಂದ ಓಡಿಸಿದಂತಾ ನೀನು ಬದುಕ್ಬೇಕಿಲ್ಲ ಇನ್ನು! ಸಾಯಬಾರದೆ?" ಎಂದು ಕೃಷ್ಣನು ಸುಂದರಿಯ ಮೇಲೆ ಕೋಪಿಸಲಿಕ್ಕಾರಂಭಿಸಿದನು.

"ಅಯ್ಯಯ್ಯೋ! ಅಯ್ಯಯ್ಯೋ! ನಾನೇನು ಮಾಡಿದೆ! ಎಲ್ಲಾ ನನ್ನ ಮೇಲೆ ಹಾಕ್ತಾನಲ್ಲಾ! ನಾನೇನು ಮಾಡಿದೆ!" ಎಂದು ಕೂಗಾಡಿದಳು ಸುಂದರಿ.

"ನೀನೇ ಮಾಡಿದ್ದಿ ಏನೋ ಮಾಟ! ಇಲ್ಲದಿದ್ದರೆ ಅವನು ಹೀಗೆ ಫಕ್ಕನೆ ಯಾಕೆ ಓಡಿಹೋದಾನು?" ಎಂದು ಗರ್ಜಿಸಿದನು ಕೃಷ್ಣ. ಇದು ಚುರುಕ್ಕನೆ ಸುಂದರಿಯ ಅಂತಃಕರಣಕ್ಕೆ ತಟ್ಟಿತು. ತಾನು ರಾತ್ರಿಯಲ್ಲಿ

ಮಾಡಿದ ಚೇಷ್ಟೆಯೆಲ್ಲಾ ಈ ಮೈದುನನಿಗೆ ತಿಳಿಯಿತೇನೋ ಎಂದು ಸ್ವಲ್ಪ ಅಂಜಿದಳು. ಆದರೂ ದುರಭಿಮಾನವನ್ನು ಬಿಡದೆ-"ಹೌದೌದು! ನಾನು ಮಾಡಿದ್ದೇನೆ ಮಾಟ! ನಾನೇ ಓಡಿಸಿದೆ ನನ್ನ ಗಂಡನ್ನ! ಆಹಾ ಹಾಹಾ! ಮಾತಿನ ಚಂದ ನೋಡು! ಅವರು ನನ್ನನ್ನು ಮುಟ್ಟೋದೂ ಇಲ್ಲಾ ಮೂಸೋದೂ ಇಲ್ಲಾ! ಅಂತವರನ್ನು ನಾನು ಓಡಿಸಿದೆನಂತೆ! ನಾನು! ಆಹಾ! ಅಣ್ಣನ ಮೇಲೆ ಪ್ರೀತಿ ಎಷ್ಟೊಂತ ಗೊತ್ತೇ ಆಗುತ್ತಲ್ಲ ಈ ತಮ್ಮನದು? ಅಣ್ಣನನ್ನು ಹುಡುಕೋದು ಬಿಟ್ಟು, ನನ್ನ ಮೇಲೆ ಕಾರ್ಾನೆ ಕೋಪ! ಆಹಾಹಾ! ನನಗೇನು ಗುಟ್ಟು ಗೊತ್ತಿಲ್ಲಂತ ಮಾಡಿದ್ದಾನೆ! ಕೃಷ್ಣಾ! ನೀನೇ ಏನೋ ಮಾಟಮಾಡಿದ್ದೀ! ನೀನು ಅಣ್ಣನ ಮೇಲೆ ಏನೋ ಮನಸ್ತಾಪ ಮಾಡಿಕೊಂಡು-ಮನೆಗೂ ಬಾರದಿರುವ ಗುಟ್ಟು ಯಾರಿಗೆ ಗೊತ್ತಿಲ್ಲಾ?—" ಎಂದು ಮೈದುನನ ಮೇಲೆಯೇ ತಿರುಗಿನಿಂತಳು.

ಕೃಷ್ಣನು ಬೆಚ್ಚಿಬಿದ್ದನು! ಅವಳು ಹೀಗೆ ಚಟ್ಟನೆ ತಿರುಗಿ ನಿಂತು ಮಾತಾಡಿಯಾಳೆಂದು ಅವನು ಭಾವಿಸಿರಲಿಲ್ಲ. ಅವಳು ಅಂದುದಕ್ಕೆ ಸರಿಯಾಗಿ ಅವನೂ ನಿನ್ನೆ ಸಂಜೆಯಲ್ಲಿ ಅಣ್ಣನೊಡನೆ ಕೆಣಕಿ ಮಾತಾಡಿರುವನಷ್ಟೆ? ಅವಳ ಮಾತಿನ ಔಘದ ಆಘಾತದಿಂದ ಅಣ್ಣನನ್ನು ಓಡಿಸಿದೆನೆಂಬ ಅಪವಾದವು ಎಲ್ಲಿ ತನ್ನ ಮೇಲೆ ಬೀಳುತ್ತೋ ಎಂದು ನಿಮಿಷಕಾಲ ಅಂಜಿದನು. ಆ ಮೇಲೆ ಧೈರ್ಯವನ್ನು ತಂದುಕೊಂಡು ಅವಡುಗಚ್ಚಿ ಗಟ್ಟಿಯಾಗಿ ಗರ್ಜಿಸುತ್ತ—'ಮುಚ್ಚು ಬಾಯಿ! ಕಾನೂನು ಗೊತ್ತುಂಟೊಂತ ಕೊಚ್ಚುವುದು ಬೇಡ." ಎಂದು ಕಾಲನ್ನು ಅಪ್ಪಳಿಸುತ್ತ ಶೀನುವಿನ ಕೋಣೆಯೊಳಗೆ ಹೊಕ್ಕನು

ಮೊತ್ತಮೊದಲು ಕಣ್ಣಿಗೆ ಬಿದ್ದ ಅಣ್ಣನ ಅಂಗಿ ವಸ್ತ್ರಗಳ ಮಾಯ, ಕೈಪೆಟ್ಟಿಗೆಯ ಕಾಣೆ, ಮುಂತಾದ ದೃಶ್ಯಗಳಿಂದ ಅಣ್ಣನು ಊರನ್ನು ಬಿಟ್ಟು ಹೋಗಿರುವನೆಂದು ಸೂಚನೆಯಾಯಿತು. ಅವನ ದೊಡ್ಡ ಟ್ರಂಕು ಪೆಟ್ಟಿಗೆ ಮಾತ್ರ ಅಲ್ಲಿಯೇ ಇತ್ತು. ಆದರ ಮೇಲಿದ್ದ ಉದುಬಟ್ಟೆಯನ್ನು ಎತ್ತಿದನು. ಕೂಡಲೆ ಆದರ ಬುಡದಲ್ಲಿ ಅಡಗಿದ್ದ ಪತ್ರವು ಗೋಚರಿಸಿತು. ಲಗುಬಗೆಯಿಂದ ಆದನ್ನೆತ್ತಿಕೊಂಡು ಓದಿದನು. "ಏನು?—ಏನು?"

ಎಂದು ನಾಲ್ಕೈದು ಕೊರಳುಗಳಿಂದ ಪರಂಪರೆಯಾಗಿ ಪ್ರಶ್ನೆಗಳು ಹಾರಿ ದುವು. ಮೊದಲನೆಯ ಪಙ್ಕ್ತಿಯನ್ನು ಓದುತ್ತಲೇ ಸಾರಾಂಶವು ಹೊಳೆದು "ಏನಿಲ್ಲ–ಗಾಬರಿಯಿಲ್ಲ. ಅಣ್ಣ ಸುಖವಾಗಿದ್ದಾನೆ" ಎಂದು ಕೃಷ್ಣನು ಎಲ್ಲರಿಗೂ ಒಮ್ಮೆ ಸಮಾಧಾನವನ್ನು ಹೇಳಿ, ಪತ್ರವನ್ನು ಮೌನವಾಗಿ ಓದಿ ಮುಗಿಸಿದನು. ಆದರೂ ನೆರೆಕರೆಯವರು ಮುನ್ನುಗ್ಗಿ ಪತ್ರದ ಒಕ್ಕಣೆ ಗಳನ್ನು ನೋಡಲು–ಕುತ್ತಿಗೆಯನ್ನು ಮುಂದೆ ಚಾಚದೆ ಇರಲಿಲ್ಲ. ಆದರೆ ಕೃಷ್ಣನು ಪತ್ರವನ್ನು ಮರೆಸಿಕೊಂಡು, "ಹಾಗೇನಿಲ್ಲವಯ್ಯಾ! ಅವನಿಗೆ ಜರೂರಾಗಿ ಹೋಗುವ ಅಗತ್ಯ ಬಿದ್ದುದರಿಂದ ಹೇಳದೆ ಹೋಗಬೇಕಾಯಿ ತಂತೆ!"

"ಯಾವ ಊರಿಗೆ ಹೋಗಿದ್ದಾನೆ?" ಎಂದು ಯಾರೋ ಕೇಳಿ ದರು.

"ಮತ್ತೆ ಯಾವ ಊರಿಗೆ? ಮೊದಲು ಇದ್ದನಲ್ಲಾ?–ಅಲ್ಲಿಗೇ! ಕಾಗದ ಬಂದೀತು! ಇಷ್ಟೊಂದಕ್ಕೆ ಎಷ್ಟೊಂದು ಗಾಬರಿ ಮಾಡಿಬಿಟ್ಟರು ನೋಡಿದಿರಾ?" ಎಂದನು ಕೃಷ್ಣ.

"ಸಂದರ್ಭ ಹಾಗಿತ್ತು!" "ಅವನಾದರೂ ಹೀಗೇಕೆ ಮಾಡಿದ ನಯ್ಯಾ?" "ಏನೋ ಪಾಪ!– ಅವರವರ ಹೃದಯದ ಗುಟ್ಟು ಅವರ ವರಿಗೇ ಗೊತ್ತು" "........... .........." ಎಂದು ಮುಂತಾಗಿ ಅವರವರು ಅವರವರ ಬಾಯಿಗೆ ಬಂದ ಹಾಗೆ ಅಂದುಕೊಳ್ಳುತ್ತ ಅವರವರ ಪಾಡಿಗೆ ತೆರಳಿದರು. ಒಬ್ಬಿಬ್ಬರು ಪಿಸುಮಾತಿನಿಂದ "ಈ ಭೂತಾಕಾರದ ಹೆಂಡ ತಿಗೆ ಹೆದರಿಯೇ ಅವನು ಓಡಿರಬೇಕು" "ಓಡಿದನೋ ಉರುಲೇ ಹಾಕಿಕೊಂಡನೊ!" "ಅಲ್ಲಯ್ಯ! ಈ ಅಣ್ಣ ತಮ್ಮಂದಿರಿಗೇ ಏನೋ ಕಚ್ಚಾಟವೆದ್ದ ಹಾಗಿದೆಯಯ್ಯಾ?! "ಅಲ್ಲದೆ! ಇತ್ತೀಚೆಗೆ ಅಣ್ಣ ತಮ್ಮಂದಿರೊಳಗೆ ಸರಿಯಿಲ್ಲ. ತಮ್ಮನು ಮನೆಗೇ ಬರುವುದಿಲ್ಲ! ಹೆಂಡತಿ ಹೀಗಾಯಿತು! ಇದೆಲ್ಲಾ ನೋಡಿ ಯಾರಯ್ಯಾ ಪಲಾಯನ ಮಾಡದೆ ಕೂತಾರು?" ಎಂದೂ ಪಿಸುಗುಟ್ಟಿಕೊಂಡರು.

ಅಂತೂ ಶೀನಣ್ಣನು ಕ್ಷೇಮವಾಗಿ ಇದ್ದಾನೆಂದು ಕೃಷ್ಣನಿಗೆ ನಂಬುಗೆಯಾಯಿತು. ಸುಂದರಿ ಅತ್ತತ್ತು ಶಾಂತಳಾದವಳ ಚಂದದಿಂದ

"ಸುಂರ್-ಸುಂರ್" ಎಂದು ಮೂಗೊರೆಸಿಕೊಳ್ಳುತ್ತ "ಏನೂಂತ ಬರೆದಿದ್ದಾರೆ ಕೃಷ್ಣ? ಯಾಕಂತೆ-ಎಲ್ಲಿಗಂತೆ ಹೋದದ್ದು?" ಎಂದು ಮೆಲ್ಲನೆ ಕೇಳಿದಳು.

"ಎಲ್ಲಿಗಾದರೆ ನಿನಗೇನು? ಬೇಕಾದ್ದು ಬರೆದಿದ್ದಾನೆ. ಅದೆಲ್ಲಾ ನಿನಗೇಕೆ?" ಕೃಷ್ಣನು ಜರಿದು ನುಡಿದನು.

"ಅದೇನು ಹಾಗನ್ನುತ್ತೀ? ನಾನು ಅವರ ಹೆಂಡತಿಯಲ್ಲಾ? ಅವರ ಸಮಾಚಾರ ನಿನಗೋ-ನನಗೋ ಮುಖ್ಯಾ?—" ಸುಂದರಿ ಜೋರಿನಿಂದ ಕೇಳಿದಳು.

"ಮುಖ್ಯ ತಿಳಿದು ನೀನೇನು ಮಾಡುತ್ತೀ? ಬರೆದಿದ್ದಾನೆ ಹೀಗೆ, ನೀನು ಅವನ ಹೆಂಡತಿಯೂ ಅಲ್ಲಾ-ತಾನು ನಿನ್ನ ಗಂಡನೂ ಅಲ್ಲಾಂತ! ಎಲ್ಲಾ ಬಿಟ್ಟು ತಾನು ಸಂನ್ಯಾಸಿಯಾಗಿ ಹೋಗಿದ್ದೇನೇಂತ-ಬರೆದಿದ್ದಾನೆ ಮಹಾತ್ಮ!—"

"ಅಯ್ಯೊ! ಅಯ್ಯೊ! ಹಾಗೆ ಬರೆದಿದ್ದಾರೇ? ಅಯ್ಯೋ! ಇನ್ನೇನು ಗತಿ? ಯಾರಿದ್ದಾರೆ?—ನಾನು ಯಾರೊಡನೆ ಕೇಳಿಕೊಳ್ಳಲೀ?—" ಸುಂದರಿ ಪ್ರಲಾಪಿಸಲಾರಂಭಿಸಿದಳು.

"ಯಾಕೆ ಹೀಗೆ ಬಾಯಿಬಾಯಿ ಬಡೆದುಕೊಳ್ಳುತ್ತೀ ನಾಚಿಗೇಯಿಲ್ಲದೇ? ನಿನಗೇನಾಯಿತಮ್ಮಾ ಧಾಡಿ? ನಿನಗೆ ಮದುವೇ ಮಾಡಿಸಿದ ಮಹಾರಾಯರುಗಳು ಇದ್ದಾರಲ್ಲಾ? ನಿನಗೇನು ಕಡಿಮೆ? ಹೋಗಮ್ಮಾ! ಅವರೊಡನೆಯೇ ಮೊರೆಯಿಟ್ಟುಕೊ! ನಿನಗೇನಾದರೂ ಗತಿಗಾಣಿಸಿಯಾರು ಮಹಾನುಭಾವರು!"

ಮರ್ಮವೇಧಕವಾದ ಕೃಷ್ಣನ ಈ ಮಾತುಗಳನ್ನು ಕೇಳಿ, ಅದರಲ್ಲಿ ಹೊಳೆಯುವ ಅವನ ಹೃದ್ಗತವಾದ ಉದ್ದೇಶದ ಮಿಂಚಿನಿಂದ ಸುಂದರಿ ಜಾಗೃತಳಾದಳು. ಗಂಡನ ಸುಖಕ್ಕೆ ಎರವಾದ ವ್ಯಸನದೊಂದಿಗೆ ಮೈದುನನ ಕಾಟಕ್ಕೆ ಇದಿರಾಗಬೇಕಾಯಿತಲ್ಲಾ ಎಂದು ನುಡಿದಳು. ಆದರೂ ಅದು ನಿಮಿಷ ಕಾಲ ಮಾತ್ರ.—

"ಅದೇನು-ಅದೇನು ಹಾಗನ್ನುತ್ತೀ? ಒಹ್ಹೊ! ನಿನ್ನ ಹೊಲಬು ನೋಡಿದರೆ, ನನಗೆ ಈ ಮನೆಯಲ್ಲಿ ಹಕ್ಕೇ ಇಲ್ಲೆಂದ ಹಾಗೆ ಕಾಣುತ್ತೆ!

ಆಹಾಂ? ನನ್ನನ್ನು ಕುತ್ತಿಗೆಗೆ ಕೈಹಾಕಿ ಹೊರಗೆ ದೂಡುತ್ತೀಯೇನು? ಆಹಾಂ?!" ಎಂದು ಅರ್ಭಟಿಸುತ್ತ ರೌದ್ರಕಾರಿಣಿಯಾಗಿ ನಿಂತಳು.

"ಇಲ್ಲ—ಮಹಾನುಭಾವತ್ತಿ! ನಿನ್ನ ಕುತ್ತಿಗೆಗೆಲ್ಲಾ ನಾನೇಕೆ ಕೈಹಾಕಲೀ? ಒಳ್ಳೇ ಮಾತಿನಲ್ಲಿ ಹೇಳಿಬಿಡುತ್ತೇನೆ, ನಿನಗೂ ಈ ಮನೆಗೂ ಇನ್ನು ಏನೂ ಸಂಬಂಧವಿಲ್ಲ. ಹೇ, ಮನೆಗೆ ಹೊಕ್ಕ ಮಾರಿಯೆ!—ಯಾರನ್ನು ಕೈಹಿಡಿದು ನೀನು ಈ ಮನೆಯೊಳಗೆ ಹೊಕ್ಕಿರುತ್ತೀಯೋ, ಅವನು ನಿನ್ನನ್ನು ಕೊಡವಿ ಝಾಡಿಸಿಕೊಂಡು ಹೋಗಿಬಿಟ್ಟ. ಇನ್ನು ಯಾರೂ ನಿನ್ನನ್ನು ನೋಡಿಕೊಳ್ಳುವವರು ಈ ಮನೆಯಲ್ಲಿಲ್ಲ. ಆದ್ದರಿಂದ ನೀನು ನಿನ್ನ ಗಂಟು ಮೂಟೆಗಳನ್ನು ಹೊತ್ತುಕೊಂಡು ನಡೀ-ನಿನ್ನ ದಾರೀ ಹಿಡಿದು. ಇಲ್ಲವಾದರೆ ಬೇರೆ ವಿಧವಾಗಿಯೇ ನಿನ್ನ ಉಚ್ಚಾಟನೆ ಮಾಡಿಸಿಬಿಟ್ಟೇನು!" ಎಂದು ಕೃಷ್ಣನು ಕಣ್ಣುಗಳನ್ನು ಕೆರಳಿಸಿಕೊಂಡು ಹೇಳಿದನು.

ಸುಂದರಿ ಕೋಪ—ಸಂತಾಪಗಳಿಂದ ಚಡಪಡಿಸುತ್ತ—"ಅಹಹ! ಬೆದರಿಸುತ್ತಾನೆ ನೋಡು! ಏನೋ—ಕೇಳುವವರಿಲ್ಲಾಂತ ಮಾಡಿದ್ದಾನೆ! ಓಹೊ! ಅಣ್ಣನನ್ನು ಓಡಿಸಿ ಎಲ್ಲಾ ತಾನೇ ಎತ್ತಿಹಾಕಬೇಕಂತ ಮಾಡಿದ್ದೀಯಾ ಭೂಪ!"

"ಅಬ್ಬಾ! ರಾಕ್ಷಸಿ! ಕಾನೂನು ಬಾಯಿಗೇನೂ ಕಡಮೆಯಿಲ್ಲ, ಬರಲಿ ನಿನ್ನ ಕೇಳುವವರೆಲ್ಲಾ ನನ್ನ ಹತ್ತಿರಕ್ಕೆ! ನನ್ನ ಅಣ್ಣನಿಗೆ ಮದುವೆಯೇ ಆಗಲಿಲ್ಲವೆಂದು ಸಾಧಿಸಿಬಿಡುತ್ತೇನೆ!" ಹೀಗೆಂದು ಕೃಷ್ಣನು "ಗೌರಿ" ಎಂದು ತಂಗಿಯನ್ನು ಕರೆದನು.

ಗೌರಿ ಸಮೀಪಕ್ಕೆ ಬಂದಳು. "ಗೌರಿ, ಇನ್ನು ನೀನು ಈ ಮನೆಯಲ್ಲಿರಬೇಡ. ನಿನಗೆ ಬೇಕಾದ ವಸ್ತ್ರಗಳನ್ನು ತೆಗೆದುಕೋ!" ಎಂದು ಅವಳಿಗೆ ಆಜ್ಞಾಪಿಸಿ ಕೃಷ್ಣನು ಮನೆಯೊಳಗೆ ಹೋಗಿ, ಮುಖ್ಯವಾದ ಸಾಮಾನು ಪೆಟ್ಟಿಗೆಗಳನ್ನೆಲ್ಲಾ ಎತ್ತಿಕೊಂಡು ಬಂದು ಶೀನಣ್ಣನ ಕೋಣೆಯಲ್ಲಿ ಒಟ್ಟಿಟ್ಟು, ಅದಕ್ಕೊಂದು ಬಲವಾದ ಬೀಗವನ್ನು ಜಡಿದನು.

ಸುಂದರಿ ಕೋಪ-ಸಂತಾಪಗಳಿಂದ ಚೀರಾಡುತ್ತ ಕಡೆಗೆ "ಅಯ್ಯೋ! ಇನ್ನೇನು ಗತೀ!—ಎಲ್ಲಿ ಹೋಗಲೀ! ನನ್ನನ್ನು ಎಲ್ಲರೂ ಸೇರಿ ಬಿಟ್ಟು

ಹಾಕಿದರಲ್ಲಾ!—" ಎಂದು ಬಾಯಿಬಿಟ್ಟು ಗೋಳಾಡುತಿರಲು, ಕೃಷ್ಣನು ಗೌರಿಯನ್ನು ಕರೆದುಕೊಂಡು ಹೊರಟೇಹೋದನು.

ಅವನು ಹೋಗುವಾಗ ಆ ಮನೆಯಲ್ಲಿ ಎರಡು ಮೂರು ದಿನಗಳಿಗೆ ಬೇಕಾದ ಅಕ್ಕಿ–ಬೇಳೆ ಸಾಮಾನುಗಳು ಮಾತ್ರವೇ ಇದ್ದುವು. ಅವುಗಳು ಮುಗಿಯುತ್ತಾ ಬರಲು, ಅವಳು ಒಕ್ಕಲಿಗನ ಮನೆಗೆ ಹೋಗಿ ಗೇಣಿಯ ಅಕ್ಕಿಯಲ್ಲಿ ಏನಾದರೂ ಕೊಡುವಂತೆ ಕೇಳಿದಳು. ಯಜಮಾನ ಕೃಷ್ಣನ ಆಜ್ಞೆ ಈ ಮೊದಲೇ ಆ ಒಕ್ಕಲಿಗನಿಗೆ ಆಗಿದ್ದುದರಿಂದ ಅವನು ಅವಳಿಗೆ "ಏನೂ ಕೊಡಲಾರೆನೆ"ಂದು ಖಂಡಿತವಾಗಿ ಹೇಳಿಬಿಟ್ಟನು. ಇನ್ನೇನು ಮಾಡುವಳು ಪಾಪ! ರಾತ್ರಿ ದೀಪಹಚ್ಚಲಿಕ್ಕೆ ಎಣ್ಣೆಯೂ ಇಲ್ಲದೆ ಹೋಯಿತು; ತರಲಿಕ್ಕೆ ಕಾಸೂ ಇಲ್ಲ. ಏನು ಮಾಡುವುದೆಂದು ಹಣೆಹಣೆ ಚಪ್ಪಿಕೊಳ್ಳುತ್ತಾ ನೆರೆಮನೆಯವರೊಡನೆ ಮೊರೆಯಿಟ್ಟುಕೊಳ್ಳಲು, ಅವರು—"ಸುಂದರಮ್ಮಾ! ಇದಕ್ಕೆಲ್ಲಾ ನಿನ್ನ ಪರವಾಗಿ ನಿಂತು ವಾದಿಸಲು ನಿನ್ನ ಕಡೆಯ ಬಲವಾದ ಜನ ಬೇಕಮ್ಮ. ನಿನ್ನ ಮಾವ ನಾರಾಯಣಯ್ಯನ ಬಳಿಗೇ ಹೋಗಿ ಹೇಳಿಕೊಳ್ಳಬಾರದೇ? ಅವನೇನಾದರೂ ನಿನಗೊಂದು ನಿವೃತ್ತಿ ಮಾಡದೆ ಹೋದಾನೇ?" ಎಂದು ದಾರಿ ತೋರಿದರು. ಅವಳಿಗೆ ಅದರಲ್ಲಿ ಕೊಂಚವೂ ವಿಶ್ವಾಸವಿರಲಿಲ್ಲ. ಮದುವೆ ಮಾಡಿಕೊಟ್ಟ ಮೇಲೆ ತನಗೂ ಸುಂದರಿಗೂ ಯಾವ ಸಂಪರ್ಕ-ಸಂಬಂಧವಿಲ್ಲವೆಂದೂ–ತನ್ನ ಮನೆಗೆ ಸುಂದರಿ ಬರಬಾರದೆಂದೂ ನಾರಾಯಣಯ್ಯನು ಖಂಡಿತವಾಗಿ ಹೇಳಿದ್ದನು. ಅವಳ ಅಜ್ಜಿ ಲಕ್ಷ್ಮಮ್ಮನಿಗಿಂತಲೂ ಮೊದಲೇ ತೀರಿ ಹೋಗಿದ್ದಳು. ಇನ್ನು ಯಾರು ಇದ್ದಾರೆ? ಅವಳ ಈ ಸಂಕಟ ಸಮಸ್ಯೆಗಳನ್ನು ನಾರಾಯಣಯ್ಯನೊಡನೆ ಹೇಳಿಕೊಂಡರೂ ನಾರಾಯಣಯ್ಯ "ಈ ರಗಳೆಗೆಲ್ಲಾ ಇನ್ನು ನಾನಿಲ್ಲ. ಹೀಗೆಲ್ಲಾ ರಗಳೆ ಬಂದೀತೆಂತಲೇ ನಿನಗೆ ಬೇಕಾದಷ್ಟು ನಗ ಮಾಡಿಸಿ ಹಾಕಿದ್ದೇನಲ್ಲಾ? ಇನ್ನು ನಿನ್ನ ತಲೆಗೆ ನಿನ್ನ ಕೈ!" ಎಂದು ಅಟ್ಟಿಬಿಡುವರೆಂದು ಖಂಡಿತವಾಗಿ ತಿಳಿದಿದ್ದಳು. ಇನ್ನು ಜನ್ಮ ಕೊಟ್ಟ ತಂದೆ ಅವಳ ಪ್ರೀತಿಯನ್ನೇ ಕಡಿದು ಹಾಕಿ ಎಲ್ಲಿಯೋ ಮರೆಯಾಗಿದ್ದಾನೆ

ಆಗ ಅವಳ ಮನೋದೃಷ್ಟಿಗೆ ರಾಮಾ ಜೋಯಿಸರು ಗೋಚರಿಸಿ

ದರು. ಅಂದು ಮದುವೆಯ ಸಂದರ್ಭದಲ್ಲಿ ರಾಮಾ ಜೋಯಿಸರ ಪರಿಚಯವು ಸುಂದರಿಗೆ ಬಹಳ ಮಟ್ಟಿಗೆ ಆಗಿತ್ತು. ಅವರಾದರೂ ಸಮೀಪ ದಿಡ್ಡಂಬಳ ಗ್ರಾಮದಲ್ಲಿಯೇ ಇದ್ದಾರೆ. ಸವಿಮಾತಿನ ಆ ರಾಮಾ ಜೋಯಿಸರನ್ನೆ ಹಿಡಿದರೆ ಅವರೇನಾದರೂ ದಾರಿಯನ್ನು ತೋರಿಸಿಯಾರು ಅಥವಾ ಮಾವ-ನಾರಾಯಣಯ್ಯನ ಮನಸ್ಸನ್ನಾದರೂ ಅಸಹಾಯಳಾದ ತನಗೆ ಸಹಾಯ ಮಾಡುವಂತೆ ತಿರುಗಿಸಿಯಾರು. ಇದಕ್ಕೆ ಏನಾದರೂ ಪ್ರತಿಫಲ-ದಕ್ಷಿಣೆ ಅವರಿಗೆ ಕೊಟ್ಟರಾಯಿತು. ಆ ಪ್ರಾಂತದಲ್ಲಿ ಸುಂದರಿಗೆ ರಾಮಾ ಜೋಯಿಸರಿಗಿಂತಲೂ ನಂಬುಗೆಯ ಪರಿಚಯದವರು ಬೇರೆಯಾರೂ ಇರಲಿಲ್ಲ. ಆದುದರಿಂದ ಅದೇ ತೀರ್ಮಾನ ಮಾಡಿಕೊಂಡು, ಅವಳು ಮಧ್ಯಾಹ್ನ ತಿರುಗಿದ ಮೇಲೆ ಮನೆಯ ಬಾಗಿಲಿಗೆ ಒಂದು ಬೀಗವನ್ನು ಹಾಕಿ ದಿಡ್ಡಂಬಳಕ್ಕೆ ಹೊರಟಳು. ಹಾಗೆ ಹೋಗುವಾಗ ಮುಖ್ಯವಾದ ತನ್ನ ನಗದ ಕಿರುಪೆಟ್ಟಿಗೆಯನ್ನೂ ಹಿಡಿದುಕೊಂಡೇ ಹೋದಳು—ತಬ್ಬಲಿ ಮನೆಯಲ್ಲಿ ಬಿಟ್ಟುಹೋಗಲು ಧೈರ್ಯವು ಬಾರದೆ.

ಅವಳು ಎಷ್ಟು ಸಂತಾಪದಿಂದ ರಾಮಾ ಜೋಯಿಸರ ಮನೆಗೆ ಹೊರಟಿದ್ದಳೋ—ಸಂಜೆಯಾಗುವುದರೊಳಗೆ ಅಷ್ಟೇ ಸಮಾಧಾನದೊಡನೆ ವಾಪಾಸು ಬಂದಳು. ಆಗ ಅವಳ ಸೊಂಟದಲ್ಲಿ ಅಕ್ಕಿ ಬೇಳೆಯ ಒಂದು ಮೂಟೆಯೂ ಕೈಯಲ್ಲಿ ಸ್ವಲ್ಪ ದುಡ್ಡೂ ಇತ್ತು. ಆದರೆ ಮನೆಗೆ ಬಂದು ನೋಡುವುದೇನು? ಕೃಷ್ಣನು ಸರ್ವಾಧಿಕಾರಿಯಾಗಿದ್ದಾನೆ! ಹಾಗೆಯೆ ದಂಗುಬಡಿದು ಅಂಗಳದಲ್ಲಿಯೆ ನಿಂತಳು.

ಅವಳು ಮನೆಗೆ ಬೀಗವನ್ನು ಹಾಕಿ ದಿಡ್ಡಂಬಳಕ್ಕೆ ಹೋಗುತ್ತಲೇ ಅದನ್ನೆ ನಿರೀಕ್ಷಿಸಿಕೊಂಡಿರುವಂತೆ ತಿಳಿಸಲ್ಪಟ್ಟ ಒಕ್ಕಲು ಮಗನು ಆ ಸುದ್ದಿಯನ್ನು ಕೂಡಲೇ ಕೃಷ್ಣನಿಗೆ ಮುಟ್ಟಿಸಿದನು. ಒಡನೆಯೆ ಕೃಷ್ಣನು ಮನೆಗೆ ಬಂದು, ಅವಳು ಹಾಕಿದ ಬೀಗವನ್ನು ಒಡೆಯಿಸಿ, ಮನೆಯೊಳಗೆ ಹೊಕ್ಕು ಸುಂದರಿಯ ಸೀರೆ-ಬಟ್ಟೆ-ಚಾಪೆ-ಜಮಖಾನೆ ಮುಂತಾದ್ದೆಲ್ಲವನ್ನೂ ಒಂದು ಗಂಟು ಕಟ್ಟಿಸಿ ಹೊರಜಗುಲಿಯ ಮೂಲೆಯಲ್ಲಿ ತಂದಿರಿಸಿ ಉಳಿದೆಲ್ಲಾ ತನ್ನ ವಸ್ತುಗಳನ್ನೂ ಮನೆಯೊಳಗೆ ಅಣಿಮಾಡಿ, ಜಗುಲಿಯಲ್ಲಿ ಕುಳಿತಿದ್ದನು-ಅವಳ ಬರುವಿಕೆಯನ್ನೆ ಇದಿರು ನೋಡುತ್ತಿದ್ದ ಹಾಗೆ!

ಕೂಡಲೇ ಕೃಷ್ಣನು ಸುಂದರಿಯನ್ನು ಕುರಿತು—"ಓ! ಬಂದಿಯಾ ತಾಯಿ! ಇನ್ನು ಮನೆಯ ಒಳಗೆ ನಿನಗೇನೂ ಕೆಲಸವಿಲ್ಲಮ್ಮ. ಇಕೊ, ನಿನ್ನ-ಬಟ್ಟೆ-ಬರೆ-ಹೊಸತು-ಹಳತು ಎಲ್ಲವನ್ನೂ ಈ ಜಗುಲಿಯ ಮೂಲೆಯಲ್ಲಿಟ್ಟಿದ್ದೇನೆ. ರಾತ್ರಿ ಊಟಕ್ಕೇಂತ ನೀನು ಹಗಲೇ ಮಾಡಿಟ್ಟ ಅನ್ನ-ಹುಳಿ, ಮಜ್ಜಿಗೆ ಕೂಡಾ ಇಕೋ-ಇಲ್ಲಿ ಗಡಿಗೆಯ ಒಳಗುಂಟು. ನಿನ್ನ ಬಟ್ಟಲೂ ಉಂಟು. ನಿನ್ನ ಚಿಮಣಿಗೂ ಎಣ್ಣೆ ಹಾಕಿ ಇಟ್ಟಿದ್ದೇನೆ. ಕೂತು ಉಂಡು, ನೀರು ಕುಡಿದು ಮಲಗಿ ಬೆಳಗಾತ ಎದ್ದು ಹೋಗಿಬಿಡಮ್ಮ. ಇನ್ನು ಮನೆಯೊಳಗಿರುವುದೆಲ್ಲಾ ನನ್ನ ಸ್ವಂತ ಸಾಮಾನು. ನಿನ್ನದೇನೂ ಇಲ್ಲ. ಆಯಿತು" ಎಂದವನೇ ಕೃಷ್ಣನು-ಮನೆಯ ಬಾಗಿಲು ಹಾಕಿ ದೊಡ್ಡ ಬೀಗವನ್ನು ಜಡಿದು, ಬೆಂಕಿ ಪೆಟ್ಟಿಗೆಯನ್ನು ಗೀಚಿ, ಜಗುಲಿಯಲ್ಲಿ ಚಿಮಣಿ ದೀಪವ ಹಚ್ಚಿ-ಹಾಗೆಯೇ ಒಂದು ಬೀಡಿಯನ್ನೂ ಹಚ್ಚಿಕೊಂಡು ಸುಂದರಿಯ ಅಳು-ರೋಷ-ಸಿಡಿ-ಸುಡುಮಾತುಗಳು ಬಂದನ್ನೂ ಲಕ್ಷ್ಯ ಮಾಡದೆ ಸೀದಾ ಹೊರಟು ಹೋಗಿಬಿಟ್ಟನು!

---

## ೧೩. ಜೋಯಿಸನ ಸ್ವಾರ್ಥ ಜಾಲ!

ನಿನ್ನೆ ದಿನ ಸುಂದರಿ ರಾಮಾ ಜೋಯಿಸರಲ್ಲಿಗೆ ಹೋದಾಗ ಜೋಯಿಸರು ತಮ್ಮ ಮನೆಯಲ್ಲಿ ಒಂದು ವಾರ್ತಾ ಪತ್ರಿಕೆಯನ್ನು ಓದುತ್ತ ಕುಳಿತಿದ್ದರು. ಆಗ ಅಪರೂಪವಾಗಿ ಆಗಮಿಸಿದ ಸುಂದರಿಯನ್ನು ನೋಡಿ, ನಡೆದ ಸಂಗತಿ ಮಿಂಚಿನಂತೆ ಅವರಿಗೆ ಹೊಳೆಯಿತು. ಶೀನು ಪಲಾಯನ ಮಾಡಿದ ಸಂಗತಿ ಎಲ್ಲರಿಗಿಂತಲೂ ಮುಂದಾಗಿ ಅವರಿಗೆ ಗೊತ್ತಾಗಿತ್ತು. ಆದುದರಿಂದ ಈಗ ಅವಳ ಬರುವಿಕೆಯಿಂದ ಅವರಿಗೇನೂ ವಿಶೇಷವೆನಿಸಲಿಲ್ಲ. "ಬಾ, ಸುಂದರಾಬಾಯಿ! ಬಹಳ ಅಪರೂಪವಾಗಿ ಬಂದಿಯೆಲ್ಲಾ? ಏನು ವಿಶೇಷ ತಾಯಿ?" ಎಂದು ಅವಳನ್ನು ಸ್ವಾಗತೀಕರಿಸುತ್ತ ಪತ್ರಿಕೆಯನ್ನು ಕೆಳಗಿಟ್ಟು ಕನ್ನಡಕವನ್ನು ಮೂಗಿನಿಂದ ಕದಲಿಸಿದರು.

ಸುಂದರಿ ಜಗುಲಿಯಲ್ಲಿ ಕುಳಿತು, ಅಳುದನಿಯಿಂದ,— "ಏನು ಮಾಡಲಿ ಜೋಯಿಸರೇ? ನನ್ನ ಕೈಹಿಡಿದ ಗಂಡನು ನನ್ನನ್ನು ಈ ನಡು

ದಾರಿಲಿ ಬಿಟ್ಟು ಓಡಿಹೋದರು.—" ಎನ್ನುವಾಗ ಜೋಯಿಸರು ನಡುವೇ ಬಾಯಿಹಾಕಿ— "ಹೌದು ಹೌದು. ಇವತ್ತು ಬೆಳಗ್ಗೆ ತಾನೇ ನಾನೂ ಈ ಸುದ್ದಿಯನ್ನು ಕೇಳಿದೆನು. ಎಲ್ಲಾ ವಿವರವಾಗಿ ತಿಳಿಯಬೇಕಂತ ನಾನೇ ಹೊರಟು ಬರಬೇಕೆಂದಿದ್ದೆ. ನೀನೇ ಬಂದುಬಿಟ್ಟೆ!" ಎಂದು ಹೇಳಿ, ಒಳಗಡೆಗೆ ಮೋರೆಯನ್ನು ತಿರುಗಿಸಿ— "ಯಾರಿಲೇ! ಸ್ವಲ್ಪ ಬಾಯಾರಿಕೆ ತಾರೇ!" ಎಂದು ಕೂಗಿದರು.

"ಬೇಡ ಜೋಯಿಸರೆ, ಬಾಯಾರಿಕೆ ಬೇಡ. ಮುಖ್ಯ ಈಗ ನನ್ನ ಕಷ್ಟವನ್ನು ಹೇಳತೀರದು. ನಿಮ್ಮಲ್ಲೇ ತಂದೆ ಎಂಬ ವಿಶ್ವಾಸವಿಟ್ಟು ಕೊಂಡು ಬಂದಿದ್ದೇನೆ. ನನಗೆ ಸರಿಯಾದ ಒಂದು ದಾರಿಯನ್ನು ನೀವೇ ತೋರಿಸಬೇಕು—" ಎಂದು ಸುಂದರಿ ಜರುಗಿದ ಯಾವತ್ತೂ ವೃತ್ತಾಂತ ಗಳನ್ನು ಹೇಳಿ ತೀರಿಸಿ— "ಈಗ ಬರಿಯ ಮನೆಯಲ್ಲಿ ನಾನು ಹ್ಯಾಗೆ ಇರಲಿ? ಎಲ್ಲಿಗೆ ಹೋಗಲಿ? ಯಾರು ನನಗೆ ಸಹಾಯ ಮಾಡಿಯಾರು?— ಎಲ್ಲ ನೀವೇ ತಿಳಿಸಬೇಕು ಜೋಯಿಸರೆ!" ಎಂದು ಮರೆಹೊಕ್ಕಳು.

"ಓಹೋ, ಇದೋ ಸಂಗತಿ? ಆ ಪೋರ ಕೃಷ್ಣ ಆಷ್ಟರಮಟ್ಟಿಗೆ ಇದ್ದಾನೆಯೆ? ಏನೂ ಹೆದರಬೇಡಮ್ಮ. ಆ ಮನೆಯನ್ನು ಮಾತ್ರ ಬಿಟ್ಟು ಕದಲಬೇಡ. ಆತನು ನಿನ್ನನ್ನು ಹ್ಯಾಗೆ ಹೊರಗೆ ಹಾಕುತ್ತಾನೋ ನೋಡುವ. ನಿನಗೆ ಅಕ್ಕಿ–ಬೇಳೆ ಮುಂತಾಗಿ ಏನು ಬೇಕಾದರೂ ನಾನು ಕೊಡುತ್ತೇನೆ. ಏನೂ ಪರವಾಯಿಲ್ಲ ಅವನು ನಿನ್ನ ಮೈಮೇಲೆ ಕೈ ಹಾಕಿ ನೋಡಿಸಬೇಕು! ಆಗ ತಿಳಿಯುತ್ತೆ ಅವನ ಗತಿ!—" ಎಂದು ಹೇಳಿ ಆವಳಿಗೆ ಸಮಾಧಾನವನ್ನೂ ಧೈರ್ಯವನ್ನೂ ಊಡಿಸಿ, ಸ್ವಲ್ಪ ಚಿಲ್ಲರೆ ಯನ್ನೂ ಅಕ್ಕಿ–ಬೇಳೆ ಮುಂತಾದ ಸಾಮಾನುಗಳನ್ನೂ ಗಂಟುಕಟ್ಟಿಕೊಟ್ಟು ಕಳುಹಿಸಿದರು.

ನೆನೆದುದಕ್ಕಿಂತಲೂ ಹೆಚ್ಚಾದ ನಂಬುಗೆ–ಆದರ–ವಿಶ್ವಾಸಗಳನ್ನು ತೋರಿಸಿ "ನಾನೇ ನಿನ್ನ ತಂದೆ ಎಂದು ತಿಳಿಯಮ್ಮ" ಎಂದು ಬಾಯಿ ತೆರೆದು ಹೇಳಿದ ಜೋಯಿಸರ ಮೇಲೆ, ಸುಂದರಿಗೆ ತುಂಬಾ ನಂಬುಗೆಯೂ ಧೈರ್ಯವೂ ಉಂಟಾದುವು. ತನ್ನ ನಗದ ಕಿರು ಪೆಟ್ಟಿಗೆಯನ್ನು ಆ ಜೋಯಿಸರ ವಶಕ್ಕೆ ಒಪ್ಪಿಸಿ, ಮನೆಗೆ ಹಿಂದಿರುಗಿದಾಗ, ಮೇಲೆ ಹೇಳಿ ದಂತೆ ಕೃಷ್ಣನಿಂದ ಉಚ್ಚಾಟನೆಯಾಗಲ್ಪಟ್ಟಳು.

ಅವಳು ಬಂದು ಹೋದ ಮೇಲೆ ರಾಮಾಜೋಯಿಸರ ತಲೆಯಲ್ಲಿ ಅವಳ ವಿಚಾರವೇ ಸುಳಿದಾಡಲಾರಂಭವಾಗಿತ್ತು. ಆಡಿಗಡಿಗೆ ಆ ವಾರ್ತಾ ಪತ್ರಿಕೆಯಲ್ಲಿರುವ ಯಾವುದೋ ಒಂದು ವಿಷಯದ ಕಡೆಗೆ ಅವರ ಕಣ್ಣು ಹೋಗುತ್ತಿತ್ತು. ಹಿಂದೆ ಒಂದೆರಡು ಬಾರಿ ಆ ವಾರ್ತಾ ಪತ್ರಿಕೆಯಿಂದಲೂ ಅವರಿಗೆ ಲಾಭವಾಗಿತ್ತು. ಪತ್ರಿಕೆಗಳಲ್ಲಿ ಆಗಾಗ ಪ್ರಕಟವಾಗುವ "ವಧು ಬೇಕು" "ವರ ಬೇಕು" ಎಂಬ ಬೇಡಿಕೆಗಳಿಗೆ ಈ ಜೋಯಿಸರು ಒಂದೆರಡು ಬಾರಿ ಫಲದಾಯಕರಾಗಿ ಪ್ರತಿಫಲವನ್ನು ಪಡೆದಿದ್ದರು. ಇನ್ನೊಂದೆರಡು ಬಾರಿ "ವಧು ಬೇಕು" "ವರ ಬೇಕು" ಎಂಬ ಆ ಕೋರಿಕೆಗಳನ್ನು ಪರಾರ್ಥವಾಗಿ ತಾವೇ ಆ ಪತ್ರಿಕೆಯಲ್ಲಿ ಪ್ರಕಟಪಡಿಸಿ ಕಾರ್ಯವನ್ನು ಸಾಧಿಸಿ ತಕ್ಕ ಸಂಭಾವನೆಯನ್ನು ಹೊಂದಿದ್ದರು. ಅಂತೆಯೇ ಅವರು ಬೆಂಗಳೂರಿನ ಆ ಪ್ರಸಿದ್ಧವಾದ ಕನ್ನಡ ವಾರಪತ್ರಿಕೆಗೆ ಚಂದಾದಾರರಾಗಿದ್ದರು— ಯಾವಾಗಾದರೂ ಅದು ಲಾಭದಾಯಕವಾದುದೇ ಎಂದು. ಹಾಗಾದರೆ ಈಗ ಅವರು ಪದೇ ಪದೇ ನೋಡುತಿರುವ ಆ ಪತ್ರಿಕೆಯಲ್ಲಿ ಏನೋ ಒಂದು ವಿಶೇಷವಿರಲೇಬೇಕು. ಅದರಲ್ಲಿ ಹೀಗೊಂದು ಪ್ರಕಟನೆಯಿತ್ತು.—

"ಅನಾಥರಾದ ಕುರೂಪಿಯರಿಗೊಂದು ಸುಸಂಧಿ!

ಜನ್ಮತಃ ಅಕರಾಳ–ವಿಕರಾಳವಾದ ಕುರೂಪದಿಂದಿರುವ ತರುಣಿ ಹೆಂಗುಸು ಬೇಕು. 'ಏಕೆ ?–ಏನು'— ಎಂಬುದಕ್ಕೆ ಪತ್ರವ್ಯವಹಾರವನ್ನು ನಡೆಯಿಸುವ ಮೊದಲು, ಆ ಹೆಂಗುಸಿನ ಫೋಟೋವನ್ನು ಕಳುಹಿಸೋಣವಾಗಬೇಕು. ನಾವು ಒಪ್ಪಿದ ಫೋಟೋವಿಗೆ ರೂಪಾಯಿ ೧೦೦/— ಬಹುಮಾನವಿತ್ತು, ನಮ್ಮ ಖರ್ಚಿನಿಂದ ಆ ತರುಣಿಯನ್ನು ತರಿಸಿಕೊಳ್ಳುತ್ತೇವೆ.

ವಿಳಾಸ:— ಬಿ. ಟಿ. ಮುಖರ್ಜಿ,

ನಂ. ೨೮. ಕುಪ್ಪಣ್ಣ ಕುಟ್ಟೀ ರೋಡ್, ಮದರಾಸು."

ನಿನ್ನೆ ಬಂದ ಪತ್ರಿಕೆಯಲ್ಲಿತ್ತು ಈ ಹೊಸ ಮಾದರಿಯ ಪ್ರಕಟನೆ. 'ಏನೇ ಇರಲಿ, 'ಹೋದರೊಂದು ಕಲ್ಲು–ಸಿಕ್ಕಿದರೊಂದು ಹಣ್ಣು' ಆದರೆ ಮೊದಲು ಅವಳ ಫೋಟೋ ಹಿಡಿಯಬೇಕು. ಇದಕ್ಕೆ ಅವಳನ್ನು

ಹೇಗಾದರೂ ಒಪ್ಪಿಸಬೇಕು. ಇನ್ನೊ ವ್ಮೆ ಬೇಗದಲ್ಲಿಯೇ ಅವಳು ಇಲ್ಲಿಗೆ ಬಾರದೆ ಹೋಗಳು. ಹೇಗಾದರೂ ಕೃಷ್ಣನು ಅವಳನ್ನು ಮನೆಯಿಂದ ಹೊರಗೆ ಹಾಕದೆ ಇರಲಾರನು........ಹುಂ, ನೋಡೋಣ. ಅವಳಿಗೆ ಮದುವೆಯಾಗುವವರೆಗೆ ಆ ನಾರಾಯಣಯ್ಯ ಅವಳ ಅಪ್ಪನನ್ನು ಚೆನ್ನಾಗಿ ಹಿಂಡಿಕೊಂಡರು. ಈಗ ನಾನೂ ಯಾಕೆ ಕೊಂಚ ಹಿಂಡಿ ನೋಡಬಾರದು? — — ಹೌದಯ್ಯ! ಇದೊಳ್ಳೇ ಉಪಾಯ! ಎಲ್ಲಿ?— ಮುಕುಂದರಾಯರ ಎಡ್ರೆಸ್ ಇರಬೇಕಲ್ಲವೇ ನನ್ನ ಹತ್ತಿರ?'

ಈ ಬಗೆಯ ಲಾಭದಾಯಕವಾದ ಯೋಚನೆಯಲ್ಲಿ ಮುಳುಗಿದ ರಾಮಾ ಜೋಯಿಸರಿಗೆ ಸಾಯಂಕಾಲವಾದುದೂ ರಾತ್ರಿಯಾದುದೂ ತಿಳಿಯದೆ ಹೋಯಿತು. ಯಾವುದೋ ಒಂದು ಪಂಚಾಂಗದ ಕಟ್ಟನ್ನು ತಂದು ಹುಡುಕಿದರು. ಮಹಾ ಧೂರ್ತರಾದ ಅವರು ಹಿಂದೆ ಸುಂದರಿಯ ಮದುವೆಯ ಸಂದರ್ಭದಲ್ಲಿ ನಾರಾಯಣಯ್ಯನೊಡನೆ ಮಾತುಕತೆಯಾಡುತ್ತಿದ್ದಾಗ ಮುಕುಂದರಾಯರ ವಿಳಾಸವನ್ನು ತಮ್ಮ ಪಂಚಾಂಗದಲ್ಲಿ ಗುರುತುಮಾಡಿಕೊಂಡಿದ್ದರು. ಈಗ ಅದು ಸಿಕ್ಕಿತು.

"ಪಿ. ಮುಕುಂದರಾವ್

ಗೋಕುಲವಿಲ್ಲ.

ಅನಂತಪುರ."

ಎಂಬುದು ವಿಳಾಸ. "ಜೈ ರಾಮಾ ಜೋಯಿಸ!" ಎಂದು ತಮಗೆ ತಾವೇ ಜಯ ಜಯಕಾರ ಮಾಡಿಕೊಂಡರು. ಆಗ ಅವರ ಗೃಹಿಣಿ ರಾತ್ರಿಯಾದ ಸಂಗತಿಯನ್ನು ಎಚ್ಚರಿಸಿದಾಗಲೇ ಅವರಿಗೆ ಗೊತ್ತಾಯಿತು. ಕೂಡಲೇ ಜಪತಪಗಳನ್ನು ಚಿಟಿಕಿನಲ್ಲಿ ಮುಗಿಸಿ, ಗಬಗಬನೆ ಒಂದಿಷ್ಟು ಊಟವನ್ನು ಮಾಡಿ, ಲಾಂದರ, ಕಾಗದ, ಫೌಂಟನ್ ಪೇನ್ ಕನ್ನಡಕ ಇವುಗಳನ್ನು ಅಣಿಗೊಳಿಸಿಕೊಂಡು ಹೀಗೊಂದು ಪತ್ರವನ್ನು ಬರೆಯಲಾರಂಭಿಸಿದರು :—

"ಮಹಾರಾಜಶ್ರೀ ಮುಕುಂದರಾಯರ ದಿವ್ಯ ಸನ್ನಿಧಾನಕ್ಕೆ, ದಿಡ್ಡಂಬಳ ರಾಮಾ ಜೋಯಿಸನ ವಿನಮ್ರ ವಿಜ್ಞಾಪನೆಗಳು. ನನ್ನ

ಹಾಗು ತಮ್ಮ-ಮುಖತಃ ಪರಿಚಯವಿಲ್ಲದಿದ್ದರೂ ಕೊಳ್ಕಾಜೆ ನಾರಾಯ ಣಯ್ಯನ ಮೂಲಕವಾಗಿ ತಮಗೆ ನಾನು ಯಾರೆಂದು ತಿಳಿದಿರಬಹುದು. ಸೌ. ಸುಂದರೀಬಾಯಿಯೆಂಬ ನಿಮ್ಮ ತ್ಯಾಜ್ಯಪುತ್ರಿ ನಾರಾಯಣಯ್ಯನ ಪರಾಮರ್ಶೆಯಲ್ಲಿದ್ದಳಷ್ಟೆ? ಅವಳಿಗೆ ನನ್ನ ಪ್ರಯತ್ನದಿಂದ ವಿವಾಹ ವಾದ ಸಮಾಚಾರವನ್ನು ತಾವು ಬಲ್ಲಿರಿ. ಈಗ ಅವಳ ಗಂಡನಾದ ಕಿರುಗಟ್ಟೆ ಶ್ರೀನಿವಾಸ ಎಂಬ ಹುಡುಗನು ಸೌ. ಸುಂದರೀಬಾಯಿಯನ್ನು ತ್ಯಾಜ್ಯಮಾಡಿ ಪತ್ತೆಯಿಲ್ಲದೆ ಹೋಗಿರುತ್ತಾನೆ ಅವನ ತಮ್ಮನಾದ ಕೃಷ್ಣ ರಾಯನು ಯಜಮಾನಿಕೆಯನ್ನು ಕೈವಶಪಡಿಸಿಕೊಂಡು, ಸೌ. ಸುಂದರೀ ಬಾಯಿಯನ್ನು ಮನೆಯಿಂದ ಹೊರಗೆಹಾಕಿರುತ್ತಾನೆ ಈಗ ಅವಳಿಗೆ ಎಲ್ಲಿಯೂ ಆಶ್ರಯವಿಲ್ಲದ ಕಾರಣ, ಪ್ರಕೃತ ನನ್ನ ಮನೆಯಲ್ಲಿದ್ದಾಳೆ. ನಾನು ಕೊಳ್ಕಾಜೆ ನಾರಾಯಣಯ್ಯನೊಡನೆ ಈ ವಿಷಯವಾಗಿ ಮಾತ ನಾಡಲು— "ಇನ್ನು ಮೇಲೆ ಅವಳ ವಿಚಾರಕ್ಕೆ ನಾನು ತಲೆಹಾಕುವದಿಲ್ಲ; ಮದುವೆಯಾಗುವ ವರೆಗೆ ಮಾತ್ರವೇ ನನಗೊಂದು ಕರ್ತವ್ಯವಿತ್ತು. ಇನ್ನು ಅವಳು ನನ್ನ ಮನೆಗೆ ಖಂಡಿತವಾಗಿ ಕಾಲಿಡಕೂಡದು." ಎಂದು ಹೇಳಿ ಬಿಟ್ಟಿದ್ದಾರೆ. ಇನ್ನು ಆ ಅಬಲೆ ಎಲ್ಲಿಗೆ ಹೋಗಬೇಕು? ಯಾರ ಆಶ್ರಯವನ್ನು ಪಡೆಯಬೇಕು? ಜನ್ಮದಾತರಾದ ತಾವೇ ಈಗ ಅವಳ ಮೇಲ್ವಿಚಾರಕರಾಗಿರುವಿರೆಂದು ಜ್ಞಾಪಿಸಿಕೊಳ್ಳುತ್ತೇನೆ. ತಾವೇ ಅವ ಳನ್ನು ಈಗ ಕಾಪಾಡಬೇಕಾಗಿದೆ. ಆದರೆ ತಾವು ಅವಳ ವಿಷಯದಲ್ಲಿ ಯಾವ ಬಗೆಯ ಮನೋಭಾವವುಳ್ಳವರಿರುವಿರೆಂದು ನಾನು ಬಲ್ಲೆನು. ಆದುದರಿಂದ ತಮ್ಮ ಗೌರವಕ್ಕೆ ಕುಂದು ಬಾರದ ರೀತಿಯಲ್ಲಿ ನಿವೃತ್ತಿ ಪಡಿಸಲಿಕ್ಕೂ ಮಾರ್ಗವುಂಟು. ಆದರೆ ಅದಕ್ಕೆ ತಮ್ಮ ಅನುಮತಿಯಿಲ್ಲದೆ ನಾನಾಗಿ ಏನು ಮಾಡಲಿಕ್ಕೂ ಸಾಧ್ಯವಿಲ್ಲ. ಈ ಬಗೆಯ ದಾರಿಯಲ್ಲಿ ನಡೆದರೆ— ಯಾರಿಗೂ ಏನು ತಿಳಿಯದೆ, ಸುಂದರಿಬಾಯಿಯೂ ಸುಖ ವಾಗಿ ಬಾಳಿಕೊಂಡಿರುವಳು. ಇದಕ್ಕೆ ಅವಳ ಒಪ್ಪಿಗೆಯುಂಟು. ಆದರೆ ಇದಕ್ಕೆ ಸ್ವಲ್ಪ ಹಣದ ಸಹಾಯವೂ ಬೇಕು. ಆದುದರಿಂದ ಧನಶಾಲಿ ಗಳಾದ ತಾವು ಯೋಚನೆಮಾಡಿ ಉತ್ತರ ಬರೆಯುವಿರಾಗಿ ನಂಬಿದ್ದೇನೆ. ತಾವು ಉತ್ತರ ಬರೆಯಲು ನಿರಾಕರಿಸಿದಿರಾದರೆ, ನಾನು ಸೌ. ಸುಂದರೀ

ಬಾಯಿಯನ್ನು ಕರೆದುಕೊಂಡು ತಮ್ಮ ಬಳಿಗೆ ಬಂದುಬಿಟ್ಟು, ನನ್ನ ಭಾರ ವನ್ನು ನೀಗಿಕೊಳ್ಳುತ್ತೇನೆ. ಇದರೊಂದಿಗೆ ಅವಳೂ ತಮ್ಮನ್ನು ಪ್ರಾರ್ಥಿಸಿ ಕೊಂಡು ಪತ್ರವನ್ನು ಬರೆದಿರುತ್ತಾಳೆ. ಓದಿಕೊಂಡು ದಿವ್ಯಚಿತ್ತಕ್ಕೆ ತೋರಿದಂತೆ ಮಾಡುವುದು ಇಂತು ತಮ್ಮ ವಿಧೇಯ.

ರಾಮಾ ಜೋಯಿಸ.''

ಹೀಗೆ ಬರೆದು ಮುಗಿಸಿದ ಮೇಲೆ, ಆ ಜೋಯಿಸರು ತಮ್ಮ ಮಗ ಳನ್ನು ಕರೆದು ಅವಳ ಕೈಯಿಂದ ಇನ್ನೊಂದು ಪತ್ರವನ್ನು ತಾವು ಒಕ್ಕಣೆ ಹೇಳಿ ಹೀಗೆ ಬರೆಸಿದರು :—

" ಶ್ರೀ. ಸ್ವ ತಂದೆಯವರ ಪಾದಕ್ಕೆ ನಿಮ್ಮ ನಿರ್ಭಾಗ್ಯಳಾದ ಮಗಳು ಸುಂದರೀಬಾಯಿ ಮಾಡುವ ಸಾಷ್ಟಾಂಗ ನಮಸ್ಕಾರ. ಕ್ಷೇಮ, ಅಪ್ಪಾ, ನಿಮಗೆ ನನ್ನ ಕ್ಷೇಮವನ್ನು ತಿಳಿಯಬೇಕೆಂಬ ಕುತೂಹಲವಿರುತ್ತಿದ್ದರೆ ಒಮ್ಮೆಯಾದರೂ ನನ್ನನ್ನು ನೋಡದಿರುತ್ತಿದ್ದಿರಾ? ಹತಭಾಗ್ಯಳಾದ ನಾನು ಕುರೂಪಿಯಾಗಿ ಹುಟ್ಟಿದ್ದು ನನ್ನ ತಪ್ಪೆ? ಅದಕ್ಕಾಗಿ ನೀವು ಮಗ ಳನ್ನು ನೋಡುವುದು ಗೌರವಹೀನವೆಂದು ತಿಳಿಯಬಹುದೆ? ಉಪಾಯ ದಿಂದ ಹೊರಗಿಂದ ಹೊರಗೇ ನನ್ನ ಮದುವೆಯನ್ನು ಮಾವನ ಮುಖಾಂತರವಾಗಿ ಮಾಡಿಸಿದಿರಿ. ಮದುವೆಯ ಸಮಯಕ್ಕೂ ನೀವು ಬರಲಿಲ್ಲ. ಈಗ ನನ್ನನ್ನು ಗಂಡನು ಬಿಟ್ಟು ಓಡಿಹೋಗಿರುತ್ತಾನೆ. ನನ್ನ ೫೦೦ ರೂಪಾಯಿಯ ನಗಗಳನ್ನೆಲ್ಲಾ ಮೈದುನನು ಎತ್ತಿಹಾಕಿ ನನ್ನನ್ನು ಮನೆಯಿಂದ ಹೊರಗೆ ದೂಡಿದ್ದಾನೆ. ಮಾವನೂ ನನಗೆ ಆಶ್ರಯವೀಯ ಲಿಲ್ಲ. ಈಗ ದಯಾಶಾಲಿಗಳಾದ ರಾಮಾ ಜೋಯಿಸರು ನನಗೆ ತಂದೆಯ ಹಾಗೆ ಆಶ್ರಯವಿತ್ತಿದ್ದಾರೆ. ಆದರೂ ಬಡವರಾದ ಇವರ ಮನೆಯಲ್ಲಿ ನಾನು ಎಷ್ಟು ದಿನ ಇರಬಹುದು? ನನ್ನ ಮದುವೆಗಾದರೂ ಇವರೇ ತುಂಬಾ ಸಹಾಯ ಮಾಡಿದ್ದರು. ಆ ನಂಬುಗೆಯಿಂದಲೇ ಇವರ ಆಶ್ರಯ ದಲ್ಲಿದ್ದೇನೆ. ಈಗ ನನಗೆ ನಿಮ್ಮ ಹೊರತು ಬೇರೆ ದಿಕ್ಕು ಕಾಣುವುದಿಲ್ಲ. ನೀವು ದಯಮಾಡಿ ನನ್ನನ್ನು ಕರೆಯಿಸಿಕೊಂಡು, ನನ್ನ ಗಂಡನನ್ನು ಹುಡುಕಿಸಲಿಕ್ಕೂ, ಗಂಡನ ಮನೆಯ ಹಕ್ಕುಗಳನ್ನು ದೊರೆಕಿಸಲಿಕ್ಕೂ, ಎತ್ತಿಹಾಕಲ್ಪಟ್ಟ ನನ್ನ ನಗಗಳನ್ನು ಮರಳಿ ಮೊಂಟಿಸಲಿಕ್ಕೂ ನೀವು

ಸಹಾಯಕರಾಗಬೇಕು. ಗಂಡನ ಮನೆಯ ಗತಿ ತಪ್ಪಿದಮೇಲೆ ತಂದೆಯ ಮನೆಯೇ ಗತಿಯಲ್ಲವೆ? ಆದುದರಿಂದ ಅಪ್ಪಾ, ನೀವು ಬೇಗನೇ ಬಂದು ನನ್ನನ್ನು ಕರೆದುಕೊಂಡು ಹೋಗದಿದ್ದರೆ, ನಾನು ರಾಮಾ ಜೋಯಿಸರನ್ನೆ ಕರೆದುಕೊಂಡು ಹ್ಯಾಗಾದರೂ ನಿಮ್ಮಲ್ಲಿ ಬಂದು ಸೇರುತ್ತೇನೆ. ಹೆಚ್ಚಿನ ವಿವರಗಳನ್ನೆಲ್ಲಾ ಶ್ರೀ ಜೋಯಿಸರೇ ನಿಮಗೆ ಬರೆದಿದ್ದಾರೆ. ಒಟ್ಟಾರೆ, ಅಪ್ಪಾ, ಇನ್ನು ನನ್ನನ್ನು ನೀವೇ ಕಾಪಾಡಬೇಕೆಂದು ಸೆರಗೊಡ್ಡಿ ಬೇಡುತಿದ್ದೇನೆ. ಸಂಕಷ್ಟದಲ್ಲಿ ಸಿಕ್ಕಿಬಿದ್ದಿರುವ ಈ ನಿಮ್ಮ ಹೊಟ್ಟೆಯ ಮಗಳ ಮೇಲೆ ಪ್ರೀತಿ ಇರಲಿ. ಇತಿ ಮಾಡುವ ಸಾಷ್ಟಾಂಗ ನಮಸ್ಕಾರ—
ನಿಮ್ಮ ನಿರ್ಭಾಗ್ಯಳಾದ ಮಗಳು— "ಸುಂದರಿ"

ಈ ಬಗೆಯ ಪತ್ರಗಳನ್ನು ಸೃಷ್ಟಿ ಮಾಡಿದ ಮೇಲೆ ಜೋಯಿಸರು ಚಾಪೆಯಲ್ಲಿ ಮಲಗಿದರೂ, ತಲೆಯಲ್ಲಿ ಅದೇ ವಿಚಾರವೇ ಸುಳಿದಾಡುತ್ತಿತ್ತು. "ಈ ಪತ್ರಗಳನ್ನೇನೋ ನಾಳೆಯೇ ಟಪ್ಪಾಲಿಗೆ ಹಾಕಿಬಿಡುವುದು. ಎಂಟು ದಿನದೊಳಗೆ ಉತ್ತರ ಬಂದೀತು. "ಓ ಜೋಯಿಸರೆ, ನೀವೇ ಹೇಗಾದರೂ ಅತ್ತಣಿಂದತ್ತವೇ ಗಡೀಪಾರು ಮಾಡಿಸಿರಯ್ಯ! ಅದಕ್ಕೆ ತಕ್ಕ ರೂಪಾಯಿಯನ್ನು ಇಗೋ ಕಳುಹಿಸಿರುತ್ತೇನೆ." ಎಂದೇ ಮುಕುಂದರಾಯರ ಉತ್ತರ ಬಂದೀತು. ಸರಿ, ಆಮೇಲೆ ಸುಂದರಿಯನ್ನು ಏನು ಮಾಡಬೇಕು?— ಆಹಾ! ಇದೇನು ಯೋಗವೆಂದರೆ! ಪತ್ರಿಕೆಯಲ್ಲಿ ಪ್ರಕಟನೆಯನ್ನು ಕೊಟ್ಟು ಮುಖರ್ಜಿಗೆ ಸುಂದರಿಯ ಫೋಟೋ ಒಂದು ಕಳುಹಿಸಬೇಕು. ಇದು ಗೆದ್ದರೆ ಹೇಗಿದ್ದರೂ ನೂರು ರೂಪಾಯಿ ಗಂಟು ನನಗೆ ಕಾದಿಟ್ಟಿದೇ ಉಂಟು. ಹೆಂಗುಸೂ ಗಡೀಪಾರಾದ ಹಾಗೆಯೇ ಸರಿ.— ಆದರೆ ಒಂದು ವೇಳೆ ಆ ನಾರಾಯಣಯ್ಯ ಎಂದಾದರೂ ಆ ಸುಂದರಿಯ ವಿಷಯ ನನ್ನ ಕೂಡ ಪ್ರಶ್ನೆ ಮಾಡದೆ ಇರಲಿಕ್ಕಿಲ್ಲ. ಅವಕ್ಕೇನು ಹೇಳುವುದು? ಹೇಳುವುದೇನು? 'ನೀವು ಹೇಗೂ ಸುಂದರಿಯ ಸಂಬಂಧವನ್ನೆ ಕಡಿದು— ಆವಳು ಮನೆಗೇ ಬರಬಾರದೆಂದು ಖಂಡಿತ ಹೇಳಿದ್ದೀರಿ. ಆದುದರಿಂದ ಆವಳು ನನ್ನ ಮರೆಹೊಕ್ಕಳು. ಪಾಪ, ಗಂಡನ ಬಳಿಗೆ ಹೋಗಬೇಕೆಂತಲೇ ಆವಳ ಇಚ್ಛೆಯಿತ್ತು. ಹೊಸಪೇಟೆಯಲ್ಲಿ ಶೀನು ಇದ್ದಾನೆಂತ ಅವಳಿಗೆ ಗೊತ್ತು. ಅಲ್ಲಿಯವರೆಗೆ ನೀವೂ

ಬರಬೇಕಂತ ನನ್ನನ್ನು ಬೇಡಿಕೊಂಡಳು. ನಾನು 'ಆಗಲಿ ಅಮ್ಮಾ'ಂತ ಅವಳನ್ನು ಹೊಸಪೇಟೆಗೆ ಕರೆದೊಯ್ದು— ಒಂದು ಹೋಟೆಲಿನಲ್ಲಿ ಶ್ರೀನಿವಾಸನ ಪತ್ತೆಹಚ್ಚಿ, ಅವಳನ್ನು ಬಿಟ್ಟುಬಂದೆ. ತಪ್ಪೇನು?' ಎಂದು ಹೇಳಿಬಿಡುತ್ತೇನೆ. ನಾರಾಯಣಯ್ಯ ಅಲ್ಲಾ ಯಾರು ಕೇಳಿದರೂ ಹೀಗೆಯೇ ಹೇಳಬೇಕು. ಇನ್ನು—ಹೌದು. ಅವಳ ಐನೂರು ರೂಪಾಯಿಯ ನಗದ ಕಿರುಪೆಟ್ಟಿಗೆಯೊಂದಿದೆ.— ನೋಡೋಣ; ಅದೂ ಈ ರಾಮಾ ಜೋಯಿಸನಿಗೆ ಸಾಧ್ಯವಾಗಲಿಕ್ಕಿಲ್ಲವೆ?—"

ಚಂದ್ರೋದಯದ ಕಾಲದಲ್ಲಿ ಉಬ್ಬುವ ಕಡಲಿನಂತೆ, ಲಾಭದಾಯಕವಾದ ಆ ಆಲೋಚನಾಲಹರಿಗಳ ಆನಂದದಿಂದ ಉಬ್ಬಿಕೊಂಡೇ-ನಿದ್ರಾ-ಜಾಗ್ರತಾವಸ್ಥೆಗಳಿಂದ ರಾಮಾ ಜೋಯಿಸರು ಆ ರಾತ್ರಿಯನ್ನು ಕಳೆದರು. ಬೆಳಗಾದರೂ ಅವರ ಆಲೋಚನೆ ಸಾಗಿಕೊಂಡೇ ಇತ್ತು. ಅವರ ಮನೆಗೆ ಸಮೀಪದಲ್ಲಿರುವ ಮಾಸ್ತರ ಕಿಟ್ಟಯ್ಯನ ಬಳಿಯಲ್ಲಿ ಒಂದು ಕ್ಯಾಮರಾ ಉಂಟು. ಸುಂದರಿ ಹೇಗಿದ್ದರೂ ನಾಳೆ-ನಾಡದಿನೊಳಗೆ ಜೋಯಿಸರ ಬಳಿಗೆ ಬಾರದೆ ಹೋಗಳು. ಆಗ ಹೇಗೆ ಅವಳನ್ನು ಉಪಾಯದಿಂದ ಮಾಸ್ತರ್ ಕಿಟ್ಟಯ್ಯನ ಮನೆಗೆ ಕರೆದೊಯ್ದು ಫೋಟೋ ಹಿಡಿಸಬೇಕು, ಎಂದೆಲ್ಲಾ ಗಣನೆಮಾಡುತಿರುವಾಗ, ಅವರ ಸೌಭಾಗ್ಯ ಮಂದಿರಾಧಿದೇವತೆಯಾದ ಸುಂದರೀಬಾಯಿಯೇ—ಅವರ ಬಳಿಗೆ ಆಗಲೇ ಐತಂದಳು.

ಕೃಷ್ಣನಿಂದ ಉಚ್ಚಾಟಿತೆಯಾದ ಸುಂದರಿ, ತನ್ನ ಗಂಟುಮೂಟೆಗಳನ್ನು ಒಬ್ಬ ಹುಡುಗನಿಂದ ತಲೆಯಮೇಲೆ ಹೊರಿಸಿಕೊಂಡು ಬಂದು "ಉಸ್ಸಪ್ಪಾ" ಎಂದು ಜೋಯಿಸರ ಮುಂದೆ ಜಗುಲಿಯಲ್ಲಿ ಕುಳಿತಳು. "ಇದೇನಮ್ಮ? ಮತ್ತೇನಾಯಿತು?" ಎಂದು ಜೋಯಿಸರ ಬಾಯಿಯಿಂದ ಆಶ್ಚರ್ಯದ ಶಬ್ದವು ಹೊರಟಿತು.

"ಎಲ್ಲಾ ಆಗಿಯೇ ಹೋಯಿತು. ನಿನ್ನೆ ನಾನು ಇಲ್ಲಿಗೆ ಬಂದೆನೋ ಇಲ್ಲವೋ?— ಅದನ್ನೇ ನೋಡಿಕೊಂಡಿದ್ದ ಆ ಕೃಷ್ಣ, ಕೂಡಲೇ ಬೇಗ ಮುರಿದು ಮನೆಯೊಳಗೆ ಹೊಕ್ಕು ತನ್ನ ಅಧಿಕಾರವನ್ನು ಸ್ಥಾಪಿಸಿಬಿಟ್ಟ! ನನ್ನನ್ನು ಹೊರಗೆ ಅಟ್ಟೇಬಿಟ್ಟ!—" ಎಂದು ಸುಂದರಿ ಪ್ರಾರಂಭಿಸಿ ನಡೆದ ಸಂಗತಿಗಳನ್ನು ಹೇಳಿ ತೀರಿಸಿದಳು.

ಎಲ್ಲವನ್ನೂ ಕೇಳಿಕೊಂಡು ಜೋಯಿಸರು ಸ್ವಲ್ಪ ಉದ್ದವಾದ ಆಲೋಚನೆಯನ್ನು ಮಾಡಿ— "ಸರಿಯಮ್ಮ. ಒಳ್ಳೆಯದೇ ಆಯಿತು ಬಿಡು. ಸುಂದರೀಬಾಯಿ! ನೀನೇನೂ ಚಿಂತೆಮಾಡಬೇಡ! ನಿನಗೆ ಸುಖವಾಗುವ ಹಾಗೆ ನಾನು ದಾರೀ ತೋರಿಸದಿದ್ದರೆ ನಾನು ರಾಮಾ ಜೋಯಿಸನೇ ಅಲ್ಲವೆಂದು ತಿಳಿ!"

ಈ ದೃಢ ಪ್ರತಿಜ್ಞಾ ಧ್ವನಿಯನ್ನು ಕೇಳಿ ಸುಂದರಿಗೆ ಪರಮ ಸಮಾಧಾನವಾಯಿತು, "ಏನು ಮಾಡುವುದು? ನಿಮಗೆ ನನ್ನಿಂದ ತುಂಬಾ ತೊಂದರೆಯಾದಹಾಗಾಯಿತು." ಎಂದಳು ಕೃತಜ್ಞತಾಸೂಚಕವಾಗಿ.

"ಅದಕ್ಕೇನು ಬಿಡಮ್ಮ. ನನಗೂ ಮಕ್ಕಳು ಮರಿಗಳು ಇಲ್ಲವೆ? ಅದಿರಲಿ ಸುಂದರಮ್ಮ. ನಾನು ಹೇಳುವುದನ್ನು ಸಮಾಧಾನದಿಂದ ಕೇಳು. ನಿನ್ನ ವೈದುಸನಾದ ಕೃಷ್ಣನು ಒಂದು ರೀತಿಯ ಸ್ವಭಾವದವನಾದುದರಿಂದ ನಿನಗೂ ಅವನಿಗೂ ಎಂದಿಗೂ ಸರಿಹೋಗಲಿಕ್ಕಿಲ್ಲ ಮುಂದೆಯಾದರೂ ಅವನು ನಿನ್ನನ್ನು ಮನೆಯಿಂದ ಹೊರಗೆ ಹಾಕತಕ್ಕವನೆ. ಇನ್ನು ನಿನ್ನ ಹಕ್ಕನ್ನು ಅವನಿಂದ ಸೆಳೆದುಕೊಳ್ಳಬೇಕಾದರೆ, ಕೋರ್ಟಿನ ಮೆಟ್ಟಲನ್ನು ಹತ್ತಬೇಕು. ಕಾನೂನು ಬಹಳ ತೀಕ್ಷ್ಣವಾಗಿವೆ. ನಿನ್ನ ಗಂಡ ಜೀವದಲ್ಲಿರುವನಾದುದರಿಂದ ಅವನ ಮೇಲೆಯೇ ವ್ಯಾಜ್ಯಕ್ಕೆ ಹೋಗಬೇಕು. ಅವನು ಎಲ್ಲಿದ್ದಾನೋ-ಏನೋ ದೇವರೇ ಬಲ್ಲ.—"

"ಬಹುಶಃ ಹೊಸಪೇಟೆಯಲ್ಲಿ ಇದ್ದಾರೋ ಏನೊ!"

"ಏನೊ! ಹೊಸಪೇಟೆಯಲ್ಲೆ ಇದ್ದಾನಂತ ಮಾಡುವ. ಅಲ್ಲಿಗೇ ಹೋಗಿ ಅವನೊಂದಿಗೆ ಸಂಸಾರ ಮಾಡಿಕೊಂಡಿರಬೇಕಂತ ನಿನಗೆ ಇಷ್ಟ ಉಂಟೊ?"

"ಉಂಟು, ಹಾಗೆ ನೀವು ಮಾಡಿಸಿದರೆ ನಿಮ್ಮ ಉಪಕಾರ ಎಂದಿಗಾದರೂ ಮರೆತೇನೆ?"

"ಹುಚ್ಚಿ– ಹುಚ್ಚೀಂದರೆ ನೀನೆ ಸರಿ! ನೀನಿನ್ನು ಅವನ ಬಳಿಗೆ ಹೋದರೆ ಅವನು ಪ್ರಾಣವನ್ನು ಕಳಕೊಂಡಾನಲ್ಲದೆ, ನಿನ್ನನ್ನು ಇಟ್ಟುಕೊಳ್ಳಲಿಕ್ಕಿಲ್ಲ. ತಿರುಗಿ ಕೇಳಿದರೆ ಅವನು ಎಲ್ಲಿಯೋ ಸಂನ್ಯಾಸಿಯಾಗಿ ಹೋಗಿರುತ್ತಾನಲ್ಲದೆ ಹುಡುಕಿದ ಕೂಡಲೇ ಸಿಕ್ಕಿಬಿಡುತ್ತಾನೇನು?"

"ಅಲ್ಲ ಜೋಯಿಸರೆ, ಸಿಟ್ಟಾಗಬೇಡಿ. ಸಂನ್ಯಾಸಿಯಾಗುವಂತವರೊಡನೆ ನೀವೇ ನನ್ನ ಮದುವೆ ಮಾಡಿಸಿದಿರಲ್ಲಾ?"

" ಇದೊಳ್ಳೇ ಮಾತು! ಮುಂದೆ ಹೀಗೆಲ್ಲಾ ಆಗುತ್ತೇಂತ ತಿಳಿದಿದ್ದರೆ ಈ ಭೂಮಿಯೇ ಸ್ವರ್ಗವಾಗುತಿತ್ತು ಗೊತ್ತೊ? ಅಂತು ಸುಂದರಿಬಾಯಿ! ಇನ್ನು ನೀನು ಶೀನುವಿನ ಆಶೆಯನ್ನು ಬಿಟ್ಟುಬಿಡಬೇಕು "

" ಬಿಟ್ಟು ಬಿಡಬೇಕೆ?"

"ಕೇಳು ನಿನ್ನ ಗಂಡನ ಮನೆಯ ಹಕ್ಕಿಗೆ ಕೈಹಾಕಬಹುದಾದರೂ ಅದು ಸುಲಭವಲ್ಲ; ಹಾಗೆ ಮಾಡಬೇಕಾದರೆ ಬಲವಾದ ಸಹಾಯಕರು ಬೇಕು. ನೂರಾರು ಬಾರಿ ಕೋರ್ಟಿಗೆ ಹೋಗಬೇಕು. ನೀರಿನ ಹಾಗೆ ಹಣವನ್ನು ಖರ್ಚು ಮಾಡಬೇಕು. ಇಷ್ಟೆಲ್ಲಾ ಮಾಡಬೇಕಾದರೆ ನನ್ನಿಂದ ಆದಿತೇ? ನಾನು ಯಾರು ನಿನಗೆ?"

" ನಿಜ. ನನ್ನ ಮಾವನಂತೂ ನನ್ನ ಗೋಜಿಯನ್ನು ಪೂರಾ ಬಿಟ್ಟುಹಾಕಿದರು. ಅಪ್ಪನಂತೂ ನನ್ನ ಮುಖಾವಲೋಕನ ಕೂಡಾ ಮಾಡಲಾರೆನಂತ ಅಡಗಿಕೊಂಡಿದ್ದಾನೆ! ಇನ್ನೇನು ಮಾಡಬೇಕು ನಾನು?"

" ಅದೇ– ಅವರನ್ನೆಲ್ಲಾ ನಂಬಿದರೆ ಪ್ರಯೋಜನವಿಲ್ಲ. ನಿನ್ನ ಅಪ್ಪ ಮುಕುಂದರಾಯರ ರೀತಿಯನ್ನು ನೋಡಿದರೆ– ನೀನು ಹಟದೊಟ್ಟು ಅವರ ಮನೆಗೆ ಹೋದರೂ– ನೀನು ತನ್ನ ಮಗಳೇ ಅಲ್ಲ– ಯಾರೋ ಏನೋ– ಎಂದು ತಪ್ಪಿಸಿಕೊಳ್ಳುವಂತಹ ಸ್ಥಿತಿಯಲ್ಲಿದ್ದಾರೆ."

" ಹೌದು. ಇನ್ನೇನು ಮಾಡಬೇಕು– ದೇವರೇ ನಾನು ? "

" ಹೆದರಬೇಡ ಕೇಳು. ಈಗ ದೇವರು ಒಂದೇ ಒಂದು ದಾರಿಯನ್ನು ಕಾಣಿಸಿಕೊಟ್ಟಿದ್ದಾನೆ ಆ ದಾರಿ ನಿನಗೆ ಸಿಕ್ಕುತ್ತದೋ ಇಲ್ಲವೋಂತ ಇನ್ನು ಮೇಲೆಯಷ್ಟೇ ಗೊತ್ತಾಗಬೇಕು. ಈಗ ನಿನಗೆ ವಿಮೋಚನೆಯಾದದ್ದಕ್ಕೂ ಇದೊಂದು ದಾರಿ ಫಕ್ಕನೆ ಹುಟ್ಟಿ ತೋರಲಿಕ್ಕೂ ಏನೋ ದೈವಯೋಗವೇ ಇರಬೇಕು. ಇಗೋ ನೋಡು! ನಿನ್ನೆ ಬಂದ ಈ ಪತ್ರಿಕೆಯಲ್ಲಿ ಒಂದು ಹೊಸ ಸಮಾಚಾರವುಂಟು—" ಎಂದು ಜೋಯಿಸರು ಒಳಗೆ ಹೋಗಿ ಆ ಪತ್ರಿಕೆಯನ್ನು ತಂದು, ಅದರಲ್ಲಿರುವ ಮುಖರ್ಜಿಯ ಪ್ರಕಟನೆಯನ್ನು ಓದಿ, ಅವಳ ಕಡೆಗೆ ನೀಡಿದರು. ಅವಳೂ ಅದನ್ನು ಓದಿನೋಡಿ—

"ಪ್ರೌಢು, ಇದೇನು? ಹೆಂಗುಸು ಬೇಕು— ಅಂದರೆ?" ಎಂದು ಸಂದೇಹದಿಂದ ಕೇಳಿದಳು.

"ಕುರೂಪಿಯಾದ ಹೆಂಗುಸು ಬೇಕಂತೆ! ನೋಡಮ್ಮ, ಇದು ಒಳ್ಳೇ ಸಂದರ್ಭವಲ್ಲವೆ? ಯಾವುದಕ್ಕೂ ನಿನ್ನ ಒಂದು ಫೋಟೊ ತೆಗೆಯಿಸಿ ಕಳುಹಿಸಿ ನೋಡಿಬಿಡುವ ಬಾಧಕವೇನಮ್ಮ?"

"ಯಾಕೇ— ಏನೂ— ಅಂತ ಒಂದೂ ಗೊತ್ತಾಗದೆ ಫೋಟೋ ಕಳುಹಿಸಿದರೆ?"

"ಫೋಟೊ ಕಳುಹಿಸಿದ ಮೇಲೆಯೇ ಅದು ಇಂಥಾದ್ದಕ್ಕೇಂತ ಗೊತ್ತಾಗುತ್ತದಷ್ಟೇ. ಒಂದು ವೇಳೆ ಇದರಲ್ಲಿ ನೀನು ಗೆದ್ದರೆ, ನಿನಗೆ ಮದರಾಸಿನಂತಹ ದೊಡ್ಡ ನಗರದಲ್ಲಿ ವಾಸಮಾಡುವ ಸುಖವನ್ನು ಅನುಭವಿಸಬಹುದು. ಯಾವುದಕ್ಕೂ ನೋಡೋಣ. ಅದೆಲ್ಲಾ ನಿನ್ನ ಮನಸ್ಸಿಗೆ ಸಮಾಧಾನವಾದರೆ ಮಾತ್ರವೇ ಹೋಗುವ ವಿಚಾರ ಮಾಡುವ ಈಗ ಫೋಟೋ ತೆಗೆದು ಕಳುಹಿಸಿದರೆ ನಿನ್ನದೇನು ಹೋಯಿತು?"

ಸುಂದರಿಯ ಮನಸ್ಸು ಶಂಕಾತಂಕಗಳಿಂದ ಡೋಲಾಯಮಾನವಾಯಿತು. ಅವಳು ಮೌನವಾಗಿ ಯೋಚಿಸುತ್ತ ಕುಳಿತುಕೊಳ್ಳಲು ಚತುರ ಜೋಯಿಸರು ಇನ್ನೂ ಸ್ವಲ್ಪ ವಿವರಿಸಿ ಅವಳಿಗೆ ಧೈರ್ಯವನ್ನೂ ಭರವಸೆಯನ್ನೂ ಆಶೆಯನ್ನೂ ಹುಟ್ಟಿಸಿದ ಮೇಲೆ "ಆಗಬಹುದು" ಎಂದು ಒಪ್ಪಿದಳು.

ಸದ್ಯದ ಸುಂದರಿಯ ವಾಸವು ರಾಮಾ ಜೋಯಿಸರ ಮನೆಯಲ್ಲಿಯೇ ಆಯಿತು. ಅಂದು ಸಾಯಂಕಾಲ ಜೋಯಿಸರು ಮಾಸ್ತರ್ ಕಿಟ್ಟಯ್ಯನ ಮನೆಗೆ ಅವಳನ್ನು ಕರೆದುಕೊಂಡು ಹೋಗಿ ಫೋಟೋ ತೆಗೆಯಿಸಿದರು. ಮರುದಿನವೇ ಫೋಟೋವಿನ ಮೂರು ಪ್ರತಿಗಳು ಡೆವೆಲಪ್ ಆಗಿ ಜೋಯಿಸರ ಕೈಗೆ ಸಿಕ್ಕಿದುವು. ಆಹಾ! ಸುಂದರೀಬಾಯಿಯ ಫೋಟೋ ವಿಲಕ್ಷಣ ಸೌಂದರ್ಯದಿಂದ ನೋಡತಕ್ಕಹಾಗೆ ಆಕರ್ಷಣೀಯವಾಗಿತ್ತು.

ಜೋಯಿಸರು ಆ ಫೋಟೋವಿನ ಒಂದು ಪ್ರತಿಯನ್ನು ಒಂದು ಲಕೋಟೆಯಲ್ಲಿಟ್ಟು, "ವಾರ್ತಾ ಪ್ರಕಾಶಿನೀ" ಪತ್ರಿಕೆಯಲ್ಲಿ ಕಾವು ಪ್ರಕಟಮಾಡಿದ ಪ್ರಕಟನೆಯನ್ನು ನೋಡಿ ಈ ಫೋಟೋ ಕಳುಹಿಸಿ

ದ್ದಾಗಿದೆ. ನ್ಯಾಯಾನುಸಾರವಾದ ಕ್ರಮಗಳನ್ನು ತಿಳಿಸಿದರೆ ಇವಳು ನಿಮ್ಮ ಕಡೆಗೆ ಬರಬಲ್ಲಳು." ಎಂದೊಂದು ಪತ್ರವನ್ನು ಬರೆದು ಅದರೊಳಗಿಟ್ಟು, ಟಪ್ಪಾಲಿಗೆ ಸೇರಿಸಿಬಿಟ್ಟರು.

ಸುಂದರಿ ತನ್ನ ಭಾವಚಿತ್ರದ ಅದ್ಭುತ ಸೌಂದರ್ಯವನ್ನು ನೋಡುತ್ತ— " ಆಹ! ಚಂದಾಗಿಯೇ ಇದ್ದೇನಲ್ಲ ನಾನು? ಇಲ್ಲದಿದ್ದರೆ ನನ್ನಂಥ ಕುರೂಪ ಸುಂದರಿಯನ್ನು ಆ ಮುಖರ್ಜಿ ಬಯಸುವುದೆಂದರೆ? —ಯಾಕೊ ?— ಏನೊ ? ಆ ಮುಖರ್ಜಿ ಯಾರೊ ? ಅವನಿಗೆ ತಾನು ಯಾಕೊ? ಮದುವೇ–ಗಿದುವೇ ಮಾಡಿಕೊಳ್ಳುವನೋ ಏನೊ! ಮದುವೆ! ಮತ್ತೊಮ್ಮೆ ಮದುವೆಯೆ ನನಗೆ? ಆಹಾ ! ನಾಚಿಗಿಯಾದೀತಲ್ಲಾ ನನಗೆ? ಮೊದಲಿನ ಗಂಡ ನನ್ನನ್ನು ಬಿಟ್ಟು ಓಡಿದ. ಸಂನ್ಯಾಸಿಯಾದ! ಆದರೂ ಥಕ್ಕನೆ ಅವನನ್ನು ಹ್ಯಾಗೆ ಮರೆಯಲಿ? ಇನ್ನೊಬ್ಬ ನನ್ನಂಥವಳೇ ಬೇಕೂಂತ ಫೋಟೊ ಕೇಳಿದ್ದಾನೆ. ಮದುವೆ ಮಾಡಿಕೊಳ್ಳಲಿಕ್ಕೇ ಆಗಿರಬೇಕು. ಇಲ್ಲದಿದ್ದರೆ ತರುಣಿಯೇ ಬೇಕೂಂತ ಯಾಕೆ ಬರೆಯುತ್ತಿದ್ದರು? ಹೀಗೆ ತಾವೇ ಕೋರಿ ಮದುವೆ ಮಾಡಿಕೊಂಡರೆ, ಪ್ರೀತಿಮಾಡದೆ ಬಿಟ್ಟಾರೆ? ಆಹಾ ! ನೂರು ರೂಪಾಯಿ ನನ್ನ ಫೋಟೋಕ್ಕೇ ಕೊಡುತ್ತೇನೆಂದವರು ಭಾರೀ ದೊಡ್ಡ ಶ್ರೀಮಂತರೇ ಆಗಿರಬೇಕು! ದೇವರೆ! ನನ್ನ ಹಣೆಯಲ್ಲಿ ಒಳ್ಳೇದೇ ಬರೆದಿದ್ದಿಯಾ ?—" ಎಂದು ಮುಂತಾಗಿ ಮನಸ್ಸಿನಲ್ಲಿ ಆನಂದವಾದ ಕಲ್ಪನೆಗಳನ್ನು ಕಟ್ಟಿಕೊಳ್ಳುತ್ತ, ಮುಖರ್ಜಿಯ ಪ್ರತ್ಯುತ್ತರದ ದಾರೀ ನೋಡುತ್ತ ರಾಮಾ ಜೋಯಿಸರ ಮನೆಯಲ್ಲಿ ಇದ್ದಳು.

---

## ೧೪. " ಅಂತೂ ಗೆದ್ದೆನಲ್ಲ! "

ಮುಂದೆ ಒಂದು ವಾರದೊಳಗಾಗಿ ಮುಖರ್ಜಿಯ ಕಡೆಯಿಂದಲೂ, ಮುಕುಂದರಾಯರ ಕಡೆಯಿಂದಲೂ ಒಟ್ಟಿಗೆ ಬೇರೆ ಬೇರೆ ಪ್ರತ್ಯುತ್ತರಗಳು ಜೋಯಿಸರಿಗೆ ಬಂದುವು. ತಂತ್ರಶಾಲಿ ಜೋಯಿಸರ ಜಾಲವು ವ್ಯರ್ಥವಾಗಲಿಲ್ಲ. ಮುಕುಂದರಾಯರ ಪತ್ರದಲ್ಲಿ ಅವರು ಊಹಿಸಿದಂತೆಯೆ "ಜೋಯಿಸರೆ, ನೀವು ಹಾಕಿದ ಪತ್ರಗಳು ಸೇರಿದುವು. ಅಭಿಪ್ರಾಯ

ವಾಯಿತು. ನನ್ನ ಪೂರ್ವಜನ್ಮದ ಪಾಪದ ಫಲವೋ ಎಂಬಂತೆ ಹುಟ್ಟಿದ ನನ್ನ ಮಗಳಿಂದಾಗಿ ನಾನು ತುಂಬಾ ವ್ಯಸನಕ್ಕೀಡಾದೆನು. ಮದುವೆಯಾದ ಮೇಲೆ ಈ ಪೀಡೆ ತೊಲಗಿ ಹೋದೀತೆಂದು ತಿಳಿದಿದ್ದೆನು. ಎಲ್ಲಾ ಬಲ್ಲ ನಿಮಗೆ ಹೆಚ್ಚಿಗೆ ಬರೆಯಲಾರೆನು. ಒಟ್ಟಾರೆ ನನ್ನ ಮಗಳ ವಿಷಯವು ಇನ್ನು ಮೇಲೆ ನನ್ನ ಕಿವಿಗೆ ಬೀಳದ ಹಾಗೆಯೂ--ಕಣ್ಣಿಗೆ ಕಾಣಿಸದ ಹಾಗೆಯೂ ನೀವೇ ತಕ್ಕ ವ್ಯವಸ್ಥೆ ಮಾಡಿಬಿಡಬೇಕು. ಈ ಕಾರ್ಯವು ನಿಮ್ಮಿಂದ ಆದೀತೆಂದು ನಿಮ್ಮ ಪತ್ರದಿಂದ ಊಹಿಸಿಕೊಂಡಿದ್ದೇನೆ. ಇದರ ಬಗ್ಗೆ ತಗಲುವ ಖರ್ಚುಗಳ ವಿವರಗಳನ್ನು ತಿಳಿಯಪಡಿಸಿದರೆ ಕಳುಹಿಸುವೆನು. ಅಲ್ಲದೆ ಕಾರ್ಯಾಂತದಲ್ಲಿ ಶಕ್ತ್ಯಾನುಸಾರವಾಗಿ ಬಹು ಮಾನವನ್ನೂ ಕೊಡಬಲ್ಲೆ." ಎಂದು ಬರೆದಿದ್ದರು. ಅದರ ಅಕ್ಷರಗಳು ಯಾರೋ ಹುಡುಗರದು. ಮುಕುಂದರಾಯರ ದಸ್ಕತ್ತೂ ಅದರಲ್ಲಿರಲಿಲ್ಲ. ಆದರೂ ಅದು ಮುಕುಂದರಾಯರ ಪತ್ರಾಭಿಪ್ರಾಯವೆನ್ನಲು ಏನೂ ಸಂಶಯವಿಲ್ಲ. ಮುಕುಂದರಾಯರೆಂದರೆ ಪರಮ ಧೂರ್ತಶಿಖಾಮಣಿ ಯೆಂದೂ, ಮರ್ಯಾದೆಯನ್ನು ಉಳಿಸಿಕೊಳ್ಳಲಿಕ್ಕಾಗಿ ಎಷ್ಟು ಹಣವನ್ನಾ ದರೂ ಖರ್ಚು ಮಾಡುವಂತಹ ಕೊಬ್ಬಿದ ವ್ಯಕ್ತಿಯೆಂದೂ ರಾಮಾ ಜೋಯಿಸರು ಚೆನ್ನಾಗಿ ಬಲ್ಲರು. ಕೂಡಲೇ ಜೋಯಿಸರು ಮುಕುಂದ ರಾಯರಿಗೆ ಹೀಗೊಂದು ಪತ್ರವನ್ನು ಬರೆದು ಹಾಕಿದರು:—

"........ತಮ್ಮ ಪತ್ರ ಸಿಕ್ಕಿ ಅಭಿಪ್ರಾಯವಾಯ್ತು. ನಾನು ತಮ್ಮ ಇಷ್ಟಕ್ಕೆ ಸರಿಯಾದ ಒಂದು ವ್ಯವಸ್ಥೆಯನ್ನು ಯೋಚಿಸಿ ಇಟ್ಟುಕೊಂಡಿ ದ್ದೇನೆ. ನನ್ನ ಪರಮಾಪ್ತ ಮಿತ್ರರೊಬ್ಬರು ಲಕ್ನೋ ಪ್ರಾಂತದಲ್ಲಿ ಇದ್ದಾರೆ. ಅವರು ಈಗ ಇಲ್ಲಿಗೆ ಬಂದಿರುತ್ತಾರೆ. ಅವರೊಡನೆ ಸೌ. ಸುಂದರೀ ಬಾಯಿಯನ್ನು ಕಳುಹಿಸಿಕೊಟ್ಟರೆ, ಆ ಮೇಲೆ ಅವಳು ಈ ಕಡೆಗೆ ಮುಖ ಹಾಯಿಸದಂತಹ ವ್ಯವಸ್ಥೆ ಮಾಡಿಸುತ್ತಾರೆ. ಈ ವ್ಯವಸ್ಥೆಗೆ ಸುಂದರೀ ಬಾಯಿಯ ಒಪ್ಪಿಗೆಯುಂಟು. ಅವಳು ಮುಂದೆ ಸುಖವಾಗಿರುವಳೆನ್ನಲು ಯಾವ ಸಂದೇಹವೂ ಇಲ್ಲ. ಇದಕ್ಕಾಗಿ ಅವರು ನೂರು ರೂಪಾಯಿಯ ಪ್ರತಿಫಲವನ್ನು ಕೇಳುತ್ತಾರೆ. ಇದರ ಮೇಲೆ ದಾರೀ ಖರ್ಚಿನ ಬಗ್ಗೆ ಇಂತಿಷ್ಟೇ ತಾಗೀತೆಂದು ತಾವೇ ಊಹಿಸಬಹುದು. ಇನ್ನು ಹೆಚ್ಚಿನ

ವಿವರಗಳನ್ನೆಲ್ಲಾ ಈ ಪತ್ರದಲ್ಲಿ ಬರೆಯುವುದು ಅಷ್ಟು ಉಚಿತವಲ್ಲವೆಂದು ಭಾವಿಸುತ್ತೇನೆ. ತಮಗೆ ಎಲ್ಲವನ್ನೂ ಕೂಲಂಕಷವಾಗಿ ತಿಳಿಯಬೇಕೆಂಬ ಅಪೇಕ್ಷೆಯಿದ್ದರೆ, ನಾನೇ ತಮ್ಮ ಬಳಿಗೆ ಬಂದು ಎಲ್ಲಾ ವಿವರಗಳನ್ನೂ ಹೇಳಿ ತಮ್ಮನ್ನು ನಂಬಿಸುತ್ತೇನೆ.—"

ಈ ಪತ್ರಕ್ಕೆ ಪ್ರತ್ಯುತ್ತರವಾಗಿ ಬಂದುದು ಇನ್ನೂರು ರೂಪಾಯಿಯ ಒಂದು ಮಣಿಯಾರ್ಡರು. ಅದರಲ್ಲಿದ್ದುದು ಹೀಗೊಂದು ಪುಟ್ಟ ಒಕ್ಕಣೆ:-

"ರಾಮಾ ಜೋಯಿಸರೆ! ನೀವು ಇಲ್ಲಿಗೆ ಬಾರದೆ ಅಲ್ಲಿಂದಲೇ ಕೆಲಸ ಮುಗಿಸಿಬಿಡಿರಿ. ನಿಮ್ಮ ವಿಷಯದಲ್ಲಿ ನನಗೆ ವಿಶ್ವಾಸವುಂಟು. ಈ ರೂಪಾಯಿ ನಿಮ್ಮ ಕೆಲಸಕ್ಕೆ ಸರಿಹೋದೀತೆಂದು ನಂಬುತ್ತೇನೆ. ಇನ್ನು ಮೇಲೆ ಈ ವಿಷಯವು ನನ್ನ ಮುಂದೆ ಬರಲೇಬಾರದು."

ಜೋಯಿಸರು ಇದನ್ನು ಓದಿಕೊಂಡು—"ಆಯಿತಯ್ಯ! ಇನ್ನೆಂದಿಗೂ ನಿಮ್ಮ ಗೋಜಿಗೆ ಬರುವುದಿಲ್ಲ. ಒಂದು ಮಗಳ ಸಂಬಂಧ ನಿವಾರಣೆಗಾಗಿ ಆವಳ ಮದುವೆಯ ವರೆಗೆ ನೀವು ಎಷ್ಟು ಹಣವನ್ನು ಧಾರೆಯೆರೆದಿರೋ, ಅಷ್ಟು ಮುಖ್ಯ ಲೆಕ್ಕದ ಮೇಲೆ ಈ ಇನ್ನೂರು ರೂಪಾಯಿಯ ಕುಸುರಿಯೊಂದಿಗೆ ಅಂತ್ಯವೆಂದೇ ತಿಳಿಯಿರಿ! ಭಲೇ--ರಾಮಾ ಜೋಯಿಸ!" ಎಂದು ಉಬ್ಬಿಹೋದರು.

ಜೋಯಿಸರ ಈ ಒಳಲಂಭದ ಗಂಧವಾರ್ತೆಯೂ ಸುಂದರಿಗೆ ತಿಳಿಯದು. ಆವಳು ಮದರಾಸು ಪ್ರಯಾಣದ ಸಮಾರಂಭ- ಸಡಗರಗಳಲ್ಲಿ ಮುಳುಗಿ ಹೋಗಿದ್ದಳು. ಮದರಾಸಿನ ಮುಖರ್ಜಿಯ ಕಡೆಯಿಂದ ಸುಂದರಿಯ ಫೋಟೋ ವಿಜಯವಾದ ಬಗ್ಗೆ ಪತ್ರವು ಬಂದಿತ್ತು. ಆ ಪತ್ರದಲ್ಲಿ-

"ನಿಮ್ಮ ಫೋಟೋ ನೋಡಿ, ನಮ್ಮ ಶ್ರಮವೂ ಕೋರಿಕೆಯೂ ಬಲು ಬೇಗನೇ ಸಾರ್ಥಕ ಹೊಂದಿದ ಹಾಗಾಯಿತು. ಇಷ್ಟು ಹೊಂದಿಕೆಯಾಗಿರುವ ಸುಂದರ ಫೋಟೋ ನಿಮ್ಮದೊಂದೇ ಸರಿ! ಇಂತಹ ವಿಕೃತ ನಿಸರ್ಗ ಸುಂದರ ತರುಣಿಯರು ನಮಗೆ ಅತೀ ಅಗತ್ಯ. ನಾವು "ಪ್ರಕೃತಿ ಕಳೋದ್ಧಾರಕ ಮಂಡಲಿ" ಎಂಬೊಂದು ಸಂಸ್ಥೆಯ ಮೂಲಕವಾಗಿ ಕಳಾಸೇವೆಯನ್ನು ಪ್ರಾರಂಭಿಸಿರುತ್ತೇವೆ. ಇದಕ್ಕೆ ನಿಮ್ಮ ಸಹಾಯವು ಅಗತ್ಯ. ನೀವು ಈ ಮಂಡಲಿಗೆ ಸೇರಿ, ತಕ್ಕ ತರಬೇತನ್ನು ಹೊಂದಿ ಮುಂದೆ

ಪ್ರಪಂಚ ವಿಖ್ಯಾತರಾಗಿ ಮೆರೆಯಲಿಕ್ಕೂ ಎಡೆಯುಂಟು! ನಿಮ್ಮ ಅಭಿರುಚಿ ಯೋಗ್ಯತೆಗಳಿಗೆ ತಕ್ಕ ತರಬೇತನ್ನು ಕೊಡಲ್ಪಡುತ್ತದೆ. ತರಬೇತು ಹೊಂದಿ ಕಾರ್ಯರಂಗದಲ್ಲಿ ಪ್ರವೇಶಮಾಡುವ ವರೆಗೆ ತಿಂಗಳಿಗೆ ೨೫ ರೂಪಾಯಿ ಸಂಬಳ ಕೊಡುತ್ತೇವೆ. ಕೋಣೆ, ಊಟ-ಉಡುಗೆ ಇತ್ಯಾದಿಗಳು ಉಚಿತ. ನಿಮ್ಮ ನ್ಯಾಯ--ನೀತಿಗಳಿಗೇನೂ ಬಾಧಕ ಬಾರದಂತೆ ನಾವೇ ಜವಾಬುದಾರರಾಗಿರುತ್ತೇವೆ. ನಿರ್ಬಂಧಕವಾದ ಕಾನೂನುಗಳು ಯಾವುದೂ ಇಲ್ಲ. ಮಂಡಲಿಯ ಮೆಂಬರರಾಗಿದ್ದು ಸ್ವತಂತ್ರವಾಗಿ ವಾಸಮಾಡಿಕೊಂಡಿರಲೂಬಹುದು. ನಿಮ್ಮೊಂದಿಗೆ ಒಬ್ಬರು ಸಂಗಡಿಗರಿಗೆ ಮಾತ್ರ— ನಮ್ಮ ಸಮಕ್ಷಮದಲ್ಲಿ ಚಾರ್ಜು ಲೆಕ್ಕವನ್ನು ತೋರಿಸಿದರೆ— ನಿಮ್ಮ ಚಾರ್ಜಿನೊಂದಿಗೆ ಸೇರಿಸಿಕೊಡುತ್ತೇವೆ. ಆಗಲೇ ಬಹುಮತಿ ರೂಪಾಯಿ ನೂರರ ವೊತ್ತವನ್ನೂ ಕೊಡಲಾಗುವುದು.

ವಿ. ಸೂ.— ನೀವು ನಮ್ಮ ಮಂಡಲಿಯಲ್ಲಿ ಸರಿಯಾಗಿರುವಿರೆಂಬ ನಂಬುಗೆ ನಮಗೆ ಆಗುವ ವರೆಗೆ, ನಿಮ್ಮ ಸಂಬಳವನ್ನು ನಿಮ್ಮ ಕೈಗೆ ಕೊಡದೆ, ನಿಮ್ಮ ಹೆಸರಿನಿಂದ ಕೆಲವು ನಿಬಂಧನೆಯ ಮೇಲೆ-ಭದ್ರತೆಯ ನಿಧಿಯಲ್ಲಿಡಲು ನೀವು ಒಪ್ಪಿರಬೇಕು. ಇದು ಮೂರು ತಿಂಗಳ ವರೆಗೆ ಮಾತ್ರ. ಇಂತು ನಿಮ್ಮ ಶ್ರೇಯೋಭಿಲಾಷಿ:— ಬಿ. ಟಿ. ಮುಖರ್ಜಿ ''

ಈ ಪತ್ರದೊಂದಿಗೆ ಇನ್ನೊಂದು ಫಾರಂ ಕೂಡಾ ಇತ್ತು. ಅದನ್ನು ಭರಾಯಿಸಿ ಸುಂದರಿಯ ದಸ್ಕತ್ತು ಕೂಡಾ ಹಾಕಿಸಿ ಮೊದಲೇ ಮುಖರ್ಜಿಯ ಕಡೆಗೆ ಕಳುಹಿಸಬೇಕಾಗಿತ್ತು. ರಾಮಾ ಜೋಯಿಸರು ಅವಳನ್ನು ಆ ಕಾರ್ಯಕ್ಕೆ ಹುರುಡಿಸಿದರು. 'ಮತ್ತೆ ಮದುವೆಯ ವಿಚಾರವಾಗಿರಬೇಕೆಂದು ಊಹಿಸಿಗೊಂಡಿದ್ದ ಸುಂದರಿ, ಇದೇನೋ 'ಕಳೋದ್ಧಾರಕ ಮಂಡಲಿ' ಎಂದು ತಿಳಿದಕೂಡಲೇ ಹೇಗೋ-ಏನೋ ಎಂದು ಶಂಕಿಸಲಾರಂಭಿಸಿದಳು. ಆದರೆ ರಾಮಾ ಜೋಯಿಸರ ಸಪಾಯಿಯಾದ ನಾಲಗೆಗೆ ಸೋಲಾದೀತೆ? ಅವಳ ಎಲ್ಲಾ ಶಂಕೆ-ಸಂದೇಹಗಳನ್ನು ಅವರು ನಿಮಿಷ ಮಾತ್ರದಲ್ಲೆ ಹಾರಿಸಿ ಆದರ ಮೇಲೆ— ''ಸುಂದರೀಬಾಯಿ! ನಾವೇ ನಿನ್ನ ಜತೆಯಲ್ಲಿರುವಾಗ ಹೆದರಿಕೆಯಾಕಮ್ಮ? ಹಾಗೆ ನಿನಗೆ ಹಿಡಿಸದಿದ್ದರೆ ವಾಪಾಸು ಬಂದರಾಯಿತು. ಹಾಗೆ ಬಂದರೆ ನಷ್ಟವಲ್ಲವೋ

ಎಂದು ನೀನು ಕೇಳಬಹುದು. ಏನೂ ನಷ್ಟವಿಲ್ಲ. ಮದರಾಸಿನಿಂದ ಅನಂತಪುರವು ಹತ್ತಿರ. ಅಲ್ಲಿಗೆ ಹೋಗಿ ನಿನ್ನ ತಂದೆಯನ್ನೆ ನೋಡುವ. ನೀನೇನೂ ಹೆದರಬೇಡಮ್ಮ—" ಎಂದು ಅನೇಕ ರೀತಿಯಲ್ಲಿ ಬಜಾಯಿಸಿ ಅವಳ ಹೃದಯದಲ್ಲಿ ಧೈರ್ಯವು ಗಟ್ಟಿಯಾಗಿ ನಿಲ್ಲುವಂತೆ ಮಾಡಿದರು.

ಗೊತ್ತುಮಾಡಲ್ಪಟ್ಟ ಒಂದು ದಿವಸದಲ್ಲಿ– ಅದು ಬಹು ಬೇಗ ದಲ್ಲಿಯೇ— ರಾಮಾ ಜೋಯಿಸರು ಸುಂದರೀಬಾಯಿಯನ್ನು ಕರೆದು ಕೊಂಡು ಮದರಾಸಿನ ಕಡೆಗೆ ಹೊರಟರು. ಅವರು ಗುಟ್ಟಾಗಿ ಬೆಳಗಿನ ಝಾವದ ಹೊತ್ತಿನಲ್ಲಿ ಗ್ರಾಮದಿಂದ ಹೊರಟು, ಹಗಲೆಲ್ಲಾ ಮಂಗಳೂರಿನಲ್ಲಿ ತಂಗಿ, ರಾತ್ರಿಯಲ್ಲಿ ಸುಂದರೀಬಾಯಿಗೆ ಸಿನೆಮಾವನ್ನು ತೋರಿಸಿ ಅವಳ ಮನಸ್ಸು ಪ್ರಫುಲ್ಲವಾಗುವಂತೆ ಮಾಡಿದರು. ಸುಂದರಿ ಅದುವರೆಗೆ ಸಿನೆಮಾ ಚಿತ್ರವನ್ನು ನೋಡಿಯೇ ಇರಲಿಲ್ಲ. ಕೇಳಿದ್ದಳು ಮಾತ್ರ. ಅಂತಹಳಿಗೆ ಜೋಯಿಸರು ಅದನ್ನೆಲ್ಲಾ ತಿಳಿಸಿ ಹೇಳಿ ತೋರಿಸುತಿರುವಾಗ ಅವಳಿಗಾದ ಅದ್ಭುತಾನಂದಕ್ಕೆ ಪಾರವಿರಲಿಲ್ಲ. ಇರಲಿ.

ಮಂಗಳೂರಿನಿಂದ ಮದರಾಸಿಗೆ ಹೋಗುವುದೆಂದರೆ ಒಂದೇ ರೈಲಿ ನಲ್ಲಿ ಸುಮಾರು ಇಪತ್ನಾಲ್ಕು ಗಂಟೆಗಳ ಕಾಲವನ್ನು ಕಳೆಯಬೇಕಾಗಿತ್ತು. ಆ ಕಾಲವನ್ನು ಸುಂದರಿ ತುಂಬಾ ಉಲ್ಲಾಸದಿಂದಲೇ ಕಳೆಯಲಾರಂಭಿ ದ್ದಳು. ಕುಳಿತು ಕುಳಿತು ಬೇಸರವೇ ಅವಳಿಗಾಗಲಿಲ್ಲ. ಅವಳಿಗೆ ಅಪ ರೂಪವಾದ ರೈಲು ಪ್ರಯಾಣವಲ್ಲವೇ ಅದು? ಬೇರೆ ಬೇರೆ ದೃಶ್ಯಗಳು ಊರುಗಳು, ಕೇರಿಗಳು, ದೇಶಗಳು-ಭಾಷೆಗಳು, ಬೆಟ್ಟಗಳು,-ಗುಡ್ಡಗಳು, ನದಿಗಳು-ಕೋಡುಗಳು-ತೊರೆಗಳು, ಮರಗಳು-ಕಾಡುಗಳು-ಕೆರೆಗಳು-- ಮನೆಗಳು-ಮಂದಿಗಳು ಇತ್ಯಾದಿ ಬಗೆಬಗೆಯ ದೃಶ್ಯಮಾಲಿಕೆಗಳು ಅವಳಿಗೆ ಬಹಳ ಕೌತುಕವಾಗಿದ್ದುವು. ಮಧ್ಯರಾತ್ರಿಯಲ್ಲಿಯೂ ಅವಳು ಮಲಗದೆ ಆಗಾಗ ತೂಕಡಿಸಿ ಬೀಳುವುದನ್ನು ನೋಡಿ, ಹೊಂಚುಗಾರ ಜೋಯಿ ಸರು,—"ಮಲಗಬಾರದೇ ಸುಂದರೀಬಾಯಿ! ಸ್ಥಳವುಂಟಲ್ಲಾ? ನಿನ್ನೆ ರಾತ್ರಿ ಸಿನೆಮಾ ನೋಡಿ ನಿದ್ದೆಗೆಟ್ಟಿದ್ದೀ. ಇವತ್ತೂ ನಿದ್ದೆಗೆಟ್ಟರೆ ನಾಳೆ ಆರೋಗ್ಯವೇ ಕೆಟ್ಟೀತಮ್ಮಾ." ಎಂದು ಹೇಳಿ ಅವಳನ್ನು ಮಲಗಗೊಳಿಸಿ ದರು. ಅವಳಿಗೂ ರೈಲುಗಾಡಿಯ ಡಗಡಗಾಕಾರವು ತಾಳ–ಮೇಳ

ಗಳೊಂದಿಗೆ ಒಂದು ಜೋಗುಳ ಹಾಡಿದಂತೆ ಪರಿಣಮಿಸಿ ಸುಖವಾಗಿ ಕಣ್ಣು ಮುಚ್ಚಿ ನಿದ್ದೆ ಮಾಡಿದಳು. ಇತರ ಪ್ರಯಾಣಿಕರೂ ಗೊರಕೆ ಹೊಡೆಯುತ್ತಿದ್ದರು.

'ಇದೇ ಸಮಯ' ವೆಂದುಕೊಂಡು ಕಳ್ಳ ಜೋಯಿಸರು ಸುಂದರಿಯ ಸೆರಗಿನ ಕೊನೆಯಲ್ಲಿದ್ದ ಬೀಗದ ಕೈಯನ್ನು ಬಿಚ್ಚಿ ತೆಗೆದು, ಅದರ ಸಹಾಯದಿಂದ ಅವಳ ಟ್ರಂಕಿನ ಬೀಗವನ್ನು ತೆಗೆದು ಒಳಗಣಿಂದ ನಗದ ಕಿರುಪೆಟ್ಟಿಗೆಯನ್ನೆತ್ತಿಕೊಂಡು, ಅದರಲ್ಲಿದ್ದ ಎಲ್ಲಾ ನಗಗಳನ್ನೂ ತೆಗೆದು ಬೇಗಬೇಗನೆ ತಮ್ಮ ಕೋಟಿನ ಒಳಜೇಬಿನೊಳಗೆ ಕೂರಿಸಿಕೊಂಡು, ಆ ಖಾಲಿಯಾದ ಕಿರುಪೆಟ್ಟಿಗೆಯನ್ನು ಓಡುವ ರೈಲಿನ ಕಿಟಕಿಯಿಂದ ಹೊರಕ್ಕೆ ಎಸೆದು, ಮತ್ತೆ ಟ್ರಂಕು ಪೆಟ್ಟಿಗೆಯನ್ನು ಮೊದಲಿನ ಹಾಗೆಯೇ ಮುಚ್ಚಿ ಬೀಗ ಹಾಕಿ, ಬೀಗದ ಕೈಯನ್ನು ಅವಳ ಸೆರಗಿಗೇ ಸೇರಿಸಿ, ಒಂದು ಗೆಲುವಿನ ಉಸಿರನ್ನು ಬಿಟ್ಟರು!

ಆ ಮೇಲೆ ಯಥಾಕಾಲದಲ್ಲಿ ಮದರಾಸಿಗೆ ಸೇರಿದ್ದಾಯಿತು. ನೋಡದ ಹಳ್ಳಿಗರು ಅಕಸ್ಮಾತ್ ನೋಡಿದರೆ, ಹೆದರಿ ದಿಕ್ಕುಗಾಣದೆ ಹೋಗುವಂತೆ ಮಾಡುವ ನಗರರಾಜವು ಮದ್ರಾಸು. ಜೋಯಿಸರು ಈ ಮೊದಲು ಎರಡು ಬಾರಿ ಈ ಪಟ್ಟಣಕ್ಕೆ ಬಂದಿದ್ದ ಆಸಾಮಿಯಾಗಿದ್ದರು. ಆದುದರಿಂದ ಅವರು ದಿಕ್ಕೆಟ್ಟು ಸ್ತಂಭಿತರಾಗಲಿಲ್ಲ. ಭಯಂಕರವಾದ ಯಾವುದೋ ದೊಡ್ಡದೊಂದು ಇಂಜಿನುಗಳ ಕರ್ಮಶಾಲೆಯಂತಿರುವ-ಮೇಲೂ ಕೆಳಗೂ ಮಹಾಪಾಯಕಾರಿಗಳಾದ ಮಿಂಚಿನ ಸರಳುಗಳು ಹೆಣೆಯಲ್ಪಟ್ಟ ಬೀದಿಗಳನ್ನೂ-ಸ್ತಂಭೀಭೂತರನ್ನಾಗಿಸುವ ಚಿತ್ರವಿಚಿತ್ರವಾದ ಘನಮಂದಿರಗಳನ್ನೂ-ಗಜಬಜಿಸಿರುವ ನಾನಾ ಜಾತಿಯ ಜನಸಮುದಾಯವನ್ನೂ-ಕ್ಷಣೇಕ್ಷಣೇ ಅಪಾಯವನ್ನಿದಿರಿಸಿಕೊಂಡೇ ಓಡಾಡುತಿರುವ ಟ್ರಾಮುಬಸ್ಸು-ರಿಕ್ಷಾ-ಜಟಕಾ-ಕಾರು-ಸ್ಯಾಕಲ್-ಮೊದಲಾದ ಗಾಡಿಗಳನ್ನೂ ಹೀಗೆ ಅತ್ಯಪೂರ್ವವಾದ ಹೊಸ ಹೊಸ ನೋಟಗಳನ್ನೂ ನೋಡಿ ಸುಂದರಿಗಾದ ಆನಂದಾಶ್ಚರ್ಯಗಳಿಗೆ ಮೇರೆಯಿಲ್ಲ. ಇಬ್ಬರೂ ಮೊದಲು ಒಂದು ಬ್ರಹ್ಮಾಂಡದಂತಹ ಹೊಟೇಲಿಗೆ ಹೊಕ್ಕು ಹೊಟ್ಟೆಯನ್ನು ಗಟ್ಟಿ ಮಾಡಿಕೊಂಡು, ಮಧ್ಯಾಹ್ನದ ನಂತರ ತಮ್ಮ ವಿಳಾಸದಾರರನ್ನು

ಹುಡುಕಿಕೊಂಡು ಹೊರಟರು. ಹಾಗು ಬಿ. ಟಿ. ಮುಖರ್ಜಿಯ ಸೇವಕನೊಬ್ಬನ ಮೂಲಕವಾಗಿ—ಪ್ರಚಂಡವಾದೊಂದು ಸುಂದರವಾದ ಕಟ್ಟಡದ ಆಫೀಸು ರೂಮಿನಲ್ಲಿ ಮಂಡಿತರಾಗಿ ಮಿಸ್ಟರ್ ಮುಖರ್ಜಿ ಮಹಾಶಯನನ್ನು ಸಂಧಿಸಿದರು.

ಪ್ರಥಮ ಪರಿಚಯದ ಮಾತುಕತೆಗಳಾಗುವಾಗ ಮುಖರ್ಜಿ ಇದಿರು ಬೆಂಚಿಯ ಮೇಲೆಯೇ ತುಂಬಿಕುಳಿತಿದ್ದ, ಸುಂದರಿಯ ಸುರೂಪಾಂಗಗಳನ್ನು ಆಪಾದಮಸ್ತಕ ಪರಿಯಂತವಾಗಿ ಆಗಾಗ ನೋಡುತಿದ್ದನು. ಅವನ ಮುಖಮಂಡಲದಲ್ಲಿ ತುಂಬಾ ಸಂತೃಪ್ತತೆ ಕಾಣುತ್ತಿತ್ತು. ಅವನು ಅವಳನ್ನು ಕುರಿತು ಕನ್ನಡದಲ್ಲಿ—'' ಅಮ್ಮಾ, ನಿಮ್ಮ ಹೆಸರೇನು ?''

ಸುಂದರೀಬಾಯಿ:— '' ಸುಂದರಿ ! ''

ಮುಖರ್ಜಿ:— " ಎಲ್ಲಿಯ ವರೆಗೆ ಓದಿದ್ದೀರಿ ?''

ಸುಂದರಿ:— " ಎಂಟನೇ ಕ್ಲಾಸಿನ ವರೆಗೆ.''

ಮುಖರ್ಜಿ:—" ಓ! ಪರವಾಯಿಲ್ಲ!—ನಿಮಗೆ ಮದುವೆಯಾಗಿದೆ?"

ಸುಂದರಿ:—'' ಆಗಿದೆ''— ಎಂದು ಜೋಯಿಸರ ಮುಖವನ್ನು ನೋಡಿದಳು. ಕೂಡಲೇ ಜೋಯಿಸರು,

'' ಅಂದರೆ, ಸರ್, ಇವರ ಗಂಡನು ಇವಳನ್ನು ತ್ಯಾಜ್ಯ ಮಾಡಿದ್ದಾನೆ. ತಂದೆ-ತಾಯಿ-ಅಣ್ಣ-ತಮ್ಮ ಮೊದಲಾದ ಸಂಬಂಧಿಗಳು ಯಾರೂ ಇವಳಿಗಿಲ್ಲ. ನಾನೇ ಇವಳ ವಿವಾಹಾದಿಗಳನ್ನು ಮಾಡಿಸಿದೆನು. ಪ್ರಕೃತ ಇವಳು ಅನಾಥಳು. ನನ್ನ ಆಶ್ರಯದಲ್ಲಿ ಇದ್ದಾಳೆ."

ಮುಖರ್ಜಿ:—" ಓಹೊ ! ಆದರೆ ಈ ವಿಚಾರವೆಲ್ಲ ಅಷ್ಟು ಮುಖ್ಯವಲ್ಲ. ಮುಖ್ಯವಾಗಿ ನಮ್ಮ ಮಂಡಲಿಗೆ ಸೇರಿರಲು ಇವರ ಒಪ್ಪಿಗೆ ಇದ್ದರಾಯಿತು." ಎನ್ನುತ್ತಾ ಟಪ್ಪಾಲಿನಲ್ಲಿ ಬಂದಿದ್ದ ಸುಂದರಿಯ ದಸ್ಕತು ಇರುವ ಫಾರಂಮನ್ನು ಸುಂದರಿಯ ಮುಂದೆ ಚಾಚಿ,—'' ಇದರಲ್ಲಿ ಒಪ್ಪಿಗೆಯ ದಸ್ಕತ್ತು ಹಾಕಿದವರು ನೀವೇ ಏನು ?''

ಸುಂದರಿ:— ''ಹೌದು ''

ಮುಖರ್ಜಿ ಆ ಫಾರಮನ್ನು ಮಡಚಿಟ್ಟು—'' ಸುಂದರಿಬಾಯಿ ! ನೀವು ಏನೂ ಹೆದರಬೇಕಾಗಿಲ್ಲ. ಯಾಕಂದರೆ ನೀವು ಹೊಸತಾಗಿ ಈ

ನಗರಕ್ಕೆ ಬಂದಿರುವಿರೆಂದು ಕಾಣುತ್ತೆ. ನಿಮ್ಮ ಇಷ್ಟಾನುಸಾರವಾಗಿ ಇಲ್ಲಿ ಇರಬಹುದು. ಆದರೂ ಮೊದಮೊದಲು ನಿಮಗೆ ಒಂದು ಗೂಡಿನಲ್ಲಿ ಸಿಕ್ಕಿ ಬಿದ್ದ ಹಾಗೆ ತೋರಬಹುದು. ಎರಡು ದಿನಗಳಾದ ಮೇಲೆ ನೀವು ಇಲ್ಲಿಂದ ಬಿಟ್ಟು ಹೋಗಲಿಕ್ಕೇ ಇಷ್ಟವಿಲ್ಲದವರಾಗುವಿರಿ. ನಾವು ನಿಮ್ಮಂತಿರುವವರನ್ನು ಮುಂದಕ್ಕೆ ತಂದು, ಕಳಾಸೇವೆಯನ್ನು ಮಾಡಬೇಕೆಂತಲೇ ಈ ಮಂಡಲಿಯನ್ನು ಸ್ಥಾಪಿಸಿರುತ್ತೇವೆ. ಮುಖ್ಯವಾಗಿ ನೀವು ಸಂಗಿತ–ನಾಟ್ಯ–ಅಭಿನಯ ಇವನ್ನು ಕಲಿಯಬೇಕು. ಇದೆಲ್ಲಾ ನೀವು ಒಂದೆರಡು ತಿಂಗಳೊಳಗೇ ಕಲಿತುಬಿಡುವಿರೆಂದು ನಂಬುತ್ತೇನೆ.''

ಸುಂದರಿ ಹಿಂದೆ ಮಂದೆ ನೋಡುತ್ತ—'' ಆದರೆ–ನನಗೆ ಅದೆಲ್ಲಾ ಸ್ವಲ್ಪವೂ–ಅಭ್ಯಾಸವಿಲ್ಲ. ನಾನು—"

ಕೂಡಲೇ ಮುಖರ್ಜಿ:—" ಆ ಚಿಂತೆಯೇ ನಿಮಗೆ ಬೇಡ. ಎಲ್ಲಾ ನಾವಿದ್ದೇವೆ. ನಿಮಗಿಂತ–ಒಂದಕ್ಷರವೂ ಬಾರದ ಮೊದ್ದು–ಮೂಢರನ್ನೆಲ್ಲಾ ತರಬೇತು ಮಾಡಿ ಮುಂದಕ್ಕೆ ತಂದಿದ್ದೇವೆ. ನೋಡಿ; ಆರೇ ತಿಂಗಳೊಳಗೆ ನಿಮ್ಮ ಹೆಸರು ವಿಖ್ಯಾತವಾಗುತ್ತೆ !"

" ಏನೋ ! " ಎಂದು ಎಳೆದುಕೊಂಡು ಸುಂದರಿ ಜೋಯಿಸರ ಮುಖವನ್ನು ನೋಡಿ—'' ಜೋಯಿಸರೆ, ನೀವು ಇಲ್ಲಿ ನನ್ನ ಒಟ್ಟಿಗೆ ಎರಡು ದಿನವಿದ್ದು—"

'' ಇರುತ್ತೇನಮ್ಮ—'' ಎಂದು ಜೋಯಿಸರು ಮುಖರ್ಜಿಯ ಮುಖವನ್ನು ನೋಡಿದರು.

'' ಓ, ಆಗಬಹುದು. ನಮಗೇನೂ ಆಕ್ಷೇಪಣೆಯಿಲ್ಲ. ಸರಿ. ನೀವು ಇಲ್ಲಿಗೆ ಬರುವಾಗ ಎಷ್ಟು ವೆಚ್ಚವಾಯಿತು ? " ಎಂದು ಮುಖರ್ಜಿ ಕೇಳಿದನು.

ಜೋಯಿಸರು ತಮ್ಮ ಕೋಟಿನ ಹೊರಜೇಬಿನಿಂದ ಒಂದು ಲೆಕ್ಕದ ಕಾಗದವನ್ನು ತೆಗೆದು ಮುಖರ್ಜಿಯ ಮುಂದಿಟ್ಟರು. ಅದರಲ್ಲಿ ಮೂವತ್ತು ರೂಪಾಯಿಯ ಲೆಕ್ಕವಿತ್ತು. ಮುಖರ್ಜಿ ಅದನ್ನು ನೋಡಿ ತಲೆದೂಗಿ— "ಸರಿ. ಇನ್ನು–ಫೋಟೋವಿನ ಬಾಬ್ತು ಬಹುಮತಿಯ ಮೊತ್ತವನ್ನು ಯಾರಿಗೆ ಕೊಡಬೇಕು ? " ಎಂದನು.

ಜೋಯಿಸರು ಒಮ್ಮೆ ಸುಂದರಿಯ ಮುಖವನ್ನು ನೋಡಿ–"ತಮ್ಮ ಚಿತ್ತ" ಎಂದರು.

ಮುಖರ್ಜಿ:—"ಒಳ್ಳೆಯದು. ಆ ಮೊತ್ತ ನೂರರಲ್ಲಿ ಐವತ್ತನ್ನು ಸುಂದರೀಬಾಯಿಗೂ–ಉಳಿದ ಐವತ್ತನ್ನು ತಮಗೂ ಕೊಡುವೆನು." ಎಂದು ಒಂದು ದಪ್ಪವಾದ ಪುಸ್ತಕವನ್ನು ತೆರೆದು ಜೋಯಿಸರ ಬಳಿಗೆ ಸರಿಸಿ, "ಇಲ್ಲಿ ಒಂದು ದಸ್ಕತು ಹಾಕಿರಿ." ಎಂದು ತೋರಿಸಿದರು.

ಜೋಯಿಸರು ಆ ಕಲಮನ್ನು ಓದಿ ನೋಡಿದರು. "ವಿಕೃತ ಪ್ರಕೃತಿ ಭಾವಚಿತ್ರದ ಬಾಬ್ತು ಬಹುಮತಿ ರೂಪಾಯಿ ನೂರು ೧೦೦/– ಮೊತ್ತವಾಗಿ ಪಡೆದಿರುತ್ತೇನೆ" ಎಂದಿತ್ತು. ಅಲ್ಲಿ ಜೋಯಿಸರು ಅರೆ ಮನಸ್ಸಿನಿಂದ ದಸ್ಕತು ಹಾಕಿ, ಆ ಮೇಲೆ ಪುಸ್ತಕವನ್ನು ಮುಖರ್ಜಿಯ ಕಡೆಗೆ ಸರಿಸುತ್ತ––ಕಡತಂದ ನಗೆಯೊಂದಿಗೆ—"ದಸ್ಕತು ಮಾಡುವವನಿಗೇ ಎಲ್ಲಾ ಮೊತ್ತವೂ ಸಲ್ಲುವಂತೆ ಇಲ್ಲಿ ನಮೂದಿಸಿರುವುದಲ್ಲವೆ?" ಎಂದರು.

ಮುಖರ್ಜಿ;— ಹೌದು ರೂಲ್ಸು ಹಾಗಿದ್ದರೂ ಇವರಿಗೂ ಒಂದು ಭಾಗವನ್ನು ಕೊಡುವುದು ನಿಮಗೂ ನಮಗೂ ಧರ್ಮವಲ್ಲವೆ?" ಎನ್ನುತ್ತಾ ರೂಪಾಯಿಯ ನೋಟುಗಳನ್ನು ತೆಗೆಯುತಿದ್ದನು.

"ಹೌದೌದು. ನಿಜ ನಿಜ! ಅಲ್ಲ–ನಾನು ಸುಮ್ಮನಂದೆ!" ಎನ್ನುತ್ತಾ ಜೋಯಿಸರು ಹಲ್ಲು ತೋರಿಸಿಕೊಂಡು ಸುಂದರಿಯ ಮುಖವನ್ನು ನೋಡಿದರು.

ಸುಂದರಿ:—"ನೀವೇ ತಕ್ಕೊಳ್ಳಿ ಜೋಯಿಸರೆ, ನನಗಾಗಿ ತುಂಬಾ ಕಷ್ಟಪಟ್ಟಿದ್ದೀರಿ."

ಮುಖರ್ಜಿ ನೂರೈವತ್ತು ರೂಪಾಯಿಗಳ ನೋಟುಗಳನ್ನು ಎಣಿಸಿ ಜೋಯಿಸರ ಕೈಗೆ ಕೊಟ್ಟನು. ಆ ಮೇಲೆ ಒಬ್ಬ ಜವಾನನನ್ನು ಕರೆದು, ಅವರನ್ನು ನಲುವತ್ತನೇ ನಂಬರಿನ ಕೋಣೆಯಲ್ಲಿ ಇಳಿಸಿಕೊಳ್ಳುವಂತೆ ಹೇಳಿ, ಇನ್ನೊಬ್ಬ ಜವಾನನ ಕೈಯಲ್ಲಿ ಇನ್ನೊಂದು ಚೀಟಿಯನ್ನು ಕೊಟ್ಟು ಕಳುಹಿಸಿದನು.

ಸುಂದರಿಯನ್ನು ಸೇರಿಸಲ್ಪಟ್ಟ ಆ ನಲುವತ್ತನೇ ನಂಬರಿನ

ವಠಾರವು, ಹೆಂಗುಸರ ವಿಭಾಗವೇ ಆಗಿತ್ತು. ಅದರ ಬದಿಯಲ್ಲಿದ್ದ ಒಂದು ದೊಡ್ಡ ಶಾಲೆಯೊಳಗೆ–ಅಭಿನಯ–ಗಾಯನ–ನರ್ತನ–ಕೋಲಾಟಗಳು-ಜರುಗಿಕೊಂಡೇ ಇರುವಂತೆ, ಶಬ್ದಗಳು ಕೇಳಿಕೊಂಡಿದ್ದುವು. ಬಗೆ ಬಗೆಯ ವಾದ್ಯಧ್ವನಿಗಳೂ ಮೇಳಧ್ವನಿಗಳೂ ಮೃದಂಗಧ್ವನಿಗಳೂ–ಮತ್ತಾವುದಾವುದೋ ಹೊಸ ಹೊಸ ಸಾಹಿತ್ಯಧ್ವನಿಗಳೂ ಮೊಳಗಿಕೋಂಡೆ ಇದ್ದುವು. ಆದರಾಚೆಯ ವಠಾರದಲ್ಲಿ ಹಲವು ಮಂದಿ ತರುಣ ಯುವಕ ಪುರುಷರು ಕಂಗೊಳಿಸಿಕೊಂಡಿದ್ದರು. ಅಲ್ಲಿ ಕಾಣುವ ನಾರೀ ಪುರುಷರೆಲ್ಲರೂ ನವಸುಧಾರಕರಾದ ನವನಾಗರಿಕರೇ ಸರಿ! ಜೋಯಿಸರು ಸುಂದರಿಯ ಸಂಗಡವೇ ಇದ್ದು ಅವಳಿಗೆ ಪ್ರೋತ್ಸಾಹಕರವಾದ ಧೈರ್ಯ ವಚನಾಮೃತವನ್ನು ಕುಡಿಸಿಕೊಂಡೇ ಇದ್ದರು. ಸ್ವಲ್ಪ ಹೊತ್ತಿಗೆಲ್ಲ ಮುಖರ್ಜಿಯ ಆಜ್ಞೆಯ ಮೇರೆಗೆ ಅಲ್ಲಿಯ ಮಾಸ್ತರಿಣಿಯಾದ ಯೌವನ ಹೆಂಗುಸೊಬ್ಬಳು ಸುಂದರಿಯ ವಿಚಾರ–ಸಾಚಾರಗಳಿಗೆ ಬಂದು ಸೇರಿದಳು. ಅವಳು ಒಳ್ಳೆಯ ಹಿತಭಾಷಿಣಿಯಾಗಿದ್ದುದರಿಂದ ಅಂದು ಕತ್ತಲಾಗುವುದರೊಳಗೆ ಸುಂದರಿಗೆ ಒಳ್ಳೆಯ ಹಳಗದ ಪರಿಚಯಸ್ಥಳಾದ ಮಿತ್ರಳಂತೆ ಆಗಿಹೋದಳು. ಆ ಮಾಸ್ತರಿಣಿ ಒತ್ತಾಯ ಮಾಡಿ ಸುಂದರಿಯಿಂದ ಒಂದು ಹಳ್ಳಿಯ ಹಾಡನ್ನು ಕೂಡಾ ಹೇಳಿಸಿ, “ ಆಹ! ಚಂದಾಗಿದೆಯಲ್ಲಾ ಕಂಠಾ!” ಎಂದು ಶ್ಲಾಘನೆಯನ್ನೂ ಮಾಡಿಬಿಟ್ಟಳು.

ಅಂದು ರಾತ್ರಿ ಊಟ–ಗೀಟ ತೀರಿದ ಮೇಲೆ ಸುಂದರಿ ತನ್ನ ಟ್ರಂಕು ಪೆಟ್ಟಿಗೆಯನ್ನು ತೆರೆದು ನೋಡಿದಾಗಲೇ ನಗದ ಕಿರುಪೆಟ್ಟಿಗೆ ಕಾಣೆಯಾದುದು ಅವಳಿಗೆ ಗೊತ್ತಾಯಿತು. “ ಅಯ್ಯೋ! ನಗದ ಪೆಟ್ಟಿಗೆ ಎಲ್ಲಿ!” ಎಂದು ಚೀರಿದಳು. ಜೋಯಿಸರು ಎಲೆಯಡಿಕೆಯ ಬಾಯಿಯಿಂದ—“ ಹೊ! ಏನಾಯಿತು? ಸರಿಯಾಗಿ ನೋಡಮ್ಮ. ಹೊರಡುವಾಗ ನಾನು ನಿನ್ನ ಕೈಯಲ್ಲಿ ಕೊಟ್ಟಿದ್ದೆನಲ್ಲಾ!'' ಎಂದರು. “ ಹೌದು. ನೀವು ಕೊಟ್ಟಿದ್ದಿರಿ. ನಾನು ಬಿಡಿಸಿ ನೋಡಿ, ಈ ಪೆಟ್ಟಿಗೆಯೊಳಗಿಟ್ಟು ಬೀಗಹಾಕಿದ್ದು ಚೆನ್ನಾಗಿ ನೆನಪುಂಟು! ಬೀಗದ ಕೈ ನನ್ನ ಸೆರಗಿಗೇ ಕಟ್ಟಿಕೊಂಡಿದ್ದೆ. ಅಯ್ಯೋ! ಏನಾಯಿತೊ! ಎಲ್ಲಿ ಹೋಯಿತೊ!—” ಎಂದು ಕೂಗಲಾರಂಭಿಸಿದಳು ಸುಂದರಿ. “ ಎಲ್ಲಿಗೆ ಹೋದೀತು? ನಿನ್ನ ಬಟ್ಟೆಗೇ

ನಾನೂ ಇದ್ದೆನಲ್ಲಾ? ಒಂದು ವೇಳೆ ಎಲ್ಲಿಯಾದರೂ ಮರೆತು ನನ್ನ ಮನೇಲೇ ಬಿಟ್ಟುಬಿಟ್ಟಿದ್ದೀಯೋ ಏನೋ!—'' ಎಂದು ಸಮಾಧಾನ ಹೇಳಲು ಯತ್ನಿಸಿದರು ಜೋಯಿಸರು.

"ಇಲ್ಲ ಇಲ್ಲ! ಈ ಪೆಟ್ಟಿಗೆ ಒಳಗೇ ಇಟ್ಟಿದ್ದೇನೆ! ಹೋಯಿತು! ನನ್ನ ನಗವೆಲ್ಲಾ ಹೋಯಿತು! ಅಯ್ಯೋ! ಇನ್ನೇನು ಗತಿ!—" ಎಂದು ಸುಂದರಿ ಹತಾಶಳಾಗಿ ಅಳಲಾರಂಭಿಸಿದಳು. ಅವಳ ಅಳುಗೊರಳನ್ನು ಕೇಳಿ—ಪಕ್ಕದ ಕೋಣೆಯೊಳಗಿದ್ದ ಅವಳ ಪರಿಚಿತಳಾದ ಮಾಸ್ತರಿಣಿ ಅಲ್ಲಿಗೆ ಬಂದು, ನಡೆದ ಸಂಗತಿಯನ್ನರಿತು—ಏನೋ ತನಗೆ ತಿಳಿದ ಸಮಾಧಾನವನ್ನು ಹೇಳಿದಳು. ಕಡೆಗೆ ಜೋಯಿಸರ ಸಾಧನೆಯಂತೆ ಆ ಜೋಯಿಸರ ಮನೆಯಲ್ಲಿಯೇ ಮರೆತು ಬಂದಿರಬಹುದೆಂದು ಆ ಮಾಸ್ತರಿಣಿಯೂ ಅಭಿಪ್ರಾಯವಿತ್ತಳು. ತಾನು ಊರಿಗೆ ಹೋದಕೂಡಲೇ ಅದನ್ನು ಹುಡುಕಿ ಕಳುಹಿಸುತ್ತೇನೆಂದು ಜೋಯಿಸರು ಭರವಸೆಯನ್ನು ಕೊಟ್ಟು, ತಮ್ಮ ಮಂಚದಲ್ಲಿ ಮಲಗಿದರು. ಮಲಗುವಾಗ ತಮ್ಮ ಕೋಟನ್ನು ತಲೆದಿಂಬಿನ ಅಡಿಯಲ್ಲಿ ಮಡಚಿಟ್ಟುಕೊಂಡಿದ್ದರು. ಇದನ್ನು ಆ ಮಾಸ್ತರಿಣಿ ನೆಟ್ಟುನೋಡಿದ್ದಳು. ಬಳಿಕ ಆ ಮಾಸ್ತರಿಣಿ, ಸುಂದರಿಯ ಸಮಾಧಾನಕ್ಕಾಗಿ ಇಲ್ಲಿಯೇ ಮಲಗುವೆನೆಂದು ಹೇಳಿ, ತನ್ನ ಹಾಸಿಗೆಯನ್ನು ತರಿಸಿ ಸುಂದರಿಯ ಪಕ್ಕದಲ್ಲಿಯೇ ಹಾಸಿ ಮಲಗಿದಳು. ವಿದ್ಯುದ್ದೀಪವು ಆರಿಸಲ್ಪಟ್ಟಿತು. ಒಂದು ಲಾಂದರವು ಮಾತ್ರ ಅಲ್ಪ ಪ್ರಕಾಶವನ್ನು ಹಿಡಿದಿಟ್ಟುಕೊಂಡು ಒಂದು ಮೂಲೆಯಲ್ಲಿತ್ತು.

ಸ್ವಲ್ಪ ಹೊತ್ತಿನಲ್ಲೆ ಜೋಯಿಸರಿಗೆ ಗಾಢನಿದ್ರೆ ಬಂದಂತೆ ಗೊರ್ರ ಗೊರ್ರನೆ ಗೊರಕೆಗಳು ಸೂಚನೆ ಮಾಡಿದುವು. ಅವರಿಗೆ ಇನ್ನು ನಿದ್ದೆ ಬಾರದೇನು ಪಾಪ? ಯೋಚನೆ ಮಾಡಿದಂತೆ ಎಲ್ಲವೂ ಸುಸೂತ್ರವಾಗಿ ನಡೆದುಹೋಗಿತ್ತು. ನಗದ ವಿಚಾರವೂ ಬಂದು ಸಪ್ಪೆಯಾಗಿ—ಶಾಂತವಾಗಿ ಅದೂ ತನ್ನ ಹೊಟ್ಟೆಗೆ ದಕ್ಕಿತೆಂದು ಸಮಾಧಾನವಾಗಿತ್ತು. ಇದೆಲ್ಲಾ ಸಂತೋಷವಲ್ಲವೇನು? ಸಂತೋಷದ ಉಚ್ಚಶಿಖರದ ಮೇಲೆ ಹಾಯಾಗಿ ಮಲಗಿದಂತಾಗಿತ್ತು. ಅದರ ಮೇಲೆ ಪ್ರಯಾಣದ ಆಯಾಸ. ಈ ಆಯಾಸದಿಂದ ಹಾಯಾಗಿ ಸುಖವಾಗಿ ಹಾಸುಮಂಚದ ಮೇಲೆ

ಆಸುವನ್ನು ಈಡಾಡಿಕೊಂಡಿದ್ದ ಆ ಜೋಯಿಸರಿಗೆ—ಮಲಗುವಾಗ ತಲೆಯೊಳಗೆ ಸುಳಿದಾಡಿಕೊಂಡಿದ್ದ ಸಂತೋಷ ಲಾಭಾಲೋಚನೆಗಳು ಹಾಗೆಯೇ ಸ್ವಪ್ನರೂಪಕ್ಕೆ ಮಾರ್ಪಟ್ಟುಕೊಂಡಿದ್ದುವು.

ಆಗ ಮಾಸ್ತರಿಣಿ ಮೆಲ್ದನಿಯಿಂದ— "ಸುಂದರಿಬಾಯಿ!" ಎಂದು ಕರೆದಳು. ನಗಗಳು ಕಾಣೆಯಾದುವಲ್ಲಾ ಎಂದು ಚಿಂತೆಯಿಂದ ಮಲಗಿದ್ದ ಸುಂದರಿಗೆ ನಿದ್ದೆಯೇ ಹತ್ತಿರಲಿಲ್ಲ. ಬೆಳಗಿನವರೆಗೆ ನಿದ್ರೆ ಹತ್ತುವ ಲಕ್ಷಣವೂ ತೋರಲಿಲ್ಲ. ಪಿಸುದನಿಯಿಂದ "ಏನು?" ಎಂದಳು.

"ನಿನ್ನ ನಗಗಳನ್ನು ಈ ನಿಮ್ಮ ಜೋಯಿಸನೇ ಎಬ್ಬಿಸಿರಬೇಕೂಂತ ನನಗೇನೋ ಕಾಣುತ್ತೆ!"

"ಛೆ! ಹೀಗೆ ಮಾಡಿಯಾರೊ!"

"ನಿನಗೆ ಗೊತ್ತಿಲ್ಲ ಸುಂದರಿ! ಈಗಿನ ಕಾಲದಲ್ಲಿ ಯಾರನ್ನೂ ನಂಬಬಾರದು. ಸಾಮಾನ್ಯವಾಗಿ ಎಲ್ಲರೂ ಕೋಟನ್ನು ಗೂಟಕ್ಕೆ ಹಾಕಿ ಮಲಗುತ್ತಾರಲ್ಲದೆ, ತಲೆದಿಂಬಿನ ಅಡಿಯಲ್ಲಿ ಕೋಟನ್ನು ಮಡಚಿಟ್ಟುಕೊಳ್ಳುವುದಿಲ್ಲ. ತಲೆದಿಂಬು ಇಲ್ಲದಿದ್ದರಾದರೂ ಇಟ್ಟುಕೊಂಡಾರು—ಎನ್ನಬಹುದು. ಇವನಿಗೆ ತಲೆದಿಂಬು ಉಂಟಲ್ಲವೆ? ದುಡ್ಡಿನ ಪಾಕೀಟು ಇದ್ದರೆ ಅದನ್ನು ಮಾತ್ರ ತೆಗೆದು ತಲೆದಿಂಬಿನ ಅಡಿಯಲ್ಲಿ ಇಟ್ಟುಕೊಳ್ಳುತ್ತಾರೆ. ಇವನೊಡನೆ ಈ ಕೋಟು ಒಂದರ ಹೊರತು ಪೆಟ್ಟಿಗೆ ಗಂಟು ಸಂಚಿ ಏನೂ ಇದ್ದಹಾಗಿಲ್ಲ. ಆದ್ದರಿಂದ ಏನಿದ್ದರೂ ಆ ಕೋಟಿನೊಳಗೇ ಇರಬೇಕು. ಅದನ್ನೊಂದು ಪರೀಕ್ಷೆ ಮಾಡಲೇಬೇಕು ನೋಡೇ."

ಮಾಸ್ತರಿಣಿ ಹೀಗೆ ಹೇಳಲು, ಸ್ವಲ್ಪ ಹೊತ್ತು ಯೋಚನೆ ಮಾಡಿದ ಮೇಲೆ, ಸುಂದರಿಗೂ ಹಾಗೇಯೇ ಸಂಶಯ ತಟ್ಟಿತು. ಏಕೆಂದರೆ ಅವಳು ನಗದ ಕಿರುಪೆಟ್ಟಿಗೆಯನ್ನು ಟ್ರಂಕು ಪೆಟ್ಟಿಗೆಯಲ್ಲಿಟ್ಟಿರುವುದು ಅವಳಿಗೆ ಚೆನ್ನಾಗಿಯೂ ನೆನಪುಂಟು. ಹಾಗೆಲ್ಲ ಮರೆಯುವಂತಹ ಸಂದರ್ಭವಾಗಿರಲಿಲ್ಲ.

ಈ ಹೊಂಚಿನಲ್ಲಿಯೇ ಮಧ್ಯರಾತ್ರಿ ಕಳೆದುಹೋಯಿತು. ಸ್ವಲ್ಪ ಚಳಿಯೂ ಪ್ರಾರಂಭವಾಗಿತ್ತು. ಜೋಯಿಸರು ಮುಸುಕು ಹಾಕಿಕೊಂಡು, ಗೊರಗೊರನೆ ಗೊರಕೆ ಹೊಡೆಯುತ್ತ ಸುರುಟಿ ಮಲಗಿದ್ದರು. ಯುವತಿ

ಯರಿಬ್ಬರೂ ಸದ್ದಿಲ್ಲದೆ ಎದ್ದರು; ಬೆಳಕನ್ನು ತುಸು ಏರಿಸಿದರು; ನೋಡಿದರು; ಜೋಯಿಸರ ತಲೆ, ತಲೆದಿಂಬಿನ ಒಂದು ಕೊನೆಗೆ ಸರಿದಿತ್ತು ಸುಂದರಿ ಬೆಕ್ಕಿನಂತೆ ಬಂದು ಈ ಕೊನೆಯಲ್ಲಿದ್ದ ಕೋಟನ್ನು ಮೆಲ್ಲನೆ ಎಳೆದುಕೊಂಡಳು. ಕೂಡಲೇ ಮಾಸ್ತರಿಣಿ ಇನ್ನೊಂದು ಬಟ್ಟೆಯನ್ನು ಆ ಸ್ಥಳದಲ್ಲಿ ತುರುಕಿದಳು.

ಸುಂದರಿ ಆ ಕೋಟಿನ ಒಳಗಿನೆಯನ್ನು ಮುಟ್ಟಿದ್ದೇ ತಡ, ಅವಳ ನಗಗಳೆಲ್ಲಾ ಗಿಜಗಿಜನೆ ಅವಳ ಕೈಗೆ ತಾಗಿತು! ಸಂತೋಷ ಭರದಿಂದ ಮೈಮರೆತು "ಹೋ!" ಎಂದು ಕೂಗಲಿಕ್ಕಿರಲು, ಮಾಸ್ತರಿಣಿ ಮಿಂಚಿನ ವೇಗದಿಂದ ಅವಳ ಬಾಯಿಯನ್ನು ಒತ್ತಿ ಹಿಡಿದಳು. ಸಂತೋಷದ ಆವೇಶವನ್ನು ತಾಳಿಕೊಳ್ಳಲಾರದೆ ಸುಂದರಿ ಮಾಸ್ತರಿಣಿಯನ್ನೆ ಬಿಗಿಯಾಗಿ ಆಲಿಂಗಿಸಿಕೊಂಡುಬಿಟ್ಟಳು!

ರೈಲಿನಲ್ಲಿ ಕದ್ದು ಕೋಟಿನೊಳಗೆ ಸೇರಿಸಿಕೊಂಡ ನಗಗಳನ್ನು ಸ್ಥಳ ಬದಲಾಯಿಸಿ ಭದ್ರಪಡಿಸಲಿಕ್ಕೆ ಜೋಯಿಸರಿಗೆ ಎಡೆ ಸಿಕ್ಕಿರಲಿಲ್ಲ ಭದ್ರಪಡಿಸುವುದಾದರೂ ಎಲ್ಲಿ? ಎಡೆಬಿಡದ ಕೋಟೇ ಭದ್ರವೆಂದು ಅವರು ನಂಬಿದ್ದರು. ಸುಂದರಿ, ಮಾಸ್ತರಿಣಿಯ ಪ್ರೇರೇವಣೆಯಂತೆ ಮೊತ್ತ ಮೊದಲು ತನ್ನ ಎಲ್ಲ ನಗಗಳನ್ನೂ ತೆಗೆದು ಒಂದು ರಹಸ್ಯ ಸ್ಥಾನದಲ್ಲಿ ಭದ್ರಪಡಿಸಿಕೊಂಡಳು. ಬಳಿಕ ಜೇಬಿನಲ್ಲಿದ್ದ ಮನಿಪರ್ಸಿನಲ್ಲಿ ಮುಖರ್ಜಿ ಕೊಟ್ಟ ನೋಟೂ ಇದ್ದುದನ್ನು ನೋಡಿ–ಮಾಸ್ತರಿಣಿ—"ಇದನ್ನೂ ಈ ಕಳ್ಳನಿಗೆ ಬಿಡಬಾರದು." ಎಂದಳು. ಸುಂದರಿ—"ಏನೊ ಪಾಪ! ಬ್ರಾಹ್ಮಣನಿಗೆ ಆಶೆ! ಹೋಗಲಿ, ನನಗೆ ಬೇಡ!" ಎಂದಳು. ಕಾರುಣ್ಯಗೊಂಡು ಕಟ್ಟಕಡೆಗೆ ಜೋಯಿಸರ ದಾರೀ ಖರ್ಚಿನ ಬಗ್ಗೆ ಇಪ್ಪತ್ತೈದು ರೂಪಾಯಿ ಮಾತ್ರ ಆ ಕಿಸೆಯಲ್ಲಿ ಉಳಿದು ಉಳಿದೆಲ್ಲ ನೋಟುಗಳೂ ಸುಂದರಿಯ ಭದ್ರಸ್ಥಾನಕ್ಕೆ ಸೇರಿಕೊಂಡುವು. ಈ ಸ್ವಾರ್ಥಸಾಧಕನಾದ ಗೋಮುಖವ್ಯಾಘ್ರನನ್ನು ಪೋಲೀಸರಿಂದ ಹಿಡಿಸದೆ ಬಿಟ್ಟದ್ದೇ ಹೆಚ್ಚಾಯಿತು! ಅವನು ತನಗಾಗಿ ಇಷ್ಟು ಹೆಣಗಿದನಲ್ಲ–ಎಂಬ ಕೃತಜ್ಞತೆಯೇ ಸುಂದರಿಗೆ ಅಷ್ಟೊಂದು ಕರುಣೆಯನ್ನು ಹುಟ್ಟಿಸಿತು. ಅಂತೂ ಅವರು ಹೊರಡುವವರೆಗೂ ತನಗೇನೂ ತಿಳಿಯದಂತೆಯೇ ನಟಿಸಿಕೊಂಡಿರ

ಬೇಕೆಂದೂ, ಇದೇ ಇಲ್ಲಿ ಸುಂದರಿಗೆ ಪ್ರಥಮ ಅಭಿನಯ ಪಾರವಾಗಲೆಂದೂ ಆ ಮಾಸ್ತರಿಣಿಯೆಂದಳು. ಆ ಧೂರ್ತನನ್ನು ನಾಳೆಯೇ ಹೊರಡಿಸುವ ಉಪಾಯ ಮಾಡಬೇಕೆಂದೂ ಎಣಿಸಿಕೊಂಡರು. ಬಳಿಕ ಕೋಟನ್ನು ಮತ್ತೆ ಜಾಗ್ರತೆಯಿಂದ ಆ ತಲೆದಿಂಬಿನ ಅಡಿಯಲ್ಲಿ ತೂರಿಸಿಟ್ಟು, ಆ ಹೆಂಗುಸರು ಮಲಗಿದ ಮೇಲೆಯೇ ಜೋಯಿಸರು ಈಜಿಯ ಬದಿಗೆ ಹೊರಳಿಕೊಂಡರು.

ಮರುದಿನ ಬೆಳಿಗ್ಗೆ ಎದ್ದು ಸ್ವಲ್ಪ ಹೊತ್ತಿನ ಮೇಲೆ, ಅಂದರೆ ತನ್ನ ಕೋಟು ಬರಿದಾಗಿರುವ ಗುಟ್ಟನ್ನು ನೋಡಿಕೊಂಡ ಮೇಲೆ, ಒಮ್ಮಿಂದೊಮ್ಮೆ ಜೋಯಿಸರ ಮುಖವು ಝುರ್ರನೆ ಇಳಿದು ಹೋಯಿತು ಬೇದಿಗೆ ತೆಗೆದುಕೊಂಡು ತುಂಬಿದ ಸಭೆಯಲ್ಲಿ ಅಧ್ಯಕ್ಷಸ್ಥಾನವನ್ನು ವಹಿಸಿಕೊಂಡವರ ಅವಸ್ಥೆಯನ್ನು ಅನುಭವಿಸಲಾರಂಭಿಸಿದರು ಬಾಯಿಬಿಟ್ಟು ಹೇಳುವಂತಿಲ್ಲ—ಕೇಳುವಂತಿಲ್ಲ. ಮನಸ್ಸಿಗೆಲ್ಲವೂ ತಿಳಿದು ಹೋಯಿತು. ಮಾಡುವುದೇನು? ಆ ಸುಂದರಿಯ ಮುಖವನ್ನೂ—ಆ ಮಾಸ್ತರಿಣಿಯ ಮುಖವನ್ನೂ ನೋಡಲಾರದವರಾಗಿ ಹೋದರು. ಅವರಾದರೋ ಜೋಯಿಸರನ್ನು ಅಡಿಗಡಿಗೆ ಮಾತಾಡಿಸುತ್ತಿದ್ದಾರೆ! ಅವರು ಬೇಕೆಂದೇ ತನ್ನನ್ನು ಕೆಣಕುವಂತೆ ಜೋಯಿಸರಿಗೆ ತೋರಿತು ನಟನಾಪಟುವಾದ ಸುಂದರಿ, ಏನೂ ತೋಚದವಳಂತೆ-ಕಾಣೆಯಾದ ನಗದ ಪೆಟ್ಟಿಗೆಯ ವಿಷಯಕವಾದ ಚಿಂತೆಯ ಆವರಣವನ್ನೆ ಹಾಕಿಕೊಂಡಿದ್ದಾಳೆ! ಆಹಾ! ಇದೆಲ್ಲಾ ಆ ಚತುರ ಮಾಸ್ತರಿಣಿಯ ಮಾಟವಾಗಿರಬೇಕು. ಅಯ್ಯಯ್ಯೋ! ಬಹಳ ಕಷ್ಟವಯ್ಯಾ ಈ ಅವಸ್ಥೆ!

"ಏನು?—ಜೋಯಿಸರು ಒಂದು ರೀತಿಯಾಗಿದ್ದೀರಲ್ಲ?" ಎಂದು ಚುಚ್ಚಿದಳು ಮಾಸ್ತರಿಣಿ.

"ಏನು ಜೋಯಿಸರೆ? ಮೈಯಲ್ಲಿ ಸರಿಯಿಲ್ಲವೋ?" ಎಂದು ಕೆಣಕಿದಳು ಸುಂದರಿ.

"ಡಾಕ್ಟರನ್ನು ಕರೆಯಿಸಬೇಕೇನ್ರೀ?" ಎಂದಳು ಮಾಸ್ತರಿಣಿ.

"ಬೇಡ, ಬೇಡ. ಅದೇನಿಲ್ಲ. ನನಗೆ ಫಕ್ಕನೆ ಏನೊ ತಲೆನೋವು!

ನಾನು ಈ ದಿನವೇ ಊರಿಗೆ ಹೋಗಬೇಕೆಂತ ಮಾಡಿದ್ದೇನೆ.—'' ಎಂದರು ಜೋಯಿಸರು.

"ಆಗಬಹುದು ಜೋಯಿಸರೆ! ನನ್ನ ಜತೆಗೆ ಈ ಮಾಸ್ತರಿಣಿಯರು ಇದ್ದಾರಲ್ಲಾ! ಇನ್ನೇನೂ ಚಿಂತೆಯಿಲ್ಲ!" ಎಂದು ಹೊರಡಿಸಿಯೇ ಬಿಟ್ಟಳು ಸುಂದರಿ. ನಿನ್ನೆಗಿಂತಲೂ ಈ ದಿನ ಸುಂದರಿ ಎಷ್ಟೋ ಚುರು ಕಾಗಿದ್ದಾಳಲ್ಲವೆ? ಜೋಯಿಸರು ಬಹು ಕಷ್ಟದಿಂದ ಭಯದಿಂದ ಆ ದಿನ ಮಧ್ಯಾಹ್ನದ ವರೆಗೆ ಹೇಗೋ ಕಳೆದು ಆ ಮೇಲೆ ಅಲ್ಲಿಂದ ಊರಿಗೆ ಹೊರಟರು. ಆಗ ಸುಂದರಿ, "ಜೋಯಿಸರೆ! ನಗದ ಪೆಟ್ಟಿಗೆಯ ವಿಷಯ ಖಂಡಿತ ಬರೆಯಿರಿ." ಎಂದಳು. "ಹಾಗೆಯೆ ಆಗಲಮ್ಮ. ಏನೂ ಹೆದರಬೇಡ—" ಎಂದು ನಡುಗುವ 'ದನಿಯಿಂದ ಹೇಳುತ್ತಾ ಜೋಯಿಸರು ಹೊರಟುಹೋದರು. ಅವರ ಧೈರ್ಯವೆಲ್ಲ ಎಲ್ಲಿ ಹೋಯಿತೋ ಏನೊ! ನಗಗಳೂ—ರೂಪಾಯಿಗಳೂ ಸುಂದರಿಯ ಪೆಟ್ಟಿಗೆಯಲ್ಲಿ ಇದ್ದೀತೋ-ಅಥವಾ ಬೇರೆಲ್ಲಿಯಾದರೂ ಬಚ್ಚಿಟ್ಟದ್ದಾರೋ—ಯಾರಿಗೆ ಗೊತ್ತು? ಸುಂದರಿಯ ಪೆಟ್ಟಿಗೆಯಲ್ಲೆ ಖಂಡಿತ ಉಂಟೆಂದು ತಿಳಿಯುತ್ತಿದ್ದರೆ, ಆ ದಗಲ್ಬಾಜೀ ಜೋಯಿಸರು ತಮ್ಮ ರೂಪಾಯಿಗಳು ಕಳವಾಗಿ ಹೋಯಿತೆಂದು—ಸುಂದರಿಯ ಮೇಲೆಯೇ ತಿರುಗಿ ನಿಲ್ಲುತ್ತಿದ್ದರು. ಇಷ್ಟ ಮಾಡಿಸಿದ ಆ ಮಾಸ್ತರಿಣಿ ಆ ವಿಷಯದಲ್ಲಿ ಕೂಡಾ ಎಚ್ಚತ್ತಿದ್ದಾಳೆಂದು ಭಾವಿಸಿಕೊಂಡೇ—ಆ ಜೋಯಿಸರು ನಿರುಪಾಯರಾಗಿ ಹೇಗಾದರೂ ಅಲ್ಲಿಂದ ಓಡಿಹೋಗಲಾರಂಭಿಸಿದ್ದರು. ಅವರ ಜನ್ಮದಲ್ಲಿ ಆದ ಪರಾಭವ ದಲ್ಲಿ ಇದೊಂದೇ ಮುಖ್ಯವಾದುದಾಗಿತ್ತು.'' "ಅಂತೂ ಗೆದ್ದೆನಲ್ಲ!" ಎಂದು ಉದ್ಗರಿಸಿಕೊಳ್ಳುತ್ತ ಮಂಗಳೂರಿನಲ್ಲಿ ರೈಲಿನ್ನಿಳಿದು ತಮ್ಮ ಮನೆಗೆ ಬಂದು ಸೇರಿದರು. ಆಗ ಆ ಪರಾಭವದ ಲಕ್ಷಣವನ್ನು ಮುಖ ದಿಂದ ತೊಡೆದು ಹಾಕಿ—"ಬಚಾವಪ್ಪ! ಇನ್ನು ತೊಲಗಿಹೋ ಹೋಯಿತು ಸುಂದರಿಯ ಪೀಡೆ! ಹಾಳಾದ ಈ ವ್ಯಾಪಾರದಲ್ಲಿ ಒಂದು ಕಾಸಿನ ಲಾಭವೂ ದೊರೆಯಲಿಲ್ಲ. ಆ ನಗಗಳ ಮೋಹಕ್ಕೆ ಬಿದ್ದು ನಗವೂ-ಹೋಯಿತು, ನ್ಯಾಯದಲ್ಲಿ ಸಿಕ್ಕಿದ ರೂಪಾಯಿಯೂ ಹೋಯಿತು. ಹೋಗಲಿ ಹಾಳಾಗಿ! ಮುಕುಂದರಾಯರಿಂದ ಜಾರಿಸಿಕೊಂಡುದಷ್ಟೇ

ಲಾಭ. ಆಯಿತು! ಸಿಕ್ಕಿದುದೇ ಲಾಭ-ಏನಾಯಿತೀಗ ಮಹಾ? ಇಂತಹ ವ್ಯವಹಾರಗಳಲ್ಲಿ ಲಾಭ-ನಷ್ಟ-ಸೋಲು-ಗೆಲುವು ಯಾವಾಗಲೂ ಇದ್ದುದೇ. ನಾನಾದರೋ ಇದೊಂದೇ ಬಾರಿ ಸ್ವಲ್ಪ ಸೋತದ್ದು!" ಎಂದು ಸಮಾಧಾನವನ್ನು ತಂದುಕೊಂಡು ಮೊದಲಿನ ಜೋಯಿಸರಂತೆ-ಗೆಲುವಿನ ಜೋಯಿಸರಾಗಿಯೇ ಮನೆಗೆ ಬಂದು ಸೇರಿದರು.

---

## ೧೫. ಸುಳ್ಳುಗಾರರಾದ ಜೋಯಿಸರು

ರಾಮಾಜೋಯಿಸರು ಮನೆಗೆ ಬಂದು ವಿಚಾರಿಸಿದಾಗ ನಿನ್ನೆ ಸಂಜೆಯಲ್ಲಿ ಕೃಷ್ಣನು ಅವರ ಮನೆಗೆ ಬಂದು ಅವರನ್ನು ವಿಚಾರಿಸಿದನೆಂದೂ, ಜೋಯಿಸರೊಡನೆ ಏನೋ ಕೊಂಚ ಮಾತಾಡುವುದಿದ್ದಿತಂತೆಂದೂ ತಿಳಿದು ಬಂತು. ಕೃಷ್ಣನೆಂದರೆ ಜೋಯಿಸರಿಗೆ ಕೊಂಚ ಭಯವೇ ಇತ್ತು. ಕಾರಣ, ಆತನು ಸ್ವಲ್ಪ ಜೋರಿನವನು; ಏನಿದ್ದರೂ ಹೊಟ್ಟೆಯಲ್ಲಿಟ್ಟುಕೊಳ್ಳದೆ ಇದಿರಿದಿರೇ ಹೇಳಿಬಿಡುವನು. ಅವರಿಗೆ ತುಂಬಾ ಹಿತಚಿಂತಕರಂತಿದ್ದ ಈ ಜೋಯಿಸರು, ಕಡೆಗೆ ಈಗ ಅಹಿತವನ್ನೆ ಮಾಡಿದ ಹಾಗಾಯಿತಲ್ಲವೆ? ಅಂದು ಮದುವೆಯ ಸಂದರ್ಭದಲ್ಲಿ ಅಷ್ಟು ಜನರ ಇದಿರಿನಲ್ಲಿ ತಾನು ಈ ಮದುವೆಗೆ ಒಪ್ಪಲಾರೆ, ಎಂದು ಹೇಗೆ ಕಡಿದು ಹೇಳಿಬಿಟ್ಟ!—ಆ ಕೃಷ್ಣ! ಅಂತಹನಿಗೆ ಅನರ್ಥ ಘಟಕರಾದ ಈ ಜೋಯಿಸರು ಒಬ್ಬಂಟಿಗರಾಗಿ ಸಿಕ್ಕಿದರೆ, ಇನ್ನೇನೇನು ಹೇಳಿ ಬಿಡಲಿಕ್ಕೂ ಹಿಂಜರಿಯುವವನಲ್ಲ ಅವನು. ಆಗ ಅಪರಾಧದ ಭಾರವನ್ನು ಹೊತ್ತುಕೊಂಡಿದ್ದ ಜೋಯಿಸರು ಮೋರೆ ತಗ್ಗಿಸಬೇಕಾದುದೇ ಸರಿ. ಅಂತೆಯೆ ಶೀನುವಿನ ಮದುವೆಯಾದ ಮೇಲೆ, ಕೃಷ್ಣನಿಗೆ ಜೋಯಿಸರು ಈ ವರೆಗೆ ಭೇಟಿಯಾಗಿರಲಿಲ್ಲ. ಈಗ ಕೃಷ್ಣನು ತನ್ನನ್ನು ಹುಡುಕಿಕೊಂಡು ಯಾಕೆ ಬಂದಿರಬಹುದು? ಅಣ್ಣನು ಪಲಾಯನ ಮಾಡಿದುದರಿಂದ ಉಂಟಾದ ಸಂತಾಪವನ್ನೆಲ್ಲಾ ತನ್ನ ಮೇಲೆ ಕಾರಲಿಕ್ಕೋ? ತಾನು ಸುಂದರಿಗೆ ಆಶ್ರಯಕೊಟ್ಟುದರಿಂದ ತನ್ನನ್ನೇನಾದರೂ ಜರೆದು ಅವಮಾನಗೊಳಿಸಲಿಕ್ಕೋ?—ಈ ಬಗೆಯ ಸಂದೇಹಗಳಿಂದ ಜೋಯಿಸರು

ಹೆಂಡತಿಯನ್ನು ಕುರಿತು "ಏನೇ?–ಕೃಷ್ಣ ಬಂದಾಗ ಅವನ ಮುಖ ಭಾವ ಹೇಗಿತ್ತು? ನನ್ನ ಮೇಲೆ ಏನಾದರೂ ಸಿಟ್ಟುಗಿಟ್ಟು ಇರುವ ಹಾಗಿತ್ತೊ?" ಎಂದು ಕೇಳಿದರು.

"ಅದೇನಿಲ್ಲ. ಒಳ್ಳೇ ನಿಧಾನದಲ್ಲಿ ಮರ್ಯಾದೆಯಲ್ಲಿ 'ಜೋಯಿಸರು ಇದ್ದಾರೆಯೇನಮ್ಮಾ?' ಅಂತ ಕೇಳಿದ. 'ಇಲ್ಲಾ. ಪರವೂರಿಗೆ ಏನೋ ಕೆಲಸದ ಮೇಲೆ ಹೋಗಿದ್ದಾರೇ'ಂತ ನಾನು ಹೇಳಿದೆ. 'ಯಾವಾಗ ಬಂದಾರೂ'ಂತ ಪ್ರಶ್ನೆ ಹಾಕಿದ. 'ನಾಲ್ಕು ದಿನದೊಳಗೆ ಬರುತ್ತೇನೆಂತ ಹೇಳಿದ್ದಾರೆ. ನಾಳೆ-ನಾಡದು ಬಂದಾರು' ಅಂದೆ. 'ಸರಿ' ಅಂತ ಹೊರಟುಹೋದ." ಎಂದು ಹೆಂಡತಿ ಹೇಳಿದಳು ಅದರಿಂದ ಜೋಯಿಸರಿಗೆ ಸ್ವಲ್ಪ ಧೈರ್ಯವು ಏರಿತು. "ಮಾಡಿದರೂ ಏನು ಮಾಡಿಯಾನು?—ಆ ಪೋರ! ಅವರೇ ಮೋಸ ಹೋದದ್ದಕ್ಕೆ ನಾನೋ ಜವಾಬ್ದಾರಿ? ಹಾಗೆಲ್ಲಾ ಪ್ರಾಯದ ಮದದಲ್ಲಿ ಹೆಚ್ಚುಕಡಮೆ ಮಾತಾಡಿದರೆ ನಾನೂ ಸುಮ್ಮನೆ ಬಿಟ್ಟೇನೆ? ನನಗೂ ಗೊತ್ತಿದೆ ಕಾನೂನು! ಐವತ್ತು ವರ್ಷ ಪ್ರಾಯ ಸುಮ್ಮನೆ ಬಂದಿಲ್ಲ ನನಗೆ! ಹುಂ. ಯಾವುದಕ್ಕೂ ಬರಲೀ ಅವನು! ಗೊತ್ತಾಗಿ ಹೋಗಲಿ ಜಳ ಜಳ! ಅಥವಾ ಅವನೇ ಬರುವವರೆಗೆ ಕಾಯುವುದೇಕೆ? ನಾನೇ ಹೋಗುತ್ತೇನೆ ಅವನ ಮನೆಗೆ. ನಾನೇನು ಅವನ ಮೇಲೆ ಖಾಡಾಖಾಡೀ ಸಿಟ್ಟು ಮಾಡಿಲ್ಲವಷ್ಟೆ? ಒಳ್ಳೇ ರೀತಿಯಲ್ಲಿ ಮಾತಾಡಿದರೆ ಲೇಸೇ ಆಯಿತು. ಹೌದು. ನಾನೇ ಹೋಗಬೇಕು" ಎಂದು ನಿಶ್ಚಯಿಸಿಕೊಂಡು ಜೋಯಿಸರು ಬೆಳಗ್ಗೆ ಎದ್ದುಕೊಂಡು ಕೃಷ್ಣನ ಮನೆಗೆ ನಡೆದರು.

ಈಗ ಆ ಮನೆಯಲ್ಲಿ ಕೃಷ್ಣನೂ ಗೌರಿಯೂ ಇಬ್ಬರೇ ಇದ್ದರು. ಒಳಗೆಲಸವೆಲ್ಲಾ ಗೌರಿಯ ಪಾಲು, ಹೊರಗೆಲಸವೆಲ್ಲಾ ಕೃಷ್ಣನ ಪಾಲು ಜೋಯಿಸರು ಹೋದಾಗ ಕೃಷ್ಣನು ಅಂಗಳದಲ್ಲಿ ತೆಂಗಿನ ಸಸಿಗೆ ನೀರು ಹಾಕುತಿದ್ದನು. ಜೋಯಿಸರನ್ನು ಕಾಣುತ್ತಲೇ ಅವನು—"ಓಹೊ! ಜೋಯಿಸರು! ಬಹಳ ಅಪರೂಪ! ಕುಳಿತುಕೊಳ್ಳಿ!" ಎನ್ನುತ್ತಾ ಕೈಯಲ್ಲಿದ್ದ ಕೊಡಪಾನವನ್ನು ಕೆಳಗಿಟ್ಟು, ಮೇಲೆತ್ತಿ ಕಟ್ಟಿದ್ದ ಪಂಚೆಯನ್ನು ಕೆಳಕ್ಕೆ ಬಿಟ್ಟುಕೊಂಡು ಜಗುಲಿಯಲ್ಲಿ ಬಂದು ಕುಳಿತನು. ಅದಕ್ಕಿಂತ

ಮೊದಲೇ ಕುಳಿತುಕೊಂಡಿದ್ದ ಜೋಯಿಸರು, ಹಲ್ಲನ್ನು ತೋರಿಸುತ್ತ—
"ಅಪರೂಪವೆಂದರೆ ನನಗೆ ಬಿಡುವೆಲ್ಲಿದೆ ಹೇಳಪ್ಪಾ? ಏನಾದರೊಂದು ಕೆಲಸ ಬಂದೇ ಬರುತ್ತೆ ಗಟ್ಟಿಯೋ—ಬಿಟ್ಟಿಯೋ!"

"ಓಹೋ! ಹಾಗಾದರೆ ಒಳ್ಳೇ ಸಂಪಾದನೇಂತ ಕಾಣುತ್ತೆ ಇತ್ತೀಚಿಗೆ!"

"ಒಳ್ಳೇದೇನು ಮಣ್ಣು? ಈ ದರಿದ್ರ ಕಾಲದಲ್ಲಿ ಒಳ್ಳೆಯ ಸಂಪಾದನೆ ಎಂಬುದು ಕುದುರೆಯ ಕೊಂಬೇ ಸರಿ!"

"ಹಾಗೇನು? ನನ್ನ ಅಣ್ಣನ ಮದುವೇ ಘಟನೆ ಮಾಡಿದ ಮೇಲೆ-ಅಂತಹ ಘಟನೆ ಮತ್ತಾವುದೂ ಘಟಿಸಲಿಲ್ಲವೇ ನಿಮ್ಮಿಂದ?"

"ಏಯ್! ಅಂಥಾ ಮುಖ್ಯವಾದದ್ದೇನೂ ಇಲ್ಲಪ್ಪ!"

"ಅಂತೂ, ಅಣ್ಣನ ಮದುವೆಯಲ್ಲಿ ನಿಮ್ಮ ಕೈ ಬೆಚ್ಚಗಾದ್ದು ಅಷ್ಟೇ ಸರಿ ಹಾಗಾದರೆ?"

"ಅದರಲ್ಲಾದರೂ ನನ್ನ ಕೈ ಏನು ಬೆಚ್ಚಗಾಗಿದೆ ಮಣ್ಣು? ಸಾಧಾರಣವಾಗಿ ಆಗುವ ಹಾಗೇ ಆಯಿತು. ಆದರೆ ಕೈ-ಮನಸ್ಸುಗಳು ಮಾತ್ರ ತುಂಬಾ ಬೆಚ್ಚಗಾಗುವ ಹಾಗಾಯಿತು, ನನ್ನ ದುರದೃಷ್ಟವಶಾತ್!"

"ನೀವೇಕೆ ಜೋಯಿಸರೆ, ಹಾಗೆ ಮಾಡಿಸಿದಿರಿ ನನ್ನ ಅಣ್ಣನಿಗೆ?"

"ನಾನೇನು ಮಾಡಿದೆ ಮಹಾರಾಯಾ? ಮಾಡುವ ಕೆಲಸವನ್ನೇ ಮಾಡಿದೆ! ನನಗೆ ನಾರಾಯಣಯ್ಯನೂ ಬೇಕಾದವನು, ನೀವೂ ಬೇಕಾದವರು —"

"ನಮಗಿಂತ ಹೆಚ್ಚಾಗಿ ಅವರೇ ಬೇಕಾದವರೂಂತ ಅನ್ನಿ."

"ಛೆ, ಅದೇನು?"

"ಅವರು ಧನವಂತರು!"

"ಧನವಂತರೇನು? ಗಂಟುಕೊಡುತ್ತಾರೆಯೆ?"

"ಅದೇನೋ ನಿಮಗೇ ಗೊತ್ತು."

"ಹೀಗೆಲ್ಲಾ ನೀನು ಸಂದೇಹಪಟ್ಟರೆ ಎಷ್ಟೂ ಪಡಬಹುದು. ನಾನು ಸ್ವಲ್ಪ ಸ್ವಲ್ಪ ಮುಚ್ಚುಮರೆಯನ್ನು ಮಾಡಿದ್ದರೂ, ಅದು ನನ್ನಿಂದಾಗಿ ಮದುವೆ ನಿಂತು ಹೋಗಬಾರದೂಂತ. ಅಂತೆಯೇ ಲಕ್ಷ್ಮಮ್ಮನ ಹುಡುಗಿ

ಯನ್ನು ನೋಡಲಿಕ್ಕೆ ಹೋದಾಗ "ಹುಡುಗಿ ಯಾವುದೂ" ಅಂತ ಕೇಳು ವಂತಹ ಎಡೆಯಿರಿಸಿದ್ದೆ. ಲಕ್ಷ್ಮಮ್ಮನು ಕೇಳಲಿಲ್ಲ ಆ ಮೇಲೆ ಶೀನುವಿಗೆ ಎಷ್ಟೋ ಹೇಳಿದೆ—ಒಪ್ಪೆ ಹೋಗಿ ಹುಡುಗಿಯನ್ನು ನೋಡಪ್ಪಾ ಅಂತ. ಅವನೂ ಒಲ್ಲೆನೆಂದ ಹಾಗೇನಾದರೂ ಆಗಿ ಮದುವೆಯೇ ನಿಂತು ಹೋದರೆ ನನಗೆ ಸಂತೋಷವೇ ಆಗುತ್ತಿತ್ತು ಗೊತ್ತೇ? ನನ್ನಿಂದಾಗಿ ಒಂದು ಬಡ ಅನಾಥ ಹುಡುಗಿಯ ಮದುವೆ ನಿಂತುಹೋಗಿ, ಆ ದೋಷವು ತಟ್ಟಬಾರದೆಂತಲೇ ನಾನು ಘಟಕನಾಗಿ ನಿಂತೆ. ನನ್ನ ಆ ತಪ್ಪನ್ನು ದೇವರು ಕ್ಷಮಿಸಿಯಾನು!"

"ದೇವರು ಕ್ಷಮಿಸಿಯಾನಪ್ಪಾ—ಕ್ಷಮಾಸಿಧಿಯಾದ ದೇವರು! ಆದರೆ ಅದರಿಂದ ಎಷ್ಟೆಲ್ಲ ಅನರ್ಥವಾಯಿತೆಂತ ಆ ದೇವರಿಗೆ ಹೇಳು ವವರು ಯಾರು?"

"ಎಲ್ಲಾ ನನಗೆ ಗೊತ್ತುಂಟು ಮಹಾರಾಯ! ಧರ್ಮಸಂಕಟದಲ್ಲಿ ನಾನು ಸಿಕ್ಕಿ ಬಿದ್ದುಬಿಟ್ಟೆ. ಇನ್ನು ಆಗಿಹೋದ ವಿಚಾರವೆಲ್ಲ ಮಾತನಾಡಿ ಏನು ಪ್ರಯೋಜನ ಹೇಳು? ಅದಿರಲಿ, ಕೃಷ್ಣ! ನೀನೇನೋ ಮೊನ್ನೆ ನಮ್ಮ ಮನೆಗೆ ಬಂದು ನನ್ನನ್ನು ವಿಚಾರಿಸಿದಿಯಂತಲ್ಲ? ಏನು ಸಮಾ ಚಾರಾಂತ ಕೇಳಿ ಹೋಗುವಾಂತ ಬಂದೆ."

"ಹೌದು ಈ ದಿನವೂ ನಿಮ್ಮಮನೆಗೆ ಬರಬೇಕೆಂತಲೇ ಇದ್ದೆ. ನೀವೇ ಬಂದಿರಿ ನೀವು ಬರುತ್ತೀರೆಂತ ತಿಳಿದಿದ್ದರೆ ಅಡಿಕೆಲೆ ಕೂಡಾ ತರಿಸಿಡುತ್ತಿದ್ದೆ ನನಗಂತೂ ಅಡಿಕೆಲೆಯ ಅಭ್ಯಾಸವಿಲ್ಲ"

"ಅದರಿಂದೇನು ಮಹಾ? ಇದ್ದರೆ ಉಂಟು—ಇಲ್ಲದಿದ್ದರೆ ಇಲ್ಲ. ಟೊಂಕದಲ್ಲಿ ನಸ್ಯದ ಬುರುಡೆಯಿರುವ ಹಾಗಿದೆಯಲ್ಲ?"

"ಹೂಂ, ನನಗೆ ಇದೊಂದು ಅಭ್ಯಾಸ" ಕೃಷ್ಣನು ನಸ್ಯದ ಬುರುಡೆಯನ್ನು ತೆಗೆದು ರಾಮಾ ಜೋಯಿಸರ ಕಡೆಗೆ ನೀಡಿದನು. ಜೋಯಿಸರು ಆ ಬುರಡೆಯನ್ನು ಬೆರಳಿನಿಂದ ಎರಡು ಬಾರಿ ಜೊಟ್ಟಿ, ಎಡಗೈಗೆ ಸ್ವಲ್ಪ ಸುರಿದುಕೊಂಡು ಬಲಗೈಯ ಚಿಟಿಕೆಯಿಂದ ಅದನ್ನೆ ತ್ತಿಕೊಂಡು, ಉಳಿದ ಬೆರಳುಗಳಿಂದ ಎಡಗೈಯ ನಸ್ಯದ ಪುಡಿಯನ್ನು ಝಾಡಿಸಿ, ಚಿಟಿಕೆಯ ನಸ್ಯವನ್ನು ಮೂಗಿನ ಹೊಳ್ಳೆಯೊಳಗೆ ಫರ್

ಪುರ್ರನೆ ಸೇರಿಸಿಕೊಂಡು ಬಲವಾಗಿ ಎರಡು ಶೀನುತ್ತ ನಸ್ಯದ ಬುರಡೆಯನ್ನು ಕೃಷ್ಣನಿಗೆ ಒಪ್ಪಿಸಿ—"ಭಲೆ ಜೋರಾಗಿದೆ. ಹಳೇಂಗಡಿ ನಸ್ಯಾಂತ ಕಾಣುತ್ತೆ!" ಎಂದರು.

"ಹೌದು" ಎಂದು ಕೃಷ್ಣನೂ ಒಂದು ಚಿಟಿಕೆ ನಸ್ಯವನ್ನು ಹೀರಿಕೊಂಡು, ಬುರುಡೆಯನ್ನು ಸೊಂಟಕ್ಕೆ ತಗಿಲಿಸಿಕೊಂಡನು.

ಆ ಮೇಲೆ ಕೃಷ್ಣನು—"ಜೋಯಿಸರೆ, ನೀವು ಏನೇ ಹೇಳಿರಿ. ನನ್ನ ಅಣ್ಣನ ಮದುವೆಯಾದಂದಿನಿಂದ ನನಗೆ ನಿಮ್ಮ ಮೇಲೆ ಒಂದು ಸಿಟ್ಟು ಇದ್ದೇ ಇತ್ತು.—"

"ಹೌದು. ಗ್ರಹಚಾರ! ನನಗೂ ಗೊತ್ತಿದೆ!"

"ಹಾಗೆಂದು ನಿಮ್ಮೊಡನೆ ಜಗಳವಾಡಲಿಕ್ಕಾದರೂ, ನಾನು ಶಕ್ತನಲ್ಲ ಎಂಬುದನ್ನೂ ಬಲ್ಲೆ."

"ಸರಿ. ಯಾರೀಗ ನಿನ್ನನ್ನು ಜಗಳವಾಡಿದೀ ಎಂದು ದೂರಿದರು?"

"ನಾನು ಜಗಳಕ್ಕೆ ನಿಂತರಲ್ಲವೇ ದೂರಿಯಾರು? ಅಸಲು ನಿಮ್ಮನ್ನು ನೋಡುವ ಇಚ್ಛೆಯಾಗಲೀ–ನಿಮ್ಮೊಡನೆ ಮಾತಾಡುವ ಇಚ್ಛೆಯಾಗಲೀ ನನಗಿಲ್ಲ!"

"ಓಹೊ!"

"ಹೌದು. ಮಹಾತ್ಮನಾದ ನನ್ನ ಅಣ್ಣನನ್ನು ಹೋಗಲಾಡಿಸಿಕೊಂಡ ಮೇಲೆ ನಾನು ಬಹಳ ವ್ಯಸನದಲ್ಲಿ ಮುಳುಗಿ ಹೋಗಿದ್ದೇನೆ."

"ಸಹಜ." ಕೃಷ್ಣನ ಮಾತಿನ ಹೊಲಬಿನಿಂದ ಅವನ ತಂಗಿ ಗೌರಿಯ ಮದುವೆಯ ವಿಚಾರವೇನಾದರೂ ತೆಗೆಯುವನೋ ಎಂದು ಜೋಯಿಸರ ಸಂದೇಹದ ತಂತಿ ಅಲುಗಿತು. "ಹೌದು, ಕೃಷ್ಣ. ಎಲ್ಲಾ ಭಾರವೂ ಚಿಕ್ಕವನಾದ ನಿನ್ನ ಮೇಲೆಯೇ ಬಿತ್ತಲ್ಲ. ಅದರಲ್ಲಿಯೂ ಮದುವೆಯ ಪ್ರಾಯಕ್ಕೆ ಕಾಲಿಡುತ್ತಿರುವ ತಂಗಿ ಬೇರೆ ಇದ್ದಾಳೆ.—"

"ಅದಲ್ಲ ಜೋಯಿಸರೆ, ಅಣ್ಣನು ಎಲ್ಲಿದ್ದಾನೆಂದು ಗೊತ್ತಿಲ್ಲದೆ ಮಿಡುಕುತ್ತಿದ್ದೇನೆ. ಅವನನ್ನು ಹುಡುಕಿ ಸಮಾಧಾನ ಮಾಡಿ ಮನೆಗೆ ಕರೆತರಬೇಕಾದುದು ನನ್ನ ಕರ್ತವ್ಯವಾಗಿದೆ.—"

"ನ್ಯಾಯ."

"ನೀವೇನೋ ಸುಂದರಿಯನ್ನು ಕರೆದುಕೊಂಡು ಅಣ್ಣನನ್ನು ಹುಡುಕಿಕೊಂಡು ಹೋಗಿದ್ದೀರಂತ ವರ್ತಮಾನ ಕೇಳಿ, ನಿಮ್ಮೊಡನೆ ಎಲ್ಲಾ ವಿಷಯ ಕೇಳಬೇಕೂಂತ ಬಂದದ್ದು ನಾನು.—"

ನಿಜ. ಜೋಯಿಸರು ಹಾಗೆ ವರ್ತಮಾನ ಹುಟ್ಟುವಂತೆ ಮಾಡಿದ್ದರು

"ಓ! ಹೌದು ಹೌದು. ಯಾರೂ ಕೇಳುವವರಿಲ್ಲದ ಹುಡುಗಿಯಾದುದರಿಂದ ಆ ಸುಂದರಿ ಪಾಪ ತನ್ನನ್ನು ಹೇಗಾದರೂ ಗಂಡನ ಬಳಿಗೆ ಕರೆದೊಯ್ದು ಸೇರಿಸಬೇಕಂತ ಅಂಗಲಾಚಿ ಬೇಡಿದಳು —"

"ನನ್ನನ್ನು ತುಂಬಾ ದೂರಿರಬಹುದು."

"ಅದು ಸಹಜ ತಾನೇ. ಅದಿರಲಿ, ಕೃಷ್ಣ; ಅವಳ ದುಃಖವನ್ನು ನೋಡಲಾರದೆ ಅವಳ ಬೇಡಿಕೆಗೆ ನಾನು ಮನಸ್ಸು ಹಾಕಿದೆ. ಶೀನು ಮೊದಲು ಹೊಸಪೇಟೆಯಲ್ಲಿಯೇ ಇದ್ದ ಕಾರಣ, ಈಗಲೂ ಅಲ್ಲಿಯೇ ಇರಬಹುದೆಂದು ಊಹೆ. ಅಲ್ಲೆಲ್ಲಾ ಹುಡುಕಿಯೂ ಅವನು ಸಿಕ್ಕದಿದ್ದರೆ, ಅವಳ ಅಪ್ಪನಬಳಿಗಾದರೂ ಹೋಗುವುದಂತ ಗೊತ್ತು ಮಾಡಿಕೊಂಡೆವು."

"ಅವಳ ಅಪ್ಪ ಇರುವುದೆಲ್ಲಿ?"

"ಅನಂತಪುರದಲ್ಲಿದ್ದಾರೆ. ಅವರು ಸಾಮಾನ್ಯರಲ್ಲ. ಇವಳು ತನ್ನ ಮಗಳೇ ಅಲ್ಲಾಂತ ಸಾಧಿಸಲಿಕ್ಕೂ ಅವರು ಹಿಂದೆ ಮುಂದೆ ನೋಡಲಿಕ್ಕಿಲ್ಲ. ಅಂತೂ ಏನಾಗುವುದೋ ಆಗಲೀಂತ ಧೈರ್ಯ ಮಾಡಿ ಹೊರಟದ್ದು."

"ಇದಕ್ಕೆಲ್ಲ ಹಣ?"

"ಹಣಕ್ಕೆ ಅವಳು ತನ್ನ ವಂಕಿಯನ್ನು ಮಾರಲಿಕ್ಕೆ ಕೊಟ್ಟಳು. ಅದು ನೂರಹತ್ತು ರೂಪಾಯಿಗೆ ವ್ಯಾಪಾರವಾಯಿತು ಅಂತೂ ಈ ಹಣದೊಂದಿಗೆ ನಾವು ಹೊರಟು ಹೊಸಪೇಟೆಗೆ ಹೋಗಿ, ಅಲ್ಲಿ ಅಡುಗೆಯವರನ್ನು ಇಟ್ಟುಕೊಳ್ಳತಕ್ಕ, ಎಲ್ಲಾ ದೊಡ್ಡ ಮಂದಿಯ ಮನೆಯಲ್ಲಿ ಹುಡುಕಿದರೂ ಶೀನು ಸಿಕ್ಕಲಿಲ್ಲ. ಕಡೆಗೆ ಹೋಟಲುಗಳನ್ನೆಲ್ಲಾ ಹುಡುಕುವಾಗ, ಒಂದು ಹೋಟಲಿನಲ್ಲಿ ಕಣ್ಣಿಗೆ ಬಿದ್ದ ಮಹಾರಾಯ."

ಕೃಷ್ಣನು ಕುತೂಹಲದಿಂದ—"ಯಾವ ಹೋಟಲು? ವಿಳಾಸವೇನು?"

"ಈಗ ಆವನು ಅಲ್ಲಿಯೇ ಇದ್ದಾನೆಂತಲೋ ನಿನ್ನ ಅಭಿಪ್ರಾಯ"

"ಮತ್ತೇ?"

"ನಾನು ಅವನನ್ನು ಹಿಡಿದು, 'ಶೀನು, ಇಕೋ ನಿನ್ನ ಹೆಂಡತಿ ನಿನ್ನ ಬಳಿಗೆ ಬರಬೇಕಂತ ಬೇಡಿಕೊಂಡದ್ದರಿಂದ ಕರಕೊಂಡು ಬಂದಿದ್ದೇನಪ್ಪ. ಸ್ವೀಕರಿಸಿಕೊಂಡು ಸುಖವಾಗಿರು' ಅಂದೆ. ಅವನು ಒಟ್ಟು ಕಕ್ಕಾಬಿಕ್ಕಿಯಾಗಿ ಸುಧಾರಿಸಿಕೊಂಡು ನಾನಾ ತಡೆಗಳನ್ನು ಹೇಳಲಾರಂಭಿಸಿದನು. ಸುತ್ತುಮುತ್ತಿನವರು ಕೂಡಿದರು. ಮುಖ್ಯ ಅವನಿಗೂ ಕುರೂಪಿಯಾದ ಹೆಂಡತಿಯೊಂದಿಗೆ—ತಿಳಿದ ನಾಲ್ಕು ಮಂದಿಯ ಇದಿರಿಗೆ ಸಂಸಾರ ಮಾಡಿಕೊಂಡಿರಲು ನಾಚಿಕೆಯಾಗುತ್ತೇಂತ ಗೊತ್ತಾಯಿತು. ಈ ವಿವಾದದಲ್ಲಿ ಬೊಂಬಾಯಿಯ ಕಡೆಯ ಒಬ್ಬ ದೊಡ್ಡ ವ್ಯಾಪಾರಿ ಸೇರಿ ಅವನಿಗೆ ನಾನಾ ರೀತಿಯ ಬುದ್ಧಿ ನೀತಿಗಳನ್ನು ಹೇಳಿ, 'ಹಾಗೆ ಹೆಂಡತಿಯೊಂದಿಗೆ ತಿಳಿದವರ ಮುಂದಿರಲು ನಾಚಿಗೆಯಾಗುತ್ತಾದರೆ, ನನ್ನೊಂದಿಗೆ ಬೊಂಬಾಯಿಗೆ ಬಂದುಬಿಡು. ಇಬ್ಬರಿಗೂ ಒಪ್ಪಿಗೆಯಾಗುವಂತಹ ಕೆಲಸವನ್ನು ಕೊಡಿಸುತ್ತೇನೆ' ಎಂದು ಭರವಸೆ ಕೊಟ್ಟನು. ಕಡೆಗೆ ಶೀನುವಿಗೆ ತಪ್ಪಿಸಿಕೊಳ್ಳಲು ಉಪಾಯಗಾಣದೆ, ಅವನೊಂದಿಗೆ ಹೊರಡಲು ಒಪ್ಪಿದ. ಆ ವ್ಯಾಪಾರಿ ಆ ದಿನವೇ ಅವಸರವಾಗಿ ಹೊರಡುವನಾದ್ದರಿಂದ, ಶೀನು—ಹೆಂಡತಿಯೊಡನೆ ಆ ವ್ಯಾಪಾರಿಯೊಂದಿಗೆ ಬೊಂಬಾಯಿಗೆ ಹೊರಟುಹೋದ."

"ಎಡ್ರೆಸ್ಸು?"

"ಎಡ್ರೆಸ್ಸು ಇಲ್ಲ—ಗಿಡ್ರೆಸ್ಸು ಇಲ್ಲ. ನಾನು ಈ ವಿಷಯ ಕೇಳಿದ್ದಕ್ಕೆ 'ಎಷ್ಟು ಮಾತ್ರಕ್ಕೂ ನನ್ನ ಎಡ್ರೆಸ್ಸು ಯಾರಿಗೂ ಕೊಡಲಾರೆ. ಆದರೆ ಜೋಯಿಸರೆ, ಒಟ್ಟಾರೆ ನೀವು ನನ್ನನ್ನು ಪೂರಾ ಹಳು ಮಾಡಿ ಹಾಕಿದಿರಿ. ಇಷ್ಟು ಮಾಡಿದ್ದಕ್ಕೆ—ಇದೊಂದು ಉಪಕಾರ ಮಾತ್ರ ಮಾಡಿಬಿಡಿ. ನನ್ನ ತಮ್ಮ ಕೃಷ್ಣನನ್ನು ಕಂಡು, ಏನೂ ವ್ಯಸನಪಡಬೇಡ, ಅಣ್ಣನು ಕ್ಷೇಮವಾಗಿ ಈ ಪ್ರಪಂಚದಲ್ಲಿ ಇದ್ದಾನೆಂತ ನಂಬು. ಅದರೆ ನೋಡುವ ಆಶೆಯನ್ನು ಮಾತ್ರ ಬಿಟ್ಟುಕೊಳ್ಳಬೇಡ. ಗೌರಿಗೂ ನಿನಗೂ ಬೇಗನೆ ಮಂಗಳವಾಗಲಿ,' ಎಂದು ಹೇಳಿ ಆಶೀರ್ವಾದ ಮಾಡಿದ್ದಾನಪ್ಪ."

"ಅಂತು, ಪತ್ತೆಯಿಲ್ಲದೆ ಹೋದನೂಂತ ಆಯಿತು.—ಆ ಮಾರಿಯೊಂದಿಗೆ! ಅಯ್ಯೋ! ಅಣ್ಣಾ!"

"ಏನು ಮಾಡುವುದಪ್ಪಾ? ಈ ಸಂಗತಿಯನ್ನೆ ನಿನಗೆ ತಿಳಿಸಿ ಹೋಗೋಣಾಂತಲೇ ಬಂದದ್ದು."

"ಎಂಥಾ ಮನುಷ್ಯರಯ್ಯಾ ನೀವು? ಅಷ್ಟು ಹುಡುಕಿ ಅವನನ್ನು ಕಂಡೂ—ಮನೆಗೆ ಕರಕೊಂಡು ಬರಲಾರದೆ ಹೋದಿರಲ್ಲ!" ಎಂದು ಕೃಷ್ಣನು ಜೋಯಿಸರನ್ನು ಜರಿದನು.

"ನಾನೇನು ಮಾಡಲಪ್ಪಾ! ಸಾವಿರ ಹೇಳಿದೆ, ಏನೂ ಉಪಯೋಗವಾಗಲಿಲ್ಲ. ನನ್ನ ಶಕ್ತಿಗೆ ಮೀರಿಹೋಯಿತು!" ಜೋಯಿಸರು ಕೃಷ್ಣನ ಜರಿಯನ್ನು ಜಾರಿಸಿಕೊಂಡರು.

ಕೃಷ್ಣನು ಒಂದು ನಿಮಿಷ ಮೌನವಾಗಿದ್ದು ಬಳಿಕ ಕರ್ಕಶವಾಣಿಯಿಂದ.—"ಛಿ, ಜೋಯಿಸರ! ಶನಿಗಿಂತಲೂ ಬಾಧಾಕಾರಿಯಾದ ಯಾವುದೋ ಒಂದು ಕ್ರೂರ ಗ್ರಹವು ನಿಮ್ಮ ರೂಪದಲ್ಲಿ ನನ್ನ ಅಣ್ಣನಿಗೆ ಅಂಟಿಕೊಂಡ ಹಾಗೆ ಕಾಣುತ್ತೆ. ಆ ಪಿಶಾಚಿಯಂತಹ ಹೆಂಗುಸನ್ನು ಎಲ್ಲಿಗಾದರೂ ಗಡೀಪಾರು ಮಾಡುವುದನ್ನು ಬಿಟ್ಟು ಎಲ್ಲವನ್ನೂ ತೊರೆದು ಎಲ್ಲಿಯೋ ಸ್ವತಂತ್ರನಾಗಿ ಹಕ್ಕೀ ಹಾಗೆ ಹಾರಾಡಿಕೊಂಡಿದ್ದ ನನ್ನ ಪ್ರಿಯ ಅಣ್ಣನ ಕೊರಳಿಗೆ ಸಿಕ್ಕಿಸಿ ಹಾಕಿದಿರಾ? ಅವನನ್ನು ಪರದೇಶವಲ್ಲಾದರೂ ಸುಖವಾಗಿರಲು ಬಿಡಲಿಲ್ಲ ನೀವು? ಧಿಕ್ಕಾರ! ಜೋಯಿಸರೇ! ಧಿಕ್ಕಾರ!"

ಜೋಯಿಸರು ಮುಖವನ್ನು ತಗ್ಗಿಸಿಕೊಂಡು,—"ನೀನು ಏನು ಬೇಕಾದರೂ ಹೇಳು. ಒಂದುಕಡೆ ಸಾಧು ಶೀನು, ಒಂದುಕಡೆ ಅನಾಥ ಹೆಂಗುಸು. ಈ ಉಭಯ ಧರ್ಮಸಂಕಟದಲ್ಲಿ ಸಿಕ್ಕಿಬಿದ್ದು ಮಾಡಿದ ಕೆಲಸವಿದು. ಕೃಷ್ಣ! ನೀನು ಆದಷ್ಟು ಸಮಾಧಾನವನ್ನು ಹೊಂದಿಕೊ. ಅವನು ಹೇಳಿಕಳುಹಿಸಿದ ಮಾತನ್ನು ನೆನೆದು ಅವನು ಕ್ಷೇಮವಾಗಿ ಎಲ್ಲಿಯೋ ಇದ್ದಾನೆಂದು ನಂಬಿಕೊ. ನನ್ನ ನೋಡಿದರೆ ನಿನಗೆ ಏನೇನೋ ಸಂಕಟವಾಗುತ್ತಿರಬಹುದು, ನಾನು ಬರುತ್ತೇನಪ್ಪ" ಎಂದು ಹೇಳಿ ಎದ್ದರು.

ಕೃಷ್ಣನು ಮಾತಾಡದೆ ಯೋಚನೆ ಮಾಡಲಾರಂಭಿಸಿದನು.

ಜೋಯಿಸರು ಮೆಲ್ಲನೆ ಸರಿದು, "ಬರುತ್ತೇನಪ್ಪ" ಎಂದು ಮತ್ತೊಮ್ಮೆ ಹೇಳಿ ಹೊರಟರು. "ಆಯಿತಾಯಿತು! ಹೋಗಿ" ಎಂದನು ಕೃಷ್ಣ.

ಹೋಗುತ್ತಾ ಜೋಯಿಸರ ಮನೋಭೂಮಿಯಲ್ಲಿ ಬಗೆಬಗೆಯ ಆಲೋಚನೆಗಳು ಹುಟ್ಟಲಾರಂಭಿಸಿದುವು.—"ಭಲೆಭಲೆ! ಒಳ್ಳೇ ಪಕ್ಕಾ ಜೋಯಿಸನಯ್ಯಾ ನೀನು! ಕೃಷ್ಣನು ಕೇಳಿದುದಕ್ಕೆ ಹಚ್ಚಹಸಿಯ ಸುಳ್ಳೇ ಹೇಳಿ ಬಿಟ್ಟೆಯಲ್ಲ! ಹೌದು ಮತ್ತೆ! ಹೆಂಗುಸನ್ನು ಅವಳ ಗಂಡನ ವಶಕ್ಕೆ ಒಯ್ದು ಬಿಟ್ಟು ಬಂದೆನೆಂದರೇನೇ ನ್ಯಾಯ; ನನಗೂ ಗೌರವ ಹಾಗಿಲ್ಲದೆ ಎಲ್ಲೆಲ್ಲಿಯೋ ಸಾಟಿಮಾಡಿ ಬಂದೆನೆಂದರೆ 'ಅಬ್ಬ! ಈ ಜೋಯಿಸ ಬಹಳ ಅಸಾಧ್ಯ ಇದ್ದಾನೆ! ಎಷ್ಟು ಹಣ ಒಳಗೆ ಹಾಕಿಕೊಂಡನೋ ಏನೊ!' ಎಂದು ಗೊಣಗಾಡಿಯಾರು ಹಾಳು ಜನ! ಆದರೆ ಎಲ್ಲಿಯಾದರೂ ಆ ಶೀನು ಊರಿಗೆ-ಗೀರಿಗೆ ಬಂದರೆ ನನ್ನ ಸುಳ್ಳೆಲ್ಲಾ ಹೊರಗಾದೀತು! ಆದರೇನು? ಹುಡುಗಿ ಎಲ್ಲಿಗೆ ಹೋದರೂ ಶೀನೂ-ಕೃಷ್ಣಂದಿರಿಗೆ ವ್ಯಸನವಿಲ್ಲವಷ್ಟೆ? ಆದುದರಿಂದ ಆ ಕಾಲ ಬಂದರೆ ಏನಾದರೂ ಹೇಳಿ ಜಾರಿಬಿಡಬಹುದು. ಈಗಂತೂ ಬಿಸಿಬಿಸಿಗೆ ಆ ಹುಡುಗಿ ಗಂಡನೊಂದಿಗೆ ಸೇರಲ್ಪಟ್ಟಳೆಂದೇ ಗೊತ್ತಾಗಲಿ—ಆ ನಾರಾಯಣಯ್ಯ ಬಂದು ಕೇಳಿದರೂ ಇದೇ ಮಾತೇ ಹೇಳಬೇಕು. ಆದರೂ ಕೆಲವು ಕುಹಕ ದೃಷ್ಟಿಗಳಿಗೆ ನನ್ನ ಮೇಲೆ ಸಂಶಯವಿದ್ದೀತು! 'ಈ ಜೋಯಿಸ ಎಲ್ಲಿಗೆ ಕಳುಹಿದನೋ-ಏನು ಮಾಡಿದನೋ-ಎಷ್ಟು ಲಾಭ ಹೊಡೆದನೊ'— ಎಂದು! ಎಲ್ಲಿಗೆ ಕಳುಹಿಸಿ ಏನು ಲಾಭ ಹೊಡೆಯಲಿಕ್ಕು-ಅವಳ ರೂಪ ನೋಡಿದರೆ ಓಡಿ ಹೋಗುವ ಹಾಗಿದೆ! ಅಂಥಾ ಸಂದೇಹಪಡುವವರು ಹೇಗೂ ಪಡಲಿ!—ನಾನು ಹೀಗೆಲ್ಲಾ ಒಳತಂತ್ರ ಮಾಡಿದೇಂತ ಮುಂದೆ ಹೇಗಾದರೂ ಗೊತ್ತಾಗಿ ಯಾರಾದರೂ ಕೇಳಿದರೆ, ಆ ಹುಡುಗಿಯ ಅಪ್ಪನಾದ ಮುಕುಂದರಾಯರು—"ನನ್ನ ಮಗಳು ಸುಂದರಿಯನ್ನು ಓ ಜೋಯಿಸರೇ—ನೀವೇ ಹೇಗಾದರೂ ಗಡಿದಾಟಿಸಿಬಿಡಿರಿ" ಎಂದು ಬರೆದ ಪತ್ರವು ನನ್ನ ಹತ್ತಿರವೇ ಉಂಟಲ್ಲ? ಅದಕ್ಕಾಗಿಯೇ ಹೀಗೆ ಮಾಡಿದ್ದು ಅಂತ ಹೇಳಿ ಆಗ ತಪ್ಪಿಸಿಕೊಳ್ಳಬಹುದು.—ನೋಡೋಣ—ಅಂತಹ ಕಾಲವು ಬಂದರಲ್ಲವೇ—"

ಹೀಗಿತ್ತು ಜೋಯಿಸರ ಮನಸ್ಸಿನ ಹೊಯಿಲು. ಮರ್ಯಾದೆಯ ವೇಷವನ್ನು ಕಟ್ಟಿಕೊಂಡು ತಿರುಗುವ ಹಗಲುಗಳ್ಳರಂತಹ, ಧೂರ್ತ ಸ್ವಾರ್ಥ ಸಾಧಕರ ಮನೋಭಾವನೆಯು ಹೇಗೆ ತಾನೇ ಇದ್ದೀತು! ಒಂದು ಸುಳ್ಳಿಗೆ ಇನ್ನೊಂದು ಸುಳ್ಳು; ಅದಕ್ಕೆ ಮತ್ತೊಂದು, ಮಗ ದೊಂದು—ಹೀಗೆ ಅವರ ಜೀವಮಾನವೆಲ್ಲಾ ಸುಳ್ಳುಪೊಳ್ಳುಗಳ ಜಾಲ ದೊಳಗೇ ಸರಿ!

ಜೋಯಿಸರು ಹೊರಟುಹೋದ ಮೇಲೆ ಕೃಷ್ಣನು ಸ್ವಲ್ಪ ಹೊತ್ತು ಆ ಕಡೆಗೇ ದುರುಗುಟ್ಟಿ ನೋಡಿ,—"ಮಹಾ ಪಟಿಂಗನೇ ಸರಿ, ಈ ಜೋಯಿಸ! ಇವನು ಹೇಳಿದುದನ್ನೆಲ್ಲಾ ನಂಬಲಾ ನಾನು? ಹಾಗಾದರೆ ಇವನು ಸುಂದರಿಯನ್ನು ಕರಕೊಂಡು ಎಲ್ಲಿಗೋ ಹೋದನಲ್ಲ? ಎಲ್ಲಿಗಾ ಗಿರಬಹುದು? ದುಡ್ಡು ಪಡೆದುಕೊಂಡು ಯಾರಿಗಾದರೂ ಮಾರಲಿಕ್ಕೋ? ಆದರೆ, ಆ ಕುರೂಪದ ಕರೀರಾಶಿಗೆ ಯಾರೂ ಒಂದು ಕಾಸೂ ಕೊಡ ಲಾರರು. ಆದುದರಿಂದ ಈ ಜೋಯಿಸ ಹೇಳಿದುದನ್ನು ನಂಬಬಹುದೆಂ ತಲೇ ಕಾಣುತ್ತೆ. ಆ ಸುಂದರಿಗೂ ನನ್ನ ಅಣ್ಣನ ಮೇಲೆ ಭಾರೀ ಪ್ರೀತಿ ಇತ್ತು! ಆದುದರಿಂದ ಆ ಮಾರಿಯೇ ಚಂಡಿಹಿಡಿದು ಜೋಯಿಸರನ್ನು ಕರಕೊಂಡು ಹೊರಟಿರಬೇಕು. ಅಯ್ಯೋ ಪಿಶಾಚಿಯೆ! ಅದಕ್ಕೆ ಒಂದಿಷ್ಟು ವಿಷ ಕೊಡುವವರೇ ಇಲ್ಲದೆ ಹೋದರಲ್ಲ! ಈ ಜೋಯಿಸನು ಅದ ನ್ನೊಯ್ದು ಮತ್ತೆ ನನ್ನಣ್ಣನ ಕೊರಳಿಗೇ ನೇತುಹಾಕಿದನಲ್ಲ! ಬುದ್ಧಿವಂತ ನಾದರೆ—ಅಣ್ಣನು ಆ ಕುರೂಪದ ಮುದ್ದೆಯನ್ನು ಎಲ್ಲಿಯಾದರೂ ಬಾವಿ ಯೊಳಗೆ ಹಾಕಲೇಬೇಕು ಆದರೆ ಅದೇನು ಸಾಮಾನ್ಯದ ಮಾರಿಯೆ? ಹಾಯ್! ನಾನೀಗ ನನ್ನ ಅಣ್ಣನನ್ನು ಹೇಗೆ ಹುಡುಕಲಿ? ನಾನು ಅಣ್ಣ ನೊಡನೆ ವ್ಯರ್ಥವಾಗಿ ಕಲಹ ಮಾಡಿದೆನು. 'ಆ ಹೆಂಡತಿಯನ್ನು ಹೊತ್ತು ಕೊಂಡೇ ಹೋಗು, ಇಲ್ಲವೇ—ಪಾಲು ಮಾಡಿಕೊಂಡು ನಡಿ' ಎಂದಂದು ಬಿಟ್ಟೆ! ಇದೆಲ್ಲಾ ಸೇರಿ ನನ್ನಣ್ಣನನ್ನು ವಿರಕ್ತಿಪಡಿಸಿಬಿಟ್ಟಿತು. ಹಾಗೆಲ್ಲ ಹೇಳಬಾರದಿತ್ತು ಅಣ್ಣನಿಗೆ! ಆ ಮಹಾರೂಪವು ಕಣ್ಣೆದಿರಿಗೇ ಇರುವಾಗ, ನೋಡಿ ನೋಡಿ, ಇದನ್ನು ಮದುವೆ ಮಾಡಿಕೊಂಡ ಅಣ್ಣನಿಗೆ ಬುದ್ಧಿ ಯಿಲ್ಲದೇ ಹೋಯಿತಲ್ಲ! ಇದರಿದಿರೇ ನಾವೆಲ್ಲ ಸಾಯುವವರೆಗೆ ಬಾಳ

ಬೇಕಾಯಿತಲ್ಲ!—ಎಂಬ ಸಂತಾಪದಿಂದ ಆಗ ನಾನು ಎಚ್ಚರ ತಪ್ಪಿ ಮಾತಾಡಿದೆ! ಅದು ಪಾಪ!—ಸಾಧುವಾದ ಅಣ್ಣನನ್ನು ವಿರಕ್ತಿಪಡಿಸಿ ದೇಶಾಂತರಗೊಳಿಸಿತು. ಸರಿ. ಸುಲಭದಲ್ಲಿ ನಾನು ಆ ಮಾರಿಯನ್ನೂ ಓಡಿಸಿಬಿಟ್ಟೆ! ಇನ್ನು ಮೇಲೆ ನಿಧಾನವಾಗಿ ಅಣ್ಣನನ್ನು ಹುಡುಕಬೇಕೆಂದಿರುವಾಗ, ಈ ಪಿಶಾಚಿ ಜೋಯಿಸ ಆ ಮಾರಿಯನ್ನು ಮತ್ತೆ ಅಣ್ಣನಿಗೇ ಜೋಡಿಸಿ, ಓಡಿಸಿಯೇಬಿಟ್ಟನಂತಲ್ಲಾ! ನನ್ನ ಅಣ್ಣನನ್ನು ಹುಡುಕಲಿಕ್ಕೆ ಇನ್ನೇನು ಉಪಾಯವನ್ನು ಮಾಡಲಿ?—ದೇವಾ!—ಪ್ರಕೃತ ಪ್ರಸಿದ್ಧವಾದ ಪತ್ರಿಕೆಯಲ್ಲಿ ಏನಾದರೂ ಪ್ರಕಟಮಾಡಬಹುದು. ಈ ಜೋಯಿಸನ ಮಾತು ಸತ್ಯವಾಗಿದ್ದರೆ, ಅಣ್ಣನ ಜತೆಯಲ್ಲಿ ಆ ಘೋರ ಹೆಂಗುಸೂ ಇರಬೇಕಲ್ಲವೆ? ಹಾಗಿದ್ದರೆ ಮಾತ್ರ ಆ ಪ್ರಕಟನೆಯಿಂದೇನಾದರೂ ಉಪಯೋಗವಾದೀತು! ಇಲ್ಲದಿದ್ದರೆ ಸುಮ್ಮನೆ. ಆದರೂ ಪ್ರಯತ್ನ ಮಾಡದೆ ಇರಲಿಕ್ಕಾಗುತ್ತೆಯೆ. ..........."

## ೧೬. "ಕನ್ನಡ ಗೆಳೆಯ"

"ಮಂಗಳೂರು ತಾಲೂಕು ಕಿರುಗಟ್ಟೆ ಗ್ರಾಮದ ವೆಂಕಪ್ಪಯ್ಯನವರ ಮಗ ಕೃಷ್ಣರಾಯನು ಈ ಮೂಲಕವಾಗಿ ಮಹಾಜನರಲ್ಲಿ ಪ್ರಾರ್ಥಿಸುವುದೇನೆಂದರೆ,—

ನನ್ನ ಅಣ್ಣ ಶ್ರೀನಿವಾಸರಾಯ (ಶೀನು) ಎಂಬವನು ಗೃಹಾಂತರದ ವ್ಯವಹಾರಗಳ ಕಾರಣದಿಂದ ವಿರಕ್ತನಾಗಿ ಈಗ್ಗೆ ಒಂದು ತಿಂಗಳ ಹಿಂದೆ ಪತ್ತೆಯಿಲ್ಲದೆ ಹೊರಟುಹೋಗಿದ್ದಾನೆ. ಇವನ ಜತೆಯಲ್ಲಿ ವಿಕಾರ ಸ್ವರೂಪಿಣಿಯಾದ 'ಸುಂದರಿ' ಎಂಬ ಹೆಸರುಳ್ಳ ಹೆಂಗುಸೂ ಇರಬಹುದು. ಏಕೆಂದರೆ ಅವನು ಹೊರಟುಹೋದ ಮೇಲೆ, ಆ ಹೆಂಗುಸೂ ಅವನನ್ನು ಹುಡುಕಿಕೊಂಡು ಹೋಗಿದ್ದಾಳೆ. ಅವಳು ಪ್ರಕೃತಿ ವಿಚಿತ್ರವಾದ ಆಕಾರವುಳ್ಳವಳಾದುದರಿಂದ ಸುಲಭವಾಗಿ ಗುರುತು ಹಿಡಿಯಬಹುದು. ಶೀನಣ್ಣನಿಗೆ ನಸುಗಪ್ಪಾದ ಮೈಬಣ್ಣ, ಬಚ್ಚಿಕೊಂಡಿರುವ ದೇಹ. ಜುಟ್ಟು ಕಟ್ಟಿಕೊಂಡಿರುವ ತಲೆ. ಇಪ್ಪತ್ತೆರಡು ವರ್ಷ ಪ್ರಾಯ. ಜೀವನೋದ್ಯೋಗ

ಅಡುಗೆ. ಯಾವಾಗಲೂ ಬರೆಯುತ್ತಾ ಓದುತ್ತಾ ಇರುವುದು ಇವನ ಸ್ವಭಾವ. ಈ ಬಗೆಯ ಲಕ್ಷಣವುಳ್ಳ ನನ್ನ ಅಣ್ಣನನ್ನು ಕುರಿತು ಮಹಾ ಜನರಲ್ಲಿ ಯಾರಿಗಾದರೂ ಗುರುತು ಕಂಡರೆ, ದಯಮಾಡಿ ನನಗೆ ತಿಳಿಯ ಪಡಿಸಬೇಕಾಗಿ ಪ್ರಾರ್ಥಿಸುತ್ತೇನೆ. ಸರಿಯಾದ ವಾರ್ತೆಯನ್ನು ಕಳುಹಿಸಿ ದವರಿಗೆ ಯಥಾಶಕ್ತಿಯಾದ ಬಹುಮಾನವನ್ನು ಕೊಡಬಲ್ಲೆನು. ಇಂತು ಪ್ರಾರ್ಥಿಸುವ— ಕಿರುಗಟ್ಟೆಯ ಕೃಷ್ಣರಾಯ

"ಹಿಂದೂಮೇಲ್" ಎಂಬ ಪ್ರಸಿದ್ಧವಾದ ಆಂಗ್ಲಪತ್ರಿಕೆಯಲ್ಲಿ— ಈ ಪ್ರಕಟನೆಯು ಪ್ರಕಟವಾಗಿ ಒಂದು ವರ್ಷವು ಕಳೆದು ಹೋಯಿತು. ಕೃಷ್ಣನಿಗೆ ಶೀನಣ್ಣನ ಸಮಾಚಾರವಾವುದೂ ತಿಳಿಯಲಿಲ್ಲ. ಅದೊಂದು ಚಿಂತೆಯನ್ನು ಮನಸ್ಸಿನ ಬದಿಯಲ್ಲಿಟ್ಟುಕೊಂಡೇ ಕೃಷ್ಣನು ಕಾಲಹರಣ ಮಾಡುತ್ತಿದ್ದನು ಅಣ್ಣನು ಹೊರಟ ಹೋಗಿ— ಎಲ್ಲಾ ಗಂಟು ತನ್ನ ಬಾಯಿಗೆ ಬಿತ್ತಲ್ಲ– ಎಂಬ ತ್ಯಾಗಭಾವನೆಗೆ ಅವನಲ್ಲಿ ಕೊಂಚವೂ ಎಡೆ ಯಿರಲಿಲ್ಲ ಆ ಸುಂದರಿಯು ಸೀದೆ ತೊಲಗಿ ಅಣ್ಣನಿಗೆ ಇನ್ನೊಂದು ಮದುವೆಯಾಗಬೇಕೆಂಬುದು ಅವನ ಇಚ್ಛೆಯಾಗಿತ್ತು. ಅಣ್ಣನ ಪತ್ತೆ ತಿಳಿಯದೆ ತಾನು ಮದುವೆಯನ್ನು ಮಾಡಿಕೊಳ್ಳಲಾರೆನೆಂದು ಶಪಥವನ್ನೆ ಹಾಕಿಕೊಂಡಿದ್ದನು

ಕೃಷ್ಣನಿಗೆ ಶೀನಣ್ಣನ ಹಾಗೆ ಕಲಾಭ್ಯಾಸವು ಇಲ್ಲದಿದ್ದರೂ, ಪುಸ್ತಕ ಗಳನ್ನು ಓದುವುದರಲ್ಲಿ ತುಂಬಾ ಅಭಿರುಚಿಯಿತ್ತು ದುಡ್ಡು ಕೊಟ್ಟೇ ಓದಬೇಕಾಗಿಯೂ ಇರಲಿಲ್ಲ ಅವನು ಕೆಲಸ ಮಾಡುವ ಭಂಡಸಾಲೆಯ ಅಧಿಕಾರಿ ಕೆಲವು ಪತ್ರಿಕೆಗಳನ್ನು ಕೆಲವು ಗ್ರಂಥಮಾಲೆಯ ಪುಸ್ತಕಗಳನ್ನು ತರಿಸಿಕೊಳ್ಳುತ್ತಿದ್ದನು ಮುಖ್ಯವಾಗಿ ಬೆಂಗಳೂರಿನ "ಕನ್ನಡ ಚಿತ್ರ ಮಾಲೆ" ಒಳ್ಳೊಳ್ಳೆಯ ಪುಸ್ತಕಗಳಿಗೆ ಹೆಸರುವಾಸಿಯಾಗಿತ್ತು. ಈಗ ಆ ಮಾಲೆಯಲ್ಲಿ "ಕಾರುಣ್ಯ ಮೂರ್ತಿ" ಎಂಬೊಂದು ಗ್ರಂಥವು ಅರಳಿ ಪರಿ ಮಳದಿಂದ ಗಮಗಮಿಸಿಕೊಂಡು ಹೊರಬಿದ್ದಿತ್ತು ತದ್ಗ್ರಂಥಕರ್ತನು "ಕನ್ನಡ ಗೆಳೆಯ" ಎಂಬ ಸಂಕೇತನಾಮಧಾರಿ. ಈ "ಕನ್ನಡ ಗೆಳೆಯ"ನ ಕೆಲವು ತುಂಡುಗತೆಗಳೂ–ತುಂಡುಪದ್ಯಗಳೂ–ಕೆಲವು ಉಪನ್ಯಾಸಗಳೂ- ಪ್ರಬಂಧಗಳೂ ಮೊದಲಾದ ವಿಚಾರಣೀಯವೂ ರಸವಂತವೂ ಆದ

ಲೇಖನಗಳು "ಜಯಭೇರಿ" ಎಂಬ ಪತ್ರಿಕೆಯಲ್ಲಿ ಇತ್ತೀಚೆಗೆ ಹಲವಾರು ಬಾರಿ ಬರಲಾರಂಭಿಸಿದ್ದುವು. ಈಗ ಪ್ರಕಟವಾದ "ಕಾರುಣ್ಯ ಮೂರ್ತಿ" "ಕನ್ನಡ ಗೆಳೆಯ" ನ ಹೆಸರನ್ನು ವಿಖ್ಯಾತಗೊಳಿಸುವಂತಹುದಾಗಿತ್ತು. ಭಾಷೆ–ಭಾವ–ವಸ್ತು–ವಿಷಯ–ಕಲ್ಪನಾಚಾತುರ್ಯ ಮುಂತಾದ ಎಲ್ಲ ಬಗೆಯಿಂದಲೂ ಆ ಗ್ರಂಥವು ಪಂಡಿತ ಪಾಮರರ ಮೆಚ್ಚುಗೆಯನ್ನು ಪಡೆಯುವಂತಹುದಾಗಿತ್ತು. ಆದುದರಿಂದ ಸಂಕೇತನಾಮಧಾರಿಯಾದ ಆ ಗ್ರಂಥಕರ್ತನು "ಯಾರು–ಯಾರು?" ಎಂದು ಓದುಗರ ಹೃದಯದಲ್ಲಿ ಕುತೂಹಲಮಿಶ್ರಿತವಾದ ಪ್ರಶ್ನೆಯನ್ನು ಹುಟ್ಟಿಸದೆ ಬಿಡುತ್ತಿದ್ದಿಲ್ಲ. ಕೃಷ್ಣನಿಗಾದರೋ ಆ ಗ್ರಂಥದ ಹೆಸರನ್ನು ನೋಡುತ್ತಲೇ ಏನೋ ಜ್ಞಾಪಕಕ್ಕೆ ಬಂದಂತಾಯಿತು. ಮೊದಲನೆಯ ಅಧ್ಯಾಯದ ಕೆಲವು ಪಙ್ತಿಗಳನ್ನು ಓದುತ್ತಲೇ ಜ್ಞಾಪಕವು ಸತ್ಯವಾಗಿರುವಂತೆ ತೋರಿ, ಮನೆಗೆ ಓಡಿ ಬಂದು, ಶೀನಣ್ಣನ ಟ್ರಂಕುಪೆಟ್ಟಿಗೆಯನ್ನು ತೆರೆದು ಹುಡುಕಲಾರಂಭಿಸಿದನು.

ಶೀನು ಹೊರಟುಹೋಗುವಾಗ ತನ್ನ ಟ್ರಂಕು ಪೆಟ್ಟಿಗೆಯನ್ನು ಬಿಟ್ಟು ಹೋದುದು ಓದುಗರ ನೆನಪಿನಲ್ಲಿದೆಯಷ್ಟೆ? ಹಾಗೆಯೆ ಅವನಿಗೆ ಅಗತ್ಯವಿಲ್ಲದ ಪುಸ್ತಕಗಳನ್ನು ಅದರೊಳಗೆಯೇ ಬಿಟ್ಟುದನ್ನೂ ನೋಡಿದ್ದೀರಿ. ಅವುಗಳಲ್ಲಿ ಅವನು ಬರೆದಿದ್ದ ಕೆಲವು ಲೇಖನ ಸಾಹಿತ್ಯಗಳ ಚಿತ್ತು ಪ್ರತಿ-ಮೂಲಪ್ರತಿ ಮುಂತಾದುವೂ ಅಡಗಿದ್ದುವು. ಅವುಗಳ ಇನ್ನೊಂದು ಚೊಕ್ಕಟ ಪ್ರತಿಯನ್ನು ತೆಗೆದಿದ್ದುದರಿಂದ, ಅವುಗಳನ್ನು ಮಾತ್ರ ಅವನು ಎತ್ತಿಕೊಂಡು, ಉಳಿದುವೆಲ್ಲಾ ಅವನಿಗೆ ಅನಗತ್ಯವಾಗಿ ಟ್ರಂಕಿನೊಳಗೆಯೇ ಬಿಟ್ಟಿದ್ದನು. ಕೃಷ್ಣನು ಆಗಾಗ ಆ ಚಿತ್ತುಪ್ರತಿಗಳನ್ನೆಲ್ಲಾ ಓದುತ್ತ, ತನ್ನ ಅಣ್ಣನ ಬುದ್ಧಿ ಕುಶಲತೆಗಳನ್ನು ಮನಸಾ ಕೊಂಡಾಡಿಕೊಂಡಿದ್ದನು. ಅದರೊಂದಿಗೆ "ಕಾರುಣ್ಯ ಮೂರ್ತಿ" ಎಂಬ ಸಾಮಾಜಿಕ ಕಾದಂಬರಿಯ ಮೂಲ ಚಿತ್ತುಪ್ರತಿ ಇದ್ದುದನ್ನೂ ಓದಿದ್ದನು. ಅದು ಮೂಲಪ್ರತಿಯಾಗಿ ಅನೇಕ ತಿದ್ದುಪಡಿಗಳನ್ನು ಹೊಂದಿಯೂ–ಹೊಂದಬೇಕಾಗಿಯೂ ಇದ್ದರೂ ಅದರ ಸಹಜವಾದ ಕಥಾ ಸನ್ನಿವೇಶ–ಭಾವ–ರಸ–ಮೊದಲಾದ ದಿವ್ಯಾಂಶಗಳು ಅವನ ಮನಸ್ಸಿನಲ್ಲಿ ಹೂತುಹೋಗಿ

ದ್ದುವು ಅಂತೆಯೇ ಅಚ್ಚಾಗಿ ಹೊರಬಿದ್ದ ಅದೇ ಪುಸ್ತಕವನ್ನು ನೋಡು ತ್ತಲೇ-ಅದೇ ಜ್ಞಾಪಕವು ಬಂದು, ಅತ್ಯಾಶ್ಚರ್ಯವಾಯಿತು! ಆ ಮೂಲ ಹಸ್ತಪ್ರತಿಗೂ ಅಚ್ಚಾದ ಪ್ರತಿಗೂ ಒರೆಹಚ್ಚಿ ನೋಡಿದಾಗ, ಎರಡರಲ್ಲಿಯೂ ಅದೇ ಹೆಸರು, ಅದೇ ಕಥೆ, ಅದೇ ಭಾಷೆ-ಅದೇ ಶೈಲಿ-ಅದೇ ಭಾವ, ಅಷ್ಟೇ ಪ್ರಕರಣಗಳು. ಆದರೆ ಮೂಲದ ಪ್ರಾರಂಭದಲ್ಲಿದ್ದ ಸರಸ್ವತೀ ಸ್ತವನ ಮೊದಲಾದ ಸಾಂಗತ್ಯ ಪದ್ಯಗಳು-ಅಚ್ಚಿನ ಪ್ರತಿಯಲ್ಲಿಲ್ಲ. ಮತ್ತು ಹಲವು ಕಡೆಗಳಲ್ಲಿ ಶಬ್ದಗಳೂ, ಕೆಲವು ಕಡೆ ವಾಕ್ಯಗಳೂ ಒಂದೆರಡು ಕಡೆ ಕಥಾಸಂದರ್ಭ-ಸಂಯೋಜನೆಗಳಲ್ಲಿ ತಿರುಗು ಮುರುಗೂ ಇದ್ದುವು ಅಷ್ಟೆ. ಅವುಗಳಿಂದಾಗಿ ಮೂಲಪ್ರತಿಗಿಂತಲೂ ಅಚ್ಚಾದ ಪ್ರತಿ ಒಳ್ಳೆಯ ದಾಗಿರುವುದು ಸಹಜವೇ ಸರಿ! ಏಕೆಂದರೆ ಮೂಲಪ್ರತಿಯಲ್ಲಿ ತಪ್ಪುಗಳು ಬರುವುದು ಸ್ವಾಭಾವಿಕ. ಅವುಗಳನ್ನೆಲ್ಲಾ ತಿದ್ದಿ ಸರಿಗೊಳಿಸಿ ತಾನೇ ಅಚ್ಚು ಮಾಡಿಸುತ್ತಾರೆ? ಕೃಷ್ಣನಿಗೆ ಏನೂ ಸಂದೇಹವುಳಿಯಲಿಲ್ಲ. “ಆಹಾ! ನನ್ನ ಅಣ್ಣನ ಪುಸ್ತಕವೇ ಇದು! ‘ಕನ್ನಡ ಗೆಳೆಯ’ ಎಂದರೆ ನನ್ನ ಅಣ್ಣನೆ! ಸಿಕ್ಕಿದನು ನನ್ನಣ್ಣ! ಅಣ್ಣ! ಆಹಾ! ‘ಕಾರುಣ್ಯ ಮೂರ್ತಿ’ ಗ್ರಂಥಕರ್ತನನ್ನು ಎಲ್ಲರೂ ಶ್ಲಾಘಿಸುತ್ತಿದ್ದಾರೆ! ಹೇ! ದೇವಿ! ಸಾಹಿತ್ಯ ದೇವಿ! ತಂದೆಯಾ ನನ್ನಣ್ಣನನ್ನು ಬಯಲಿಗೆ? ಕಲ್ಲಿಗೆ ಮಾಡುವ ಪೂಜೆ ದೇವರಿಗೆ ಸಲ್ಲುವಂತೆ ‘ಕನ್ನಡ ಗೆಳೆಯ’ನ ಶ್ಲಾಘನೆ-ಅಂತ ರ್ಹಿತನಾಗಿರುವ ನನ್ನ ಅಣ್ಣನಿಗಲ್ಲವೇ ಸಲ್ಲುತ್ತಿದೆ! ಆಹಾ! ಅಣ್ಣನು ಸಿಕ್ಕಿದನು!—” ಎಂದು ಕೃಷ್ಣನು ಸಂಭ್ರಮದಿಂದ ಹಾರಿದನು.

ಕೂಡಲೇ ಕೃಷ್ಣನು ‘ಕಾರುಣ್ಯ ಮೂರ್ತಿ’ಯನ್ನು ಪ್ರಕಟಮಾಡಿದ ‘ಕನ್ನಡ ಚಿತ್ರಮಾಲೆ’ಯ ಅಧಿಕಾರಿಗೆ ಒಂದು ಪತ್ರವನ್ನು ಬರೆದನು:- “ಮಹಾಶಯರ, ತಾವು ಹೊರಡಿಸಿದ ‘ಕಾರುಣ್ಯ ಮೂರ್ತಿ’ ಎಂಬ ಗ್ರಂಥದ ಕರ್ತನಾದ ‘ಕನ್ನಡ ಗೆಳೆಯ’ನ ನಿಜವಾದ ಹೆಸರನ್ನೂ ವಿಳಾಸವನ್ನೂ ದಯಮಾಡಿ ತಿಳಿಸೋಣಾಗಬೇಕು. ಬಹಳ ಅಗತ್ಯವೂ ಅವಸರವೂ ಇದೆ.”

ಹೀಗೆ ಬರೆದುದಕ್ಕೆ-ಯಥಾಕಾಲದಲ್ಲಿಯೇ ಬಂತು ಹೀಗೊಂದು ಪ್ರತ್ಯುತ್ತರ:—“ಪ್ರಿಯರೆ, ‘ಕನ್ನಡ ಗೆಳೆಯ’ರ ಹೆಸರು ವಿಳಾಸಗಳನ್ನು

ತಮಗೆ ತಿಳಿಸಲು ನಾವು ಬಾಧ್ಯರಲ್ಲ. ಹಾಗೆ ತಿಳಿಸಬಾರದೆಂತಲೂ ಗ್ರಂಥಕರ್ತರ ಪ್ರತ್ಯೇಕ ಕಟ್ಟಳೆಯುಂಟು! ಆದುದರಿಂದ ತಮ್ಮ ಕುತೂಹಲವನ್ನು ತಡೆದಿಟ್ಟುಕೊಳ್ಳೋಣಾಗಲಿ ತಕ್ಕ ಕಾಲದಲ್ಲಿ ಅದು ತಾನಾಗಿ ಪ್ರಕಟವಾಗಿಯೇ ಆಗುವುದು ''

ಇದು ಕೃಷ್ಣನ ಉತ್ಸಾಹವನ್ನು ಕುಗ್ಗಿಸಿತು. 'ವಿರಕ್ತನಾದ ತನ್ನಣ್ಣನು ತನ್ನನ್ನು ಬಚ್ಚಿಟ್ಟುಕೊಳ್ಳಬೇಕೆಂಬ ಉದ್ದೇಶದಿಂದಲೇ ಆ ಪ್ರಕಾಶಕರಿಗೆ ಹಾಗೆ ಕಟ್ಟುನಿಟ್ಟಾಗಿ ತಿಳಿಸಿರಬೇಕು. ಏನಾದರೂ ತಿಳಿಯದ ಬಿಡಬಾರದು' ಎಂದುಕೊಂಡು ಕೃಷ್ಣನು ಆ ಪ್ರಕಾಶಕರಿಗೆ ಇನ್ನೊಂದು ಪತ್ರವನ್ನು ಬರೆದನು:—

"ತಮ್ಮ ಉತ್ತರವನ್ನು ನೋಡಿ ತುಂಬಾ ವ್ಯಥಿತನಾದೆನು. ತಾವು ನನ್ನ ಮೇಲೆ ದಯವನ್ನು ತೋರಿಯಾದರೂ 'ಕನ್ನಡ ಗೆಳೆಯ'ನ ಪತ್ತೆಯನ್ನು ತಿಳಿಸುವಿರಾಗಿ ನಂಬಿ,–ಸ್ವಲ್ಪ ವಿವರಿಸಿ ತಮಗೆ ಬರೆದುಕೊಳ್ಳುತ್ತಿದ್ದೇನೆ. ನನ್ನ ಏಕಮಾತ್ರ ಅಣ್ಣ ಶ್ರೀನಿವಾಸನೆಂಬವನು ಈಗ್ಗೆ ಒಂದು ವರ್ಷದ ಹಿಂದೆ ಪತ್ತೆಯಿಲ್ಲದೆ ಹೊರಟುಹೋಗಿರುತ್ತಾನೆ. ಅವನನ್ನು ಶೋಧಿಸಲು 'ಹಿಂದೂ ಮೇಲ್' ಎಂಬ ಪತ್ರಿಕೆಯಲ್ಲಿ ಪ್ರಕಟನೆ ಮಾಡಿಸಿಯೂ ಪ್ರಯೋಜನವಾಗಲಿಲ್ಲ. ಅವನು ಯಾವಾಗಲೂ ಲೇಖನ ವ್ಯವಸಾಯದಲ್ಲೇ ನಿರತನಾಗಿರುವನು. ಅಂತೆಯೆ ಅವನು ರಚಿಸಿದ 'ಕಾರುಣ್ಯಮೂರ್ತಿ'ಯ ಮೂಲಹಸ್ತಪ್ರತಿಯೊಂದನ್ನು ಮನೆಯಲ್ಲಿ ಬಿಟ್ಟು ಹೋಗಿದ್ದಾನೆ. ಈಗ ಆ ಗ್ರಂಥವನ್ನು ತಮ್ಮ ಮುಖಾಂತರವಾಗಿ ಪ್ರಕಾಶಗೊಳಿಸಿರುವನಾದಕಾರಣ, ಅವನ ಹೆಸರು ವಿಳಾಸಗಳು ತಮಗೆ ಗೊತ್ತೇ ಇರಬೇಕಲ್ಲವೆ? ಒಂದು ವೇಳೆ ಅವನು ತನ್ನ ಹೆಸರು ವಿಳಾಸಗಳನ್ನು ಯಾರಿಗೂ ತಿಳಿಸಬಾರದೆಂದು ತಮಗೆ ತಿಳಿಸಿರುವ ಸಂಭವವುಂಟು. ಆದರೆ— ನಾನು ನನ್ನ ಪ್ರಿಯ ಅಣ್ಣನನ್ನು ಅಗಲಿ ಅವನನ್ನು ಹುಡುಕಲು ದಿಕ್ಕುಗಾಣದೆ ಮಿಡುಕುತ್ತಿರುವೆನಾದುದರಿಂದ, ತಾವು ದೊಡ್ಡ ಮನಸ್ಸು ಮಾಡಿ ನನಗೆ ತಿಳಿಸಲೇಬೇಕು. ಹೆಸರು ವಿಳಾಸಗಳನ್ನು ತಿಳಿಸಲು ಸಾಧ್ಯವೇ ಇಲ್ಲದಿದ್ದರೆ, ಅವನು ಇಂತಹ ಊರಿನಲ್ಲಿದ್ದಾನೆಂಬುದನ್ನಾದರೂ ತಿಳಿಸದಿರಬಾರದು. ತುಂಬಾ ಕುತೂಹಲ–ನಂಬಿಕೆಗಳಿಂದ ಉತ್ತರಕ್ಕಾಗಿ ಕಾದಿದ್ದೇನೆ."

ಇದಕ್ಕೆ ಬಂದ ಉತ್ತರ:—"ಕೃಷ್ಣರಾಯರೆ! ನೀವೇನೋ ಭ್ರಮೆಯಲ್ಲಿ ಸಿಕ್ಕಿರಬೇಕು. ನಿಮ್ಮ ಪತ್ರದಲ್ಲಿ ಕಾಣುವ ಲಕ್ಷಣವುಳ್ಳ ವ್ಯಕ್ತಿ 'ಕಾರುಣ್ಯ ಮೂರ್ತಿ'ಯ ಕರ್ತರಲ್ಲ. 'ಕಾರುಣ್ಯ ಮೂರ್ತಿ' ಗ್ರಂಥಕರ್ತರ ನಿಜವಾದ ಪರಿಚಯವು ನಿಮಗೆ ತಿಳಿದರೆ ನೀವು ಅವರನ್ನು ಎಂದಿಗೂ ಏಕವಚನದಿಂದ ಸಂಬೋಧಿಸಲಿಕ್ಕಿಲ್ಲ. 'ಕನ್ನಡ ಗೆಳೆಯ' ಎಂಬವರು ವಿದ್ಯಾಧರ--ಪದವೀಧರರಾದ ದೊಡ್ಡ ಅಧಿಕಾರಿಗಳಾಗಿದ್ದಾರೆ. ಅವರ ಹೆಸರು 'ಶ್ರೀನಿವಾಸ' ಎಂಬುದೂ ಅಲ್ಲ. ಆದರೆ 'ಕಾರುಣ್ಯ ಮೂರ್ತಿ'ಯ ಮೂಲಪ್ರತಿಯೊಂದು ನಿಮ್ಮ ಬಳಿಯಲ್ಲಿರುವುದನ್ನು ಕೇಳಿ, ನಾವು ತುಂಬಾ ಆಶ್ಚರ್ಯಪಡುತ್ತೇವೆ. ಆದರೆ ಅದಕ್ಕೆ ಬೇರೆ ಏನಾದರೂ ಕಾರಣವಿರಬಹುದಾಗಿದೆ. ಆ ಬಗ್ಗೆ ಹೆಚ್ಚಿನ ಶೋಧವನ್ನು ನಡೆಯಿಸುವ ಕರ್ತವ್ಯವು ನಮಗಿಲ್ಲ. ಈ ವಿಷಯಗಳನ್ನು ಗ್ರಂಥಕರ್ತರಿಗೂ ತಿಳಿಸಿರುತ್ತೇವೆ. ಅವರಿಂದೇನಾದರೂ ತಮಗೆ ತಿಳಿಸುವಂತಹ ಸಂಗತಿ ನಮಗೆ ತಿಳಿದು ಬಂದರೆ ತಿಳಿಸುತ್ತೇವೆ.—"

ಇದನ್ನು ನೋಡಿ ಕೃಷ್ಣನು ಯೋಚನೆಗೀಡಾದನು — "—ಓಹೋ! ಅಣ್ಣನ ಪತ್ತೆ ಯೋಚಿಸಿದಷ್ಟು ಸುಲಭವಾಗಿಲ್ಲ. ಅವನು ಪ್ರಯತ್ನಪೂರ್ವಕವಾಗಿ ಅಜ್ಞಾತದಲ್ಲಿ ಹುದುಗಿಕೊಳ್ಳಲು ಯತ್ನಿಸುತ್ತಿದ್ದಾನೆ. ಆದರೆ ಈಗ ಇಷ್ಟೊಂದು ಸಂದು ಸಿಕ್ಕಿದುದರಿಂದ ಇದರೊಳಗೆಯೇ ತೂರಿ, ಹೇಗಾದರೂ ಮಾಡಿ ಅಜ್ಞಾತಾಂಧಕಾರದೊಳಗಣಿಂದ ಅಣ್ಣನನ್ನು ಹುಡುಕಿ ಹಿಡಿಯಲೇಬೇಕು. ಬಹುಶಃ ಈಗ ಸುಂದರಿ ಅವನ ಜತೆಯಲ್ಲಿರಲಿಕ್ಕಿಲ್ಲ. ಅವನು ಯಾವುದೋ ಒಂದು ಉಪಾಯದಿಂದ ಅವಳ ಸಹವಾಸದಿಂದ ಮುಕ್ತನಾಗಿರಬೇಕು. ಏಕೆಂದರೆ ಅವಳ ಸಂಗತಿಯಲ್ಲಿ ಅವನು ನಿಶ್ಚಿಂತನಾಗಿ ಗ್ರಂಥರಚನೆ ಮಾಡಲಾದೀತೆ? ಎಂದಿಗೂ ಇಲ್ಲ! ಆದರೆ ಈಗ ಮೊದಲಿನಂತೆ ಅಡುಗೆಯ ಕೆಲಸದಲ್ಲೇ ಇದ್ದಾನೋ—ಅಲ್ಲ ಕೇವಲ ಸಾಹಿತ್ಯವ್ಯವಸಾಯದಲ್ಲೇ ಮಗ್ನನಾಗಿಬಿಟ್ಟಿದ್ದಾನೊ! 'ಕನ್ನಡ ಗೆಳೆಯ' ಎಂಬ ವಿಜಯ ನಾಮವು ಕರ್ನಾಟಕದಲ್ಲಿ ಅಲ್ಲಲ್ಲಿ ಮೊಳಗುತಿರುವುದನ್ನು ಕೇಳಿದರೆ, ಅವನ ಕೀರ್ತಿ ಬಳೆವಂತೆಯೇ ಅವನ ಸ್ಥಿತಿಯೂ ಬಳೆದಿರಬಹುದಲ್ಲವೆ? ಆದರೆ ಬಡ ಅಡುಗೆಯವನಾಗಿದ್ದು ಒಂದೇ

ವರ್ಷದೊಳಗೆ ಅಷ್ಟು ದೊಡ್ಡ ಸ್ಥಿತಿಗೆ ಬಂದಾನೆ? 'ಕನ್ನಡ ಗೆಳೆಯ'ರು ದೊಡ್ಡ ಅಧಿಕಾರಿಗಳೆಂದು 'ಕಾರುಣ್ಯ ಮೂರ್ತಿ'ಯ ಪ್ರಕಾಶಕರು ಬರೆದಿದ್ದಾರಲ್ಲಾ! ಏನೋ! ಅದೃಷ್ಟವು ತೆರೆದರೆ ಭಿಕ್ಷುಕನು ಲಕ್ಷಾಧೀಶ ನಾಗಲಾರನೆ? ಏನಾದರೂ ಇದನ್ನು ಕೂಲಂಕಷವಾಗಿ ತಿಳಿದೇ ತೀರ ಬೇಕು. ಪತ್ರವ್ಯವಹಾರದ ಮೂಲಕವಾಗಿ ಆ ಪ್ರಕಾಶಕರು ಹೆಚ್ಚಿನ ವಿವರವನ್ನೇನೂ ತಿಳಿಸಲಿಕ್ಕಿಲ್ಲ 'ಕನ್ನಡ ಗೆಳೆಯ'ನ ಲೇಖನಗಳು ಹಲಕೆಲವು ಪತ್ರಿಕೆಗಳಲ್ಲಿಯೂ ಬಂದಹಾಗಿವೆ ಅವುಗಳನ್ನು ನಾನು ಓದಿರುವೆನಾದರೂ, ಅವುಗಳ ಮೂಲಪ್ರತಿಯಾವುದೂ ಮನೆಯಲ್ಲಿರು ವಂತೆ ಕಾಣುವುದಿಲ್ಲ ಅಣ್ಣನು ಮದುವೆಗಾಗಿ ಊರಿಗೆ ಬರುವುದಕ್ಕಿಂತ ಮುಂಚೆಯೇ 'ಕನ್ನಡ ಗೆಳೆಯ'ನ ಲೇಖನಗಳು ಪ್ರಕಟವಾಗಿರುವಂತೆ, ಲೈಬ್ರೆರಿಯ ಒಂದು ಪತ್ರಿಕೆಯಲ್ಲಿತ್ತು. ಹಾಗಾದರೆ ಶೀನಣ್ಣನು 'ಕನ್ನಡ ಗೆಳೆಯ' ಎಂಬ ಸಂಕೇತನಾಮವನ್ನಿಟ್ಟುಕೊಂಡು, ಕರ್ಣಾಟಕ ಸಾಹಿತ್ಯ ಪ್ರಪಂಚದಲ್ಲಿ ಮೊದಲೇ ತಿರುಗಾಡಲಾರಂಭಿಸಿರಬೇಕು? ಅಥವಾ 'ಕನ್ನಡ ಗೆಳೆಯ'ನೆಂಬ ಇನ್ನೊಬ್ಬ ಗ್ರಂಥಕರ್ತನು ಯಾರಾದರೂ ಇರಬಹುದೇ? ಏನಿದ್ದರೂ 'ಕಾರುಣ್ಯ ಮೂರ್ತಿ'ಯ ಕರ್ತನು ನನ್ನ ಅಣ್ಣನೇ— ಸಂದೇಹವಿಲ್ಲ ಇದರಿಂದ ಅಣ್ಣನ ಪತ್ತೆಯನ್ನು ತಿಳಿದುಕೊಳ್ಳಬೇಕಾದರೆ, ನಾನು ಪ್ರಯಾಣವನ್ನು ಕೈಕೊಳ್ಳಲೇ ಬೇಕು. ಇದಕ್ಕೆ ಹಣವು ಬೇಕು. ಹೋಗುವ–ತಿರುಗುವ–ಬರುವ–ಊಟ-ತಿಂಡಿ--ಮೊದಲಾದವುಗಳಿಗೆಲ್ಲಾ ಕಡಮೆ ಪಕ್ಷ ನೂರು ರೂಪಾಯಿಯಾದರೂ ಬೇಕು ನನ್ನ ಅದೃಷ್ಟದಲ್ಲಿ ಹೀಗೆ ಭ್ರಮಣ ಮಾಡಬೇಕಂತ ಇದ್ದರೆ ಯಾರೇನು ಮಾಡಲಾದೀತು-"

ಕೃಷ್ಣನು ಬೆಂಗಳೂರಿಗೆ ಹೊರಡುವುದನ್ನು ನಿಶ್ಚಯಿಸಿಕೊಂಡನು. ಮುಂದಾಗಿ ತಿಳಿಸದೆ ಹೋದರ, ತಾನು ಹೋದಾಗ 'ಕನ್ನಡ ಚಿತ್ರ ಮಾಲೆ'ಯ ಅಧಿಕಾರಿಗಳು ಅಲ್ಲಿಯೇ ಇರುವರೋ-ಎಲ್ಲಿಗಾದರೂ ಹೋಗಿರುವರೊ? ಕಡೆಗೆ ಅವರು ಸಿಕ್ಕದೆ ಆ ಮಹಾನಗರದಲ್ಲಿ ಸಿಕ್ಕಿ ಬಿದ್ದು ಇದ್ದ ಹಣವನ್ನೆಲ್ಲಾ ಹಿಂಡಿಸಿಕೊಳ್ಳುವ ಗತಿಯಾದೀತು! ಆದುದ ರಿಂದ ಅವನು ಹೊರಟು ಬೆಂಗಳೂರಿಗೆ ತಲಪುವ ದಿವಸವನ್ನು ಎಂಟು ದಿನ ಮುಂಚಿತವಾಗಿಯೇ ಆ 'ಕನ್ನಡ ಚಿತ್ರಮಾಲೆ'ಯ ಅಧಿಕಾರಿ ಗಳಿಗೆ ಬರೆದು ತಿಳಿಸಿದನು. ತರುವಾಯ ಬಂಡಸಾಲೆಯ ಕೆಲಸದಿಂದ

ಬಂದು ತಿಂಗಳು ರಜೆಯನ್ನು ಪಡೆದುಕೊಂಡು, ತನ್ನ ಯಾವತ್ತೂ ವೃತ್ತಾಂತವನ್ನು ಆ ತನ್ನ ಅಧಿಕಾರಿಗೆ ತಿಳಿಸಿ, ಆವನಿಂದ ಪ್ರೊ. ನೋಟಿನ ಮೇಲೆ ನೂರು ರೂಪಾಯಿಯ ಸಾಲವನ್ನು ಪಡೆದುಕೊಂಡು, ತಂಗಿ ಗೌರಿಯ ಸಂರಕ್ಷಣೆಗಾಗಿ ಚಿಕ್ಕಮ್ಮನನ್ನು ಮನೆಯಲ್ಲಿರಿಸಿ,—ಹೀಗೆ ಎಲ್ಲಾ ವ್ಯವಸ್ಥೆಯನ್ನು ಮಾಡಿಕೊಂಡು ಬೆಂಗಳೂರಿಗೆ ಹೊರಟನು.

---

## ೧೭. ಪಿ. ಎಂ. ಮಂಗಲಕರ್

ನಮ್ಮ ಕೃಷ್ಣನು ಬೆಂಗಳೂರಿಗೆ ಬಂದು, ರೈಲು ಸ್ಟೇಶನ್ನಿಗೆ ಸಮೀಪದಲ್ಲಿರುವ ಒಂದು ಹೋಟೆಲ್ಲಿನಲ್ಲಿ ತನ್ನ ಪುಟ್ಟ ಸೂಟುಕೇಸನ್ನು ಇಟ್ಟು, ಹೊಟ್ಟೆಯ ವಿಲೇವಾರಿಗೆ ಅದೇ ಜಾಗನ್ನೆ ಗೊತ್ತುಪಡಿಸಿಕೊಂಡು, 'ಕನ್ನಡ ಚಿತ್ರಮಾಲೆ' ಯ ಆಫೀಸನ್ನು ಹುಡುಕುತ್ತಾ ಹೋದನು. ಬೆಂಗಳೂರು ನಗರಕ್ಕೆ ಆವನು ಇದಕ್ಕಿಂತ ಮೊದಲೆಂದೂ ಬಂದಿರಲಿಲ್ಲ. ಆದುದರಿಂದ ನಗರವನ್ನು ತಿರುಗಿ ನೋಡುವ ಕುತೂಹಲದಿಂದ ಕಾಲು ನಡಿಗೆಯಿಂದ ಸುತ್ತುತ್ತಾ ಹೊರಟನು. ಒಂದು ವೇಳೆ ಶೀನಣ್ಣನು ಬೆಂಗಳೂರಿನಲ್ಲಿಯೇ ಇದ್ದರೆ ಅದೃಷ್ಟವಶಾತ್ ಕಣ್ಣಿಗೆ ಬಿದ್ದರೂ ಬೀಳಬಹುದಲ್ಲವೆ?. ಬಸ್ಸಿದಲ್ಲಿ ಓಡಿದರೆ ಅದು ಅಸಂಭವ.

ಹೀಗೆ ಸುತ್ತುತ್ತಾ ಆತನು ಸಾಯಂಕಾಲದ ವೇಳೆಯಲ್ಲಿ 'ಕನ್ನಡ ಚಿತ್ರಮಾಲೆ' ಯ ಆಫೀಸನ್ನು ಮುಟ್ಟಿದನು. ಅದೊಂದು ಸುಂದರವಾದ ಗ್ರಂಥಮಂದಿರವಾಗಿತ್ತು. ಮೂರು ಸುತ್ತಲೂ ಓರಣವಾಗಿ ನಿಲ್ಲಿಸಿದ ಕನ್ನಡಿ ಬೀರುಗಳಲ್ಲಿ, ಬಗೆಬಗೆಯ ಕನ್ನಡ ಪುಸ್ತಕಗಳು ರಂಜಿಸಿಕೊಂಡಿದ್ದವು ಒಂದು ಭಾಗದಲ್ಲಿ ಸ್ಟೇಶನರಿ ಸಾಮಾನುಗಳ ವ್ಯಾಪಾರವೂ, ಇನ್ನೊಂದು ಬದಿಯಲ್ಲಿ ಶಾಲಾ–ಕಾಲೇಜುಗಳ ಸಾಹಿತ್ಯ ವ್ಯಾಪಾರವೂ ಚಂದಗಾಣಿಸಿಕೊಂಡಿದ್ದುವು. 'ಕನ್ನಡ ಚಿತ್ರಮಾಲೆ'ಯ ನಡುವಿನಲ್ಲಿ, ಒಬ್ಬ ಗುಮಾಸ್ತನು ಕುಳಿತುಕೊಂಡು ಏನೋ ಲೆಕ್ಕ ನೋಡುತ್ತಿದ್ದನು ಕೃಷ್ಣರಾಯನು ಆವನ ಇದಿರಿನಲ್ಲಿ ನಿಂತು—"ನಮಸ್ಕಾರ್" ಎಂದನು

ಆವನು ಒಂದು ಕೈಯನ್ನು ತನ್ನ ಎದೆಯ ವರೆಗೆ ಎತ್ತಿ 'ತಾನು

ಬಹಳ ಸುಹೃದಯಿ' ಎಂಬ ಭಾವನೆಯ ಪ್ರತಿಪಂದನೆಯನ್ನು ತೀರಿಸಿ, ಹುಬ್ಬೇರಿಸಿ ನೋಡಿ—'ಏನು?' ಅಥವಾ 'ಯಾರು?' ಎಂಬ ಪ್ರಶ್ನೆಯನ್ನು ವ್ಯಕ್ತಪಡಿಸಿದನು

"ಕನ್ನಡ ಚಿತ್ರಶಾಲೆಯ ಒಡೆಯರನ್ನು ಕಾಣಬೇಕಾಗಿತ್ತು."

"ತಮ್ಮ ಹೆಸರು?"

"ಕಿರುಗಟ್ಟೆ ಕೃಷ್ಣರಾಯ"

"ಓಹೋ! ತಾವು ನಮಗೆ ಪತ್ರವನ್ನು ಬರೆದಿರುವಿರಲ್ಲವೆ?"

"ಹೌದು ಈ ದಿನ ಅವರ ಭೇಟಿಗೆ ಬರುವೆನೆಂದೂ ಬರೆದಿದ್ದೆನು. ಇದ್ದಾರೆಯೆ?"

"ಇದ್ದಾರೆ, ಹೀಗೆ ಬನ್ನಿ."

ಗುಮಾಸ್ತನು ಕೃಷ್ಣನನ್ನು ಕರೆದುಕೊಂಡು ಪುಸ್ತಕ ಬೀರುಗಳ ಮಧ್ಯದಿಂದಾಗಿ ಸುಸಜ್ಜಿತವಾದೊಂದು ಕೋಣೆಯ ಬಳಿಗೆ ಬಂದು, ಕೃಷ್ಣನನ್ನು ಅಲ್ಲಿ ಹೊರಗೆ ನಿಲ್ಲಿಸಿ ತಾನು ಒಳಗೆ ಹೋದನು. ಆ ಬಾಗಿಲಿಗೆ ಪರದೆಯನ್ನು ಹಾಕಿತ್ತು. ಒಳಗೆ ಯಾರಿರುವರೆಂದು ಕಾಣಿಸುತ್ತಿರಲಿಲ್ಲ. ಗುಮಾಸ್ತನು ಕೂಡಲೇ ಹೊರಗೆ ಬಂದು, "ಒಳಗೆ ಹೋಗಿ" ಎಂದು ಕೃಷ್ಣನನ್ನು ಒಳಗೆ ಕಳುಹಿಸಿದನು.

ಓರಣವಾದ ಸುಖಾಸನಾದಿ ವಸ್ತುನಿಚಯಗಳಿಂದ ಸುಂದರವಾದ ಕೊಠಡಿ ನೆಲಕ್ಕೆ ಬಣ್ಣದ ಮಿದುಗಂಬಳಿಯನ್ನು ಹಾಸಿತ್ತು. ಸುಣ್ಣಬಳಿದ ಶುಭ್ರವರ್ಣದ ಗೋಡೆಯ ಮೇಲೆ, ಮಹಾತ್ಮಾಜೀ, ನೆಹರು ಮೊದಲಾದ ಮುಖ್ಯದೇಶಸೇವಕರ ಪಟಗಳು ಒಪ್ಪುತ್ತಿದ್ದುವು ನಡುಗೋಡೆಯಲ್ಲಿ ಒಂದು ದೊಡ್ಡ ಗಡಿಯಾರ. ಅದರ ಬುಡದಲ್ಲಿ ಒಂದು ಸುಂದರವಾದ ಕ್ಯಾಲೆಂಡರು ನಡುಭಾಗದ ನೆಲದ ಮೇಲೆ ಸುಂದರವಾದ ಮೇಜು. ಅದರ ಮೇಲೆ ಮಸಿದೌತಿ, ಪೇನಾಸ್ಟ್ಯಾಂಡು, ಟೇಬಲ್‌ಕ್ಲಾಕ್, ಪುಸ್ತಕಗಳು—ಕಾಗದ ಫೈಲು—ವಾರ್ತಾ ಪತ್ರಿಕೆ ಮೊದಲಾದುವು ಒಪ್ಪುತಿದ್ದುವು. ಒಂದು ಬದಿಯಲ್ಲೊಂದು ದೊಡ್ಡ ಕವಾಟು ಅರೆತೆರೆದುಕೊಂಡಿತ್ತು. ಅದರೊಳಗೆ ಹಸ್ತಪ್ರತಿಯ ಪುಸ್ತಕಗಳು ತುಂಬಿರುವಂತೆ ಕಾಣುತಿದ್ದುವು ಮೇಜಿನ ಬದಿಯಲ್ಲಿರುವ ಸುಖಾಸನಗಳ ಮೇಲೆ ಇಬ್ಬರು ಸಭ್ಯ

ಗೃಹಸ್ಥರು ಸುಮಂಡಿತರಾಗಿದ್ದರು. ಮೊದಲನೆಯ ಕುರ್ಚಿಯಲ್ಲಿ ಶರ್ಟು ಹಾಕಿಕೊಂಡು ಕುಳಿತವರು, ' ಕನ್ನಡ ಚಿತ್ರಮಾಲೆ ' ಯ ಒಡೆಯರಾದ ರಾಘವರಾಯರು. ಅವರ ಮಯಸ್ಸು ಸುಮಾರು ಮೂವತ್ತೈದಿರಬಹುದು. ಮುಖದಲ್ಲಿ ಸಭ್ಯ ಗಾಂಭೀರ್ಯವು ಮನೆಮಾಡಿಕೊಂಡಿತ್ತು. ಇನ್ನೊಬ್ಬರು ಅವರ ಪಕ್ಕದ ಕುರ್ಚಿಯಲ್ಲಿ ಆಸೀನರಾಗಿದ್ದರು. ಅವರಿಗೆ ಸುಮಾರು ಐವತ್ತೈದರ ಮೇಲೆಯೇ ಆಗಿರಬಹುದು. ಮೀಸೆ ಅರ್ಧ ಭಾಗವು ಬೆಳ್ಳಗಾಗಿತ್ತು. ಮುಖದಲ್ಲಿ ವಾರ್ಧಕ್ಯರೇಖೆಗಳು ಮೂಡಿದ್ದುವು. ಅವರ ಗೌರಾಂಗವು ಧಷ್ಟಪುಷ್ಟವಾಗಿ ಶ್ರೀಮಂತಿಕೆಯ ರಸವನ್ನು ಹೀರಿಕೊಂಡು ಕಾಂತಿಯುಕ್ತವಾಗಿ ಹೊಳೆಯುತ್ತಿತ್ತು. ಮುಖದಲ್ಲಿ ಮಿನುಗುವ ಐಸಿರಿಯ ಕಳೆಯೊಂದಿಗೆ ಪಾಂಡಿತ್ಯದ ಮೆರುಗೂ, ಶಾಂತಿಗಾಂಭೀರ್ಯದ ಬಹಿರ್ಲಕ್ಷಣವೂ ಸೇರಿಕೊಂಡಿತ್ತು. ತಲೆಯಲ್ಲಿರುವ ಜರಿಯ ರುಮಾಲನ್ನು, ಧರಿಸಿರುವ ಸೂಟು-ಬೂಟು-ಕೋಟು-ಟೈ ಮೊದಲಾದ ಆಂಗ್ಲಭೂಷಣವನ್ನು ನೋಡಿದರೆ ದೊಡ್ಡ ಕಳಾಸಿಲಯದ ಪಂಡಿತರಂತೆ ಕಾಣುತ್ತಿದ್ದರು. ಹಾಗು ಇಲ್ಲಿಗೆ ಆಗಂತುಕರಾಗಿರುವರೆಂದೂ ಊಹಿಸಬಹುದಾಗಿತ್ತು.

ಈ ಘನ ಮಹನೀಯರನ್ನು ಕಾಣುತ್ತಲೇ ಕೃಷ್ಣನು ಇಬ್ಬರಿಗೂ ಸೇರಿದಂತೆ ಕೈ ಜೋಡಿಸಿದನು. ಇಬ್ಬರೂ ಅದನ್ನು ಸ್ವೀಕರಿಸಿದ ಭಾವವನ್ನು ವ್ಯಕ್ತಪಡಿಸಿದರು. ರಾಘವರಾಯರು ಸಾದರವಾದ ಮುಗುಳ್ನಗುವಿನಿಂದ —" ಕುಳಿತುಕೊಳ್ಳಿ — ನಮಗೆ ಪತ್ರವನ್ನು ಬರೆದ ಕಿರುಗಟ್ಟೆ ಕೃಷ್ಣರಾಯರೆಂಬವರು ತಾವೇನು ? "

" ಹೌದು ನಾನೇ ಅದು " ಎಂದು ಕೃಷ್ಣನು ಆ ಘನಶಾಲಿಗಳ ಸರಿಸಮಾನತೆಯಲ್ಲಿ ಕುರ್ಚಿಯಲ್ಲಿ ಕುಳಿತುಕೊಳ್ಳಲು ಸಂಕೋಚಪಟ್ಟುಕೊಂಡು, ಬದಿಯಲ್ಲಿದ್ದೊಂದು ಬೆಂಚಿನ ಮೇಲೆ ಕುಳಿತನು. " ಇಲ್ಲಿ ಕುರ್ಚಿಯಲ್ಲಿ ಕುಳಿತುಕೊಳ್ಳಿರಿ " ಎಂದು ರಾಘವರಾಯರು ಹೇಳಲಿಲ್ಲ. ಕೃಷ್ಣನು ತಮಗಿಂತ ಕೀಳ್ತರಗತಿಯವನೆಂದು ಅವರ ಅಭಿಪ್ರಾಯವಿರಬಹುದು.

ರಾಘವ:— ನಿಮ್ಮ ಕಾಗದಗಳೆಲ್ಲ ನಮಗೆ ಸಿಕ್ಕಿವೆ. ನಾವೂ ನಮಗೆ

ತಿಳಿದ ಸಮಾಚಾರಗಳನ್ನು ನಿಮಗೆ ಬರೆದಿದ್ದೆವು. ಆದರೂ ನೀವು ನಿಮ್ಮ ಭ್ರಮೆಯನ್ನು ಬಿಡದೆ, ಖುದ್ದೇ ಬರುವೆನೆಂದು ಒರೆದುದನ್ನು ನೋಡಿ, ನಾನು ತುಂಬಾ ಆಶ್ಚರ್ಯಪಡುತ್ತೇನೆ. ನಿಮ್ಮ ಸಮಾಚಾರಗಳನ್ನೆಲ್ಲಾ 'ಕಾರುಣ್ಯಾಮೂರ್ತಿ' ಗ್ರಂಥಕರ್ತರಿಗೂ ನಾವು ಬರೆದು ತಿಳಿಸಿದ್ದೆವು. ಇಂದೇ ಅವರೂ ಇಲ್ಲಿಗೆ ಬಂದಿದ್ದಾರೆ. ಆದುದರಿಂದ ಅವರೊಡನೆ ಮಾತಾಡುವುದರಿಂದ ನಿಮ್ಮ ಸಂದೇಹದ ನಿವೃತ್ತಿಯಾದೀತು.

ಕೃಷ್ಣನು ಕುತೂಹಲಾತುರದಿಂದ— "ಯಾರವರು? ಎಲ್ಲಿದ್ದಾರೆ?"

"ಇಗೋ–ಇವರೆ!" ಎಂದು ರಾಘವರಾಯರು ಪಕ್ಕದಲ್ಲಿ ಕುಳಿತಿರುವ ಘನವಂತರನ್ನು ತೋರಿಸಿದರು.

"ಹಾ!" ಕೃಷ್ಣನು ಬಾಯಿಬಿಟ್ಟು ಆಶ್ಚರ್ಯದಿಂದ ಅವರನ್ನು ನೋಡಿ ಸ್ತಬ್ಧನಾಗಿಹೋದನು. ಆ ಘನವಂತರು ಗಂಭೀರ ಮುದ್ರೆಯಿಂದ, ಆದರೆ ಮೀಸೆಯ ಎಡೆಯಲ್ಲಿ ಪುಟ್ಟ ನಗುವನ್ನು ಮರೆಯಿಸಿಕೊಂಡು ಕುಳಿತಿದ್ದಾರೆ—ಕೃಷ್ಣನನ್ನೇ ಚುರುಚುರು ನೋಡುತ್ತ!

ರಾಘವ:— ಏನು ಕೃಷ್ಣರಾಯರೆ! ತಾವು ಏನೋ ಮೋಸಹೋಗಿರಬೇಕೆಂದು ಈ ಮೊದಲೇ ನಾವು ತಿಳಿಸಿರುತ್ತೇವೆ. ಆದರೂ ನಿಮ್ಮ ಬಳಿಯಲ್ಲಿ 'ಕಾರುಣ್ಯಾಮೂರ್ತಿ'ಯ ಮೂಲಪ್ರತಿಯಿರುವುದನ್ನು ಕೇಳಿ ನಮಗೂ ಆಶ್ಚರ್ಯವೇ ಆಯಿತು. ಪ್ರತ್ಯಕ್ಷ ಗ್ರಂಥಕರ್ತರೇ ನಿಮ್ಮ ಇದಿರಿನಲ್ಲಿರುವರಾದುದರಿಂದ ಹೆಚ್ಚಿನ ವಿಷಯಗಳೆಲ್ಲ ಇವರಿಗೇ ಗೊತ್ತಿರಬಹುದು —ಅಲ್ಲವೇ ಮಿಸ್ಟರ್ ಮಂಗಲಕರ್?

'ಮಂಗಲಕರ್' ಎಂಬ ಆ ಘನಶಾಲಿಗಳು ರಾಘವರಾಯರನ್ನು ನೋಡಿ, "ಅಲ್ಲವೇ ಮತ್ತೆ?" ಎಂಬ ಅರ್ಥದಿಂದ ತಲೆಯಾಡಿಸಿದರು.

ಕೃಷ್ಣನು ಹೊಚ್ಚಹೊಸ ಅಪರಿಚಿತರಾದ ಮಂಗಲಕರರೊಡನೆ ಏನು ಮಾತಾಡಬೇಕೆಂದು ತೋರದೆ ಸ್ವಲ್ಪ ಹೊತ್ತು ಮಿಕಿಮಿಕಿ ನೋಡುತಿರುವಾಗ ಅವರೇ ಅವನನ್ನು ಮಾತಾಡಿಸಲಾರಂಭಿಸಿದರು:—

"ನಿನಗೆ ನನ್ನ ಪರಿಚಯವಿರಲಿಕ್ಕಿಲ್ಲ. ನನಗೂ ನಿನ್ನ ಪರಿಚಯವಿಲ್ಲ ನಿಜ. ಆದರೆ ನಿನ್ನ ಅಣ್ಣನ ಪರಿಚಯವು ನನಗೆ ಚೆನ್ನಾಗಿ ಉಂಟು.

ನೀನೂ ಅವನ ಅಚ್ಚಿನಲ್ಲಿಯೇ ಎರಕ ಹೊಯ್ದವನ ಹಾಗೆ ಕಾಣುವುದರಿಂದ ನೀನು ಆವನ ತಮ್ಮನೇ ನಿಶ್ಚಯವೆಂದು ನಂಬುತ್ತೇನೆ."

ಕೃಷ್ಣನು ಆಶ್ಚರ್ಯದಿಂದ—"ಹೌದು. ನನ್ನ ಅಣ್ಣ–ಶೀನಣ್ಣನನ್ನು ತಾವು ಬಲ್ಲಿರಾ? ನೋಡಿರುವಿರಾ?''

ಮಂಗಲಕರ್:— ಹೌದು. ಅವನು ಅಡುಗೆ ಮಾಡುತ್ತಾನಲ್ಲವೆ?

ಕೃಷ್ಣ:— ನಿಜ. ತಾವು ಆವನನ್ನು ಹೇಗೆ ಬಲ್ಲಿರಿ? ಎಲ್ಲಿ ಬಲ್ಲಿರಿ?

ಮಂಗಲಕರ್:— ಕಿರುಗಟ್ಟಿ ಶ್ರೀನಿವಾಸ ಎಂಬವನು ಈಗೆ ಸುಮಾರು ಒಂದು ವರ್ಷದ ಹಿಂದೆ ಬಳ್ಳಾರಿ ಪ್ರಾಂತದಲ್ಲಿದ್ದನು.

ಕೃಷ್ಣ:— ಬಳ್ಳಾರಿಯಲ್ಲಲ್ಲ ಹೊಸಪೇಟೆಯಲ್ಲಿದ್ದನು.

ಮಂಗಲಕರ್:— ಅದೆಲ್ಲ ಒಂದೇ ತಾನೇ? ಬಳ್ಳಾರಿ–ಹೊಸಪೇಟೆ ತೀರ ಸಮೀಪ!

ಕೃಷ್ಣ:— ಹೂಂ!

ಮಂಗಲಕರ್:—ಕನ್ನಡ ಲೇಖನ ವ್ಯವಸಾಯವು ಆ ಶ್ರೀನಿವಾಸನ ನಿರಂತರ ಅಭ್ಯಾಸವಾಗಿತ್ತು—ನಿಜವಷ್ಟೆ?

ಕೃಷ್ಣ:—ಸತ್ಯ! ಸತ್ಯ! ಎಲ್ಲಿದ್ದಾನೆ ಈಗ ನನ್ನ ಅಣ್ಣ?

ಮಂಗಲಕರ್:— ಅದೇ ನನಗೂ ಗೊತ್ತಾಗಬೇಕಾಗಿದೆ!

ಕೃಷ್ಣ:— ಆ? ಹಾಗಾದರೆ?

ಮಂಗಲಕರ್:— ಮೊದಲು ಶ್ರೀನಿವಾಸನು ಬಳ್ಳಾರಿಯಲ್ಲಿ ಆರು ತಿಂಗಳವರೆಗೆ ಇದ್ದನು.—

ಕೃಷ್ಣ:— ಮೊದಲು ಅಂದರೆ–ಎಷ್ಟು ತಿಂಗಳ ಹಿಂದೆ?

ಮಂಗಲಕರ್.— ಒಂದು ವರ್ಷಕ್ಕಿಂತಲೂ ಮೊದಲು

ಕೃಷ್ಣ:— ಹೌದು, ಆಗ ಹೊಸಪೇಟೆಯಲ್ಲಿ ಇದ್ದದ್ದು.

ಮಂಗಲಕರ್:— ಇರಬಹುದು. ಹೊಸಪೇಟೆಯಲ್ಲಿದ್ದ ಯಾರೋ ಒಬ್ಬರು ವಕೀಲರೇ ಅವನನ್ನು ಬಳ್ಳಾರಿಗೆ ಕಳುಹಿಸಿದ್ದರು. ಆಗ ನಾನೂ ಬಳ್ಳಾರಿಯಲ್ಲೇ ಇದ್ದೆನಾದಕಾರಣ ಶ್ರೀನಿವಾಸನಿಗೂ ನನಗೂ ಪರಿಚಯವಾಯಿತು. ಶ್ರೀನಿವಾಸನು ಕನ್ನಡ ಸಾಹಿತ್ಯಕ್ಕೆ ಸಂಬಂಧಪಟ್ಟ ಅಭ್ಯಾಸದಲ್ಲಿ ಉತ್ಸಾಹದಿಂದಿರುವುದನ್ನು ನಾನು ಮನಗಂಡೆನು. ನಾನೂ ಒಬ್ಬ

ಕನ್ನಡ ವ್ಯವಸಾಯಿ. ಅಂತಹ ಸಾಹಿತ್ಯ ವ್ಯವಸಾಯಿಗಳನ್ನು ಕಂಡರೆ ನನಗೆ ತುಂಬಾ ಅಭಿಮಾನ. ನನ್ನ ಬಳಿಯಲ್ಲಿ ಅನೇಕ ಮಂದಿ ಕನ್ನಡ ಭಕ್ತರು ಕನ್ನಡ ತಾಯಿಯ ಸೇವೆಯನ್ನು ಕಲಿಯುತ್ತಾರೆ. ಶ್ರೀನಿವಾಸನೂ ಹಾಗೆಯೇ. ಓದುವಾಗ ನನ್ನ ಬಳಿಗೆ ಬಂದು ಲೇಖನ ವ್ಯಾಸಂಗವನ್ನು ಮಾಡಲಾರಂಭಿಸಿದ್ದನು. ಅನೇಕ ಗ್ರಂಥಗಳ ಸಹಾಯವನ್ನು ನನ್ನಿಂದ ಪಡೆದು ನನಗೂ ನನ್ನ ಲೇಖನ ವ್ಯವಸಾಯದಲ್ಲಿ ತುಂಬಾ ಉತ್ತೇಜನ ಮಾಡಿದನು. ನನ್ನ ಲೇಖನಗಳು ಪ್ರಕಟನೆಗೆ ಯೋಗ್ಯವಿದ್ದರೂ ಪ್ರಕಟಪಡಿಸಲು ಅವನಿಗೇನೂ ಇಷ್ಟವಿರಲಿಲ್ಲ. ಇರಲಿ. ಅವನಿಂದ ನಾ 'ಕಾರುಣ್ಯ ಮೂರ್ತಿ' ಎಂಬ ಗ್ರಂಥವನ್ನು ಬರೆಯಿಸಿದೆನು —

ಕೃಷ್ಣ:— ತಾವು ಬರೆಯಿಸಿದಿರಾ?— ಅಂದರೆ?

ಮಂಗಲಕರ್:— ಅಂದರೆ ನಾನು ಅನೇಕ ಗ್ರಂಥಗಳನ್ನು ಬರೆಯಿಸಿದ್ದೇನೆ. ಆದರೆ ನನ್ನ ಎರಡು ಕೈಗಳಿಂದ ನಾನೇ ಬರೆದು ಓದುವುದು ಬರೆಯಲಾರೆ. ಬರೆಯುವುದಕ್ಕೆ ಅಭ್ಯಾಸವೂ ನನಗಿಲ್ಲ. ಇದಕ್ಕಾಗಿ ನಾನು ನನ್ನ ಕೈಕೆಳಗಿನ ಹುಡುಗರಿಂದ ಬರೆಯಿಸುವುದು ಕ್ರಮ.

ಕೃಷ್ಣ:— ಓಹೋ!

ಮಂಗಲಕರ್:— ಹೌದು. ನಾನು ಕಣ್ಣುಗಳ ಮುಚ್ಚಿಕೊಂಡು ಯೋಚನೆ ಮಾಡುತ್ತಾ ಹೇಳುತ್ತೇನೆ—ಗ್ರಂಥ ರಚನೆಯನ್ನು ಬಾಯಿಂದ ರಚಿಸಿ ಹೇಳಿದನು; ನಿಶ್ಶೇಶ್ವರನು ಅದನ್ನು ಕೇಳುತ್ತ ಬರೆದನು. ಗೊತ್ತಿದೆಯಷ್ಟೆ?

ಕೃಷ್ಣ.— ಉಂ

ಮಂಗಲಕರ್ — ಹಾಗೆ ನನ್ನ ಅಭ್ಯಾಸ. ಆ ರೀತಿಯಾಗಿ 'ಕಾರುಣ್ಯ ಮೂರ್ತಿ' ಎಂಬ ಗ್ರಂಥವನ್ನು ಹೇಳುತ್ತಾ ಶ್ರೀನಿವಾಸನಿಂದ ಬರೆಯಿಸಿದೆನು. ಹಾಗೆ ಬರೆದುದನ್ನು ಮತ್ತೆ ಅವನಿಂದಲೇ ಓದಿಸಿ ಅಲ್ಲಲ್ಲಿ ತಿದ್ದುಪಡಿಯನ್ನು ಮಾಡಿಸಿ ಅವನಿಂದಲೇ ಒಳ್ಳೆಯ ಪ್ರತಿಯನ್ನು ಕೂಡಾ ತೆಗೆಯಿಸಿದೆನು. ಆ ಒಳ್ಳೆಯ ಪ್ರತಿ ಇಕೋ!— ನನ್ನ ಬಳಿಯಲ್ಲಿದೆ

ಮಂಗಲಕರರು ಮೇಜಿನ ಮೇಲಿದ್ದ ಒಂದು ಪುಸ್ತಕವನ್ನು ತೆಗೆದು ಕೃಷ್ಣನ ಕಡೆಗೆ ನೀಡಿದರು. ಕೃಷ್ಣನು ಅದನ್ನು ತೆಗೆದುಕೊಂಡು ಬಿಡಿಸಿ

ನೋಡಿದನು. ಅದೇ 'ಕಾರುಣ್ಯ ಮೂರ್ತಿ' ಎಂಬ ಗ್ರಂಥ. ಎಲ್ಲವೂ ಶೀನಣ್ಣನ ಬರೆಹ. ತನ್ನ ಕೈಯಲ್ಲಿರುವ ಮೂಲ ಪ್ರತಿಯನ್ನೇ ಮಂಗಲಕರರು ಕೊಟ್ಟ ಆ ಎರಡನೆಯ ಪ್ರತಿಯಲ್ಲಿ ಪ್ರತಿ ತೆಗೆದಿರುತ್ತಾನೆ ಶೀನಣ್ಣ. ಆದರೆ ಮೊದಲಿನ ಪ್ರತಿಯಲ್ಲಿರುವ ಸರಸ್ವತೀಸ್ತವನಾದಿ ಸಾಂಗತ್ಯಗಳು ಆ ಎರಡನೆಯ ಪ್ರತಿಯಲ್ಲಿರಲಿಲ್ಲ.

ಕೃಷ್ಣ:— ಎಲ್ಲಾ ಒಬ್ಬನೇ ಬರೆದ ಒಂದೇ ಪುಸ್ತಕವಾಗಿದೆ. ಆದರೆ ಮೊದಲನೆ ಪ್ರತಿಯಲ್ಲಿನ ಪದ್ಯಗಳು ಎರಡನೆಯ ಪ್ರತಿಯಲ್ಲಿಲ್ಲ. ಮತ್ತು ಮೊದಲನೆಯ ಪುಸ್ತಕದಲ್ಲಿ ಹೊಡೆದುದೆಲ್ಲಾ ಎರಡನೆಯ ಪ್ರತಿಯಲ್ಲಿ ತಿದ್ದುಪಡೆಯಾಗಿದೆ.

ಮಂಗಲಕರ್:— ಅದು ಸಹಜವೇ ಆಗಿದೆ. ಎರಡನೆಯ ಪ್ರತಿಯಲ್ಲಿ ಕೂಡಾ ವಿಚಾರಗಳ ಉನ್ನತಿಯಾಗಿ ತಿದ್ದುಪಡಿ ಮಾಡಿಸಿ, ಬೇರೆ ಹುಡುಗರಿಂದ ಮೂರನೆಯ ಕಾಪಿಯೊಂದನ್ನು ತೆಗೆಯಿಸಿ ಪ್ರಕಾಶ ಮಾಡಿಸಿರುತ್ತೇನೆ. ಈ ಎರಡನೆಯ ಪ್ರತಿಯನ್ನು ತೆಗೆದು ಕೊಟ್ಟ ನೀಲಿ ಶ್ರೀನಿವಾಸನು ಬಳ್ಳಾರಿಯಿಂದ ಹೊರಟುಹೋದನು. ಆಗ 'ಕಾರುಣ್ಯ ಮೂರ್ತಿ'ಯ ಮೂಲಪ್ರತಿ ಅವನ ಬಳಿಯಲ್ಲಿ ಇತ್ತು. ಅದನ್ನು ತರಿಸಿಕೊಳ್ಳಬೇಕೆಂದು ನೋಡಿದರೆ ನನಗೆ ಅವನ ಎಡ್ರೆಸ್ಸೇ ತಿಳಿಯಲಿಲ್ಲ. ಕೆಲವು ತಿಂಗಳ ಮೇಲೆ ಊರಿಗೆ ಹೋಗುವೆನೆಂದೂ ಹೇಳಿದ್ದ. ಈವರೆಗೂ ಅವನ ಯಾವ ಸಂಗತಿಗಳೂ ನನಗೆ ಗೊತ್ತಾಗಲಿಲ್ಲ. ನೀವು ಈ ಗ್ರಂಥಪಾಲಾಧಿಕಾರಿಯವರಿಗೆ ಬರೆದ ಪತ್ರದ ಮುಖ್ಯಾಂಶಗಳನ್ನು ಇವರು ನನಗೆ ತಿಳಿಸಿದ್ದರು. ನನಗೀ ಬೆಂಗಳೂರಿಗೆ ಬರುವ ಕೆಲಸವಿದ್ದುದರಿಂದ ನಿಮ್ಮನ್ನು ನೋಡಿ, ನಿಮ್ಮ ಪ್ರಿಯ ಶಿಷ್ಯನ ಶ್ರೀನಿವಾಸನ ಸ್ಥಾನಲಾಭಾದಿಗಳನ್ನು ತಿಳಿಯೋಣವೆಂದು, ನಿಮಗಾಗಿ ಕಾದಿದ್ದೇನೆ. ಹಾಗಾದರೆ ಆವನು ಎಲ್ಲಿಗೆ ಹೋಗಿದ್ದಾನೆಂದು ನಿಮಗೂ ತಿಳಿಯದೇ?''

ಕೃಷ್ಣ:— ತಿಳಿಯದು ಸ್ವಾಮಿ! ಹುಡುಕುತ್ತಲೇ ಇದ್ದೇನೆ. ನಾನು ಬಹಳ ನಂಬುಗೆಯಿಟ್ಟು ಇಷ್ಟು ದೂರ ಬಂದದ್ದೂ ವ್ಯರ್ಥವಾದ ಹಾಗಾಯಿತು!

ರಾಘವರಾಯರು:— 'ಅದೇ ನಾನು ಮೊದಲೇ ನಿಮಗೆ ಬರೆದು ತಿಳಿಸಿರುವೆನಲ್ಲವೆ?

ಮಂಗಲ:— ನೀನು ಬಂದುದೀಗ-ಲೇಸೇ ಆಯಿತು. ಒಂದು ಸಮಾಚಾರ ನನಗೂ ನಿನಗೂ ತಿಳಿದ ಹಾಗಾಯಿತಲ್ಲಾ? ಹಾಗಾದರೆ ಶ್ರೀನಿವಾಸನು ಈಗ ಎಲ್ಲಿಗೆ ಹೋಗಿರಬಹುದು? ಅವನು ಹಾಗೆ ಪತ್ತೆ ಯಿಲ್ಲದೆ ಹೋಗಲು ಕಾರಣವೇನು?

ಕೃಷ್ಣ:— ಅದೊಂದು ದೊಡ್ಡ ಕತೆ ಅವನ ಮನಸ್ಸಿಗೆ ಹಿತವಿಲ್ಲ. ಮದುವೆಯಿಂದಾಗಿ ಇಂತಹ ಕಾಲವು ಬಂತು!

ಮಂಗಲಕರ್:— ಓಹೊ! ಆದರೂ ಸ್ವಲ್ಪ ವಿವರವಾಗಿ ಹೇಳ ಬಹುದೆ?

ಕೃಷ್ಣ:— ಓ! ಹೇಳಿದರೇನು?—

ಹೀಗೆಂದು ಕೃಷ್ಣನು, ರಾಮಾಜೋಯಿಸರ ಮೂಲಕವಾಗಿ ಶೀನಣ್ಣ ನಿಗೆ ಮದುವೆಯಾದ ವಿಧಾನವನ್ನೂ, ಆ ಸುಂದರಿಯ ವೃತ್ತಾಂತವನ್ನೂ, ಆ ಮೇಲೆ ಶೀನುವಿನ ಪಲಾಯನವನ್ನೂ, ಸುಂದರಿಯನ್ನು ರಾಮಾ ಜೋಯಿಸರು ಶೀನುವಿನ ಜತೆಯಲ್ಲಿ ಕೂಡಿಸಿದರೆಂಬ ಸಮಾಚಾರವನ್ನೂ ಸಂಕ್ಷೇಪವಾಗಿ ಹೇಳಿ ಮುಗಿಸಿದನು. ಇದನ್ನೆಲ್ಲಾ ಕೇಳುವಾಗ ಮಂಗಲ ಕರರ ಮುಖದಲ್ಲಿ ಯಾವ ಬಗೆಯ ವ್ಯತ್ಯಾಸವೂ ಆದಂತೆ ಕಾಣಲಿಲ್ಲ ಆದರೆ ರಾಘವರಾಯರು ಮಾತ್ರ ದುಃಖವನ್ನೂ ಸಹಾನುಭೂತಿಯನ್ನೂ ವ್ಯಕ್ತಪಡಿಸಿದರು ಎಲ್ಲವನ್ನೂ ಕೇಳಿ ರಾಘವರಾಯರು—"ಪಾಪ! ಹೀಗೂ ಒಂದು ವಿಚಿತ್ರವುಂಟೆ?" ಎಂಬ ಉದ್ಗಾರವನ್ನು ಹೊರಡಿಸಿ ದರು.

ಮಂಗಲಕರ್:— ಶ್ರೀನಿವಾಸನಂಥಾ ಸಾಧುಶೀಲನ ಗತಿ ಹೀಗೆ ಪರಿವರ್ತನೆಯಾಯಿತೆ? ಕನ್ನಡ ತಾಯಿಯ ಒಂದು ಅಮೂಲ್ಯವಾದ ಪುತ್ರರತ್ನವೇ ಅಂಧಕಾರದಲ್ಲಿ ಬಿದ್ದ ಹಾಗಾಯಿತು.

ಕೃಷ್ಣ:— 'ಕನ್ನಡ ಗೆಳೆಯ' ಎಂಬ ಸಂಕೇತನಾಮವು 'ಕಾರುಣ್ಯ ಮೂರ್ತಿ' ಎಂಬ ಗ್ರಂಥಕರ್ತನ ಸ್ಥಾನದಲ್ಲಿ ಪ್ರಕಟವಾದುದನ್ನು ನೋಡಿ, ಅಂಧಕಾರದಲ್ಲಿ ಬಿದ್ದ ರತ್ನವು ತನ್ನ ಪ್ರಕಾಶದಿಂದ ಗೋಚರವಾಯಿತೆಂದು ನಂಬಿ ಇಷ್ಟು ದೂರಕ್ಕೆ ಹೊರಟು ಬಂದೆನು. ಈಗ ನೋಡಿದರೆ 'ಕನ್ನಡ ಗೆಳೆಯ' ತಮ್ಮ ಸಂಕೇತನಾಮವೆಂದು ಅರ್ಥವಾಗುತ್ತದೆ. ಸ್ವಾಮಿ!

ತಮ್ಮ ಹೆಸರು—ಉದ್ಯೋಗ ಮೊದಲಾದವುಗಳನ್ನು ನಾನು ತಿಳಿದುಕೊಳ್ಳ ಬಹುದೆ?

ಒಡನೆಯೆ ಮಂಗಲಕರರು ತಮ್ಮ ಜೇಬಿನಿಂದೊಂದು ವಿಜಿಟಿಂಗ್ ಕಾರ್ಡನ್ನು ತೆಗೆದು ಕೃಷ್ಣನಿಗೆ ತೋರಿಸಿದರು.

"ವಿದ್ವಾನ್. ಪಿ. ಎಂ. ಮಂಗಲಕರ್, ಎಂ. ಎ. ಎಲ್. ಟಿ.
ಡಿ. ಇ. ಒ. ಬಳ್ಳಾರಿ"

ಎಂದು ಆದರಲ್ಲಿ ಛಾಪಿಸಲ್ಪಟ್ಟಿತ್ತು. ನೋಡಿ ಕೃಷ್ಣನು ತಲೆದೂಗಿದನು.

ಮಂಗಲಕರ್:— ಇನ್ನೂ ನಿನಗೇನಾದರೂ ಸಂದೇಹವಿದೆಯೆ?

ಕೃಷ್ಣ:— ನನಗೇನೋ ಸಂದೇಹವೇ ಇದೆ!

ಮಂಗಲಕರ್:— ಇನ್ನೇನು?

ರಾಘವರಾಯರು:— ಇನ್ನೆನ್ರೀ?

ಅಣ್ಣನ ಯೋಗ್ಯತೆ ಕೃಷ್ಣನಿಗೆ ಚೆನ್ನಾಗಿ ಗೊತ್ತಿತ್ತು. 'ಕಾರುಣ್ಯ ಮೂರ್ತಿ'ಯನ್ನು ಶೀನಣ್ಣನೇ ಬರೆದಿರುವನೆಂದು ಅವನ ಮನೋದೇವತೆ ಸಾರಿಸಾರಿ ಹೇಳುತಿತ್ತು. ತನ್ನ ಕೈಯಲ್ಲಿರುವ ಕಾರುಣ್ಯ ಮೂರ್ತಿಯ ಎರಡು ಪ್ರತಿಗಳನ್ನು ತೋರಿಸುತ್ತ—"ಸ್ವಾಮಿ! ನೀವು ಏನು ಬೇಕಾದರೂ ಹೇಳಿರಿ. ಈ ಗ್ರಂಥಗಳನ್ನು ನನ್ನ ಅಣ್ಣನೇ ಸ್ವಂತ ಬುದ್ಧಿಯಿಂದ ರಚಿಸಿ ಬರೆದಿರುವನೆಂದೇ ನನಗೆ ಕಾಣುತ್ತೆ."

ಮಂಗಲಕರ್:— ನಿನಗೆ ಕಾಣುತ್ತೆಯೆ?

ರಾಘವರಾಯ:— ಆರೆ, ಜೋರಿದ್ದೀರಲ್ಲ ನೀವು?—ಏನಯ್ಯ ಕೃಷ್ಣರಾಯರ! ಇವರ ಮಾತು ಸುಳ್ಳೆಂದು ಹೇಳುವಷ್ಟು ಧೈರ್ಯವು ನಿಮಗಿದೆಯೆ?

ಕೃಷ್ಣ:— ಸುಳ್ಳು ಹೇಳುವಷ್ಟು ಧೈರ್ಯವು ನನಗಿಲ್ಲ. ಸತ್ಯವನ್ನು ಸಾಧಿಸುವಷ್ಟರ ಮಟ್ಟಿಗೆ ಧೈರ್ಯವನ್ನು ಮಾತ್ರ ದೇವರು ದಯಪಾಲಿಸಿರುತ್ತಾನೆ!

ರಾಘವರಾಯ:— ಓಹೊ!

ಕೃಷ್ಣ:—ನೋಡಿರಿ! ಈ ಮೂಲಗ್ರಂಥದಲ್ಲಿ ತಿದ್ದಿದ್ದು, ಹೊಡೆದದ್ದು,

21

ಅಡ್ಡ ಪಂಕ್ತಿ ಬರೆದದ್ದು ಎಲ್ಲವೂ ಶೀನಣ್ಣನೆ! ಅಲ್ಲದೆ ಅವನೇ ಕಟ್ಟಿದ ಪದ್ಯಗಳೂ ಇವರಲ್ಲಿವೆ. ಇದರಲ್ಲೆಲ್ಲಿಯೂ ಇನ್ನೊಬ್ಬರ ಕೈಬಿದ್ದುದೇ ಕಾಣುವುದಿಲ್ಲ. ಅಲ್ಲದೆ 'ಗ್ರಂಥ ಕರ್ತನು ಶೀನಣ್ಣನೆಂದೇ ಬಾಯಿಬಿಟ್ಟು ಹೇಳುತಿರುವಂತೆ, ' ಕೆ. ಶ್ರೀನಿವಾಸರಾವ್ ' ಎಂಬ ಹೆಸರೂ ಈ ಎರಡು ಪುಸ್ತಕದ ಪ್ರಾರಂಭದ ಪುಟಗಳಲ್ಲಿ ಉಂಟು ಇನ್ನೊಬ್ಬರ ಗ್ರಂಥದಲ್ಲಿ ಅವನು ತನ್ನ ಹೆಸರನ್ನು ಬರೆಯುವನೆ?

ಮಂಗಲಕರ್:— ಲೇಖಕರ ಹೆಸರು ನನ್ನ ಜ್ಞಾಪಕದಲ್ಲಿರಬೇಕೆಂತಲೇ ನಾನೇ ಅವನ ಹೆಸರನ್ನು ಬರೆಯಲಿಕ್ಕೆ ಹೇಳಿದ್ದೆನು. ಅದರಲ್ಲಿರುವ ಪದ್ಯಗಳು ಕೂಡಾ ನಾನೇ ರಚಿಸಿದವುಗಳಾಗಿವೆ. ಮತ್ತೆ ಅವು ಅನಾವಶ್ಯಕವೆಂದು ತೋರಿದುದರಿಂದಲೇ-ತೆಗೆದು ಹಾಕಿರುತ್ತದೆ. ಹನರು-ಅಕ್ಷರಗಳನ್ನು ಬರೆದುಬಿಟ್ಟ ಮಾತ್ರಕ್ಕೇ ಅವನ ಸ್ವಂತ ಬುದ್ಧಿಯಿಂದ ಹೊರಟ ಗ್ರಂಥವೆಂದೇ ಅರ್ಥವಾಗಬಹುದೇನು?

ಕೃಷ್ಣ:— "ಸ್ವಾಮಿ, ತಾವು ಬಲ್ಲವರು. ನಾನು ಚಿಕ್ಕವನು. ತಮ್ಮೊಡನೆ ವಾದ ಮಾಡುವಷ್ಟು ಶಕ್ತನಲ್ಲ. ಎಲ್ಲ ಆಯಿತು-ಹೋಯಿತು. "ಕನ್ನಡ ಗೆಳೆಯ" ಎಂಬ ಹೆಸರಿನಲ್ಲಿ ಗ್ರಂಥವು ಪ್ರಕಟವಾಗಿದೆ. ನಾನು ಮುಖ್ಯ ಅಣ್ಣನನ್ನು ಪತ್ತೆಮಾಡಲಿಕ್ಕಾಗಿ ಬಂದವನು. ಆದಾಗಲಿಲ್ಲ. ಬರುತ್ತೇನೆ ಹಾಗಾದರೆ, ನಮಸ್ಕಾರ." ಹೀಗೆಂದು ಕೃಷ್ಣನು ಆ ಎರಡು ಪುಸ್ತಕಗಳೊಂದಿಗೆ ಹೊರಡಲು ಎದ್ದನು.

ಮಂಗಲಕರ್:— " ಆ ಪುಸ್ತಕಗಳು ?"

ಕೃಷ್ಣ:— ಈ ಎರಡು ಪುಸ್ತಕಗಳೂ ನನ್ನ ಬಳಿಯಲ್ಲೇ ಇರಲಾಗದೆ?

ಮಂಗಲಕರ್:— ಕೇಳದೆಯೇ ತೆಗೆದುಕೊಂಡು ಹೊರಟೆಯಲ್ಲಾ? ಇದೆಂತಹ ನಡತೆ?

ಕೃಷ್ಣ:— ನಿಮ್ಮ ಇದಿರೇ ಹೊರಟುಹೋಗಲು ಎದ್ದೆನಲ್ಲದೆ, ಕಳ್ಳತನವಾಗಿ ಓಡಿಹೋಗಲು ಉದ್ಯೋಗಿಸಲಿಲ್ಲ. ನೀವು ಈ ಹಳೆಯ ಪುಸ್ತಕಗಳ ಮೇಲೆ ಇಷ್ಟು ಮಹತ್ವವಿಡುವಿರೆಂದು ನಾನು ನಂಬದಿರುವುದು ಅದಕ್ಕೆ ಕಾರಣ. ಇದಕ್ಕೂ ಮಿಂಚಿ ಏನಾದರೂ ಹೆಚ್ಚು ಕಡಮೆಯಾಗಿದ್ದರೆ-ಕ್ಷಮಿಸಿಬಿಡಿಸಿ.

ರಾಘವರಾಯರಿಗೆ ತುಸು ನಗು ಬಂದಿತು.

ಮಂಗಲಕರ್:—ಒಳ್ಳೇದು ಬಿಡು, ಈ ಪುಸ್ತಕಗಳಿಂದ ನಿನಗೇನು ಪ್ರಯೋಜನ?

ಕೃಷ್ಣ:— ಪ್ರಯೋಜನವೇನು? ಕಾಣೆಯಾಗಿ ಹೋದ ನನ್ನ ಅಣ್ಣನ ಬರೆಹಗಳು ನನ್ನ ಬಳಿಯಲ್ಲಿರಲೀ ಅಂತ.

ಮಂಗಲಕರ್:— ಏಕೆ?

ಕೃಷ್ಣ:— ಏಕೆಂದರೆ?–ತೀರಿಹೋದ ಹಿರಿಯರ ಫೋಟೋವನ್ನು ಇಟ್ಟುಕೊಂಡು ನೋಡುತ್ತಿರುವುದು ಏಕೋ ಅದಕ್ಕೇ ಸರಿ! ಮತ್ತೇನು ಹೇಳಲಿ? ಮುಂದೆ ಎಂದಾದರೂ ಅಣ್ಣನು ಊರಿಗ ಬಂದರೆ, ಇದನ್ನು ತೋರಿಸಿ ನನ್ನ ಸಂದೇಹವನ್ನು ನಿವಾರಣೆ ಮಾಡಿಕೊಳ್ಳಲಿಕ್ಕಾದರೂ ಇರಲಿ.

ಮಂಗಲಕರ್:— ನಿನ್ನ ವಿಚಾರವು ಪ್ರಚಂಡವಾಗಿರುವ ಹಾಗಿದೆ. ನಿನ್ನ ಸಂದೇಹ ಪ್ರಳಯ ಸಂದೇಹವೇ ಸರಿ! ಇದಕ್ಕೇ ನೋಡೀ–ಮಿಸ್ಟರ್ ರಾಘವರಾಯರೆ!—ಅವರವರ ಗ್ರಂಥಗಳನ್ನು ಅವರವರ ಕೈಯಿಂದಲೇ ಬರೆಯಬೇಕು!

ರಾಘವರಾಯರು:— ಸಂದೇಹವೇನು? ಇದರಿಂದ ತಿಳಿಯದ ಮಂದಿಗೆ ಇಲ್ಲದ ಸಂದೇಹಕ್ಕೆಲ್ಲ ಕಾರಣ.

ಮಂಗಲಕರ್.— ಮಾಡುವುದೇನು? ಬರೆಯಿಸಿ ಬರೆಯಿಸಿ ನನಗೆ ಅದೇ ಒಂದು ಅಭ್ಯಾಸವಾಯಿತು. ಒಬ್ಬರಿಗೊಂದು ಕಾಗದ ಬರೆಯುವುದಾದರೂ ಅದೇ ಗತಿ ನನಗೆ!

ಹೀಗೆಂದು ಮಂಗಲಕರರು ಮೇಜಿಯ ಮೇಲಿಂದ ಇನ್ನೊಂದು ಹಸ್ತಪ್ರತಿಯ ಪುಸ್ತಕವನ್ನು ತೆಗೆದು "ನೋಡು ಕೃಷ್ಣ! ಇದೂ ಹಾಗೆಯೇ ನಾನು ಬೇರೆ ಹುಡುಗರಿಂದ ಬರೆಯಿಸಿದ ಗ್ರಂಥ ಪ್ರಕಟ ಮಾಡಲಿಕ್ಕಾಗಿ ಕೊಟ್ಟಿರುತ್ತೇನೆ ಇದು ಕೂಡಾ ನಿನ್ನ ಅಣ್ಣನೇ ಬರೆದಿದ್ದೇನು?"

ಕೃಷ್ಣನು ಮುಂದೆ ಬಂದು ಅದನ್ನು ಬಿಡಿಸಿ ನೋಡಿದನು ಅದರ ಹೆಸರು "ಅಮೃತ ಭೋಜ" ಗ್ರಂಥಕರ್ತನು "ಕನ್ನಡ ಗೆಳೆಯ" ಅಕ್ಷರಗಳೆಲ್ಲಾ ಯಾರೋ ಹುಡುಗರ ಗುಂಡು ಗುಂಡಾದ ಬರೆಹ. ನೋಡಿ

ಕೆಳಗಿಟ್ಟು–" ಇರಬಹುದು ಸ್ವಾಮಿ. ಅಣ್ಣನ ಅಕ್ಷರಗಳಿರುವ ಈ ಎರಡು ಪುಸ್ತಕಗಳು ನನ್ನ ಬಳಿಯಲ್ಲಿದ್ದರೆ ಬಾಧಕವೇನು ?

ಮಂಗಲಕರ್:— ಬಾಧಕವಿಲ್ಲದೆ ಉಂಟೆ ? ಈಗ ಈ 'ಕಾರುಣ್ಯ ಮೂರ್ತಿ'ಯ ಮೂಲ ಪ್ರತಿ ನಿನ್ನ ಬಳಿಯಲ್ಲಿದ್ದುದರಿಂದ ನಿನ್ನನ್ನು ಭ್ರಾಂತಿಗೇಡು ಮಾಡಿಸಿತೋ ಇಲ್ಲವೊ ? ಅಲ್ಲವೇನಯ್ಯಾ—ರಾಘವ ರಾಯರೆ ?

ರಾಘವರಾಯರು:— ನಿಜ ನಿಜ. ಅವರವರ ಸ್ವಂತ ಗ್ರಂಥಕ್ಕೆ ಸಂಬಂಧಪಟ್ಟುದೆಲ್ಲಾ ಅವರವರ ವಶದಲ್ಲೇ ಇರಬೇಕು. ಕೊಟ್ಟು ಬಿಡಿರಿ ಕೃಷ್ಣರಾಯರೆ !

ಕೃಷ್ಣನು " ಸರಿ. ನೀವು ಕೊಟ್ಟದ್ದನ್ನು ನಿಮಗೆ ಕೊಡುತ್ತೇನೆ. " ಎಂದು ಮಂಗಲಕರರು ಕೊಟ್ಟಿದ್ದ ಎರಡನೆಯ ಪ್ರತಿಯನ್ನು ಮೇಜಿನ ಮೇಲಿಟ್ಟನು.

ಮಂಗಲಕರ್:— ಆ ಇನ್ನೊಂದೂ ಕೂಡಾ ನನಗೆ ಬೇಕು.

ಕೃಷ್ಣ:— ತಾವು ದಯಮಾಡಿ ನನ್ನನ್ನು ಕಾಡಬೇಡಿ. ಅಣ್ಣನ ಪೆಟ್ಟಿಗೆಯಲ್ಲಿದ್ದ ಈ ಗ್ರಂಥವು ಅಣ್ಣನ ಪೆಟ್ಟಿಗೆಯಲ್ಲೇ ಇರಗೊಡಿರಿ.

ಮಂಗಲಕರ್:— ನೀನು ಬಹಳ ಚಂಡಿಗಾರನಾಗಿರುತ್ತೀ! ಒಳ್ಳೆಯ ತನದಲ್ಲೇ ಅದನ್ನೂ ಕೊಟ್ಟು ಹೋಗು.

ಕೃಷ್ಣನು ದೃಢಭಾವದಿಂದ ನಿಂತನು. ಮುಖದಲ್ಲಿ ಕೋಪವು ತಲೆ ಹಾಕಿತು.

ರಾಘವರಾಯರು:— ಕೃಷ್ಣರಾಯರೆ ! ಇನ್ನೂ ಸಂಶಯ ಭ್ರಮಣೆ ಯಲ್ಲಿ ತೊಳಲಬೇಡಿ. ಈ ಮಂಗಲಕರರಂತಹ ದೊಡ್ಡ ಮನುಷ್ಯರೊಡನೆ ಸಭ್ಯತನಕ್ಕೆ ವಿರೋಧವಾಗಿ ವರ್ತಿಸುವುದು ಉಚಿತವಲ್ಲ. ಅವರ ಗ್ರಂಥ ವನ್ನು ಅವರಿಗೆ ಕೊಟ್ಟುಬಿಡುವುದು ಮೇಲು.

ಕೃಷ್ಣ:— ಗ್ರಂಥವು ಇವರದಲ್ಲವೆಂದು ನಾನೇನೂ ಸಾಧಿಸುವು ದಿಲ್ಲ. ನಾನು ಊರಿಂದ ಬರುವಾಗ ಸಂಗಡ ತಂದುದರಿಂದಲ್ಲವೇ ಕೊಡ ಬೇಕೆಂದು ಕೇಳುತ್ತೀರಿ ? ಇಲ್ಲದಿದ್ದರೆ ?

ಮಂಗಲಕರ್:— ಇಲ್ಲದಿದ್ದರೆ ಇಲ್ಲ! ಒಂದು ಕಳೆದು ಹೋಗಿ ಸಿಕ್ಕದಿದ್ದರೆ ಆಶೆ ಬಿಡುತ್ತಾರೆ. ಸಿಕ್ಕಿದರೆ ಬಿಡುತ್ತಾರೇನು?

"ಒಳ್ಳೆಯದು. ತಾವೇನು ಬೇಕಾದರೂ ಹೇಳಬಹುದು. ಈ ಗ್ರಂಥ ವನ್ನು ಮಾತ್ರ ನಾನು ಕೊಡಲಾರೆನು. ಬರುತ್ತೇನೆ–ನಮಸ್ಕಾರ." ಎನ್ನುತ್ತಾ ಕೃಷ್ಣನು ಸರಕ್ಕನೆ ಆ ಕೋಣೆಯಿಂದ ಹೊರಹೊರಟನು.

"ನಿಲ್–ನಿಲ್ಲು!" ಮಂಗಲಕರರು ಗಟ್ಟಿಯಾಗಿ ಹೇಳಿದರು.

"ಓಯ್! ಕೃಷ್ಣರಾಯರೆ! ನಿಲ್ಲಿನಿಲ್ಲಿ!" ಎಂದು ರಾಘವರಾಯರು ಕೂಗುತ್ತಾ ಎದ್ದು ಅವನ ಹಿಂದೆಯೆ ನಡೆದರು. ಅಷ್ಟರಲ್ಲಿ ಕೃಷ್ಣನು ಬೀದಿಗೆ ಇಳಿಯುತ್ತಿದ್ದನು.

ಗುಮಾಸ್ತನು ಕೂಗಿದನು:—"ಓಯ್! ರಾಯರೆ! ನಿಲ್ಲಿರಯ್ಯಾ!"

"ನಿಲ್ಲಿರಯ್ಯಾ! ಕೃಷ್ಣರಾಯರೆ! ನಿಲ್ಲಿಸಿರಿ ಅವರನ್ನು!" ಮತ್ತಾರೋ ಕೂಗಿದರು. ಕೃಷ್ಣನು ತಿರುಗಿ ನೋಡಿ—"ಯಾಕೆ ಹೀಗೆ ಬಲಾತ್ಕರಿಸು ತ್ತೀರಪ್ಪಾ!–ಈ ಅಲ್ಪ ಪುಸ್ತಕಕ್ಕಾಗಿ! ನಾನೇನು ಕಳ್ಳತನ ಮಾಡಿದೆನೆ?"

"ಸುಮ್ಮನೆ ಮಾತಾಡಬೇಡಿರಿ! ಆ ಪುಸ್ತಕವನ್ನು ಅವರಿಗೆ ಕೊಟ್ಟು ಹೋಗುತ್ತೀರೋ ಇಲ್ಲವೊ?" ರಾಘವರಾಯರು ದರ್ಪದಿಂದ ಕೇಳಿದರು.

"ದುಡುಕಬೇಡ ಕೃಷ್ಣಾ! ಇಲ್ಲಿ ಬಾ!" ಹೊರಗೆ ಬಂದು ಮಂಗಲ ಕರರು ಕರೆದರು.

ಮೆಟ್ಟಿಲಿನ ಬದಿಯಲ್ಲಿ ನಿಂತಿದ್ದ ಮಂಗಲಕರರನ್ನು ನೋಡಿ, ಬೀದಿ ಯಲ್ಲಿದ್ದ ಕೃಷ್ಣನು ಸಂತಪ್ತ ಸ್ವರದಿಂದ—"ಇದನ್ನೆಂದಿಗೂ ಕೊಡ ಲಾರೆ!" ಎಂದನು.

ಅವನ ಆ ಸ್ವರದಲ್ಲಿ ಜಡಿತವಾದ ದಾರ್ಢ್ಯವನ್ನು ಮನನ ಮಾಡಿ ಕೊಂಡರು ಮಂಗಲಕರರು. ಹೇಗಾದರೂ ಆ ಪುಸ್ತಕವನ್ನು ಪಡೆದು ಕೊಳ್ಳಲೇಬೇಕಿತ್ತು ಅವರಿಗೆ. ಏತತ್ಸಮಯದಲ್ಲಿ ಅಕಸ್ಮಾತ್ತಾಗಿ ಬೀದಿ ಯಲ್ಲೊಬ್ಬ ಕಾನ್ಸ್‌ಟೆಬಲ್ಲನು ಅವರ ಕಣ್ಣಿಗೆ ಬಿದ್ದನು. ಕೂಡಲೇ ಅವರು ಗಂಭೀರವಾಣಿಯಿಂದ "ಆ ಕಾನ್ಸ್‌ಟೆಬಲ್ಲನನ್ನು ಕರೆಯಿರಿ!" ಎಂದು ಕೂಗಿದರು.

"ಕಾನ್ಸ್‌ಟೆಬಲ್! ಕಾನ್ಸ್‌ಟೆಬಲ್!" ಗುಮಾಸ್ತನು ಕೂಗಿದನು.

ಒಡನೆ ಕಾನ್ಸ್ಟೆಬಲ್ ಅಲ್ಲಿಗೆ ಬಂದು "ಏನೆ"ಂದು ವಿಚಾರಿಸಿದನು.

ಮಂಗಲಕರರು ಅವನನ್ನು ಕುರಿತು—"ನನ್ನ ಪುಸ್ತಕವೊಂದು ಇವನ ಕೈಯಲ್ಲಿದೆ. ನ್ಯಾಯದಲ್ಲಿ ಕೇಳಿದರೆ 'ಕೊಡುವುದಿಲ್ಲ' ವೆಂದು ಕಾನೂನು ಮಾತಾಡುತ್ತಾನೆ —" ಎಂದರು ಕೃಷ್ಣನನ್ನು ನೋಡಿ,

"ಕೃಷ್ಣ! ಸುಮ್ಮನೆ ಕೇಸ್ ಮಾಡಿಸಿ ಕೆಡಬೇಡ. ಪುಸ್ತಕವನ್ನು ಇತ್ತ ಕೊಟ್ಟುಬಿಡು." ಎಂದರು.

"ಕೊಟ್ಟುಬಿಡಿ–ಕೊಟ್ಟುಬಿಡಿ" ಎಂದು ಕೆಲವು ಕಂಠಗಳು ಪ್ರಬೋಧಿಸಿದುವು.

"ಆಗುವುದಿಲ್ಲ. ಖಂಡಿತವಾಗಿಯೂ ನಾನು ಕೊಡಲಾರೆ" ಎಂದು ಪುಸ್ತಕವನ್ನು ಬಿಗಿಯಾಗಿ ಹಿಡಿದುಕೊಂಡು ಕೃಷ್ಣನೆಂದನು

"ಸರಿ, ಪೋಲೀಸ್! ಇವನನ್ನು ಸ್ಟೇಶನ್ನಿಗೆ ಕರಕೊಂಡು ನಡೆ. ನಾನೂ ಈಗಲೇ ಅಲ್ಲಿಗೆ ಬರುವೆನು" ಎಂದು ಆಜ್ಞಾಪಿಸಿದರು.

ಪೋಲೀಸಿನವನೂ ಕೃಷ್ಣನಿಗೆ--ಪುಸ್ತಕವನ್ನು ಕೊಟ್ಟುಬಿಡುವಂತೆ ಹೇಳಿನೋಡಿದನು.

"ಇದು ಇವರ ಪುಸ್ತಕವಲ್ಲ. ನಮ್ಮ ಪುಸ್ತಕ. ಅನ್ಯಾಯವಾಗಿ ನನ್ನನ್ನು ಸ್ಟೇಶನ್ನಿಗೆ ಕರೆದೊಯ್ಯುವಿಯಾದರೆ—ನಡೆ ಅಲ್ಲಿಗೇ! ಮೇಲಧಿಕಾರಿಗಳಿಗೂ ಈ ವೃತ್ತಾಂತವು ತಿಳಿಯಲಿ!" ಎಂದು ಹೇಳಿ ಕೃಷ್ಣನು ಪೋಲೀಸನ ಜತೆಯಲ್ಲಿ ಸ್ಟೇಶನ್ನಿಗೆ ನಡೆದನು.

---

## ೧೮. ಕೃಷ್ಣನ ಭ್ರಮೆ

ಪೋಲೀಸ್ ಸ್ಟೇಶನ್ನಿನ ವರೆಗೆ ಹೋಗುವಷ್ಟರ ಮಟ್ಟಿಗೆ ಈ ಪ್ರಕರಣವು ಬೆಳೆದೀತೆಂದು ಮಹಾಶಯ ಮಂಗಲಕರರು ಯೋಚನೆ ಮಾಡಲೇ ಇಲ್ಲ. ಕೃಷ್ಣನೂ ಯೋಚಿಸಿರಲಿಲ್ಲ ಪೋಲೀಸನನ್ನು ನೋಡುತ್ತಲೇ ಹಳ್ಳಿಯ ಕೃಷ್ಣನು ಹೆದರಿ ಹೋಗಿ ಪುಸ್ತಕವನ್ನು ಕೊಟ್ಟುಬಿಡುವನೆಂದು ಮಂಗಲಕರರು ನಂಬಿದ್ದರು. ಈಗ ಪೋಲೀಸ್ ಸ್ಟೇಶನ್ನಿಗೆ ಹೋಗಲೇ

ಬೇಕಾದುದನ್ನು ನೋಡಿ, ತನ್ನಂತಹ ದೊಡ್ಡ ಮನುಷ್ಯನಿಗೆ ಇದೊಂದು ಅವಮಾನವೆಂದೋ ಏನೋ—ಅವರ ಹೃದಯವು ಸ್ವಲ್ಪ ಅಳುಕಿಕೊಂಡಿತು. ಆದರೆ ಆ ಮೂಲಪ್ರತಿ ಅವರಿಗೆ ಅತೀ ಅಗತ್ಯವಾಗಿತ್ತು. ಕೃಷ್ಣನಾದರೋ—ಹಿಂಡಿಹಿಂಡಿದಂತೆ ಗಟ್ಟಿಗಟ್ಟಿಯಾಗಿ ತೋರುತಿದ್ದಾನೆ. ಈ ಪುಟ್ಟ ಪ್ರಕರಣವನ್ನು ದೊಡ್ಡ ಕೇಸಾಗಲೀಸದೆ, ಉಪಾಯದಿಂದ ಆ ಗ್ರಂಥವನ್ನು ಪಡೆಯಬೇಕೆಂದು ಒಳಗಿಂದ ಎಣಿಕೆ ಹಾಕುತ್ತ, ಬಾಯಿಯಿಂದ ರಾಘವರಾಯರೊಂದಿಗೆ ಮಾತಾಡುತ್ತ, ಮಂಗಲಕರರು ಕೃಷ್ಣನ ಹಿಂದೆಯೇ ಸಮೀಪದಲ್ಲಿದ್ದ ಪೋಲೀಸ್ ಠಾಣೆಯನ್ನು ತಲುಪಿದರು. ಆಗ ಸಂಜೆ ಐದೂವರೆ ಗಂಟೆ.

ಪೋಲೀಸ್ ಸಬ್ ಇನ್ಸ್‌ಪೆಕ್ಟರು ಸ್ಟೇಶನ್ನಿನಲ್ಲೇ ಇದ್ದರು. ಪೋಲೀಸನು ಕೃಷ್ಣನನ್ನು ಅವರಿದಿರು ನಿಲ್ಲಿಸಿ ಇನ್ಸ್‌ಪೆಕ್ಟರ್ ಸಾಹೇಬರಿಗೆ ಒಂದು ಶಲ್ಯೂಟ್ ಹೊಡೆದು ನಿಂತನು.

"ಹಲೋ! ಗುಡ್ಡಿವ್ನಿಂಗ್!" "ಗುಡ್ಡಿವ್ನಿಂಗ್" ಎಂದು ಹಸ್ತವನ್ನು ಫಾಲಕ್ಕೇರಿಸಿಕೊಂಡು, ಪರಿಚಯ ಸೂಚಕವಾದ ನಗೆಯೊಂದಿಗೆ ಮಂಗಲಕರರೂ, ರಾಘವರಾಯರೂ ಇನ್ಸ್‌ಪೆಕ್ಟರ್ ಸಾಹೇಬರ ಮುಂದ ಬಂದು ಅಲ್ಲಿಟ್ಟಿರಡು ಕುರ್ಚಿಗಳನ್ನು ತುಂಬಿಸಿಕೊಳ್ಳುತಿರುವಾಗ ಇನ್ಸ್‌ಪೆಕ್ಟರ್—"ಗುಡ್ಡೀವ್ನಿಂಗ್! ಗುಡ್ಡೀವ್ನಿಂಗ್— ಕೂಡಿ ಕೂಡಿ" ಎಂದು ಇದಿರಲ್ಲಿದ್ದ ಕೃಷ್ಣನನ್ನೂ ಅವರನ್ನೂ ನೋಡಿ,— "ಏನು ಸಂಗತಿ?" ಎಂದು ಪ್ರಶ್ನಿಸಿದರು

ಮಂಗಲಕರ್:— ಒಂದು ಪುಟ್ಟ ಸುಸಿಯಂತಹ ಕೇಸು. ನನ್ನದೊಂದು ಗ್ರಂಥವು ಈತನ ಕೈಯಲ್ಲಿದೆ. ಕೇಳಿದರೆ ಕೊಡುವುದಿಲ್ಲ. ಅಷ್ಟಕ್ಕಾಗಿ ಇಲ್ಲಿವರೆಗೆ ಬರಬೇಕಾಯಿತು.

"ಅದೇನು?—" ಇನ್ಸ್‌ಪೆಕ್ಟರು ಕೃಷ್ಣನನ್ನು ನೋಡಿ,— "ಏನಯ್ಯ? ಇವರ ಗ್ರಂಥವನ್ನು ನೀವು ಇಟ್ಟುಕೊಂಡು ಕೊಡುವುದಿಲ್ಲವೆಂದರೆ ಏನಯ್ಯಾ ಅರ್ಥ? ಇವರು ಯಾರು ಗೊತ್ತಿದೆಯಷ್ಟೆ?"

ಕೃಷ್ಣ:— ತಕ್ಕಮಟ್ಟಿಗೆ ಗೊತ್ತಿದೆ. ಆದರೆ ಈ ಹಳೇ ಪುಸ್ತಕಕ್ಕೂ ಇವರಿಗೂ ಎಷ್ಟು ಸಂಬಂಧವುಂಟು ಎಂದು ಈ ಮಹನೀಯರು ಹೇಳು

ತ್ತಾರೋ, ನನಗೂ ಅಷ್ಟೇ ಸಂಬಂಧವುಂಟು. ಕಾರಣ ಇದು ನನ್ನ ಅಣ್ಣನು ಬರೆದ ಗ್ರಂಥ. ಇದನ್ನು ಈಗ 'ಕನ್ನಡ ಗೆಳೆಯ' ಎಂಬ ಸಾಂಕೇತಿಕವಾದ ಕರ್ತೃತ್ವದಲ್ಲಿ 'ಕನ್ನಡ ಚಿತ್ರಮಾಲೆ'ಯಲ್ಲಿ ಪ್ರಕಾಶ ಪಡಿಸಿರುತ್ತಾರೆ ಈ ಮಂಗಲಕರ ಮಹಾಶಯರು ತಾವೇ 'ಕನ್ನಡ ಗೆಳೆಯ'ರೆಂದು ಹೇಳುತ್ತ, ಈ ಮೂಲ ಪುಸ್ತಕಕ್ಕಾಗಿ ಒತ್ತಾಯಪಡಿಸುತ್ತಾರೆ. ಅದು ಹೇಗಾದರೂ ಹೋಗಲಿ, ನನ್ನ ಅಣ್ಣನು ತನ್ನ ಪೆಟ್ಟಿಗೆಯಲ್ಲಿದ್ದ ಈ ಪುಸ್ತಕವನ್ನು, ಅವನನ್ನು ಕೇಳದೆ ನಾನು ಇನ್ನೊಬ್ಬರಿಗೆ ಕೊಡುವುದು ನ್ಯಾಯವೆ? ಇವರಿಗೆ ಈ ಪುಸ್ತಕವು ಅಷ್ಟೊಂದು ಅಗತ್ಯವಿದ್ದರೆ ನನ್ನ ಅಣ್ಣನನ್ನೆ ಕೇಳಿ ತೆಗೆದುಕೊಳ್ಳಬೇಕಲ್ಲವೆ?

ಇನ್ಸ್‌ಪೆಕ್ಟರ್:— ಎಲ್ಲಿದ್ದಾರೆ ನಿಮ್ಮ ಅಣ್ಣ?—

ಕೃಷ್ಣನು ಶೀನಣ್ಣನು ಕಾಣೆಯಾಗಿ ಹೋದ ಯಾವತ್ತೂ ವೃತ್ತಾಂತವನ್ನು ಸಂಕ್ಷೇಪವಾಗಿ ಹೇಳಿದನು.

ಮಂಗಲಕರರೂ, ಬಳ್ಳಾರಿಯಲ್ಲಿ ಶ್ರೀನಿವಾಸನ ಸಂಬಂಧದಿಂದ 'ಕಾರುಣ್ಯ ಮೂರ್ತಿ'ಯನ್ನು ಬರೆಯಿಸಿದ ಸಂಗತಿಯನ್ನೂ ಹೇಳಿದರು. ಇನ್ಸ್‌ಪೆಕ್ಟರು ಕೃಷ್ಣನ ಕೈಯಿಂದ ಆ ಮೂಲಪ್ರತಿಯನ್ನು ತಕ್ಕೊಂಡು ಬಿಡಿಸಿ ನೋಡುತ್ತ—"ಕೇಸು ಸಣ್ಣದಾಗಿ ತೋರಿದರೂ ಜಟಿಲವಾಗಿ ಕಾಣುತ್ತೆ. ಓಯ್! ಕೃಷ್ಣಯ್ಯ! ನಿಮ್ಮ ಅಣ್ಣನು ಅಡುಗೆಯ ಕೆಲಸದವನೆಂದು ಹೇಳುತ್ತೀರಿ. ಹೆಚ್ಚಿಗೆ ಕಲಿತ ಪಂಡಿತನೂ ಅಲ್ಲ, ಕವಿಯೂ ಅಲ್ಲ. ಈ 'ಕಾರುಣ್ಯ ಮೂರ್ತಿ' ಅಚ್ಚಾದುದನ್ನು ನಾನೂ ಓದಿದ್ದೇನೆ. ಅದು ಮಂಗಲಕರರಂತಹ ವಿದ್ವಾಂಸರಿಂದ ರಚಿತವಾದುದೆನ್ನಲು ಸಂದೇಹವೇ ಇಲ್ಲ.—"

ಅಷ್ಟರಲ್ಲಿ ರಾಘವರಾಯರಂದರು:—"ಅಲ್ಲದೆ ಇವರಿಂದ ರಚಿತವಾದ "ಅಮೃತ ಭೋಜ" ಎಂಬ ಗ್ರಂಥವನ್ನು ಈಗ ಪ್ರಿಂಟು ಮಾಡಿಸುತ್ತಿದ್ದೇವೆ. ಅದಾದರೂ ಇವರ ಸ್ವಂತ ಅಕ್ಷರಗಳೇನೂ ಅಲ್ಲ"

ಮಂಗಲಕರ್:— ಯಾವುದನ್ನಾದರೂ ಇನ್ನೊಬ್ಬರ ಮೂಲಕವಾಗಿ ಬರೆಯಿಸುವುದೇ ನನ್ನ ಅಭ್ಯಾಸವಾಗಿಹೋಯಿತು.

ಕೃಷ್ಣ:— ಆ ವಿಷಯದಲ್ಲಿ ಹೌದು, ಅಲ್ಲ ಎಂದು ಸಾಧಿಸಲು

ನಾನೇನೂ ಹೊರಟಿಲ್ಲ ಮುಖ್ಯವಾಗಿ ನನ್ನ ಅಣ್ಣನ ಪೆಟ್ಟಿಗೆಯಲ್ಲಿದ್ದ ಈ ಗ್ರಂಥವನ್ನು ಅಣ್ಣನೊಡನೆಯೇ ಕೇಳಿ ನೀವು ತಕ್ಕೊಳ್ಳಬೇಕು. ವ್ಯರ್ಥವಾಗಿ ನನ್ನನ್ನು ಪೀಡಿಸಬಾರದಾಗಿ ನನ್ನ ಪ್ರಾರ್ಥನೆ.

ಮಂಗಲಕರ್:—ನಿನ್ನ ಅಣ್ಣನು ಇಲ್ಲದಿರುವಾಗ, ಅಣ್ಣನ ಉತ್ತರಾಧಿಕಾರವು ನಮ್ಮನಿಗೆ ತಾನೇ ಬರುತ್ತೆ? ಅಂತೆಯೆ ನಿನ್ನೊಡನೆ ನಾನು ಕೇಳಬೇಕಾಯಿತು.

ಕೃಷ್ಣ:— ಅಣ್ಣನ ಉತ್ತರಕ್ರಿಯೆಯಾದ ಮೇಲಾಯಿತು—ನಮ್ಮನ ಉತ್ತರಾಧಿಕರ್ತೃತ್ವಕ್ಕೆ, ಈಗ ಅಣ್ಣನ ಪತ್ತೆಯಾಗಬೇಕಾಗಿದೆ ಅಷ್ಟೆ.

ಇನ್ಸ್ಪೆಕ್ಟರಿಗೆ ಕೃಷ್ಣನು ಹೇಳುವುದರಲ್ಲಿ ನ್ಯಾಯವಿದೆ. ಎಂದು ತೋರಿತು ಹಾಗೆಂದು ಘನಶಾಲಿಗಳಾದ ಮಂಗಲಕರರ ಮೇಲೆಯೂ ಅವಿಶ್ವಾಸವೆನಿಸಲಿಲ್ಲ. ಸುಹಾಘನವಂತರು ಕೀರ್ತಿದಾಯಕವಾದ ಗ್ರಂಥಕರ್ತೃತ್ವದಲ್ಲಿ ಘಾತವನ್ನೆಸಗಿಯಾರೆ? ಛೆ, ಹಾಗೆ ಸಂದೇಹಿಸಲಿಕ್ಕೇ ಕೂಡದು ಕೃಷ್ಣನ ಮಾತಿನಲ್ಲಿ ಆ ಬಗೆಯ ದುಃಸಂದೇಹದ ಪ್ರತಿಧ್ವನಿಯುಂಟಾಗುತಿತ್ತು. ಆದುದರಿಂದ ಇನ್ಸ್ಪೆಕ್ಟರು ಸದರ್ಪವಾಣಿಯಿಂದ ಕೃಷ್ಣನನ್ನು ಕುರಿತು—"ಓಃ! ನೀವಿನ್ನೂ ಚಿಕ್ಕವರು. ನಿಮಗೆ ಸ್ಥಳ-ಕಾಲ-ಸಂದರ್ಭ ಮೊದಲಾದ ಯುಕ್ತಾಯುಕ್ತ ವಿವೇಚನೆ ಕಡಮೆಯಿರುವಂತೆ ಕಾಣುತ್ತೆ: ಈ ಮಂಗಲಕರ ಮಹಾಶಯರೆಂದರೆ ಸುಪ್ರಸಿದ್ಧ ವಿದ್ಯಾಧಿಕಾರಿಗಳು! ಭಾಷಣಕರ್ತರು! ಗ್ರಂಥಕರ್ತರು! ಪರೋಪಕಾರಿಗಳು! ಸಭ್ಯರು! ಗೌರವಾರ್ಹರು! ನೀವು ಇವರ ಮೇಲೆ ಅವಿಶ್ವಾಸದಿಂದ ವರ್ತಿಸುತ್ತಿರುವಿರಿ ಇನ್ನೂ ಮುಂದೆ ನಡೆದರೆ, ನೀವು ಪ್ರಸಿದ್ಧ ಪುರುಷರ ಮಾನನಷ್ಟದ ಅಪರಾಧಕ್ಕೆ ಗುರಿಯಾಗಬೇಕಾದೀತು! ಆದುದರಿಂದ ನನ್ನ ಮಾತನ್ನು ಕೇಳಿ. ನಿಮಗಿಂತಲೂ ನಿಮ್ಮ ಅಣ್ಣನಿಗೇ ಇವರ ಪರಿಚಯವು ಚೆನ್ನಾಗಿರುವಂತೆ ಕಾಣುತ್ತದೆ ಏಕೆಂದರೆ, ಇವರ ಪರಿಚಯವು ಚೆನ್ನಾಗಿದ್ದವರು ಇವರ ಮೇಲೆ ಎಂದಿಗೂ ಅವಿಶ್ವಾಸಪಡಲಾರರು.'' ಎನ್ನುತ್ತಾ ತಮ್ಮ ಕೈಯಲ್ಲಿದ್ದ ಪುಸ್ತಕವನ್ನು ಮಂಗಲಕರರ ಮುಂದೆ ಇಟ್ಟರು.

"ಮನ್ನಿಸಬೇಕು, ಮನ್ನಿಸಬೇಕು! ನಾನು ಇವರ ಮೇಲೆ ಹಾಗೆ ನೂ

ಅವಿಶ್ವಾಸಪಡಲಿಲ್ಲ. ನನ್ನ ಅಣ್ಣನ ಜ್ಞಾಪಕಾರ್ಥವಾಗಿಯಾದರೂ ಈ ಪುಸ್ತಕವು ನನ್ನ ಕೈಯಲ್ಲೇ ಇರಬೇಕಾಗಿದೆ." ಎನ್ನುತ್ತಾ ಕೃಷ್ಣನು ಅದನ್ನು ಎತ್ತಿಕೊಳ್ಳಲು, ಮುಂದಡಿಯಿಟ್ಟನು.

"ನಾನು ಇಷ್ಟು ನಿಧಾನವಾಗಿ ಹೇಳಿದರೂ ನೀವು ಕೇಳುವುದಿಲ್ಲವೆ? ಸುಮ್ಮನೆ ಹಟ ಹಿಡಿದು ಕೆಡಬೇಡವಯ್ಯ!" ಇನ್ಸ್‌ಪೆಕ್ಟರರು ಕಣ್ಣು ತಿರುಗಿಸಿದರು.

ಕೃಷ್ಣ:— ಅಯ್ಯಾ, ನಾನು ಬಡವನು ಈ ಬೆಂಗಳೂರು ನನಗೆ ಪರಸ್ಥಳ. ಅಣ್ಣನನ್ನು ಶೋಧನೆ ಮಾಡಲಿಕ್ಕಾಗಿ ನಾನು ಬಂದು, ಹೀಗೆ ಸಿಕ್ಕಿಬಿದ್ದು ಬಿಟ್ಟೆ. ಇಂತಹ ನನ್ನ ನೊಂದ ಮನಸ್ಸನ್ನು ನೀವು ಇನ್ನಷ್ಟು ನೋಯಿಸಬಾರದು. ಘನಶಾಲಿಗಳೆಂದೂ ಸಾಮಾನ್ಯರೆಂದೂ ನ್ಯಾಯದಲ್ಲಿ ಪಕ್ಷಪಾತ ಮಾಡಬಾರದು. ಮುಖ್ಯ ಈ ಗ್ರಂಥದಲ್ಲಿ ಮಂಗಲಕರರ ಒಂದೇ ಒಂದು ಅಕ್ಷರವೂ ಇಲ್ಲ. ಹಾಗಂತ ಇವರ ರಚನೆಯಲ್ಲವೆಂದು ಸಾಧಿಸುವೆನೆಂದಲ್ಲ. ಬೇಕಾದರೆ ಇವರೇ ರಚಿಸಿದ್ದೆಂದೇ ಆಗಲಿ. ಆದರೆ ನನ್ನ ಪ್ರೀತಿಯ ಅಣ್ಣನು ತನ್ನ ಕೈಮುಟ್ಟಿ ಬರೆದುದನ್ನು ಅವನ ಅನುಮತಿಯಿಲ್ಲದೆ ನಾನೆಂದಿಗೂ ಕೊಡಲಾರೆನು.

ಇನ್ಸ್‌ಪೆಕ್ಟರ್:— ಹೋಗಲಿ ಮಂಗಲಕರರೆ, ಈ ಗ್ರಂಥವೀಗ ಪ್ರಿಂಟಾಯ್ತು—ಪ್ರಕಟವಾಯ್ತು—ಎಲ್ಲಾ ಆಯಿತಲ್ಲ ಆದ್ದರಿಂದ ನನ್ನ ಮಾತು ಕೇಳಿ, ನಿಮಗೂ ಸಂದೇಹ ಬೇಡ, ಇವರಿಗೂ ಸಂದೇಹ ಬೇಡ. ಈ ಪುಸ್ತಕವು ಈ ಸ್ಟೇಶನ್ನಿನಲ್ಲಿಯೇ ಇರಲಿ. ಆಗದೆ?

"ಬೇಡ ಬೇಡ. ಪಾಪ! ಇವನ ಹಟವನ್ನು ನೋಡಿದರೆ, ತಾಯಿಯ ಕೈಯಿಂದ ಮಗುವನ್ನು ಅಗಲಿಸುವ ಹಾಗಿದೆ! ಅವರವರ ಗ್ರಂಥಕ್ಕೆ ಸಂಬಂಧಪಟ್ಟದ್ದು ಅವರವರ ಬಳಿಯಲ್ಲಿರಲೀ ಎಂದು ನಾನು ಇಷ್ಟು ದೂರ ಕೇಳಿದ್ದು. ಆಯಿತು. ಇದರಿಂದ ನನಗೇನೂ ಮುಳುಗಿಹೋಗುವುದಿಲ್ಲ. ತಕ್ಕೊ ಕೃಷ್ಣ! ಮೊದಲೇ ಭ್ರಾತೃವಿಯೋಗದಿಂದ ಪರಿತಪಿಸುತ್ತಿರುವ ನೀನು, ಈ ಹಾಳು ಪುಸ್ತಕದ ವಿಯೋಗದಿಂದ ಸಂತಪ್ತನಾಗಬೇಡಪ್ಪ. ಇಗೊ--ತಕ್ಕೋ." ಮಂಗಲಕರರು ಪುಸ್ತಕವನ್ನು ಕೃಷ್ಣನ ಕಡೆಗೆ ಸರಿಸಿದರು.

ರಾಘವರಾಯರು:— ಅಷ್ಟೇ ಸರಿ. ಹೋಗಲಿ ಪಾಪ!

"ತಮ್ಮ ಔದಾರ್ಯವನ್ನು ನೋಡಿ ತುಂಬಾ ಸಂತೋಷ ವಾಯಿತು.'' ಕೃಷ್ಣನು ಆ ಪುಸ್ತಕವನ್ನು ಎತ್ತಿಕೊಂಡನು.

ತರುವಾಯ ವಂದನೆ-ಪ್ರತಿವಂದನೆಗಳಾದ ಮೇಲೆ ಮಂಗಲಕರ ಮೊದಲಾದವರು ಎದ್ದು ಹೊರಟರು. ಕೃಷ್ಣನೂ ಹೊರಟುಹೋದನು ಅವನು ಹೋಗುವುದನ್ನೆ ಓರೆಗಣ್ಣಿನಿಂದ ನೋಡುತ್ತಿದ್ದ ಮಂಗಲಕರರು, ರಾಘವರಾಯರನ್ನು ಕುರಿತು—'' ನನಗೆ ಸ್ವಲ್ಪ ಬೇರೆ ಕೆಲಸವುಂಟು. ಹಾಗೆಯೇ ನಾಳೆ ಮುಂಜಾನೆಯ ರೈಲಿನಲ್ಲಿ ನಾನು ಹೋಗುತ್ತೇನೆ. 'ಅಮೃತ ಭೋಜ'ದ ವಿಚಾರವೆಲ್ಲ ಪತ್ರಮೂಲಕ " ಎಂದು ಹೇಳಿ ಅನುಜ್ಞೆಪಡೆದು ಹೊರಟರು.

ಆಗ ಹೊತ್ತು ಮುಳುಗಿಹೋಗಿತ್ತು. ಕತ್ತಲೆಯ ಸಾಮ್ರಾಜ್ಯದಲ್ಲಿ ಬೆಳಕಿನ ರಾಜಧಾನಿಯಂತೆ ಬೆಂಗಳೂರು ನಗರವು ವಿದ್ಯುದ್ದೀಪಗಳಿಂದ ರಾರಾಜಿಸುತ್ತಿತ್ತು ಕೃಷ್ಣನು ಇಳಿದುಕೊಂಡ ಹೋಟಲಿಗೆ ಅಲ್ಲಿಂದ ಒಂದು ಮೈಲು ಮಾತ್ರ ಅವನು ನಡೆದೇ ಹೋಗುವುದೆಂಬ ಉದ್ದೇಶ ದಿಂದ ನಡೆಯುತ್ತಿದ್ದನು. ಅವನ ಮೇಲೆ ಕಣ್ಣಿಟ್ಟುಕೊಂಡೇ ಇದ್ದ ಮಂಗಲಕರರು, ಅವನನ್ನು ಅನುಸರಿಸಿಕೊಂಡೇ ನಡೆಯುತ್ತಿದ್ದರು. ಆ ಮಹಾನುಭಾವರ ಮನಸ್ಸಿನಲ್ಲಿ ಏನಾದರೂ ದುರ್ವಿಚಾರಗಳಿರಬಹುದೆ ? ಸಂದೇಹವೇನು ? 'ಕಾರುಣ್ಯ ಮೂರ್ತಿಯು' ಆ ಮೂಲಪ್ರತಿಯನ್ನು ಹೇಗಾದರೂ ಕಸಿದುಕೊಳ್ಳಬೇಕೆಂದೇ ಹೊಂಚು ಹಾಕುತಿದ್ದರು. ಪೋಲೀಸ್ ಸ್ಟೇಶನ್ನಿನಲ್ಲಿ ಆ ಪುಸ್ತಕವು ಖಂಡಿತವಾಗಿ ಸಿಕ್ಕುವುದೆಂದು ನಂಬಿದ್ದರು ಆದರೆ ಕೃಷ್ಣನ ದೃಢತ್ವದ ಮುಂದೆ ಅವರ ನಂಬುಗೆ ಸಡಿಲಿಯೇ ಹೋಯಿತು. ಆ ಗ್ರಂಥವು ಅವನಿಗೂ ಇಲ್ಲದೆ ಅವರಿಗೂ ಇಲ್ಲದೆ, ಪೋಲೀಸ್ ಸ್ಟೇಶನ್ನಿನಲ್ಲಿಯೇ ನಿಂತುಹೋಗುವಂತಹ ಮಧ್ಯಮ ನ್ಯಾಯ ವನ್ನು ಕೇಳಿ, ಅವರ ಮನಸ್ಸಿಗೇನೋ ಚೇಳು ಕುಟುಕಿದ ಹಾಗಾಗಿರ ಬೇಕು; ಅದೇನೊ ಭವಿಷ್ಯದ ಅಪಾಯ ಸೂಚನೆಯಾಗಿ ತೋರಿರಬೇಕು ಅಂತೆಯೆ ಅವರು ಆ ಸಭ್ಯರ ಇದಿರಿನಲ್ಲಿ ಆ ಗ್ರಂಥವನ್ನು ಅವನಿಗೆ ತಿರುಗಿ ಕೊಟ್ಟು ಉದಾರತ್ವದ ದೊಡ್ಡ ಗುಣವನ್ನು ಪ್ರದರ್ಶನ ಮಾಡಿಬಿಟ್ಟಿದ್ದರು.

ಆ ಗ್ರಂಥವನ್ನು ಸ್ವಾಧೀನಮಾಡಿಕೊಳ್ಳದಿದ್ದರೆ ಅವರಿಗೆ ಸಿದ್ಧಿ ಯಾವುದೂ ಬರಲಾರದೆಂದು ತೋರುತ್ತದೆ.

ಒಂದು ದೊಡ್ಡ ಹೋಟಲಿನ ಬದಿಯನ್ನು ಹಾದುಕೊಂಡು ಕೃಷ್ಣನು ಮುಂದೆ ಹೋಗಲು ಆ ಹೋಟಲಿನ ಮೆಟ್ಟಿಲಿನ ಬದಿಯಲ್ಲಿ ಒಬ್ಬ ಪೋಲಿ ಹುಡುಗನು ನಿಂತಿದ್ದನು. ಮಂಗಲಕರರು ಅವನ ಬಳಿಗೆ ಹೋಗಿ—"ಲೋ! ಇಲ್ಲಿ ಬಾರೋ!" ಎಂದು ಕರೆದರು.

ಮಂಗಲಕರರ ಸ್ವಂಪವಾಂಗ್ಲ ಸಂಬಂಧವುಳ್ಳ ಸೂಟು-ರುಮಾಲು ಗಳ ಘನಭೂಷಣಕ್ಕೆ ಬಗ್ಗಿ ಆ ಪೋಲಿ ಮುಂದೋಡಿ ಬಂದು—"ಏನು ಸಾರ್?" ಎಂದು ಭಯವಿನಯದಿಂದ ಕೈಜೋಡಿಸಿಕೊಂಡು ನಿಂತನು.

ಮಂಗಲಕರರು ಮುಂದೆ ಹೋಗುತ್ತಿದ್ದ ಕೃಷ್ಣನ ಕಡೆಗೆ ಬೆರಳು ನೀಡಿ, "ಅಗೋ ನೋಡು! ಪಟ್ಟೆ ಪಂಚೆಯನ್ನುಟ್ಟುಕೊಂಡು, ಕಂದು ಬಣ್ಣದ ಕೋಟು ಹಾಕಿಕೊಂಡು, ಕೈಯಲ್ಲೊಂದು ಪುಸ್ತಕವನ್ನು ಹಿಡಿದು ಕೊಂಡು ಹೋಗುತ್ತಿದ್ದಾನಲ್ಲ?—ಅಗೋ! ಆ ದೀಪದ ಕಂಬದ ಬುಡಕ್ಕೆ ಮುಟ್ಟಿದನು ನೋಡು—"

"ಹಾ! ಹಾ!"

"ನಿನಗೆ ಒಂದು ರೂಪಾಯಿ ಕೊಡುತ್ತೇನೆ. ನೀನು ಅವನ ಹಿಂದೆಯೇ ಹೋಗಿ ಅವನ ಕೈಯಲ್ಲಿರುವ ಆ ಪುಸ್ತಕವನ್ನು—ಅದೇ ಪುಸ್ತಕವಾಗಬೇಕು—ಅವನಿಗೆ ತಿಳಿಯದ ಹಾಗೆ ತೆಗೆದುಕೊಂಡು ಬಂದು ನನಗೆ ಕೊಡಬೇಕು. ಅವನು ಯಾವುದಾದರೊಂದು ಹೋಟಲಿಗೆ ಹೋಗ ಬಹುದಾಗಿದೆ. ನಾನು ಇದೇ ಹೋಟೆಲಿನಲ್ಲಿ ನಂಬರ್ ಎರಡನೇ ರೂಮಿನಲ್ಲಿರುತ್ತೇನೆ. ಎಷ್ಟು ರಾತ್ರಿಯಾದರೂ ಸರಿ. ಬಿಡಬಾರದು! ಇಕೊ, ಈ ಎಂಟಾಣೆ ಈಗ ಹಿಡಿ."

"ಅಚ್ಛಾ ಸರ್! ಇನ್ನೊಂದು ಗಂಟೆಯೊಳಗೆ ನಾನು ತರದಿದ್ದರೆ ನೋಡಿ." ಎಂದವನೇ, ಆ ಪೋಲಿ ಎಂಟಾಣೆಯನ್ನು ಪಡೆದುಕೊಂಡು ಸರ್ರನೆ ಕೃಷ್ಣನ ಬೆಂಗಡೆಗೋಡಿದನು.

"ಅಂತೂ ಅಣ್ಣನ ಪತ್ತೆ ಹತ್ತುವುದೇನೋ ಎಂದು ಈ ಬೆಂಗಳೂ ರಿಗೆ ಬಂದುದು ವ್ಯರ್ಥವಾಯಿತು. ಬದಲಾಗಿ ಇನ್ನೊಂದು ಭ್ರಮೆಯೇ

ಉಂಟುಮಾಡಿತು. ಈ ಸಂಗೀತಕರಿಗೂ ನನ್ನ ಅಣ್ಣನಿಗೂ ಪರಿಚಯ ವುಂಟೆನ್ನಲಿಕ್ಕೆ ಏನೂ ಸಂದೇಹವಿಲ್ಲ. ಅವರ ಕೈಯಲ್ಲಿ ಕೂಡಾ. ಅಣ್ಣನೇ ಬರೆದ 'ಕಾರುಣ್ಯ ಮೂರ್ತಿ'ಯ ಪ್ರತಿಯೊಂದು ಉಂಟಲ್ಲ? ಒಂದು ವೇಳೆ ಈ ಘನಸಂಗೀತಗಾರರು ಅಣ್ಣನಿಗೇನಾದರೂ ಮೋಸ ಮಾಡಿರಬಹುದೆ? ಇವರ ಮಾತನ್ನೆಲ್ಲಾ ನಾನು ನಂಬಬಹುದೇ? ಯಾವುದೂ ಅಣ್ಣನನ್ನು ಕಂಡು ಮಾತಾಡದೆ ನಿರ್ಣಯಿಸಲಾಗುವುದಿಲ್ಲ. ಅಂತೂ ಈ ಪುಸ್ತಕವು ನನ್ನ ಕೈಯಲ್ಲಿ ಉಳಿದದ್ದು ಮಹದ್ಭಾಗ್ಯವು. ಈ ಪುಸ್ತಕಕ್ಕಾಗಿ ಆ ಮಹಾಶಯರು ಪಟ್ಟ ಸಾಹಸವನ್ನು ನೋಡಿದರೆ ಇದರಲ್ಲೇನೋ ವಿಶೇಷ ವಿರಲೇಬೇಕು. ಅವರು ಒತ್ತಾಯ ಮಾಡಿದಷ್ಟು ನನ್ನ ಸಂದೇಹವು ದೃಢವೇ ಆಯಿತು. ಸಂದೇಹವೆಂದರೆ—ಏನೇನೋ!—" ಹೀಗೆ ಯೋಚನೆಯಲ್ಲಿ ಲೀನನಾಗಿ ಕೃಷ್ಣನು ನಡೆನಡೆಯುತ್ತ ಒಂದು ಪ್ರಚಂಡವಾದ ಸಿನಿಮಾ ಮಂದಿರದ ಇದಿರಿಗೆ ಬಂದನು.

ಪುಷ್ಪಾಲಂಕಾರವಾದ ನಾನಾ ಸುವರ್ಣರಂಜಿತ ಬಲ್ಬುಗಳಿಂದೊಪ್ಪುವ ದೀಪಗಳ ಕಾಂತಿಯಿಂದ ವಿಚಿತ್ರ ಪ್ರಕಾಶಮಾನವಾಗಿತ್ತು—ಆ ಸಿನಿಮಾ ಮಂದಿರ. ಪ್ರಥಮ ಪ್ರದರ್ಶನವು ಒಳಗೆ ಪ್ರಾರಂಭವಾಗಿತ್ತು. ಆದರೆ ಗೇಟಿನ ಬದಿಯಲ್ಲಿ ಅನೇಕ ಮಂದಿ ಗುಂಪುಗುಂಪಾಗಿ ಕೂಡಿ ಏನೋ ಒಂದು ಚಿತ್ರವನ್ನು ನೋಡುತ್ತಿದ್ದರು. ಅದೇನು? ಅತ್ತಿತ್ತ ಅನೇಕ ಸುವರ್ಣರಂಜಿತ ದೀಪ ಪ್ರಕಾಶಕವಾದ ಅನೇಕ ಚಿತ್ರಪಟಗಳಿದ್ದರೂ ಅವುಗಳನ್ನು ಗಮನಿಸದೆ ಆ ಒಂದು ಚಿತ್ರವನ್ನೇ ನೋಡಲು, ಮಂದಿ ಮುಂದರಿಯುತ್ತಿದ್ದರು! ನೋಡಿದವರು ಮತ್ತೊಮ್ಮೆ ನೋಡುತ್ತಿದ್ದರು. ನೋಡಿ ಹೋಗುವವರು ಬಾಯಿಯಿಂದ ವರ್ಣಿಸಿಕೊಂಡು ಹೋಗುತ್ತಿದ್ದರು "ಇದೇನು ರೂಪವೋ ಅಬ್ಬ!" ಎಂದನೊಬ್ಬ. "ಆ ಹೆಂಗಸು ಇರುವುದೇ ಹಾಗೆ! ಮೇಕಪ್ ಏನೂ ಮಾಡಿಲ್ಲವಂತೆ! ಹಾಗೇ ಫಿಲಿಂ ಹಿಡಿದ್ದಾರೋಯ್!" ಎಂದನು ಇನ್ನೊಬ್ಬ. "ಅವಳ ನಾಟ್ಯಕ್ಕೇ ಕೊಡಬೇಕಂತಯ್ಯಾ ನೂರು!" ಎಂದನು ಮತ್ತೊಬ್ಬ. "ಮದರಾಸಿನಲ್ಲಿ ಮೆಡಲ್ ಹೊಡೆದಿದ್ದಾಳಂತೆ ಪೈಶಾಚ ನಾಟ್ಯದಲ್ಲಿ!" ಎಂದನು ಮಗದೊಬ್ಬ. "...... .. . .. ." ಮುಖ್ಯವಾಗಿ ನಾಳೆನಿಂದ ಆ ಹೊಸ

ಫಿಲಿಂ ಆ ಭವ್ಯ ಮಂದಿರದಲ್ಲಿ ಪ್ರಾರಂಭವಾಗುವುದಂತೆ! ಇಂದು ಅದರ ಪ್ರಸಿದ್ಧ ಚಿತ್ರಪಟವನ್ನು ಮಾತ್ರ ಮುನ್ನರಿಕೆಯಾಗಿ ಇಟ್ಟಿದ್ದಾರೆ!

ಇಂತಹ ಜನಾಕರ್ಷಕನಾದ ಆ ಪ್ರಸಿದ್ಧ ಚಿತ್ರವನ್ನು ನೋಡಿಯಾದರೂ ಬಿಡೋಣವೆಂದು ಕೃಷ್ಣನು ಆ ಗುಂಪಿನೊಳಗೆ ನುಸುಳಿದನು. ಗುಂಪೆಂದರೆ ಟಿಕೇಟು ಖಿಂಡಿಯ ಬಳಿಯ ಟಿಕೇಟು ಚಲನಕಾಲದ ನುಗ್ಗುಸುರಿಯಾಗುವ ಬಲ್ಲೆಯಂತಹ ಗುಂಪಲ್ಲ ಸ್ವಲ್ಪ ಸಂದಿರುವ ಸಾದಾ ಗುಂಪು. ಕೃಷ್ಣನು ಹೊಕ್ಕು ನೋಡಿದ್ದೇ ನೋಡಿದ್ದು,— "ಹ! ಸುಂದರಿ!" ಎಂಬ ಉದ್ಗಾರವು ತಟಕ್ಕನೆ ಅವನ ಬಾಯಿಯಿಂದ ಹೊರಬಿತ್ತು. ಹಾಗೆಯೆ—ಚಿತ್ರದ ಗೊಂಬೆಯ ಹಾಗೆಯೆ ಒಂದು ನಿಮಿಷ ಸ್ತಬ್ಧನಾಗಿ ನಿಂತನು ಸಮೀಪಸ್ಥರು ಅವನ ಸ್ಥಿತಿಯನ್ನು ನೋಡಿ ಬೆರಗಾದರು

ಇದಿರಲ್ಲಿರುವ ಚಿತ್ರಪಟದಲ್ಲಿ ಅದ್ಭುತ ಸೌಂದರ್ಯ ನಿಧಿಯಾದ ಹೆಂಗುಸೊಬ್ಬಳು ನಾಟ್ಯಭಂಗಿಯಲ್ಲಿ ನಿಂತಿದ್ದಳು ಭೂಷಗಳು ಪುರಾಣಕಾಲದ ಅಸುರನಟಿಗೆ ಒಪ್ಪುವಂತಹವು ದೇಹವು ಸ್ಥೂಲ! ಮುಖವು ವಿಕಾರ! ಜನ್ಮತಃ ವಿಕೃತವಾದ ಆಕೃತಿ! ದೊಡ್ಡ ಮುಖ! ಗಿಡ್ಡ ಕೊರಳು, ಸಣ್ಣ ಸಣ್ಣ ಕಣ್ಣುಗಳು, ಚಪ್ಪಟಿ ಮೂಗು, ಓರೆಬಾಯಿ, ದಪ್ಪಸೊಂಟ—ಕಾಳವರ್ಣ. ಹೆಚ್ಚೇನು ಹಲವೇನು? ಶೀನುವಿನ ಹೆಂಡತಿಯಾದ ಸುಂದರಿಯೇ ನಾಟ್ಯಭಂಗಿಯಲ್ಲಿ ನಿಂತಿದ್ದಾಳೆ—ಏನೂ ಸಂಶಯವಿಲ್ಲ!

ನೋಡುತ್ತಾ ಕೃಷ್ಣನು ತನ್ನ ಕಣ್ಣನ್ನೆ ನಂಬದೆ ಹೋದನು. ಮತ್ತೂ ನೋಡಿದನು. ಬಣ್ಣಬಣ್ಣದ ಉಡಿಗೆ ತೊಡಿಗೆಗಳನ್ನು ಧರಿಸಿಕೊಂಡು ವಿಚಿತ್ರವಾದ ಮಣಿಮಾಲೆಗಳನ್ನು ಹಾಕಿಕೊಂಡು ಫಿಲಿಂನಲ್ಲಿ ನರ್ತಿಸುತಿದ್ದಾಳೆ, ಅವನ ಅತ್ತಿಗೆ ಸುಂದರಿ. ಯಾವ ಅತ್ತಿಗೆಯನ್ನು ನೋಡಿದರ ಅವನಿಗೆ ಸೇರುತಿದ್ದಿಲ್ಲವೋ ಆ ಅತ್ತಿಗೆಯ ಅದ್ಭುತ ಸೌಂದರ್ಯವನ್ನು ನೋಡಲು ಜನರು ಮುಗಿಬೀಳುತಿದ್ದಾರಲ್ಲ! ತನ್ನ ಅತ್ತಿಗೆಯೋ—ಅಥವಾ ಬೇರೆಯಾರಾದರೂ ಹೆಂಗುಸೋ?—ಸಂಶಯವೇ ಇಲ್ಲ! ಅದೇ ಗುಳ್ಳೆ-ಹಣೆಯ ಅತ್ತಿಗೆಯ ಮುಖ! ಕಾಲಲ್ಲಿ ದೊಡ್ಡ ದೊಡ್ಡ ಗಗ್ಗರಗಳನ್ನು ಕಟ್ಟಿಕೊಂಡಿದ್ದಾಳೆ!

ಆ ಪ್ರಸಿದ್ಧ ಚಿತ್ರದಲ್ಲಿ ಬರೆದಿರುವ ದೊಡ್ಡ ದೊಡ್ಡ ಅಕ್ಷರಗಳನ್ನು ಓದಿದನು:—

"ಪ್ರಕೃತಿ ಕಲೋದ್ಧಾರಕ ಮಂಡಲಿ"

'ಅಶೋಕವನ.'

ವಿಕೃತ ಪ್ರಕೃತಿಕಳಾ ವಿಶಾರದೆ-ವಿಲಕ್ಷಣ ನಾಟ್ಯಗಾನ ನಿಪುಣೆ-ಸುಂದರೀಬಾಯಿ

ಇವಳ ಪ್ರತ್ಯೇಕವಾದ ರಾಕ್ಷಸ ಪೈಶಾಚ ನರ್ತನ!

ಡೈರೆಕ್ಷನ್:— ಬಿ ಟಿ. ಮುಖರ್ಜಿ.''

ಸುಂದರೀಬಾಯಿಯ ಬಿರುದಿನ ಮಾಲಿಕೆಯನ್ನು ನೋಡಿ ಕೃಷ್ಣನು ದಂಗುಬಡೆದುದರಲ್ಲಿ ಏನಾಶ್ಚರ್ಯ?

ಅವನು ಹಾಗೆ ಮಹದಾಶ್ಚರ್ಯದಲ್ಲಿ ಮುಳುಗಿದ್ದಾಗ, ಇಳಿಬಿಟ್ಟ ಎಡಗೈಯಲ್ಲಿ ಸಡಿಲಾಗಿ ಹಿಡಿದಿದ್ದ ಪುಸ್ತಕವು, ಸರಕ್ಕನೆ ಜಾರಿಕೊಂಡು ಹೋಯಿತು! ಯಾರದೋ ಕೈವಾಡದಿಂದಲೇ ಜಾರಿತೆಂದು ಮರುಕ್ಷಣವೇ ಕೃಷ್ಣನು ಅರಿತು ತಟಕ್ಕನೆ ತಿರುಗಿ ನೋಡಿ—"ಅರೆ, ನನ್ನ ಪುಸ್ತಕ! ಕಳ್ಳ! ಕಳ್ಳ! ಹಿಡಿಯಿರಿ! ಹಿಡಿಯಿರಿ!—" ಎಂದು ಕೂಗುತ್ತಾ ಗಡಿಬಿಡಿಯಿಂದ ಗುಂಪನ್ನು ಬಿಡು ಹೊರಗೆ ಬಂದನು. "ಸಣ್ಣ ಪೋರ!" "ಇತ್ತ ಓಡಿದ!" "ಅತ್ತ ಓಡಿದ!" "—" ಎಂದು ಯಾರು ಯಾರೋ ಏನೇನೋ ಕೂಗಿದರು! ಇತ್ತಲೂ ಇಲ್ಲ, ಅತ್ತಲೂ ಇಲ್ಲ! ಪುಸ್ತಕವನ್ನು ಅಪಹರಿಸಿದ ಆ ಪೋಲಿ ಹಲವಾರು ಜನರ ಗುಂಪಿನೆಡೆಯಲ್ಲಿ ಸುಸುಳಿ ಕತ್ತಲೆಗೆ ಧುಮುಕಿ ಮಿಂಚಿನಂತೆ ಮಾಯವಾಗಿ ಹೋಗಿದ್ದನು.

ಕೃಷ್ಣನು ಬಿಸಿಯಲ್ಲಿ ಬಿದ್ದ ಹುಳದ ಹಾಗೆ ತುಡಿಸುತ್ತ ಹತಾಶನಾಗಿ ಬೀದಿಯ ಬದಿಯ ಒಂದು ಜಗುಲಿಯಲ್ಲಿ ಕುಳಿತನು. "ಎಂತಹ ಮೋಸವಿದು! ಎಂತಹ ಘಾತವಿದು! ಇದು ಆತನ ಕೆಲಸವೇ ಸರಿ! ಎಲಾ!—ಆ ಮಂಗಲಕರ-ಎಂತಾ ಲವಡೀ ಗಂಡ!-ಹೀಗೆ ಬೆನ್ನು ಹತ್ತಿಯಾನೆಂದು ತಿಳಿಯದೆ ಹೋಯಿತು! ಏನು ಮಾಡಲಿ ಇನ್ನು ಅವನನ್ನು! ಎಲ್ಲಿ ಹುಡುಕಲಿ? 'ಕನ್ನಡ ಚಿತ್ರಮಾಲೆ' ಯ ಆಫೀಸಿನಲ್ಲಿ ಇದ್ದಾನೊ! ಇರಲಿಕ್ಕಿಲ್ಲ ಕಳ್ಳ! ಅಷ್ಟು ಮೂಢನೆ ಅವನು? ಹೋಗಿ ಆ ಇನ್ಸ್‌ಪೆಕ್ಟರ್ ಸಾಹೇಬನೊಡನೆ ದೂರಿಸಿಕೊಳ್ಳಲೇ? ಅವನೇನು ಮಾಡಿಯಾನು? 'ನೀನೇ

ಎಲ್ಲೋ ಬಿಸಾಡಿದಿ' ಎಂದಾನು ನೇರಾಗಿ ಬಳ್ಳಾರಿಗೆ ಹೋಗಿ--ಆ ಮಂಗಲಕರರನ್ನೆ ಹುಡುಕಿ ಚಂದಿಹಿಡಿದೆಳೆಯುವೆನು!— ಆದರೆ — ಹಾಗೆಲ್ಲಾ ದುಡುಕಿದರೆ ನಾನೇ ಸಂಕಟದಲ್ಲಿ ಸಿಕ್ಕಿಯೇನು! ಅವನೋ ಸಾಮಾನ್ಯನಂತೆ ಕಾಣುವುದಿಲ್ಲ --ನನ್ನ ಅಣ್ಣನಿಗೂ ಅವನಿಗೂ–ಎಂಥ ಸಂಬಂಧವೋ! ಮಿತ್ರಸಂಬಂಧವೋ-ಶತ್ರುಸಂಬಂಧವೋ!— ರಜಾ ಜೋಯಿಸನು, ಅಣ್ಣನು ಹೆಂಡತಿ ಸುಂದರಿಯೊಂದಿಗೆ ಬೊಂಬಾಯಿಗೆ ಹೋದನೆಂದು ಹೇಳಿದ್ದಾನೆ!—ಸುಂದರಿ ಈಗ ಮದರಾಸಿನ ಫಿಲಿಂನಲ್ಲಿ ಕಾಣುತಿದ್ದಾಳೆ! ಅಣ್ಣನೂ ಅವಳೊಂದಿಗೆ ಫಿಲಿಂಕಂಪೆನಿಯಲ್ಲಿದ್ದಾನೊ? ಈ 'ಅಶೋಕವನ' ದಲ್ಲಿ ಸುಂದರಿಯೊಂದಿಗೆ ಅಣ್ಣನೂ ನಟನಾಗಿದ್ದಾನೊ?–ನಾಳೆ–ಈ 'ಅಶೋಕವನ' ಚಿತ್ರವನ್ನೆ ನೋಡಿದರೆ ಗೊತ್ತಾಗುತ್ತೆ.—'' ಯೋಚನೆಗಳು ಜೋರಾಗಿ ಓಡಲಾರಂಭಿಸಿದುವು. ಪುಸ್ತಕ ಕಳೆದುಕೊಂಡ ಸಂತಾಪ ಬೇರೆ! ಮೇಲೆ ಮೇಲೆ ಭ್ರಮಾತರಂಗಗಳೇ ಎದ್ದೆದ್ದು ಬರುತ್ತಿವೆ!–ಪಾಪ! ಇನ್ನು ಆ ಕೃಷ್ಣನು ಏನು ಮಾಡುವನೊ!–

---

## ೧೯. ಮಂಗಲಕರರ ಹೆಂಡತಿ

ಕಾರುಣ್ಯ ಮೂರ್ತಿಯು ಮೂಲಸ್ಮೃತಿ ಮಂಗಲಕರರ ಕೈಸೇರಿ. ಅವರು ಕೃತಕೃತ್ಯರಾಗಿ ಮರುದಿನದ ರೈಲಿನಲ್ಲಿಯೇ ಬೆಂಗಳೂರಿನಿಂದ ಹೊರಟರು ಬಳ್ಳಾರಿಯಲ್ಲಿ ರೈಲಿಳಿಯುವಾಗ ರಾತ್ರಿ ಒಂಭತ್ತುವರೆ ಗಂಟೆಯಾಗಿತ್ತು ಈ ದಿನ ಅವರು ಹಿಂದಿರುಗಿ ಬರುವುದಾಗಿ ಮನೆಯಲ್ಲಿ ಹೇಳಿರಲಿಲ್ಲ. ಅದು ಕಾರಣ ಮನೆಯಲ್ಲಿ ಊಟವಿರಲಿಕ್ಕಿಲ್ಲವೆಂದೂ. ವ್ಯರ್ಥವಾಗಿ ಹೆಂಡತಿಯನ್ನು ತೊಂದರೆಬಡಿಸಬಾರದೆಂದೂ ನೆನೆದು, ಅಂಬಾಭವನಕ್ಕೆ ಹೋಗಿ ಊಟವನ್ನು ತೀರಿಸಿಕೊಂಡು ಸತ್ಯನಾರಾಯಣ ಪೇಟೆಯಲ್ಲಿರುವ ತಮ್ಮ ಮನೆಗೆ ಕಾಲ್ನಡಿಗೆಯಿಂದಲೇ ಮೆಲ್ಲನೆ ನಡೆಯಲಾರಂಭಿಸಿದರು. ಕೈಯಲ್ಲಿ ಕೆಲವು ಪುಸ್ತಕಗಳ ಕಟ್ಟು ಮಾತ್ರ ಇತ್ತು.

ರಾತ್ರಿ ಹನ್ನೊಂದು ಗಂಟೆಯ ಸಮಯ ಸಿಪಾಯಿಗಳು ತಂತಮ್ಮ ಮನೆಗಳಲ್ಲಿ ನಿದ್ರಾಪ್ರಯತ್ನದಲ್ಲಿದ್ದರು. ಹಲವರಿಗೆ ನಿದ್ರೆಯೂ ಬಂದಿತ್ತು.

ಬೀದಿಯಲ್ಲಿ ಜನರ ಸುಳಿದಾಟವು ನಿಂತಿತ್ತು. ಎರಡನೆಯ ಆಟವು ಪ್ರಾರಂಭವಾಗಿರುವ ಸಿನಿಮಾ ಡೇರೆಯ ಕಡೆಯಿಂದ-ಡಗ್-ಡಗ್-ಎಂಬ ವಿದ್ಯುದುತ್ಪಾತಕ ಯಂತ್ರದ ಶಬ್ದವೂ-ಒಮ್ಮೊಮ್ಮೆ ಚಿತ್ರ ಶಬ್ದವೂ ಕೇಳಿ ಬರುತಿದ್ದುವು

ಮಂಗಲಕರರು ಯೋಚನೆ ಮಾಡುತ್ತಾ ನಡೆಯುತಿದ್ದರು ಹೊಸ ಯೋಚನೆಯೇನೂ ಅಲ್ಲವದು; ಈ ಮೊದಲು ನೂರಾರು ಬಾರಿ ಬಂದು ಹೋದ ಯೋಚನೆಯ ಪುನರಾವರ್ತನೆಯೇ "—ಅಬ್ಬ! ಎಂಥ ಅಸಾಧ್ಯನಾದ ಹುಡುಗನವನು! ಕೃಷ್ಣ! ಶ್ರೀನಿವಾಸನು ಎಷ್ಟು ಸಾಧುವೋ, ಎಷ್ಟು ದಾಕ್ಷಿಣ್ಯ ಭಾವದವನೋ, ಅಷ್ಟೇ ದರ್ಪನಿರ್ದಾಕ್ಷಿಣ್ಯದವನಾಗಿದ್ದಾನೆ ಅವನ ತಮ್ಮ. ಅಷ್ಟರ ಮಟ್ಟಿಗೆ ಇರಲಾರನೆಂದು ಭಾವಿಸಿದ್ದೆನು. ಏನೇ ಆಗಲಿ, ಪುಸ್ತಕವಂತೂ ನನ್ನ ಕೈ ಸೇರಿತಲ್ಲ! ಇದು ನಾನೇ ಅಪಹರಿಸಿದೆನೆಂದು ತಿಳಿದು ಆ ಕೃಷ್ಣನು ನನ್ನ ಬೆನ್ನುಗಿನ್ನು ಹತ್ತಿರಲಿಕ್ಕಿಲ್ಲವಷ್ಟೆ?—ಏನೋ! ನಾನು ಅವನಿಗೆ ನನ್ನ ಹೆಸರು ವಿಳಾಸಗಳನ್ನು ತೋರಿಸಬಾರದಾಗಿತ್ತು—ಆದರೆ—ಆ ಸಂದರ್ಭದಲ್ಲಿ ಸುಳ್ಳು ಹೇಳಲೆತ್ನಿಸಿದ್ದರೆ—ರಾಘವರಾಯರಿಗೆ ನನ್ನ ಠಕ್ಕು ಗೊತ್ತಾಗಿ ಹೋಗುತಿತ್ತಲ್ಲ! ಈಗೀಗ ಹರಡಲಾರಂಭಿಸಿದ ನನ್ನ ಸತ್ಕೀರ್ತಿಯ ಲತೆಗೆ ಹುಳ ಹಿಡಿದ ಹಾಗೆ ಆದೀತಲ್ಲ!—ಯಾರಿಗೆ ಗೊತ್ತಿತ್ತು? ಇಷ್ಟೆಲ್ಲ ದೂರಕ್ಕೆ ಬಂದುಬಿಟ್ಟೀತು ಅಂತ. ಆ ಸಮಯದಲ್ಲಿ ನನಗೆ ಗೊತ್ತೇ ಆಗಲಿಲ್ಲ — ಆದರೆ ಆ ಕೃಷ್ಣನು ಇನ್ನೇನು ತಾನೇ ಮಾಡಿಯಾನು? 'ಕನ್ನಡ ಚಿತ್ರಮಾಲಿ'ಯ ಆಫೀಸಿಗೆ ಹೋಗಿ ನನ್ನನ್ನು ಹುಡುಕಿಯಾನು ಅಲ್ಲಿ ನನ್ನನ್ನು ಬೈದು ಅವನೇ ಅವಮಾನ ಹೊಂದಿಯಾನು ಒಂದು ವೇಳೆ ಹಟತೊಟ್ಟು ಇಲ್ಲಿಯವರೆಗೂ ಬಂದು ನನಗೆ ಭೇಟಿಯಾದಾನೆಂದೇ ನೆನೆಯುವ 'ನನಗೇನು ಗೊತ್ತು ನಿನ್ನ ಪುಸ್ತಕ? ನೀನೇ ಎಲ್ಲಿಯೋ ಕಳಕೊಂಡಿರಬೇಕು,' ಎಂದು ದಭಾಯಿಸಿಬಿಟ್ಟರೆ ತೀರಿತು! ಆದರೆ ಶ್ರೀನಿವಾಸನ ಕಣ್ಣಿಗೆ ಮಾತ್ರ ಅವನು ಬೀಳದಂತೆ ನೋಡಿಕೊಳ್ಳಬೇಕು. ಅದೇ ಕಷ್ಟ!— "

ಮನೆ ಸಮೀಪಿಸಿತು. ಗೇಟು ಬಾಗಿಲಿನ ಮೇಲುಭಾಗದ ಒಡಿಕೆ

ಯನ್ನೆತ್ತಿ, ಬಾಗಿಲು ತೆರೆದು ಒಳಹೊಕ್ಕು, ಮತ್ತೆ ಆ ಬಾಗಿಲನ್ನು ಹಾಕಿಕೊಂಡರು. ಮನೆಯ ಬಾಗಿಲು ಹಾಕಿತ್ತು. ಶ್ರೀಮಂತರ ರೀತಿಗೆ ಒಪ್ಪುವಂತಹ ದೊಡ್ಡ ಮನೆ ಅದು. ಒಳಗೆಲ್ಲಿಯೂ ದೀಪವಿರುವಂತೆ ಕಾಣಲಿಲ್ಲ ಒಳಗಿನವರು ದೀಪ ಆರಿಸಿ ಮಲಗಿರುವ ಹಾಗಿತ್ತು. ಮನೆಯ ಬಲಬದಿಯಲ್ಲಿರುವ ಚಿಕ್ಕ ಗುಡಿಸಲಿನಲ್ಲಿ ಕೆಲಸದಾಳು ಮಲಗಿಕೊಂಡಿರಬಹುದು. ಕೃಷ್ಣಪಕ್ಷದ ದಿನಗಳಾದುದರಿಂದ ಜಗುಲಿಯಲ್ಲಿ ಯಾರಾದರೂ ಮಲಗಿರುವರೋ ಇಲ್ಲವೋ—ಆ ಕತ್ತಲೆಯಲ್ಲಿ ಸರಿಯಾಗಿ ಗೊತ್ತಾಗುತ್ತಿರಲಿಲ್ಲ ಆದರೆ ಆಫೀಸು ಜವಾನನೊಬ್ಬನು ಮಲಗಿರಬೇಕೆಂದು ಮಂಗಲಕರರು ಜಗುಲಿಯನ್ನೇರಿ ನೋಡಿದರು. ಯಾರೂ ಇರಲಿಲ್ಲ. ತಾನು ಊರಿನಲ್ಲಿಲ್ಲದಿದ್ದುದರಿಂದ ಈ ಜವಾನ ಚಕ್ಕರ್ ಕೊಟ್ಟಿರಬೇಕು—ಎಂದು ಭಾವಿಸಿಕೊಂಡು, ಇನ್ನು ಬಾಗಿಲನ್ನು ತಟ್ಟಿ ಪತ್ನಿಯನ್ನು ಕರೆಯತಕ್ಕವನು. ಅಷ್ಟರಲ್ಲಿ ಒಳಗೆ ಶಯ್ಯಾ ಮಂದಿರವೊಳಗೆಂದು ತೋರುತ್ತೆ-ಪುರುಷ ಕಂಠದ ಪ್ರಖರವಾದೊಂದು ದರ್ಪಸ್ವರವು ಇದ್ದಕ್ಕಿದ್ದಂತೆ ಕೇಳಿಬಂತು.

"ಒಹ್ಹೋ! ಭೇಷ್! ಭಲೆ! ಚೆನ್ನಾಗಿದೆ! ನನ್ನ ಅಪ್ಪ ನಿನಗೆ ಉಪಕಾರ ಮಾಡಿದ್ದಕ್ಕೆ—ಒಳಗಿಂದೊಳಗೆ ಇದೋ ನಿನ್ನ ಕೆಲಸ? ಚಿಃ! ಛೀ! ನರಾಧಮಾ!—" ಎಂಬ ಕಿಡಿನುಡಿಗಳ ಕೊನೆಗೆ "ಫಳ್" ಎಂದು ತಪರಾಕಿಯ ಸಪ್ಪಳವೂ, ಕಾಲಿನಿಂದೊದ್ದು ಝಾಡಿಸಿದಂತಹ ಬಿರುಸು ಸದ್ದೂ ಕೇಳಿಬಂದುವು.

"ಅಯ್ಯೋ! ದೇವರೇ!—" ಎಂದು ಇನ್ನೊಂದು ಪುರುಷ ಕಂಠದ ಆರ್ತನಾದವೂ ಕೇಳಿ ಬಂದು—ಆ ನಾದದೊಂದಿಗೆ ಆ ವ್ಯಕ್ತಿಯೂ ಕಡಕೊಂಡು ಬಿದ್ದಿತೋ ಎಂಬಂತೆ--ಕುರ್ಚಿಯೊಂದುರುಳಿದ ಗಡುಸು ದನಿಯೂ ಕೇಳಿಬಂತು.

ಅದನ್ನನುಸರಿಸಿ ಕೋಮಲವಾದೊಂದು ನಾರೀಕಂಠವು, ಆರ್ತಾತುರಸ್ವರದಿಂದ—"ಅಯ್ಯೋ! ನಿರಪರಾಧಿ! ನಿರಪರಾಧಿ! ಹೀಗೂ ಉಂಟೆ? ಪಾಪ! ಪಾಪ!" ಎಂದು ಕೂಗಿತು.

ಒಡನೆಯೆ ಮೊದಲಿನ ದರ್ಪ ಕಂಠವು ಗದ್ದರಿಸಿತು—"ಪಾಪ!

ಪಾಪ! ಛೀ! ನಾಚಿಕೆಯಾಗಲಿಲ್ಲವಲ್ಲಾ ನಿನಗೆ? ಅಪ್ಪ ಮಾಡಿದ ಕರ್ಮ! ಚಾಂಡಾಲ! ಪಾಪಿಷ್ಠ!"

"ಅಯ್ಯೊ! ಜೋವ ತಪ್ಪಿದ ಹಾಗಿದೆಯಲ್ಲಾ! ಅಯ್ಯೊ!—" ಎಂದು ಸ್ತ್ರೀಕಂಠವು ಮತ್ತೊಮ್ಮೆ ಕೂಗಿತು.

"ಸಾಯಲಿಕ್ಕೆ ಧಾಡಿ ಇವನಿಗೆ?" ಎಂದಿತು ಪುರುಷಕಂಠ

ಈ ಬಗೆಯ ಅಪಾಯ ಸಂಭವ ಸೂಚಕ ಶಬ್ದಗಳನ್ನು ಸ್ಪಷ್ಟವಾಗಿ ಕೇಳಿ ಮಂಗಲಕರರು ಬಹಳ ಅಂಜಿದರು. ನಾಲ್ಕು ಜನರು ಕೂಡಿದರೆ ತನ್ನ ಯಶೋನಾಮಕ್ಕೆ ಕಳಂಕ ಬರುತ್ತದಲ್ಲಾ ಎಂದು ನಾಲ್ಕು ಸುತ್ತೂ ನೋಡಿ, ಯಾರೂ ಇತ್ತ ಸುಳಿಯದಿದ್ದುದರಿಂದ ಧೈರ್ಯಮಾಡಿ, ಬಾಗಿಲು ತಟ್ಟುತ್ತ—"ವರದ! ವರದ!—" ಎಂದು ಕರೆದರು.

"ಅಪ್ಪ ಬಂದ ಹಾಗಿವೆ!—" ಎಂಬ ಶಬ್ದದೊಂದಿಗೆ ವರದನು ಬಂದು ಬಾಗಿಲು ತೆರೆದನು.

"ಏನೋ ಇದು ಗಲಾಟೆ? ನೀನು ಯಾವಾಗ ಬಂದೀ?" ಎಂದು ಕೇಳುತ್ತಾ, ಮಂಗಲಕರರು ಒಳಹೊಕ್ಕು ಹಿಂದೆಯೇ ಬಾಗಿಲನ್ನೂ ಹಾಕಿಕೊಂಡರು

"ನಾನು ಈ ದಿನ ಬೆಳಗ್ಗೆ ಬಂದದ್ದು. ಗಲಾಟೆ ಏನೂಂತ ನೀನೇ ನೋಡಿ ಬಿಡು—ಕಣ್ಣಾರೆ!" ಎನ್ನುತ್ತಾ ಶಯ್ಯಾಮಂದಿರದ ಕಡೆಗೆ ಮುಖವನ್ನು ನೀಡಿದನು—ವರದ

ಆ ಶಯ್ಯಾಮಂದಿರದಲ್ಲಿ ವಿದ್ಯುದ್ದೀಪವು ಬೆಳಗುತಿತ್ತು ಬಾಗಿಲಿನ ಹೊರಗಣಿಂದ ಅತಿಶಯ ಲಾವಣ್ಯವತಿಯಾದ ಯುವತಿಯೊಬ್ಬಳು ಭಯವಿಹ್ವಲೆಯಾಗಿ ನಿಂತಿದ್ದಳು. ಕೋಣೆಯೊಳಗೆ ಉರುಳಿ ಬಿದ್ದೊಂದು ಕುರ್ಚಿಯ ಕೆಳಗೆ ಬಿದ್ದಿದ್ದ ಕೃಶಯುವಕನೊಬ್ಬನು ಅಗಳಾಗಲೇ ಸಾವರಿಸಿಕೊಂಡು ಏಳುತಿದ್ದನು. ಎದ್ದೂ ನಿಂತನು. ಅವನ ಕಾಲಿನ ಮಣಿಗಂಟಿಗೆ ಪೆಟ್ಟಾದಹಾಗಿತ್ತು. ಅದು ಕಾರಣ ತುಸು ಕುಂಟುಗಾಲಿನಿಂದ, ನೊಂದ ಮುಖಭಾವದಿಂದ ನಿಂತಿದ್ದನು. ಮಂಗಲಕರರನ್ನು ನೋಡುತ್ತಲೇ ತುಂಬಾ ಹೆದರಿದನು.

ಅವನನ್ನು ನೋಡುತ್ತಲೇ ಮಂಗಲಕರರ ಬಾಯಿಯಿಂದ—"ಅರೆ! ಶ್ರೀನಿವಾಸ! ಇದೇನೋ—ಇದು?" ಎಂಬ ಪ್ರಶ್ನೆ ಎದ್ದಿತು

ಒಡನೆ ವರದನು—"ಅವನನ್ನೇ ಕೇಳುತ್ತೀಯಲ್ಲ ಅಪ್ಪಾ? ಮರ್ಯಾದೆ ಕೊಟ್ಟು ಬೇರೆ! ಈ ನೀಚನಿಗೆ ಚಪ್ಪಲೀಲಿ ಕೊಟ್ಟು ಚಂಡಿ ಹಿಡಿದು ದಬ್ಬಬೇಕು ಹೊರಗೆ! ಘಾತುಕ!" ಎಂದು ಗರ್ಜಿಸಿದನು.

ಎದೆಯೊಳಗಿನ ಬಡಬಡಿಕೆಯನ್ನು ಹಿಡಿದಿಟ್ಟುಕೊಂಡು ಮಂಗಲಕರರಂದರು:—"ವಿಚಾರ ಮಾಡದೆ ದುಡುಕಬಾರದು ವರದಾ! ಏನು ನಡೆಯಿತೆಂದು ಸಿಧಾನವಾಗಿ ಮೆಲ್ಲನೆ ಹೇಳು. ಕೂಗಿ ಕೂಗಿ ಮಾತಾಡಲಿಕ್ಕೆ ಇಲ್ಲಿ ಯಾರೂ ಕೆಪ್ಪರಿಲ್ಲ. ಕಮಲಾ! ಏನಾಯಿತೆ?"

ಭೀತಳಾಗಿ ನಿಂತಿದ್ದ ಆ ಯುವತಿ ಏನೋ ಹೇಳಬೇಕೆಂದು ಬಾಯಿಯನ್ನು ಸವರಿಕೊಳ್ಳುತಿದ್ದಳು. ಅಷ್ಟರೊಳಗೆ ವರದನೇ ಹೇಳಿದನು.

"ಪಾಪ! ಚಿಕ್ಕಮ್ಮ ಏನು ಹೇಳಿಯಾಳು? ಹೇಳುವಂತಾದ್ದೇ? ನೋಡಪ್ಪಾ!—ಈ ಮಹಾರಾಯ, ನಿನ್ನ ಪ್ರೀತಿಯ ಶಿಷ್ಯ ಶ್ರೀನಿವಾಸ—ಈ ಚಿಕ್ಕಮ್ಮನ ಕೋಣೆಯೊಳಗೆ ಸೇರಿಕೊಂಡಿದ್ದ ಈ ರಾತ್ರೀಲಿ! ಒಳಗೇನೋ ಶಬ್ದವಾಯಿತಲ್ಲಾಂತ-ನಾನು ಎದ್ದು ಬಂದು "ಯಾರು ಒಳಗೆ?" ಅಂತ ಕೇಳಿದರೆ ಸುದ್ದಿಯಿಲ್ಲ. ಬಾಗಿಲು ದೂಡಿ ನೋಡುತ್ತೇನೆ,—ನಿಮ್ಮ ಶಿಷ್ಯ—ಇವನೇ—ಶ್ರೀನಿವಾಸ!"

"ಅಯ್ಯೋ! ಹೀಗೂ ಸುಳ್ಳಾಡಬಾರದು ಶತಸುಳ್ಳಿದು! ಶ್ರೀನಿವಾಸ ನಿರಪರಾಧಿ!" ಎಂದಳು ಕಮಲೆ ತಡೆಯಲಾರದೆ.

"ಆಹಾಹಾ! ಭಲೆ! ನಿ-ರ-ಪ-ರಾ-ಧಿ!" ವರದನು ಅಣಕಿಸುತ್ತ, ಕೆಟ್ಟಗಣ್ಣಿನಿಂದ ಕಮಲೆಯನ್ನು ನೋಡಿದನು.

"ನೀನು ದುರಾತ್ಮನು! ಯಾರೂ ಇಲ್ಲದ ವೇಳೆಯಲ್ಲಿ ನೀನೇ ನನ್ನ ಕೋಣೆಯನ್ನು ಹೊಕ್ಕು, ಏನೂ ಅರಿಯದ ಈತನನ್ನು ಸಿಕ್ಕಿಸಿಹಾಕುತ್ತೀ? ಪಾಪೀ!" ಎಂದು ಕಮಲೆ ಹೇಳುತಿರುವಾಗ ಮಂಗಲಕರರು ತಡೆಯಲಾರದೆ,

"ಸಾಕು ಸಾಕು, ಕತ್ತೆಗಳಾ! ಮುಚ್ಚಿರಿ ಬಾಯಿ! ವರದ! ಹೋಗೊ. ನಿನ್ನ ಮಂಚದಲ್ಲಿ ಮಲಕ್ಕೊ" ಎಂದು ಗರ್ಜಿಸಿ ಕಮಲೆಯನ್ನು

ಗಿರಗಿರನೆ ತಿರುಗುವ ಕಣ್ಣಿನಿಂದ ನೋಡಿದರು. "ಹೋಗತ್ತ ನನ್ನ ಕಣ್ಣಿದಿರಿನಿಂದ!" ಎಂದು ಕಮಲೆಗೊಂದು ವಾಗ್ಬಾಣವನ್ನೂ ಎಸೆದರು.

ಅಪರೆ ಹತಿಯಿಂದ ಕಮಲೆ ಮುಖ ತಗ್ಗಿಸಿಕೊಂಡು ಆ ಕಡೆಗೆ ಹೊರಟು ಹೋದಳು.

"ಆಯಿತಾಯಿತು! ಇನ್ನು ನನಗೇಕೆ? ಏನಾದರೂ ಮಾಡಿಕೋ!" ಎಂದು ಏನೇನೋ ಗೊಣಗುತ್ತ ವರದಪ್ಪ ತನ್ನ ಮಲಗುವ ಕೋಣೆಗೆ ಹೊರಟುಹೋದನು.

"ಶ್ರೀನಿವಾಸ! ಇಲ್ಲಿ ಬಾ. ಏನು ಕಾಲು ಕುಂಟುತ್ತಿರುವಿ? ಪೆಟ್ಟು ಜೋರಾಗಿದೆಯೆ?" ಶಾಂತಸ್ವರದಿಂದ ಮಂಗಲಕರರು ಕೇಳಿದುದನ್ನು ಕೇಳಿ, ಶೀನು ಬಹಳ ಆಶ್ಚರ್ಯಪಟ್ಟನು. ಇಂತಹ ಅಸಹನೀಯವಾದ ಪ್ರಸಂಗಗಳಲ್ಲಿ ಸಿಡುಕು—ದುಡುಕು—ಅವಿಚಾರಗಳೇ ಸಾಮಾನ್ಯವಾಗಿ ಹುಟ್ಟುತ್ತಿರುವಾಗ ಮಂಗಲಕರರು ಶಾಂತಿ ಸಮಾಧಾನಗಳನ್ನು ವಹಿಸಿಕೊಂಡಿರುವುದು ಸೋಜಿಗವಲ್ಲವೇನು? ಆದರೆ ಗುಟ್ಟಿಷ್ಟೆ, ತಮ್ಮ ಗೃಹಾಂತರದ ಕ್ಷುದ್ರ-ಛಿದ್ರ-ಕಲ್ಮಷ ಕ್ರಿಮಿಗಳು ಬಹಿರಂಗವಾದರೆ ತಮ್ಮ ದಿವ್ಯ ಯಶೋನಾಮಕ್ಕೆ ದೊಡ್ಡ ಕಳಂಕವು ಹತ್ತಿ, ತಾವು ಕ್ಷುಲ್ಲಕರಾಗಿ ಹೋದೇವೆಂಬ ಭಯದಿಂದ, ತಮ್ಮ ಕೋಪವನ್ನು ತಮ್ಮ ಕಚ್ಚೆಯೊಳಗೇ ಬಚ್ಚಿಟ್ಟುಕೊಳ್ಳುವ ಪ್ರಯತ್ನವದು. ಅಷ್ಟಕ್ಕೇ ಅಷ್ಟು ಶಾಂತಿ-ದಾಂತಿ-ಸಮಾಧಾನಗಳು!

ನಮ್ಮ ಶೀನು ಜಂಕುತ್ತ ಜಂಕುತ್ತ ಹೊರಗೆ ಬಂದನು.

"ಪೆಟ್ಟು ಜೋರಿಲ್ಲವಷ್ಟೆ?" ಎಂದು ಪುನಃ ಕೇಳಿದರು ಮಂಗಲಕರರು

"ಇಲ್ಲ—ನಾನು—ಸ್ವಾಮಿ—" ಎಂದು ಅವನು ಏನೋ ಹೇಳಲಿಕ್ಕಿರಲು,—"ಅದೆಲ್ಲಾ ನಾನು ಬಲ್ಲೆ ಶ್ರೀನಿವಾಸ, ನನ್ನ ಮೇಲೆ ನೀನು ಏನೂ ಅವಿಶ್ವಾಸಪಡಬೇಡ. ನಿನ್ನ ಮೇಲೆ ನನಗೇನೂ ಅವಿಶ್ವಾಸವಿಲ್ಲ. ನಾನು ನಿನ್ನ ಗುಣಭಾವನೆಗಳನ್ನು ಚೆನ್ನಾಗಿ ಮನಗಂಡಿರುತ್ತೇನೆಂದು ತಿಳಿ."

"ತಾವು ನಿಜವಾಗಿಯೂ—ಹೃದಯಪೂರ್ವಕವಾಗಿಯೂ ನನ್ನನ್ನು

ನಂಬುವಿರಾ?" ಶೀನುವಿನ ಹೃದಯದಲ್ಲಿ ಧೈರ್ಯ ಸಂಚಾರವು ಪ್ರಾರಂಭವಾಯಿತು.

"ನನ್ನ ಹೃದಯವು ನಿನಗೆ ತಿಳಿಯದೆ? 'ಕಣ್ಣಾರೆ ಕಂಡದ್ದೂ ಸುಳ್ಳು, ಕಿವಿಯಾರೆ ಕೇಳಿದ್ದೂ ಸುಳ್ಳು, ವಿಚಾರ ಮಾಡಿ ತಿಳಿದದ್ದೇ ಸತ್ಯ' ಎಂಬ ಹಿರಿಯರ ಮನಗಂಡ ಮಾತು. ಆ ಪ್ರಕಾರ ನಡೆಯುವವನು ನಾನು. ಇರಲಿ, ನಡೆದ ಸಂಗತಿ ಏನೆಂಬುದು ಹೇಳು, ಮೆಲ್ಲಗೆ ಹೇಳು."

"ತಾವು ಈ ದಿನ ಬೆಂಗಳೂರಿನಿಂದ ಹಿಂದಿರುಗುವಿರೋ—ಇಲ್ಲವೋ ನೋಡಿಕೊಂಡು ಹೋಗೋಣವೆಂದು ಸ್ವಲ್ಪ ಮುಂಚೆ ನಾನು ಇಲ್ಲಿಗೆ ಬಂದೆ. ಒಳಗೆ ಹೆಂಗುಸಿನ ಆರ್ತನಾದವನ್ನು ಕೇಳಿ, ಏನೋ ಸಹಾಯ ಮಾಡೋಣವೆಂದು—ಬೇರೆ ಉಪಾಯಗಾಣದೆ—ಹಿಂಗಟ್ಟಿನ ಗೋಡೆ ಹತ್ತಿ ಕೆಳಗೆ ಧುಮುಕಿದೆನು. ಆ ಮೇಲೆ ಶಯ್ಯಾ ಮಂದಿರದಲ್ಲಿ--ಅದೆಲ್ಲ ನಾನು ಬಾಯಿಯಿಂದ ಹೇಳಬಾರದು. ಒಟ್ಟಾರೆ ದುಃಸಂಭವವಾವುದೂ ಸಂಭವಿಸಲಿಲ್ಲ — ಅಮ್ಮನವರು ನಿರಪರಾಧಿಗಳಾಗಿದ್ದಾರೆ. ನಾನು ಶಬ್ದ ಮಾಡದೆ ಒಳಹೊಕ್ಕು ಆ ದುಃಸಂಭವವನ್ನು ತಡೆದುಬಿಟ್ಟುದರಿಂದ—ನಾನು ಸಿಕ್ಕಿಬೀಳುವ ಹಾಗಾಯಿತು. ನಾನು ಶಬ್ದ ಮಾಡಿರುತ್ತಿದ್ದರೆ—ಅಪರಾಧಿ ತಪ್ಪಿಸಿಕೊಳ್ಳುತಿದ್ದನು.—"

ಸರಿ ಸರಿ. ಗೊತ್ತಾಯಿತು ಬಿಡು. ಆದರೆ ಯಾರೊಡನೆಯೂ ಈ ವಿಚಾರವೆಲ್ಲಾ ಬಾಯಿಬಿಡಬೇಡ ತಿಳಿಯಿತೇ?"

"ಇಲ್ಲ—ಇಲ್ಲ!"

"ಸರಿ. ಇನ್ನು ನೀನು ಹೋಗು. ನಾಳೆ ಸಾಯಂಕಾಲ ಬಿಡುವಿದ್ದರೆ ಬಾ. ಇನ್ನೊಂದಾವುದೋ ಹೊಸ ಕತೆಯನ್ನು ಬರೆದಿದ್ದೇನೆಂದೆಯಲ್ಲಾ? ಅದನ್ನು ತೆಗೆದುಕೊಂಡು ಬಾ. ಇನ್ನು ಹೋಗಪ್ಪ ಬಹಳ ರಾತ್ರಿಯಾದಹಾಗಿದೆ"

"ಪರವಾಯಿಲ್ಲ ತಮ್ಮ ಉದಾರ ಗುಣವನ್ನು ಎಷ್ಟು ಸ್ಮರಿಸಿದರೂ ಸಾಲದು. ಇನ್ನೊಬ್ಬರಾಗುತ್ತಿದ್ದರೆ ಇಂದು ನನ್ನ ಗತಿ ಏನಾಗುತಿತ್ತೋ! ಸರಿ. ಹಾಗಾದರೆ ನಾಳೆ ಬರುತ್ತೇನೆ." ಎಂದು ಶೀನು ಹೊರಟನು.

ಮಂಗಲಕರರು ಬಾಗಿಲು ತೆರೆದು ಶೀನುವನ್ನು ಹೊರಗೆ ಕಳುಹಿಸಿ ಮತ್ತೆ ಬಾಗಿಲು ಹಾಕಿಕೊಂಡರು.

ಇದೆಲ್ಲವನ್ನೂ ಕಿವಿಯಾನಿಸಿ ಕೇಳಿದ ವರದನು—“ ಆಹಾ! ಯಜಮಾನಿಕೆಯೆಂದರೆ ಹೀಗೆಯೇ ಇರಬೇಕು! ಘಾತುಕನನ್ನು ಹೊಗಳಿ ಹೊಗಳಿ ಜಾರಿಬಿಡುವುದು! ಚೆನ್ನಾಗಿದೆ!” ಎಂದು ಗೊಣಗಿಕೊಂಡನು. ಅದು ಕಿವಿಗೆ ಬಿದ್ದರೂ ಬೀಳದಂತೆಯೇ ನಟಿಸಿ ಮಂಗಲಕರರು ಕೋಣೆಯೊಳಗೆ ಹೊಕ್ಕು ರುಮಾಲನ್ನು ತೆಗೆಯುತ್ತ—“ ಕಮಲಾ! ಜವಾನ ಗುರುವಪ್ಪ ಯಾಕೆ ಬರಲಿಲ್ಲ ಮಲಗಲಿಕ್ಕೆ?” ಎಂದು ಸಮಾಧಾನದ ಸ್ವರದಿಂದಲೇ ಕಮಲೆಯನ್ನು ಕರೆದರು.

ಕಾಣದೆ ನಿಂತಿದ್ದ ಕಮಲೆ ಮೆಲ್ಲನೆ ಒಳಗೆ ಬರುತ್ತ—“ ಸಿನೀಮಕ್ಕೆ ಹೋಗುತ್ತೇನಂತ ಹೇಳಿ ಹೋಗಿದ್ದಾನೆ” ಎಂದಳು.

“ ಯಾಕೆ ಕಳಿಸಿದಿ? ”

“ ಅವನು ನನ್ನನ್ನು ಕೇಳಿದರೆ ತಾನೆ? ಬೆಳಿಗ್ಗೆಯೇ ಬಂದಿದ್ದಾರಲ್ಲಾ ಚಿಕ್ಕ ರಾಯರು? ಅವರನ್ನೇ ಕೇಳಿ ಹೊರಟುಹೋದ. ಸಿದ್ದಪ್ಪನನ್ನು ಕೂಡಾ ಕಳುಹಿಸಿಬಿಟ್ಟಿದ್ದಾರೆ ಗೊತ್ತೆ?” ಒಂದು ಮೂಲೆಯಲ್ಲಿ ನಿಂತು ಕಮಲೆಯೆಂದಳು.

“ ಓಹೋ!” ಮಂಗಲಕರರು ತುಸು ತಾಳಿ—“ ನಾನು ಈ ಸಮಯದಲ್ಲಿ ಬರುತ್ತೇನೆಂತ ನಿನಗೆ ಗೊತ್ತಿತ್ತೇ?”

“ ಹ್ಯಾಗೆ ಗೊತ್ತು?— ನಾನು ಹೋಗಿ ಎಲೆ ಹಾಕುತ್ತೇನೆ. ”

“ ಬೇಡ. ಹೋಟಲಿನಲ್ಲಿ ಊಟ ತೀರಿಸಿಕೊಂಡೇ ಬಂದೆನು. ಕುಡಿಯಲಿಕ್ಕೆ ಮಾತ್ರ ನೀರು.”

ಮಂಗಲಕರರು ತಮ್ಮ ಡ್ರೆಸ್ಸ್ ಕಳಚಿಕೊಳ್ಳಲಾರಂಭಿಸಿದರು. ಕಮಲೆ ಅಡುಗೆ ಮನೆಗೆ ಹೊರಟುಹೋದಳು. ಮಂಗಲಕರರು ಬಚ್ಚಲು ಮನೆಗೆ ಹೋಗಿ ಕೈಕಾಲ್ಮೋರೆಗಳನ್ನು ತೊಳೆದುಕೊಂಡು ಬಂದು, ಶಯ್ಯಾ ಮಂದಿರದಲ್ಲಿ ಮಂಚದ ಮೇಲೆ ಕುಳಿತರು ಕಮಲೆ ಅಲ್ಲಿ ನೀರಿನ ಲೋಟೆಯೊಂದಿಗೆ ಕಾದಿದ್ದಳು. ಮಂಗಲಕರರು ಅವಳ ಕೈಯಿಂದ ಲೋಟೆಯನ್ನು ತಕ್ಕೊಂಡು ಕುಡಿದು, ಮತ್ತೂ ತೃಷ್ಣಾತುರರಾಗಿ, ಅವಳ ಅಧರಾಮೃತವನ್ನು ಕುಡಿಯಬೇಕೆಂಬ ತವಕದಿಂದ, ಅವಳ ತಳಿರ್ಗೈಯನ್ನು ಹಿಡಿದು ಆ ಲತೆಯಂತಹ ದೇಹವನ್ನು ತಮ್ಮ ಮುರದಂತಹ

ಮ್ಮೈಗೆ ಅಂಟಿಸಿಕೊಳ್ಳಲು ಮುಂಚದಬಳಿಗೆಳೆದರು. ಕಮಲೆ ಚಟಕ್ಕನೆ ಬಿಡಿಸಿಕೊಂಡು ದೂರದಲ್ಲಿ ಕುಳಿತು—"ಅಲ್ಲಾ? ಹೋಟೆಲಿಗೆ ಹೋಗದೆ ಸೀದಾ ಮನೆಗೆ ಬರುತ್ತಿದ್ದರೆ ಇವತ್ತಿನ ಅನಾಚಾರವು ನಡೆಯುತ್ತಿದ್ದಿಲ್ಲವಷ್ಟೆ?'' ಎಂದು ಒಂದು ಪ್ರಶ್ನೆಯನ್ನು ಹೊರಡಿಸಿದಳು.

'' ಯಾರಿಗೆ ಗೊತ್ತಿತ್ತು?'' ಮಂಗಲಕರರು ಮೆಲ್ಲನಿಯಿಂದ—ಅಲ್ಲ ಕಮಲಾ! ನನಗೆ ನಿನ್ನ ಮೇಲೆ ನಂಬುಗೆಯಿಲ್ಲವೆಂದು ತಿಳಿಯಬೇಡ ಆದರೆ ಸತ್ಯವಾಗಿಯೂ ನಡೆದದ್ದೇನು? ಶ್ರೀನಿವಾಸನೆಂಬ ಆ ತರುಣನು ಹೇಳಿದ್ದು ಸತ್ಯವೋ?—ನಮ ವರದನು ಹೇಳಿದ್ದು ಸತ್ಯವೋ?

'' ನಿಮ್ಮ ಮನಸ್ಸಿಗೆ ಹೇಗೆ ಕಾಣುತ್ತೆ?"

'' ಶ್ರೀನಿವಾಸನ ಮಾತೇ ಸತ್ಯವೆಂದು."

'' ನಿಜ. ಈ ದಿನ ಬೆಳಿಗ್ಗೆ ವರದನು ಮನೆಗೆ ಹತ್ತಿದ ಕೂಡಲೇ ನನಗೆ ದಿಗಿಲು ದಿಗಿಲು ಹತ್ತಿತು—"

'' ಓಹೊ! ಹಾಗಾದರೆ ಮೊದಲೇ ನಿನಗೆ ಗೊತ್ತಿತ್ತೇನು ಅವನ ಹೃದ್ಗತ?''

'' ಕಳೆದ ಬಾರಿ ಅವನು ಬಂದಾಗಲೇ ನನಗೆ ಹೊಳೆದಿತ್ತು. ನೀವು ಅವನಿಗೆ ಬೇಗನೇ ಒಂದು ಮದುವೇ ಮಾಡಿ ಹಾಕಬಾರದೇ—ಪೀಡೆ?"

'' ಅದಿರಲಿ; ಆವೊತ್ತೇ ನೀನು ನನಗೆ ಯಾಕೆ ಹೇಳಲಿಲ್ಲ?"

'' ಇದೆಲ್ಲಾ ಹೇಳುವಂತಾದ್ದೇನು? ನಿಮ್ಮ ಮಗನ ವಿಷಯ ನಿಮ್ಮ ಹತ್ತಿರವೇ ಹೇಳೋದು ಹೇಗೆ? ಅದೃಷ್ಟವಶದಿಂದ ಈ ದಿನ ನಿಮ್ಮ ಕಣ್ಣಿಗೇ ಎಲ್ಲಾ ಬಿದ್ದುದರಿಂದ ನಿರ್ವಾಹವಿಲ್ಲದೆ ಹೇಳಲೇಬೇಕಾಯಿತು ಇಲ್ಲದಿದ್ದರೆ—ಪಾಪ, ಆ ನಿರಪರಾಧಿ ಸಿಕ್ಕಿಬೀಳುತ್ತಿದ್ದ!"

'' ಉಂ—'' ಎಂದು ಮಂಗಲಕರರು ಯೋಚನೆ ಮಾಡುತ್ತ ಕುತ್ತಿಗೆಯನ್ನು ಅಲುಗಿಸಿದರು. ಬಳಿಕ—'' ಏನೇ ಇರಲಿ ಕಮಲಾ! ಮಗನ ವಿಷಯದಲ್ಲಿ ಏನು ಮಾಡಲಿಕ್ಕೂ ಸಾಧ್ಯವಿಲ್ಲ. ನೀನೇ ತುಂಬಾ ಜಾಗರೂಕಳಾಗಿರಬೇಕು.—" ಎಂಬ ಶಬ್ದಗಳು ಮತ್ತೆ ಅವರ ಬಾಯೊಳಗಿಂದ ಜಾರಿಬಿದ್ದುವು.

"ನಾನು ಎಷ್ಟು ಜಾಗರೂಕಳಾಗಿದ್ದೇನೆಂಬುದು ದೇವರಿಗೆ ಗೊತ್ತುಂಟು."

"ಒಳ್ಳೇದಿರಲಿ. ಮಲಗಿನ್ನು ಕಮಲಾ! ರಾತ್ರಿ ಬಹಳಾಯಿತು." ಮಂಗಲಕರರು ಮಂಚದಲ್ಲಿ ದೇಹವನ್ನು ಈಡಾಡಿಕೊಂಡರು.

ಕಮಲೆ ದೀಪವನ್ನು ತೆಗೆದು ಗಂಡನ ಮಂಚಕ್ಕೆ ಹೊಂದಿಕೊಂಡಿದ್ದ ಇನ್ನೊಂದು ಹಾಸುಮಂಚದ ಮೇಲೆ ಮಲಗಿದಳು ಕ್ರಮವಾಗಿ ಅವಳ ಮನಸ್ಸು ಶೀನುವಿನ ಮೇಲೆ ಹರಿದುಕೊಂಡು ಹೋಗಲಾರಂಭವಾಯಿತು ಅಂದಿನ ಆ ದುಷ್ಪ್ರಸಂಗದ ಸಮಯದಲ್ಲಿಯೇ ಅವಳು ಶೀನುವನ್ನು ಸರಿಯಾಗಿ ನೋಡಿದುದು. ಈ ಶೀನು ಆ ಶೀನುವೇ ಆಗಿರುವನೆ? ಆ ಶೀನು ಎಂದರೆ-ಹಿಂದೆ ಅವಳ ಬಾಲ್ಯದಲ್ಲಿ ಕುಂಭಾಂಥೇರಿಯಲ್ಲಿ ಆಗೆಲಿಹೋದ-ನೆರೆಮನೆಯ ಅವಳ ಬಾಲ ಮಿತ್ರ ಕಲಾವಿದ ಶೀನುವೇ ಇವನೊ?— ಹೌದು. ಅವನಿಗೂ ಇವನಿಗೂ ತುಂಬಾ ಸಾಮತಿಯುಂಟು. ಅವನೇ ಇವನು; ಇವನೇ ಅವನು! ಆದರೆ ಆಗ ಹುಡುಗ; ಈಗ ಹರೆಯದವನು! ಇದೆಂತಹ ವಿಚಿತ್ರ ಯೋಗ! ಈಗ್ಗೆ ಏಳೆಂಟು ತಿಂಗಳಿಂದ ಅವನು ಮಂಗಲಕರರ ಮನೆಗೆ ಬಂದು ಹೋಗುತಿದ್ದರೂ, ಅವಳು ಅವನ ಮುಖವನ್ನೆ ನೋಡಿರಲಿಲ್ಲ. ಆ ಹರೆಯದ ಹೆಂಡತಿ ಕಮಲೆಯ ಮೇಲೆ-ಅವಳ ವೃದ್ಧ ಪತಿ ಮಂಗಲಕರರ ಗೃಧ್ರ ದೃಷ್ಟಿಯು ಏರ್ಪಾಡೇ ಹಾಗಿತ್ತು. ಏನೋ-ಎಲ್ಲಿಯೋ ಒಂದೆರಡು ಬಾರಿ ಮಾತ್ರ ಅವನ ಹಿಂಬದಿ ಒಂಬದಿಗಳನ್ನು ನೋಡಿದುದಿದ್ದೀತು! ಅವನು ಮಂಗಲಕರರೊಂದಿಗೆ ಆಡುವ ಮಾತುಗಳನ್ನೂ, ಅದರಲ್ಲಿ ಮಿಳಿತವಾಗುವ ಕಲಾವಿಮರ್ಶೆಗಳನ್ನೂ-ಧ್ವನಿ ಸಾಮ್ಯತೆಯನ್ನೂ ಕೇಳಿ-ಆ ಬಾಲ ಮಿತ್ರ ಶೀನುವಿನ ಜ್ಞಾಪಕವೂ ಬಂದುದುಂಟು ಅವಳಿಗೆ! ಆದರೆ ಅವನೇ ಇವನಾಗುವನೆಂದು ಅವಳು ಊಹಿಸಿರಲಿಲ್ಲ. ಈಗ ಅವನೇ ಇವನಾಗುತ್ತಲೇ, ಪೂರ್ವದಲ್ಲಿ ಆ ಬಾಲ ಮಿತ್ರನೊಂದಿಗೆ ಕೂಡಿ ಆಡಿದ ಆಟ-ಪಾಟ-ನೋಟ-ಕೂಟಗಳು ಒಂದೊಂದಾಗಿ ಅವಳ ಒಳಗಣ್ಣಿನಲ್ಲಿ ಮೂಡುತಿರುವಾಗ, ಅವಳು ನಿದ್ರಿಸಿದಳೋ-ಎಚ್ಚರದಿಂದಿರುವಳೋ-ಕನಸು ಕಾಣುತಿರುವಳೋ-ಹೇಳುವ ಬಗೆ ಹೇಗೆ?

## ೨೦. ಮಹಾ ಸಹಾಯಕರು

ಅಂದು— ಅಂದರೆ ಒಂದು ವರ್ಷಕ್ಕೂ ಪೂರ್ವದಲ್ಲಿ ನನ್ನ ಶೀನು ಹೆಂಡತಿಯಾದ ಸುಂದರಿಯ ಭೂತ ಬಂಧನದಿಂದ ಜಾರಿಕೊಂಡು ಮನೆಯಲ್ಲಿ ಹೇಳದೆ ಹೊರಟವನು, ಮಂಗಳೂರಿನಲ್ಲಿ ಬಸ್ಸು ಹತ್ತಿ, ನೇರಾಗಿ ಹೊಸಪೇಟೆಯ ದಾರಿಯನ್ನು ಹಿಡಿದು, ಪಶ್ಚಿಮ ಘಟ್ಟವನ್ನು ಹತ್ತಿ. ಮೈಸೂರು ಸೀಮೆಯನ್ನು ಹಾದು ಹೊಸಪೇಟೆಗೆ ಹೋಗಿ ಸೇರುವಾಗ ಎರಡು ದಿನಗಳಾಗಿ ಹೋದುವು. ಅವನ ಕೈಯಲ್ಲಿದ್ದ ದುಡ್ಡೆಲ್ಲ ಮುಗಿದುಹೋಗಿತ್ತು. ಒಂದು ಹೊತ್ತು ಉಪವಾಸ ಕೂಡಾ ಮಾಡಬೇಕಾಯಿತು. ಅವನು ಮೊದಲು ಯಾವ ರಾಯರ ಮನೆಯಲ್ಲಿ ಅಡುಗೆ ಮಾಡುತಿದ್ದನೋ ಆ ಮನೆಗೇ ಹೋದನು. ಅಲ್ಲಿಯ ರಾಯರು ಈ ಹಳೆಯ ಅಡುಗೆಯವನನ್ನು ಆದರಿಸಿ ಒಂದೆರಡು ದಿನ ಅಲ್ಲಿಯೇ ಇರುವಂತೆ ಅನುಜ್ಞೆಕೊಟ್ಟರು ಅಲ್ಲಿ ಬೇರೆ ಅಡುಗೆಯ ಆಳು ಇದ್ದುದರಿಂದ, ಅಲ್ಲಿಯಂತೂ ಅಡುಗೆಯ ಕೆಲಸ ದೊರೆಯಲಿಲ್ಲ. ಆ ಊರಿನಲ್ಲಿಯೂ ಸ್ವಲ್ಪ ಹುಡುಕಾಡಿ ನೋಡಿದನು. ಸಿಕ್ಕಲಿಲ್ಲ. ಕಡೆಗೆ ಅವನ ಹಳೆಯ ರಾಯರೇ ಬಳ್ಳಾರಿಯಲ್ಲಿರುವ ಅವರ ಗೆಳೆಯರಾದ ವಕೀಲ ವೆಂಕೋಬರಾಯರ ಮನೆಗೆ ಕಳುಹಿಸಿಕೊಟ್ಟರು. ಹೀಗೆ ಅವನು ಬಳ್ಳಾರಿಗೆ ಬಂದು ಗಾಂಧಿನಗರದಲ್ಲಿರುವ ವೆಂಕೋಬರಾಯರ ಮನೆಯಲ್ಲಿ ಅಡುಗೆಯ ಕೆಲಸಕ್ಕೆ ಸೇರಿಕೊಂಡನು.

ಈ ಪ್ರಕಾರ ಕ್ರಮಪ್ರಕಾರವಾದೊಂದು ಪಳಗಿದ ಉದ್ಯೋಗವು ಸಿಕ್ಕಿದ ಮೇಲೆ, ಕ್ರಮೇಣ ಅವನ ಭಾವನಾಲಹರಿಗಳೂ ಒಂದು ಕ್ರಮಕ್ಕೆ ಬರಲಾರಂಭಿಸಿದುವು. ತನ್ನ ಬಾಲ್ಯ–ಕಮಲೆಯೊಡನೆ ಲೀಲೆಗಳು, ಆ ಮೇಲಣ ವಿಯೋಗ, ತದನಂತರ ಅಡುಗೆ ಭಟ್ಟನ ಅವತಾರವನ್ನೆತ್ತಿಕೊಂಡುದು, ಇತ್ತೀಚೆಗೆ ಆದ ಮದುವೆ, ಮೊದಲಾದ ಗತಸಂಭವಗಳೆಲ್ಲಾ ಒಂದು ಕನಸಿನಂತೆ ತೋರಿದುವು. ತಾಯಿಯ ಮರಣ, ತಮ್ಮನ ರಗಳೆ, ಹೆಂಡತಿಯೆಂಬ ಆ ದೆವ್ವ ಇವೆಲ್ಲಾ ಕನಸಿನ ಹೃದ್ರಾವಕ–ಭಯಾನಕ ಭಾಗಗಳಂತೆ ಕಂಡುವು. ಈಗ ಆ ಕನಸಿನಿಂದ

ಮುಕ್ತನಾಗಿ ಯಥಾಸ್ಥಿತಿಗೆ ಬರುವೆನೆಂದು ಭಾವಿಸಿಕೊಂಡನು. ತನಗಿನ್ನು ಯಾರೂ ಇಲ್ಲ—ಎಂಬ ಭಾವವನ್ನು ದೃಢಪಡಿಸಿಕೊಳ್ಳಲಾರಂಭಿಸಿಕೊಂಡನು. ಇದ್ದಂತೆಯೂ ಇರುವಂತೆಯೂ ತೋರುವ ತಂದೆ ತಾಯಿ ಬಂಧು ಬಳಗ ಹೆಂಡತಿ ಮಕ್ಕಳು ಎಲ್ಲರೂ ಒಂದೊಂದು ಸ್ವಪ್ನಸ್ವರೂಪಿಗಳೆಂಬ ಮಹಾತ್ಮರ ತತ್ವವನ್ನು ಅನುಸರಿಸಲಾರಂಭಿಸಿದನು. ಈ ಬಗೆಯ ಜ್ಞಾನಮಾರ್ಗದ ದಿವ್ಯವಾದ ತಿಳಿವಳಿಕೆಯಿಂದ ಅವನ ಮನಸ್ಸು ತುಂಬಾ ಸಮಾಧಾನವಾಯ್ತು. ತಾನಿನ್ನು ಕನ್ನಡ ತಾಯಿಯ ಸ್ವೇಚ್ಛಾಕುಮಾರನಾಗಿ ಆಡಬಹುದೆಂಬ ಉಲ್ಲಾಸವು ಚಿಗುರೆದ್ದು ಕಳಕಳಿಸಲಾರಂಭವಾಯಿತು ಅವನ ಹೃದಯದಲ್ಲಿ. ಮಾನಸವು ಕಲ್ಪನಾ ಜಾಲವನ್ನು ಹೆಣೆಯತೊಡಗಿತು. ಲೇಖನ ಸ್ಫೂರ್ತಿ ಹರಿಯಲಾರಂಭವಾಯಿತು. ತನಗೆ ಮದುವೆಯಾದ ವೃತ್ತಾಂತಕ್ಕೇ ರಸವಂತಗಳಾದ ಕಲ್ಪನೆಯ ಪಾತ್ರಗಳನ್ನೆ ಸಿದ್ಧಗೊಳಿಸಿ ಒಂದು ಒಳ್ಳೆ ಕೃತಿಯನ್ನು ರಚನೆ ಮಾಡಿ ಅದಕ್ಕೆ "ವಿಧಿಯ ಬಲಿ" ಎಂದು ಹೆಸರು ಕೊಟ್ಟನು. ಹೀಗೆ ಅವನ ಮಾಮೂಲು ವೃತ್ತಿ ಮತ್ತೆ ಸಾಗಲಾರಂಭವಾಯಿತು.

ಆದರೆ ಇನ್ನೂ ತನ್ನ ಗ್ರಂಥಗಳನ್ನು ಪ್ರಕಟನೆ ಮಾಡಿಸುವ ಸಾಹಸಕ್ಕೆ ಇಳಿದಿರಲಿಲ್ಲ. ತನಗೆ ಅಂತಹ ಯೋಗ್ಯತೆ ಬಂದಿಲ್ಲವೆಂದು ಅವನ ಅಭಿಪ್ರಾಯವಾಗಿತ್ತು. ಅವನು ಈ ಮೊದಲು ಅಂದರೆ ಪ್ರಾರಂಭದ ಹುರುಪಿನಲ್ಲಿ ಒಂದೆರಡು ಸಣ್ಣ ಕತೆಗಳನ್ನು ಬರೆದು ಯಾವುದೋ ಮಾಸಪತ್ರಿಕೆಗೆ ಕಳುಹಿಸಿದ್ದನು. ಅದು ಏನಾಯಿತೆಂದು ಕೂಡಾ ಗೊತ್ತಾಗಲಿಲ್ಲ. ಅದೆಲ್ಲಿಯೋ ಕಸದ ಕುಪ್ಪೆಗೆ ಹಾಕಿರಬೇಕು. ಈಗಣಕಾಲದಲ್ಲಿ ಕತೆಗಳ ಬರೆಹಗಾರರೆಲ್ಲ ಒಂದು ಲೆಕ್ಕಕ್ಕೆ ಬರುವರೆ? ಯಾರು ನೋಡಿದರೂ ಕತೆಗಾರರೆ. ಎಲ್ಲಿ ನೋಡಿದರೂ ಕತೆಗಳೆ. ಮಾಸ ಪತ್ರಿಕೆಗಳ ಆಫೀಸಿಗೆ ತಿಂಗಳಿಗೆ ನೂರಾರು ಕತೆಗಳು ಹೋಗುತ್ತಲೇ ಇದ್ದರೆ ಅವರಾದರೂ ಅದನ್ನೆಲ್ಲಾ ನೋಡಲು ಸಾಧ್ಯವಾದೀತೆ? ಅಂತಹದರಲ್ಲಿ ಬಿಡಿ ಬರೆಹಗಾರನಾದ ಶೀನುವನ್ನು ಯಾರು ಲಕ್ಷ್ಯಮಾಡಬೇಕು? ಓದಿ ನೋಡುವಷ್ಟು ವ್ಯವಧಾನವಾದರೂ ಯಾರಿಗಿದ್ದೀತು? ಓದಿ ನೋಡದೆ ಬೆಲೆಯನ್ನು ಕಟ್ಟುವುದಾದರೂ ಹೇಗೆ? ಅಂತೆಯೆ ನಿಜವಾದ ಕತೆಗಾರರೂ,

ವಿಚಾರವಂತ ಲೇಖಕರೂ ಈ ಬಿಡುವುಡಿ ಬರೆಹಗಾರರ ನಡುವೆ ಸಿಕ್ಕಿ ಕುಸ್ತಿಯ ಪುಟ್ಟಿಗೆ ಸೇರಬೇಕಾಗಿ ಸಂಭವವುಂಟು. ಬಲ್ಲಿದರು ಆಲೋಚನೆ ಮಾಡಿ ಕರ್ಣಾಟಕದ ಕೇಂದ್ರ ಸ್ಥಾನದಲ್ಲಿ ನಿಷ್ಪಕ್ಷಪಾತವಾದ, ವಿಮರ್ಶಕ ಜ್ಞಾನವುಳ್ಳ ಒಂದು "ಕನ್ನಡ ಲೇಖನ ಪರೀಕ್ಷಾಮಂಡಲಿ'' ಯನ್ನು ನಿಯೋಜಿಸಬಾರದೆ? ಅಲ್ಲಿ ಉತ್ತೀರ್ಣತೆಯನ್ನು ಹೊಂದಿದ ಕನ್ನಡ ಸಾಹಿತ್ಯಗಳು ಮಾತ್ರವೇ ಪ್ರಕಟವಾಗತಕ್ಕುದೆಂಬ ಶಾಶನ ವೊಂದು ಹೊರಡಬಾರದೆ?—ಹೌದು. ಮೇಲು! ನಿಜ. ಆದರೆ ಇದಕ್ಕೆಲ್ಲಾ ಧನಸಹಾಯ ಮಾಡಿ ಸಂಸ್ಥಾಪನೆ ಮಾಡುವ ಉದಾರ ಘನಶಾಲಿಗಳು ಕರ್ಣಾಟಕದಲ್ಲಿ ಯಾರಿದ್ದಾರೆ? ಇದು ಒಗ್ಗಟ್ಟಿನಿಂದ ಆಗುವ ಕೆಲಸ—ಇದೆಲ್ಲಾ ಆಗುವುದಿಲ್ಲ—ಹೋಗುವುದಿಲ್ಲ. ಕೇವಲ ಬಡ ಶೀನುವಿನ ಮನಸ್ಸಿನ ವಿಚಾರಗಳು ಮಾತ್ರ. ಅಂತೆಯೇ ಶೀನು ಪ್ರಕಟನಾತುರವನ್ನು ಬದಿಗಿಟ್ಟು ಮೊತ್ತಮೊದಲು ಯಾರಾದರೊಬ್ಬರು ದೊಡ್ಡ ಕನ್ನಡ ವಿದ್ವಾಂಸರಿಗೆ ಪರಿಚಿತನಾಗಿ, ತನ್ನ ಗ್ರಂಥಗಳನ್ನು ಅವರಿಂದ ಓದಿಸಿ, ಯೋಗ್ಯಾಯೋಗ್ಯತೆಗಳನ್ನು ನಿರ್ಣಯಿಸಿಕೊಂಡು ಆ ಮೇಲಷ್ಟೆ ಪ್ರಕಟನೆಯ ಪ್ರಯತ್ನ ಆ ಪ್ರಕಾರವಾಗಿ ಮೈಸೂರಿನ ಸುಪ್ರಸಿದ್ಧ ಕನ್ನಡ ವಿದ್ವನ್ಮಣಿಗಳೊಬ್ಬರಿಗೆ ಒಂದು ವಿನಂತಿ ಪತ್ರವನ್ನು ಬರೆದು ಹಾಕಿದನು. ಅದಕ್ಕೆ ಬಹುಕಾಲ ಉತ್ತರವು ಬಾರದೇ ಹೋದ ಮೇಲೆ, ಮತ್ತೆ ಬರೆದುದಕ್ಕೆ "ಮನ್ನಿಸಿರಿ ನಿಮ್ಮಂತಹರನ್ನು ಪ್ರೋತ್ಸಾಹಗೊಳಿಸಲು ನಾವು ನಿರಂತರ ತತ್ಪರರೇ. ನಿಮ್ಮ ಗ್ರಂಥಕ್ಕೆ ಸಂತೋಷದಿಂದ ನಮ್ಮ ಹೆಸರಿನ ಮುನ್ನುಡಿ ಬೇಕಾದರೆ ಹಾಕಿರಿ. ಆದರೆ ನಮಗೆ ಬರೆಯಲು ಸಮಯವಿಲ್ಲದ ಕಾರಣ ನೀವೇ ಒಕ್ಕಣಿಸಿ ಕಳಿಸಿರಿ. ರುಜು ಮಾಡಿ ಕಳುಹಿಸುತ್ತೇವೆ. ಪ್ರಿಂಟಾದ ಅನಂತರ ಒಂದು ಕಾಪೀ ಕಳಿಸಿದರೆ ನಾವು ನಿಧಾನವಾಗಿ ಓದಿ ನೋಡಲು ಅನುಕೂಲವಾಗುವುದು." ಎಂಬೀ ರೀತಿಯ ಪ್ರವಂಚನೆಯ ಪ್ರತ್ಯುತ್ತರವೇ ಬಂದಿತ್ತು. ಆ ಮೇಲೆ ಆ ಕೆಲಸದಲ್ಲಿ ಅವನು ಮುಂದೆ ಹೋಗಲಿಲ್ಲ. ಆದರೆ ಲೇಖನ ವ್ಯವಸಾಯದಲ್ಲಿ ಉತ್ಸಾಹಗೆಡದೆ ಕಾಲನಿರೀಕ್ಷಣೆ ಮಾಡುತ್ತ ಒಂದು ಕೈಯಲ್ಲಿ ಲೇಖಣಿಯನ್ನೂ ಇನ್ನೊಂದು ಕೈಯಲ್ಲಿ ಸಟ್ಟುಗವನ್ನೂ ಧರಿಸಿಕೊಂಡು ಕಲಾಪಾಕವನ್ನು ಮಾಡುತ್ತಲೇ ಇದ್ದನು.

ಅವನ ರಾಯರಾದ ವೆಂಕೋಬರಾಯರಿಗೂ, ಮಂಗಲಕರ ಮಹಾಶಯರಿಗೂ ಕ್ಲಬ್ಬಿನ ಮೂಲಕವಾಗಿ ಪರಿಚಯವೇರ್ಪಟ್ಟಿತ್ತು. ಲೇಖನ-ಭಾಷಣ-ಉಪಾಧ್ಯಾಯನಗಳ ಮೂಲಕವಾಗಿ ಮಂಗಲಕರರಿಗೆ ಕನ್ನಡ ನಾಡಿನಲ್ಲಿ ಉತ್ತಮವಾದ ಸ್ಥಾನವಿತ್ತು. ಅವರು ಒಂದು ದಿನ ವೆಂಕೋಬರಾಯರ ಮನೆಗೆ ಏನೋ ಮಾತಾಡಲಿಕ್ಕಾಗಿ ಬಂದಾಗ, ಪೆನ್ಸಿಲಿನಿಂದ ಬರೆದ ವೆಂಕೋಬರಾಯರ ಭಾವಚಿತ್ರವೊಂದು ಗೋಡೆಯಲ್ಲಿದ್ದುದನ್ನು ನೋಡಿ—"ಇದು ಯಾರು ಚಿತ್ರಿಸಿದ್ದು? ಬಹಳ ಚಂದಾಗಿ ಬಂದಿದೆಯಲ್ಲಾ?'' ಎಂದು ಕೇಳಿದರು.

"ಅದೇ ನೋಡಿ ಮಿಸ್ಟರ್ ಮಂಗಲ್ಕರ್! ಮಣ್ಣಿನಲ್ಲಿ ಚಿನ್ನವು ಬೆರೆತುಕೊಂಡಿರುವ ಹಾಗೆ, ನಮ್ಮ ಅಡುಗೇ ಮನೆಯಲ್ಲಿ ಒಬ್ಬ ಕಲಾವಿದನಿದ್ದಾನೆ ತಮ್ಮಂತಹರ ಮೂಲಕವಾಗಿ ಪ್ರಕಾಶಕ್ಕೆ ಬರಲು ಯೋಗ್ಯನಿರುವನೆಂದು ನಾನು ನಂಬುತ್ತೇನೆ. ಅವನ ಚಿತ್ರಕೆಲಸವಿದು—'' ಎಂದು ವೆಂಕೋಬರಾಯರು ಪೀರಿಕೆ ಹಾಕಿ—"ಶೀನಾಚಾರ್ರಿ! ಎರಡು ಲೋಟಾ ಕಾಫೀ ತನ್ನಿ." ಎಂದು ಕರೆದು ಆಜ್ಞಾಪನೆ ಮಾಡಿದರು.

ಹಾಗೆಯೇ ನಮ್ಮ ಅಡುಗೆಯ ಶೀನು ಕಾಫಿಯನ್ನು ತಯಾರಿಸಿಕೊಂಡು ತಂದು, ಆ ಮಹಾರಾಯರುಗಳೆದಿರು ಮೇಜಿಯಮೇಲಿಟ್ಟಾಗ ಅವನಿಗೆ ಅವರ ಪರಿಚಯವನ್ನೂ, ಅವರಿಗೆ ಅವನ ಪರಿಚಯವನ್ನೂ ವೆಂಕೋಬರಾಯರು ಸಂಬಂಧಿಸಿದರು. ಮಂಗಲ್ಕರರು ಶೀನು ಬರೆದ ಚಿತ್ರಪಟವನ್ನು ನೋಡಿ ತಲೆಯೊಲಿದರು. ಹಾಗೆಯೇ ಅವನ ಕನ್ನಡ ಲೇಖನ ವ್ಯವಸಾಯವನ್ನೂ ಕೇಳಿ—"ಶ್ರೀನಿವಾಸ! ನೀನು ನಿಜವಾಗಿಯೂ ಮುಂದಕ್ಕೆ ಬರಲು ಯೋಗ್ಯನಾಗಿರುತ್ತಿ. ಯಾವುದಕ್ಕೂ ನೀನು ನಾಳೆ ಸಮಯವಿರುವಾಗ ನಮ್ಮ ಮನೆಗೆ ಬಾ. ಸತ್ಯನಾರಾಯಣ ಪೇಟೆಯಲ್ಲಿ ನನ್ನ ಮನೆಯಿದೆ. ಸಾಮಾನ್ಯವಾಗಿ ಬೆಳಗ್ಗೆ ಹತ್ತುಗಂಟೆಯವರೆಗೂ, ಮಧ್ಯಾಹ್ನ ಒಂದು ಗಂಟೆಯಿಂದ ಮೂರು ಗಂಟೆಯವರೆಗೂ ನಾನು ಮನೆಯಲ್ಲಿಯೇ ಇರುತ್ತೇನೆ. ಬರುವಾಗ ನಿನ್ನ ಚಿಲೋ ಕೃತಿಯನ್ನು ತೆಗೆದುಕೊಂಡು ಬಾ. ಪರಿಶೀಲನೆ ಮಾಡಿ ನೋಡೋಣ. ನೀನು ಹೀಗೆ ಏನೂ ಪ್ರಯತ್ನ ಮಾಡದೆ ಒಳಗಿಂದೊಳಗೇ ಕೊಳೆತು ಹೋಗಬಾರದು." ಎಂದು ಬೋಧನೆ ಮಾಡಿಹೋದರು.

ವಿದ್ಯಾಧಿಕಾರಿಗಳಾದ ಮಂಗಲಕರರ ಪ್ರಸಿದ್ಧಿಯನ್ನು ಶ್ರೀನಿವಾಸನೂ ಕೇಳಿದ್ದನು. ತನ್ನಂತಹನ ಕೃತಿಗಳು ಬಹಿರಂಗವಾಗಬೇಕಾದರೆ ಅಂತಹ ಮಹನೀಯರ ದೃಷ್ಟಿಯು ಬೆಳಕೇ ಬೇಕೆಂದು ಬಯಸಿಯೂ ಇದ್ದನು. ಅದರಂತೆ ಯೋಗವೂ ಕೂಡಿ ಬಂದುದರಿಂದ, ತನ್ನ ಸಿದ್ಧ ಸಂಗ್ರಹದೊಳಗಣಿಂದ, ಕೆಲವು ಚೆಲೋ ಸಣ್ಣ ಕತೆಗಳ ಕೂಟವನ್ನು ಎತ್ತಿಕೊಂಡು ಮಂಗಲ್ಕರರ ಮನೆಗೆ ಹೋದನು ಅವರು ಅವುಗಳನ್ನು ಓದಿ ನೋಡಿ—"ಪರವಾಯಿಲ್ಲ. ಭಾವನೆಗಳೆಲ್ಲಾ ಚೆನ್ನಾಗಿವೆ. ಶ್ರೀನಿವಾಸ! ನೀನು ಇಷ್ಟು ಚೆನ್ನಾಗಿ ಬರೆಯುತ್ತೀಯಂತ ನಾನು ಎಣಿಸಿರಲಿಲ್ಲ. ಒಳ್ಳೇ ನುರಿತ ಲೇಖಕನಾಗಿರುತ್ತಿಯಪ್ಪಾ!'' ಎಂದರು.

'' ಆದರೇನು ಸ್ವಾಮಿ? ಎಲ್ಲರೂ ತಮ್ಮ ಹಾಗೆ ಗುಣಗ್ರಾಹಿಗಳಾಗುವರೆ? ಒಬ್ಬ ಕ್ಷುಲ್ಲಕ ಅಡುಗೆಯವನ ಬರೆಹವೆಂದ ಕೂಡಲೇ ಅದನ್ನು ಓದಿ ಕೂಡಾ ನೋಡುವ ಬುದ್ಧಿ ಯಾರಿಗೂ ಹುಟ್ಟುವುದಿಲ್ಲ."

''ನೀನು ಇನ್ನೂ ಯಾವ ಪತ್ರಿಕೆಯಲ್ಲಿಯೂ ಏನೂ ಕೊಡಲಿಲ್ಲವೆ?"

'' ಇಲ್ಲ. ಪುಡಿ ಲೇಖಕರಿಗೆ ಪತ್ರಿಕೆಗಳಲ್ಲಿ ಬೆಲೆಯೇ ಬರುವುದಿಲ್ಲವೆಂದು ನನ್ನ ನಂಬಿಗೆ. ಏನಾದರೂ ಕಳುಹಿಸಿದರೆ ಪ್ರತ್ಯುತ್ತರವೂ ಇಲ್ಲ, ಪ್ರೋತ್ಸಾಹವೂ ಇಲ್ಲ–ಪ್ರತಿಫಲವೂ ಇಲ್ಲ. ಇಂತಹ ಮರ್ಯಾದೆಯಿಲ್ಲದ ಕೆಲಸಕ್ಕೆ ಇಳಿಯಲು ಮನಸ್ಸಿಲ್ಲದೆ ಬಿಟ್ಟಿದ್ದೇನೆ.''

'' ಛೆ ಛೆ! ಹಾಗೆ ನಿರಾಶನಾಗಬಾರದು. ಅದು ಪತ್ರಿಕಾಕರ್ತರ ತಪ್ಪಲ್ಲ. ಲೇಖಕರು ಹೆಚ್ಚಿ ವಾಚಕರು ಕಡಮೆಯಾದುದರ ಪರಿಣಾಮವದು. ಅದಕ್ಕಾಗಿ ನೀನು ಏನು ಮಾಡಬೇಕೆಂದರೆ, ಒಬ್ಬ ನಂಬುಗೆಯ ಮುಖಂಡನನ್ನು ಆದರಿಸಿಕೊಂಡು, ಅವನೊಂದಿಗೆ ಮೆಲ್ಲನೆ ಸಾಹಿತ್ಯ ಮಂದಿರದ ಬಾಗಿಲನ್ನು ಪ್ರವೇಶಮಾಡಬೇಕು. ಆ ಮೇಲೆ ಒಬ್ಬನಿಗೇ ಬೇಕಾದ ಹಾಗೆ ವಿಹರಿಸಿಕೊಳ್ಳಬಹುದಾಗುತ್ತೆ."

'' ಅದಕ್ಕಾಗಿಯೆ ನಾನು ಕಾಲಸಿರೀಕ್ಷಣೆ ಮಾಡುತಿದ್ದೆ. ತಮ್ಮಂತಹರ ಮುಂದೀವಿಗೆಯೊಂದು ದೊರೆತುದು, ಶುಭೋದಯವೆಂದು ತಿಳಿಯುತ್ತೇನೆ."

'' ಚಿಂತಿಸದಿರು, ಶ್ರೀನಿವಾಸ, ಈಗ ಮುಖ್ಯವಾಗಿ ಜನರು

ಮೋಹಿಸುವುದೆಲ್ಲಾ ಬಹಿರಾಡಂಬರಕ್ಕೆ. "ಇಂತಹ ಪಂಡಿತರು ಬರೆದ ಗ್ರಂಥವಿದು." "ಈ ಗ್ರಂಥ ಲೇಖಕರು ಎಂ. ಎ. ಎಲ್. ಟಿ." "ಈ ಗ್ರಂಥದಲ್ಲಿ ಇಂತಹ ಮಹನೀಯರ ಮುನ್ನುಡಿಯುಂಟು." ಎಂದು ಮುಂತಾಗಿ ಗೊತ್ತಾದರೆ ಸಾಕು. ಆ ಗ್ರಂಥವು ವಿಜಯ ಸಂಚಾರ ಮಾಡಲು ಪ್ರಾರಂಭಿಸಿಬಿಡುತ್ತೆ. ನನಗೆ ಕೆಲವು ಪ್ರತಿಕಾ ಸಂಪಾದಕರ ಪರಿಚಯವುಂಟು. ಪ್ರಕಾಶಕರ ಗುರುತುಂಟು "ಚೆಲೋ ಗ್ರಂಥಗಳನ್ನು ಪ್ರಕಾಶನಕ್ಕೆ ಕಳುಹಿಸುವಿರಾ?" ಎಂದು ಅವರ ಕಡೆಯಿಂದ ಪತ್ರಗಳೂ ಬಂದಿವೆ ಈ ಊರಿನಲ್ಲಿ ಕೂಡಾ ಒಬ್ಬಿಬ್ಬರು ಸಣ್ಣ ಮಾಸ್ತರರು ಬರೆದ ಗ್ರಂಥಗಳನ್ನು ನನ್ನ 'ಮೂಲಕವಾಗಿ ಪ್ರಕಾಶಗೊಳಿಸಿರುತ್ತೇನೆ. ಆದರೆ ಅವರೆಲ್ಲಾ ನಿನ್ನಂತಹ ಸಾಧನೆಯ ವ್ಯವಸಾಯಿಗಳಲ್ಲ. ನಿನ್ನಂತಹರನ್ನು ಕಂಡರೆ ನನಗೆ ತುಂಬಾ ಸಂತೋಷ."

"ತಾವು ಕೂಡಾ ಕೆಲವು ಗ್ರಂಥಗಳನ್ನು ಬರೆದಿರುವುದಾಗಿ ಕೇಳಿದ್ದೇನೆ."

"ಬರೆದಿದ್ದೇನೆ–ನಿಜ. ಆದರೆ ಕಥೆ–ಕಾದಂಬರಿಗಳನ್ನು ಬರೆಯುವಷ್ಟು ಚಾತುರ್ಯ–ವ್ಯವಧಾನಗಳು ನನಗಿದೆಯೆ? ಸರಕಾರೀ ಉದ್ಯೋಗದಲ್ಲಿರುವಾಗ, ಇಂತಹ ಕೆಲಸ ಮಾಡಬೇಕಾದರೆ ಫರ್‌ಮಿಟ್ ಪಡೆಯಬೇಕು. ಅಂತೂ ಮೂರು–ನಾಲ್ಕು ಗ್ರಂಥ ಪ್ರಿಂಟು ಮಾಡಿಸಿ ಹೊರಗೆ ಹಾಕಿಸಿದ್ದೇನೆ."

"ನನಗೆ ಅವುಗಳನ್ನು ಓದಲಿಕ್ಕೆ ಕೊಟ್ಟರೆ ತುಂಬಾ ಉಪಕಾರ"

"ಅಗತ್ಯವಾಗಿ ಓದು. ಆದರೆ ಅವು ವಿಜ್ಞಾನ ಶಾಸ್ತ್ರಕ್ಕೆ ಸಂಬಂಧಪಟ್ಟದ್ದು!—ಕಥೆ ಕಾದಂಬರಿಗಳಲ್ಲ!"

"ಕನ್ನಡದಲ್ಲಿ ಇಂತಹ ಉಚ್ಚರೀತಿಯ ಗ್ರಂಥಗಳೇ ಕಡಿಮೆ. ಅದನ್ನು ರಚನೆ ಮಾಡುವುದೆಂದರೆ ಸಾಮಾನ್ಯ ಕಾರ್ಯವೆ?"

"ಅದಿರಲಿ, ಶ್ರೀನಿವಾಸ, ನೀನು ತಂದ ಈ ಕಥೆಗಳನ್ನು ಪತ್ರಿಕೆಗೆ ಕಳುಹಿಸೋಣ. ನಿನ್ನ ಹೆಸರು ಮುಂದೆ ಬರಲು ಪತ್ರಿಕೆಗಳೇ ತಕ್ಕದಾರಿ. ನಿನ್ನ ಲೇಖನಗಳನ್ನು ಕನ್ನಡಿಗರು ಹೇಗೆ ಓದುತ್ತಾರೋ ನೋಡೋಣ.

ಆ ಮೇಲೆ ಇದುವರೆಗೆ ನೀನು ಎಷ್ಟು ಗ್ರಂಥಗಳನ್ನು ಬರೆದಿರುವೆ ಪೂರ್ತಿ ತೆಗೆದುಕೊಂಡು ಬಾ.”

“ನಾಲ್ಕೈದು ಸಿದ್ಧವಾಗಿವೆ.”

“ಪೂರ್ತಿಯೋ? ಅರ್ಧಮರ್ಧವೋ!?”

“ಪೂರ್ತಿಯೇ! ಅರ್ಧಮರ್ಧದ ಅಭ್ಯಾಸವೇ ನನಗಿಲ್ಲ. ಒಂದು ಕೆಲಸವು ಕೈಯಲ್ಲಿರುವಾಗ, ಅದು ಸಣ್ಣದಿರಲಿ ದೊಡ್ಡದಿರಲಿ, ನಡುವೆ ಬೇರೊಂದು ಸ್ಫೂರ್ತಿಯೇ ಹುಟ್ಟಲಿ, ಅದನ್ನು ತಡೆದುಕೊಂಡು, ಹಿಡಿದುದನ್ನು ಮುಗಿಸಿ ಬದಿಗಿಟ್ಟೇ ಬೇರೆ ವಿಷಯಕ್ಕೆ ತಲೆಕೊಡುತ್ತೇನೆ.”

“ಕೃತಕೃತ್ಯರಾಗುವವರ ಕ್ರಮವೆಂದರೆ ಇದೇ ಸರಿ. ಕೆಲವು ಲೇಖಕರಿದ್ದಾರೆ-ಒಂದು ಗ್ರಂಥದಲ್ಲಿ ಅರ್ಧ ಬರೆಯುವಾಗ, ಇನ್ನೊಂದರ ಸ್ಫೂರ್ತಿಯುಂಟಾಗಿ-ಅದಕ್ಕೆ ಕೈ ಹಾಕಿ,-ಅದನ್ನೂ ಮುಗಿಸದೆ ಮತ್ತೊಂದಕ್ಕೆ ಪ್ರಾರಂಭಿಸಿ-ಬೇರೊಂದಕ್ಕೆ ಹಾರಿ-ಕಡೆಗೆ ಒಂದೂ ಮುಗಿಸದೆ, ದೊಡ್ಡ ಲೇಖನ ರಾಶಿಗಳ ಮುಂದೆ ಮೆರೆಯುವವರು! ನೀನು ಅಂತಹವನಲ್ಲವಾದರೆ ಸರಿ.”

ಶೀನು ನಕ್ಕನು.

ಮತ್ತೆ ಮಂಗಲಕರರಂದರು:—“ಇರಲಿ, ಶ್ರೀನಿವಾಸ, ಈಗ ಹೊಸತಾಗಿ ಹೊರಗೆ ಬರುವವರಿಗೆಲ್ಲಾ ಒಂದು ಹೊಸ ಉಪಾಯದ ಮಾರ್ಗವುಂಟು. ಅದೇನಂದರೆ, ಸಂಕೇತನಾಮಧಾರಣೆ. ಈ ಸಂಕೇತನಾಮದಿಂದ ಲೇಖನವನ್ನು ಹೊರಗೆ ಹಾಕಿ, ಜನರ ಅಭಿಪ್ರಾಯವು ಏನು ಕೇಳಿಸುತ್ತದೆಂದು ಮರೆಯಲ್ಲಿದ್ದೇ ಹೊಂಚುಹಾಕಬಹುದು. ಒಂದು ವೇಳೆ ಅಪಕೀರ್ತಿ ಬರುವುದೆಂದಾದರೆ, ಅಡಗಿಕೊಳ್ಳಲೂಬಹುದು. ಜನರು ಮೆಚ್ಚಿ, ನಿಜರೂಪವನ್ನು ನೋಡಬೇಕೆಂದು ಬಯಸಿದಾಗ, ನಿಜನಾಮವನ್ನು ಹೊರಗೆ ಹಾಕಿ ಮೆರೆಯಲೂಬಹುದು. ನಿನಗೆ ಇದೇ ಬಗೆಯ ಮಾರ್ಗವೇ ಮೇಲಾಗಿದೆ”

“ಒಳ್ಳೆಯದು ಸ್ವಾಮಿ.”

“ಹೌದು. ಯೋಚನೆ ಮಾಡಿ ಒಂದು ಗುಪ್ತನಾಮವನ್ನಿಟ್ಟುಕೊ.”

“ಹೆಸರನ್ನು ಹಿರಿಯರೇ ಇಡಬೇಕಲ್ಲವೆ? ನಾನೀಗ ದಿಕ್ಕಿಲ್ಲವ

ದೇಸಿಗನಾಗಿದ್ದೇನೆ. ಪ್ರಕೃತ ಹಿತಚಿಂತಕರಾಗಿ ಪ್ರಾಪ್ತರಾದ ತಾವೇ ನನಗೆ ಗುರುಗಳೂ ಹಿರಿಯರೂ ಆಗಿದ್ದೀರಿ ಆದುದರಿಂದ ನೀವೇ ನನಗೊಂದು ಹೆಸರನ್ನೂ ಇಟ್ಟು ಮುಂದಕ್ಕೆ ಕರೆದುಕೊಂಡು ಹೋಗಬೇಕು."

"ಅದೇನಪ್ಪಾ? ನಿನಗೆ ಯಾರೂ ಇಲ್ಲವೆ?"

"ಇಲ್ಲ."

"ಅಂದರೆ?—ತಂದೆ—ತಾಯಿ—?"

"ಇಲ್ಲ. ನಿರ್ಭಾಗ್ಯನಾದ ನನ್ನನ್ನು ತಬ್ಬಲಿಯಾಗಿ ಬಿಟ್ಟು ಪರಲೋಕವಾಸಿಗಳಾದರು."

"ಮದುವೆಯಾಗಿದೆಯೆ?"

"ಆಗಿದೆ. ಎಲ್ಲವನ್ನೂ ಬಿಟ್ಟು ನಾನು ಬಂದಿದ್ದೇನೆ."

"ಕಾರಣ?"

"ಕಾರಣ—ನನಗೆ ಮದುವೆಗೇ ಇಷ್ಟವಿದ್ದಿಲ್ಲ ತಾಯಿಯ ಒತ್ತಾಯದಿಂದ ಏನೋ ಒಂದು ಆಯಿತು. ನಾನು ಎಲ್ಲಾ ವ್ಯವಸ್ಥೆ ಮಾಡಿ, ಎಲ್ಲಾ ಭಾರವನ್ನು ತಮ್ಮನ ಮೇಲೆ ಬಿಟ್ಟುಕೊಟ್ಟು, ಪತ್ತೆಯಿಲ್ಲದೆ ಬಂದುಬಿಟ್ಟಿದ್ದೇನೆ. ಮುಖ್ಯವಾಗಿ ನನಗೆ ಸಂಸಾರದ ಮೇಲೆ ಇಷ್ಟವಿಲ್ಲ. ಸತ್ಯವಾಗಿಯೂ ನನಗೆ ಕನ್ನಡ ತಾಯಿಯ ಸೇವೆಯೇ ಚಿರಾನಂದವೀಯುವಂತಹುದಾಗಿದೆ. ನನ್ನ ತಮ್ಮನೊಬ್ಬನು ನನ್ನನ್ನು ಪತ್ತೆ ಮಾಡಲಿಕ್ಕಾಗಿ ಪ್ರಯತ್ನಪಡುತ್ತಿರಬಹುದು. ನಾನು ಅವನಿಗೆ ಪತ್ತೆಹತ್ತಗೊಡದಂತೆಯೇ ಅಡಗಿರಬೇಕಾಗಿದೆ. ಆದುದರಿಂದ ತಾವು ಕೂಡಾ ಈ ವಿಚಾರದಲ್ಲಿ ಹೆಚ್ಚಿನ ವಿಚಾರವನ್ನು ಕೇಳಿದರೆ, ನನ್ನ ದುಃಖವನ್ನೆ ಒಕ್ಕಿದ ಹಾಗಾಗುತ್ತದೆ."

ಶೀನು ಸಗದ್ಗದಿತನಾಗಿ ಹೇಳಿದ ಈ ಮಾತುಗಳನ್ನು ಕೇಳಿ, ಮಂಗಲಕರರು, "ಒಳ್ಳೆಯದು ಬಿಡು. ಕಾಲ ಬಂದರೆ ಎಲ್ಲವೂ ಅನುಕೂಲಿಸುತ್ತದೆ. ಇರಲಿ. ನಾನು ನಿನಗೊಂದು ಸಂಕೇತ ನಾಮವನ್ನು ಇಟ್ಟಿದ್ದೇನೆ. ಅದೇನೆಂದರೆ "ಕನ್ನಡ ಗೆಳೆಯ"

"ಅನುಗೃಹೀತನಾದೆ"

ಈ ಪ್ರಕಾರವಾಗಿ ಅವರ ಬಾಯಿಯಿಂದಲೇ ಹೆಸರು ಕೇಳಿಕೊಂಡು

ಲೇಖನಗಳನ್ನು ಅವರ ಹೆಸರು ವಿಳಾಸದ್ವಾರವಾಗಿಯೇ ಪ್ರಕಾಶನಕ್ಕೆ ಕಳುಹಿಸಬೇಕೆಂದು ಗೊತ್ತು ಮಾಡಿಕೊಂಡರು. ಏಕೆಂದರೆ ಯಃಕಶ್ಚಿತ್ ಶ್ರೀನಿವಾಸನು "ಕೇರ್ ಆಫ್–" ಎಂಬ ವಿಳಾಸದಾರನಾದುದರಿಂದಲೂ, ಬೋಳು ಹೆಸರಿನವನಾದುದರಿಂದಲೂ ಪ್ರಕಾಶಕರು ಅಸಡ್ಡೆ ಮಾಡುವ ಸಂಭವವುಂಟೆಂದು, ಶ್ರೀನಿವಾಸನ ಶ್ರೇಯೋಭಿವೃದ್ಧಿಗಾಗಿಯೇ ಮಂಗಲ ಕರರು ಮಾಡಿದ ಏರ್ಪಾಡದು. ಶೀನುವಿನ ಸಂಗ್ರಹದಲ್ಲಿ ಎಲ್ಲ ಕೃತಿಗಳ ಒಂದೊಂದೇ ಮೂಲಪ್ರತಿ ಮಾತ್ರವೇ ಇತ್ತು. ಅವನ ಮಹಾಸಹಾಯಕ ರಾದ ಮಂಗಲಕರರು ಆ ಪ್ರತಿಗಳ ಕಾಪೀ ತೆಗೆಯುವ ಕೆಲಸಕ್ಕೂ ಕೂಡಾ ಶೀನುವಿಗೆ ಇಲ್ಲದಂತೆ ಮಾಡಿದರು. "ಶ್ರೀನಿವಾಸ, ನೀನು ಸುಮ್ಮನೆ ನಕಲು ತೆಗೆಯುತ್ತ ಸಮಯ ಹರಣ ಮಾಡಬೇಡ. ನನ್ನ ಕಡೆಯಲ್ಲಿ ಸುಂದರವಾಗಿ ಬರೆಯಬಲ್ಲ ಅನೇಕ ಹುಡುಗರಿದ್ದಾರೆ. ನೀನು ಮೂಲ ಪ್ರತಿಗಳನ್ನೆಲ್ಲಾ ತೆಗೆದುಕೊಂಡು ಆಫೀಸಿಗೆ ತಂದುಕೊಡು. ಅಲ್ಲಿ ಎಲ್ಲಾ ಕಾಪೀ ತೆಗೆಸಿ ಆ ಪ್ರತಿಗಳನ್ನು ನಿನಗೆ ವಾಪಸುಕೊಡುತ್ತೇನೆ. ಹೊಸ ಹೊಸ ಕೃತಿಗಳನ್ನು ರಚಿಸುವುದರಲ್ಲಿ ಉತ್ಸುಕನಾಗಿರುವ ನಿನಗೆ ಸಮ ಯವು ಹೊನ್ನಾಗಿದೆ. ಬರೆಯಲಿಕ್ಕಾದರೂ ನಿನಗೆ ಬೇಕಾದಷ್ಟು ಕಾಗದ ಗಳನ್ನು ನಾನೇ ಆಫೀಸಿನಿಂದ ಕೊಡುತ್ತೇನೆ." ಎಂದು ಸಹಾನುಭೂತಿ ಪರವಾಗಿ ಮಾತಾಡಿ ಅವನನ್ನು ಒಡಂಬಡಿಸಿಕೊಂಡರು. ಈ ಬಗೆಯ ಮಂಗಲಕರರ ಶಾಂತಿ–ಸಮಾಧಾನ–ಸೌಮ್ಯಸ್ವರೂಪವನ್ನೂ, ಆದರ ಭಾವ–ಸಹಾನುಭೂತಿ–ಮೊದಲಾದ ಗುಣಗಳನ್ನೂ ತಿಳಿದು ಸರಳ ಸ್ವಭಾ ವದ ಶೀನು ನಂಬಿಯೇ ನಂಬಿದನು. ಅವರ ಕೈಗೆ ಮೂಲಪ್ರತಿಯನ್ನು ಕೊಟ್ಟರೆ ಮತ್ತೆ ತನಗೆ ಬರಲಾರವೆಂದೂ, ಅವರು ಕೊಡುವ ಆಫೀಸಿನ ಕಾಗದದಲ್ಲಿ ತಾನು ಬರೆದರೆ ಅದು ಅವರ ಲೇಖನವಾಗಿ ಹೋಗುವು ದೆಂಬ ಚಮತ್ಕಾರವನ್ನೂ, ತಾನು ಅವರ ಗುಮಾಸ್ತನಾಗಿ ಹೋದೇ ನೆಂಬ ಪರಿಣಾಮವನ್ನೂ, ಸಾಧು ಶೀನಣ್ಣನು ಊಹಿಸಿಕೊಳ್ಳಲಾರದೇ ಹೋದನು. ಅವರು ನಿಜವಾಗಿಯೂ ಹಿಂಬಿದ್ದ ತನ್ನಂತಹರನ್ನು ಮುಂಜರಿಸುವುದರ ಮೂಲಕವಾಗಿ ಕನ್ನಡ ತಾಯಿಯ ಸೇವೆಯನ್ನು ಮಾಡುವ ಮಹಾನುಭಾವರೆಂದು ಮನಸಾ ಅವರನ್ನು ಹೊಗಳಿಕೊಂಡನು.

ಸರಿ. ಹೇಳಿದಂತೆಯೇ ತನ್ನ ಟ್ರಂಕುಪೆಟ್ಟಿಗೆಯೊಳಗೆ ಮಲಗಿದ್ದ "ಕಾರುಣ್ಯ ಮೂರ್ತಿ" ಎಂಬೊಂದು ಕಾದಂಬರಿಯನ್ನೂ, ಇನ್ನೊಂದು ಐತಿಹಾಸಿಕ ಆಖ್ಯಾಯಿಕೆಯನ್ನೂ, ಕೆಲವು ಸಣ್ಣ ಕತೆಗಳ ಒಂದು ಸಂಗ್ರಹವನ್ನೂ, ಕವನಗಳ ಮಾಲಿಕೆಯನ್ನೂ ತೆಗೆದು ಕೇಗಿಟ್ಟನು. ಅವೆಲ್ಲಾ ಮೊದಲು ರಚನೆ ಮಾಡಿದವುಗಳು. ಮತ್ತೆ ಈಗ ಮೊನ್ನೆ ತಾನೇ ಬರೆದು ಮುಗಿಸಿದ " ವಿಧಿಯ ಬಲೆ" ಎಂಬ ಗ್ರಂಥವನ್ನು ಪ್ರಕಾಶನಕ್ಕೆ ಕೊಡಬೇಕೋ ಬೇಡವೋ—ಎಂಬ ಸಂದೇಹವೆದ್ದಿತು. ಏಕೆಂದರೆ ಅದು ಅವನ ಸ್ವಂತ ಕತೆ. ಇದು ಪ್ರಕಟವಾದರೆ ಅವನ ಊರಿನಲ್ಲಿ—ಅವನ ಸಹೋದರನೇನಾದರೂ ಓದಿದರೆ—ಪಾಪ, ಅವನಿಗೆ ತುಂಬಾ ಸಂಕಟ ವಾದೀತು ಅಲ್ಲದೆ ರಾಮಾ ಜೋಯಿಸ, ಸುಂದರಿ, ಮುಕುಂದರಾಯ, ಮೊದಲಾದವರಿಗೂ ಚಂದಾಗಿ ನಾಟಿ ವ್ಯಥೆಗೊಳಿಸೀತು! ಸ್ವಂತ ಅವ ನಿಗೇ ವ್ಯಥಾಕಾರಿಯಾದರೂ ಆಗಬಹುದು ಯಾವುದಕ್ಕೂ ಇರಲಿ ನೋಡೋಣವೆಂದುಕೊಂಡು, "ವಿಧಿಯ ಬಲೆ" ಯನ್ನು ಪೆಟ್ಟಿಗೆಯೊಳ ಗಿಟ್ಟು, ಉಳಿದವುಗಳನ್ನೆಲ್ಲಾ ಎತ್ತಿಕೊಂಡು ವಿದ್ಯಾಧಿಕಾರೀ ಮಂಗ ಲ್ಕರರ ಆಫೀಸಿಗೆ ಹೋಗಿ ಅವರಿಗೆ ಕೊಟ್ಟನು.

ಆ ಮೇಲೆ "ವಿಧಿಯ ಬಲೆ" ಯೇ ಅವನ ತಲೆಯನ್ನು ತಿನ್ನ ಲಾರಂಭಿಸಿತು. "ವಿಧಿಯ ಬಲೆ" ಯನ್ನು ನೆನೆದಂತೆ ಅವನ ತಾಯಿ, ತಮ್ಮ ತಂಗಿ-ಕಮಲಾ-ಮುಂತಾದ ವ್ಯಕ್ತಿಗಳೆಲ್ಲಾ ಪದೇಪದೇ ಹಾಯ್ದು ಹಾಯ್ದು ಮನಸ್ಸನ್ನು ಕರಗಿಸಲಾರಂಭಿಸಿದರು. ತನ್ನ ಜೀವಿತ ಕಾಲದಲ್ಲಿ ಮಾತ್ರ "ವಿಧಿಯ ಬಲೆ" ಪ್ರಕಟನಾರ್ಹವಾದುದಲ್ಲವೆಂದು ಯೋಚನಾಂ ತರದಲ್ಲಿ ತಿಳಿದು ಬಂತು. ಅದೊಂದು ಮಾನಸ ಸಂತಾಪಾವೇಗದ ಜ್ವಾಲೆಯಲ್ಲಿ ಮರ್ದನವಾಗಿ ಅವನ ಪ್ರಕೃತಿಸಿದ್ಧ ಪ್ರತಿಭೆಯ ಸಂಯೋಗ ದಿಂದ ಲೇಖನ ದ್ವಾರಾ ಅದು ಗ್ರಂಥರೂಪವನ್ನು ಪಡೆದುಬಿಟ್ಟಿತ್ತು. ಬರೆದ ಮೇಲೆ ಅದರ ವಿಷಯ, ಆಲೋಚನೆ ಮಾಡುವಾಗ ವಿಯೋಗ ಹೊಂದಿದ್ದ ಆತ್ಮೀಯ ವ್ಯಕ್ತಿಗಳೆಲ್ಲಾ ಅದರಲ್ಲಿ ಮೂರ್ತಿಮಂತರಾಗಿ ಎದ್ದಿರುವಂತೆ ಕಾಣುತ್ತಿದ್ದರು. ಹೀಗೆಯೇ ಇದ್ದರೆ ಮುಂದೆ ಸಾಹಿತ್ಯ ಸೇವೆಗೆ ತುಂಬಿರುವ ಉತ್ಸಾಹವೇ ಕುಂದಿಹೋಗುವಂತೆ ಅವನಿಗೆ

ಭಾಸವಾಯಿತು. ಇಂತಹ ಹೃದಯದ್ರಾವಕವಾದ ಗ್ರಂಥವನ್ನು ಏಕೆ ಬರೆದೆನೋ ಎಂದು ಪಶ್ಚಾತ್ತಾಪಪಡಲಾರಂಭಿಸಿದನು. ಆ ಗ್ರಂಥವನ್ನು ಸುಟ್ಟುಹಾಕಿ ಬಿಡಬೇಕೆಂದೂ ಯೋಚಿಸಿಕೊಂಡನು. ಆದರೆ ತನ್ನ ಶಿಶುವನ್ನು ತಾನೇ ಕೊಲ್ಲಲುದ್ಯೋಗಿಸುವಂತೆ ಅದು ಪರಮ ಕಷ್ಟವೇ ಆಯಿತು.

ಈ ಸ್ಥಿತಿಯಲ್ಲಿರುವಾಗ ವೆಂಕೋಬರಾಯರ ಮನೆಗೆ ಬರುವ ವಾರ್ತಾಪತ್ರಿಕೆಯೊಂದರಲ್ಲಿ—"ಸಿನೀಮಾ ಚಿತ್ರಪಟಕ್ಕೆ ಯೋಗ್ಯವಾದೊಂದು ಸಾಮಾಜಿಕ ಕಥೆ ಬೇಕು, ಸ್ವೀಕೃತ ಕಥೆಗೆ ಯೋಗ್ಯವಾದ ಪಾರಿತೋಷಕವನ್ನು ಕೊಡಲಾಗುವುದು."

"ಪ್ರಕೃತಿಕಳೋದ್ಧಾರಕ ಮಂಡಲಿ,
ಮದರಾಸು"

ಎಂಬ ಈ ಪ್ರಕಟನೆಯನ್ನು ಓದಿದನು

ಒಡನೆಯೇ ಅವನು "ಈ ದಾರಿಯಲ್ಲಾದರೂ ಈ "ವಿಧಿಯ ಬಲೆ" ಕಣ್ಮರೆಯಾಗಿ ಹೋಗಲಿ. ಗ್ರಂಥಕರ್ತನ ಸ್ಥಾನದಲ್ಲಿ ನನ್ನ ನಿಜವಾದ ಹೆಸರನ್ನು ಕಾಣಿಸಬಾರದು. ಏಕೆಂದರೆ, ನಾನು ಅಜ್ಞಾತನಾಗಿಯೇ ಕಡೆತನಕವೂ ಇರಬೇಕೆಂದು ತೀರ್ಮಾನಿಸಿರುತ್ತೇನೆ. ನನ್ನ ಸಂಕೇತ ನಾಮವಾದ ''ಕನ್ನಡ ಗೆಳೆಯ'' ಎಂದು ಹಾಕಿ ಕಳುಹಿಸಿಬಿಡುತ್ತೇನೆ." ಎಂದು ಭಾವಿಸಿಕೊಂಡು ಹಾಗೆಯೇ ''ವಿಧಿಯ ಬಲೆ'' ಯನ್ನು "ಪ್ರಕೃತಿ ಕಳೋದ್ಧಾರಕ ಮಂಡಲಿ" ಗೆ ಕಳುಹಿಸಿಬಿಟ್ಟನು. ಮುಂದೆ ಮೂರು ತಿಂಗಳನಂತರ ''ವಿಧಿಯ ಬಲೆ" "ಪಿ. ಕೆ. ಮಂಡಲಿ" ಯವರಿಂದ ಸ್ವೀಕೃತವಾಗಿ, ಮುನ್ನೂರು, ರೂಪಾಯಿಯ ಮಣಿಯಾರ್ಡರು ಅವನಿಗೆ ಬಂತು, ಆ ಹಣವನ್ನು ತನ್ನ ಆಡುಗೆಯ ಸಂಪಾದನೆಯೊಂದಿಗೆ ಬ್ಯಾಂಕಿನಲ್ಲಿ ಕಟ್ಟಿ ಮುಂದೆ ಒಂದು ಸಾವಿರ ರೂಪಾಯಿಯಾದ ಮೇಲೆ ಸಹೋದರ ಕೃಷ್ಣನಿಗೆ ಕಳುಹಿಸಿಕೊಡಬೇಕೆಂದು ಆಲೋಚಿಸಿದ್ದನು. ಈ ''ವಿಧಿಯ ಬಲೆ'' ಯ ವೃತ್ತಾಂತವೊಂದೂ ಮಂಗಲ್ಕರರಿಗೆ ಸುತರಾಂ ತಿಳಿಯದು.

# ೨೧. ಮಂಗಲಕರರ ವೃತ್ತಾಂತ

"ವಿದ್ವಾನ್, ಎಂ. ಎ ಎಲ್. ಟಿ ವಿದ್ಯಾಧಿಕಾರಿ" ಎಂಬ ಪಟ್ಟಪದವಿಗಳ ಮಾಲೆಯಿಂದೊಪ್ಪುವ ಮಂಗಲಕರರ ಹೆಸರಿನ ಪ್ರಸಾರಕ್ಕೆ ತಡೆಯಾಗದಂತೆಯೇ ಅವರ ನಡತೆಯಿತ್ತು. ಅವರು ಜನ್ಮತಃ ಕನ್ನಡ ಪ್ರಿಯರು; ಕನ್ನಡ ಭಾಷಾಭಿಮಾನಿಗಳು. ಪ್ರಾರಂಭದಲ್ಲಿ ಅವರು ಅಸಿಸ್ಟಂಟ್ ಟೀಚರರಾಗಿ ಕೆಲಸ ಮಾಡುತ್ತ, ತಮ್ಮ ಬುದ್ಧಿಯ ಪ್ರಭಾವದಿಂದ ಹೆಡ್ಮಾಸ್ತರರಾಗಿ, ಇನ್ಸ್‌ಪೆಕ್ಟರರಾಗಿ ಉನ್ನತ ಸ್ಥಾನವನ್ನು ಹೊಂದಿ, ಪ್ರಕೃತ ವಿದ್ಯಾಧಿಕಾರಿಗಳಾಗಿ ಮಂಡಿಸಿದ್ದರು. ಕನ್ನಡ ಭಾಷೆಯ ಮೇಲೆ ತುಂಬಾ ಅಭಿರುಚಿಯುಳ್ಳ ಅವರು, ಕನ್ನಡ ಭಾಷಾಸೇವಕರನ್ನು ಕಂಡರೆ ತುಂಬಾ ಪ್ರೋತ್ಸಾಹವನ್ನು ಕೊಡುತ್ತಿದ್ದರು. ಹಲವು ಗ್ರಂಥಗಳಲ್ಲಿ ಮಂಗಲಕರರ ಮುನ್ನುಡಿಗಳನ್ನು ಕಾಣಬಹುದು. ಹಲವು ಕಿರುಗತೆಗಾರರು ಪರಿಶೀಲನೆಗಾಗಿ ಕಳುಹಿಸಿದ—ಹಾಗು ಕಳುಹಿಸುತ್ತಲೇ ಇದ್ದ, ಹಸ್ತಲೇಖನಗಳೂ, ಅಚ್ಚು ಪ್ರತಿಗಳೂ ಅವರ ಕನ್ನಡ ಭಾಂಡಾರವನ್ನು ತುಂಬಿಸಿಕೊಂಡಿದ್ದುವು. "ಕನ್ನಡ ಟೆಕ್ಸ್ಟ ಬುಕ್ ಕಮಿಟಿ" ಯಲ್ಲಿಯೂ ಅವರಿಗೊಂದು ಸ್ಥಾನವಿದ್ದುದರಿಂದ ಪ್ರಕಾಶಕರಿಗೆಲ್ಲಾ ಅವರ ಮುಖದಸನೆ ಬೇಕಾಗಿತ್ತು. ಹಾಗೆಯೇ ಪ್ರಕಾಶವಾದ ಪ್ರತಿಯೊಂದು ಗ್ರಂಥವೂ ಅವರ ಕಡೆಗೆ ಬಂದೇಬರುತಿತ್ತು. ಶಾಲೋಪಯೋಗಿಯಾದ ಕೆಲವು ಗ್ರಂಥಗಳೂ ಅವರ ಹೆಸರಿನಿಂದ ರಚಿತವಾಗಿದ್ದುವು, ಅಥವಾ ಆಗಿಸಿದ್ದುವು. ಅಂದರೆ, ಅವರು ಹಿಂದೆ-ಮಾಸ್ತರು-ಹೆಡ್ಮಾಸ್ತರರಾಗಿದ್ದಾಗ ಕನ್ನಡ ಭಾಷಾ ಪ್ರೋತ್ಸಾಹನೆಯ ವ್ಯಾಜದಲ್ಲಿ ವಿದ್ಯಾರ್ಥಿಗಳಿಂದ ಬಗೆಬಗೆಯ ವಿಷಯಗಳ ಮೇಲೆ ಉಪನ್ಯಾಸಗಳನ್ನು ಬರೆಯಿಸುವುದಿತ್ತು: ಕ್ರಮೇಣ ಅವುಗಳನ್ನೆಲ್ಲ ಸಂಗ್ರಹಿಸಿ, ತಿರುವು ಮರುವುಗೊಳಿಸಿ, ಹೆಸರು ಬದಲಾಯಿಸಿ, ಶಬ್ದವಾಕ್ಯಗಳನ್ನು ಜಾರಿಸಿ–ಸೇರಿಸಿ ಸ್ವಂತ ಗ್ರಂಥದಂತೆ ಮಾಡಿ ಪ್ರಕಟಪಡಿಸಿದ್ದರು. ಆ ವಿದ್ಯಾರ್ಥಿಗಳೆಲ್ಲರೂ ಅವರ ದಾಕ್ಷಿಣ್ಯಕ್ಕೆ ಒಳಗಾದವರಾದುದರಿಂದ ಮಾತಾಡುತಿರಲಿಲ್ಲ ಕೆಲವರಂತೂ ಅವರಿಗೆ ಸರ್ವನಾಮ ಸಮರ್ಪಣೆಯನ್ನು ಬೇಕೆಂದೇ ಮಾಡಿ, ಅವರಿಂದ ಮಾಸ್ತರಿಕೆ

ಯನ್ನು ಹೊಂದಿಕೊಂಡು ಸುಖಜೀವನವನ್ನು ನಡೆಯಿಸಿಕೊಂಡಿದ್ದರು. ಈ ಬಗೆಯ ಬುದ್ಧಿವಂತಿಗೆಯಿಂದ ನಾಲ್ಕು ವಿಜ್ಞಾನಶಾಸ್ತ್ರಕ್ಕೆ ಸಂಬಂಧಪಟ್ಟ ಗ್ರಂಥಗಳು ಅವರ ಹೆಸರಿನಿಂದ ಪ್ರಕಟವಾಗಿ, ಅವರೂ ದೊಡ್ಡ ಲೇಖಕರೆಂದು ಪ್ರಸಿದ್ಧರಾಗಿದ್ದರು ಅಲ್ಲದೆ ಶಾಲಾ ಕಾಲೇಜುಗಳಲ್ಲಿ ನಡೆಯುವ ವರ್ಧಂತಿ-ಉತ್ಸವಗಳಲ್ಲಿಯೂ, ಕನ್ನಡ ಸಂಘ-ಸಂಸ್ಥೆಗಳಲ್ಲಿಯೂ ಭಾಷಣಕ್ಕೆ ನಿಮಂತ್ರಿತರಾಗಿ, ಅಧ್ಯಕ್ಷ ಸ್ಥಾನವನ್ನೂ ವಹಿಸಿ, ಉತ್ತಮ ವಾಗ್ಮಿಗಳೆಂದೂ ವಿಖ್ಯಾತರಾಗಿದ್ದರು.

ಈ ಬಗೆಯ ಪಾಂಡಿತ್ಯದಲ್ಲಿ ಪ್ರಖ್ಯಾತರಾದರೂ, ರಸಾತ್ಮಕ ಸಾಹಿತ್ಯದಲ್ಲಿ ಇನ್ನೂ ತನ್ನ ಪ್ರವೇಶವಾಗಲಿಲ್ಲವಲ್ಲ, ಎಂಬ ಕೊರತೆಯೊಂದು ಹುಳದ ಹಾಗೆ ಅವರ ಮನಸ್ಸನ್ನು ಕೊರೆಯುತ್ತಿತ್ತು. ರಸಾತ್ಮಕ ಸಾಹಿತ್ಯದಲ್ಲಿ ಪ್ರವೇಶಮಾಡಬೇಕಾದರೆ, ಕವಿತಾಶಕ್ತಿ ಬೇಕು, ಕಲಾದೃಷ್ಟಿ ಬೇಕು, ಪ್ರತಿಭೆಯ ಪ್ರಕಾಶ ಬೇಕು, ಕಲ್ಪನಾ ಚಾತುರ್ಯ ಬೇಕು. ಇವುಗಳು ಹುಟ್ಟುಕವಿಗಳಿಗೇ ಸ್ವಾಭಾವಿಕವಾದ ಗುಣಗಳು; ಹೊರತು, ಪಂಡಿತರಾದ ಮಾತ್ರಕ್ಕೆ ಸೇರಿಬಿಡುವಂತವುಗಳಲ್ಲ. ಆದರೂ ರಸಾತ್ಮಕ ಸಾಹಿತ್ಯದಲ್ಲಿ ಪ್ರಕಾಶ ಹೊಂದಿದವರೆಯೇ ತನ್ನ ಕೀರ್ತಿಗೆ ಸಾಫಲ್ಯವಾಗುವುದೆಂದು ಅವರ ಮಹತ್ವಾಕಾಂಕ್ಷೆ. ಯಾವುದೋ ಒಂದೆರಡು ಮಾಸಪತ್ರಿಕೆಗಳಲ್ಲಿ, ವಿದ್ಯಾರ್ಥಿಗಳು ಬರೆದುಕೊಟ್ಟ ಒಂದೆರಡು ಭಾವಗೀತೆಗಳನ್ನೂ, ಸಣ್ಣ ಕತೆಗಳನ್ನೂ, "ಕನ್ನಡ ಗೆಳೆಯ" ಎಂಬ ಗುರುತಿನಿಂದ ಪ್ರಕಟ ಮಾಡಿಸಿದ್ದರು. ಅವು ಹುರುಳಿಲ್ಲದುವಾಗಿ ಹೋದುವು. ಅವರ ದಾಕ್ಷಿಣ್ಯಕ್ಕೆ ಒಳಗಾಗುವ ಉತ್ತಮ ಕವಿಗಳು, ಇನ್ನೂ ಅವರ ಜಾಲಕ್ಕೆ ಬಿದ್ದಿರಲಿಲ್ಲ. ಆದಕಾರಣ ಅವರು ಹೊಂಚಿಕೊಂಡಿರುವಾಗ, ನಮ್ಮ ಶೀನುವಿನಂತಹ ಸಾಧು-ಸರಳಸ್ವಭಾವದ ಸಟ್ಟುಗದಕ್ಕೆಯ ಹುಟ್ಟುಕವಿಯೊಬ್ಬನು, ಬಲೆಯೆಂದು ತಿಳಿಯದೆ ಅವರ ಕೈಯೊಳಗೆ ಆಡಲಾರಂಭಿಸಿದನು.

ಶೀನುವಿಗೂ ಅವರಿಗೂ ಬಲು ಬೇಗನೇ ಹೊಂದಿಕೆಯಾಯಿತು. ಅವರಿಬ್ಬರೂ ಆಗಾಗ ಸಂಧಿಸಿ ಲೇಖನ ವಿಚಾರವನ್ನು ಕುರಿತು ಮಾತಾಡಿಕೊಳ್ಳುತ್ತಿದ್ದರು. ಮಂಗಲಕರರು ಮನೆಯಲ್ಲಿರುವಾಗ ಮಾತ್ರ, ಶೀನು ಅವರನ್ನು ಮನೆಯಲ್ಲಿ ಸಂಧಿಸುತಿದ್ದನು; ಇಲ್ಲದಿದ್ದರೆ ಆಫೀಸಿನಲ್ಲೆ

ಭೇಟಿಯಾಗುತ್ತಿದ್ದನು ಮನೆಯುಲ್ಲಾದರ ಜಗುಲಿಯ ಬದಿಯ ಆಫೀಸು ಕೋಣೆಯ ಹೊರತು ಮತ್ತಾವುದಕ್ಕೂ ಶೀನೂ ತಲೆ ಹಾಕುತಿರಲಿಲ್ಲ; ಕಣ್ಣನ್ನು ತೂರಿಸುತಿರಲಿಲ್ಲ. ಅದೂ ಮಂಗಲ್ಕರರು ಇದ್ದರೆ ಮಾತ್ರವೇ ಅಲ್ಲಿರುವನು; ಇಲ್ಲದಿದ್ದರೆ ಹೋಗಿಬಿಡುವನು. ಶೀನುವಿನ ಕೈಯಿಂದ ಮಂಗಲ್ಕರರು ಹಸ್ತಪ್ರತಿಗಳನ್ನು ಪಡೆದುಕೊಳ್ಳುವುದೆಲ್ಲ ಆಫೀಸಿನಲ್ಲಿ ಏಕೆಂದರೆ, ಅಲ್ಲಿ ಗ್ರಂಥಗಳ ಕಾಪೀ ತೆಗೆಯುವ ಜನರೂ ಅವರಿಗೆ ತಕ್ಕ ವಸತಿಯೂ ಅನುಕೂಲವಾಗಿದ್ದುವು ಕಾಪೀ ತೆಗೆದಾದ ಮೇಲೆ ಶೀನುವಿಗ ಓವಲಿಕ್ಕಾಗಲೀ ತಿದ್ದಲಿಕ್ಕಾಗಲೀ ಬೇಕಾದರೆ ಆ ಕಾಪಿಯನ್ನೆ ಕೊಡುತಿದ್ದರಲ್ಲದೆ, ಮೂಲಪ್ರತಿಯನ್ನು ತಮ್ಮ ಸ್ವಂತ ಬೀರುವಿನಲ್ಲಿಟ್ಟು ಬೀಗ ಹಾಕುತ್ತಿದ್ದರು ಶೀನು ಯಾವಾಗಾದರೂ ಸಂದರ್ಭ ಬಂದು ಅವರ ಪ್ರಸ್ತಾಪ ಮಾಡಿದರೆ—"ಓ! ಹೌದು ಆ ಪುಸ್ತಕವನ್ನು ಈ ಬೀರುವಿನೊಳಗಿಟ್ಟಿದ್ದಾನೇಂತ ಕಾಣುತ್ತೆ ಪ್ಯೂನ್. ನಾಳೆ ತೆಗೆಯಿಸಿ ಇಡುತ್ತೇನೆ' ಎನ್ನುತ್ತಿದ್ದರು. ನಾಳೆ ಪ್ರಸ್ತಾಪಿಸಿದರೆ—"ಓ! ಬೀಗದ ಕೈ ಮರತೇ ಹೋಯಿತು." ಎಂದು ಬೀಗದ ಕೈಯನ್ನು ಹುಡುಕಾಡುವಂತೆ ಅಭಿನಯಿಸುವರು. ಆ ಮೇಲೆಯೂ ಕೇಳಿದರೆ—"ಹುಡುಕಿದರೂ ಸಿಕ್ಕಲಿಲ್ಲ. ಎಲ್ಲಿಯೋ ಅಡಿಗೆ ಬಿತ್ತೇಂತ ಕಾಣುತ್ತೆ. ಉಂಟುಂಟು! ಎಲ್ಲಿಗೂ ಹೋಗಲಿಲ್ಲ." ಎನ್ನುವರು. ಮತ್ತೊಂದು ಬಾರಿಯಲ್ಲಿ, ಜವಾನ ಗುರುವಯ್ಯನನ್ನು ಬಯ್ಯುತ್ತ,—"ಇಲ್ಲಿಯೇ ಇಡಬೇಕಿತ್ತು, ಯಾವ ಗಂಟಿನಲ್ಲಿ ಹಾಕಿದನೋ!" ಎಂದು ರೇಗುವರು. "ಇರಲಿ ಬಿಡಿ ಸ್ವಾಮಿ? ಹೇಗೂ ಪ್ರಿಂಟಾಗುತ್ತದಲ್ಲ? ಇನ್ನು ಹಸ್ತಪ್ರತಿ ಇದ್ದರೇನು?—ಇಲ್ಲದಿದ್ದರೇನು?' ಎನ್ನುವನು ಕಡೆಗೆ ಶೀನು. "ಹಾಗಲ್ಲ ಶ್ರೀನಿವಾಸ, ಮೂಲಪ್ರತಿ ಯಾವಾಗಲೂ ಇಟ್ಟಿರಬೇಕು. ನಾಡದು ಆದಿತ್ಯವಾರ ರಜೆಯದಿನ, ಎಲ್ಲಾ ನಿಧಾನವಾಗಿ ಹುಡುಕಿ ಬೇರೆ ಬೇರೆ ಮಾಡುವಾಗ ಸಿಕ್ಕೀತು. ಕೊಡುತ್ತೇನೆ" ಎನ್ನುವರು. "ನನಗೇಕೆ ಸ್ವಾಮಿ? ಇಲ್ಲಿಯೇ ಇರಲಿ ನನ್ನ ಸಣ್ಣ ಪೆಟ್ಟಿಗೆಯುಲ್ಲಿ ಸ್ಥಳವೂ ಇಲ್ಲ. ಇಲ್ಲಿಯಾದರೆ ಸುರಕ್ಷಿತವಾಗಿರುತ್ತೆ" ಎನ್ನುವನು ಶೀನು. "ಆದೂ ನಿಜವೆ. ಗ್ರಂಥರಚನೆ ಮಾಡುವವರ ಬಳಿಯಲ್ಲಿ ಹಲವಾರು ಹಳೇ ಗ್ರಂಥಗಳ ಸಂತೆ

ಇರಬಾರದು ಹಾಗಿದ್ದರೆ ಬುದ್ಧಿಗೆ ಗಲಿಬಿಲಿಯುಂಟಾಗಿ ಬಿಡುವುದು—ಮಾನಸಶಾಸ್ತ್ರಾನುಸಾರವಾಗಿ," ಎಂದು ಮಂಗಲಕರರು ಬೋಧನೆ ಮಾಡುವರು. ಒಟ್ಟಾರೆ ಶೀನು ಕೈಮುಟ್ಟಿ ಬರೆದ ಮೂಲ ಹಸ್ತಲೇಖನ ಪ್ರತಿಗಳೆಲ್ಲಾ, ಮಂಗಲಕರರ ಬೀರುವಿನಲ್ಲಿ ಅಡಗಿ, ಹುಡುಗರಿಂದ ಬರೆಯಲ್ಪಟ್ಟ ಆವನ ಗ್ರಂಥಗಳ ನಕಲುಗಳೂ ಅಚ್ಚಾದ ಪ್ರತಿಗಳೂ ಆವನ ಕೈಯಲ್ಲಿ ಸೇರಿಕೊಂಡುವು.

ಶೀನೂ ಮುಂಗಲಕರರ ಸಂಬಂಧಗಳಾದ ಮೇಲೆ, "ಕನ್ನಡ ಗೆಳೆಯ" ಎಂಬ ಸಂಕೇತ ನಾಮಕೃತವಾದ ಸಣ್ಣ ಸಣ್ಣ ಲೇಖನಗಳು ಕೆಲವು ಕನ್ನಡ ನಾಡಿದಲ್ಲಿ ವಿಜಯ ಸಂಚಾರ ಮಾಡಲಾರಂಭಿಸಿದುವು. ಒಂದು ಐತಿಹಾಸಿಕ ಕಾದಂಬರಿಯೂ ಪ್ರಕಟವಾಯಿತು. ಆ ಮೇಲೆ ಹೊರಬಿದ್ದುದೇ "ಕಾರುಣ್ಯ ಮೂರ್ತಿ". "ಕಾರುಣ್ಯ ಮೂರ್ತಿ"ಯಿಂದ "ಕನ್ನಡ ಗೆಳೆಯ" ವ್ಯಕ್ತಿಗೊಂದು ಹೊಸಕಳೆ ಪ್ರಾರಂಭವಾಯಿತು. "ಕನ್ನಡದಲ್ಲಿ ಶುಕ್ರತಾರೆಯಂತಹ ಕಾರುಣ್ಯ ಮೂರ್ತಿಯನ್ನು ರಚನೆ ಮಾಡಿದ ಕವಿವರನು ಯಾರು? ಯಾರು?"— ಎಂದು ಕನ್ನಡ ನಾಡೇ ಕುತೂಹಲದಿಂದ ತಲೆಯೆತ್ತಿ ಕೇಳಲಾರಂಭಿಸಿತು. ಆದರೆ ಮಂಗಲ್ಕರರು "ಕನ್ನಡ ಗೆಳೆಯ"ನ ನಿಜನಾಮವನ್ನು ಪ್ರಕಟಮಾಡಬಾರದೆಂದು, ಪ್ರಕಾಶಕಾದಿಗಳಿಗೆ ತಿಳಿಸಿದ್ದುದರಿಂದ, ಬಹಿರಂಗವಾಗಿ ಯಾರಿಗೂ ಯಾರೆಂದು ತಿಳಿಯದು; ಆದರೆ ಅಂತರಂಗದಲ್ಲಿ ಬಲ್ಲವರು ಬಲ್ಲರು, "ಕನ್ನಡ ಗೆಳೆಯ" ಮಂಗಲಕರರೆಂದು.

ಮಂಗಲಕರರಾದರೋ ತನ್ನ ಚಿನ್ನದ ಮೊಟ್ಟೆಯಿಡುವ ಕೋಳಿ ಮರಿಗೆ, ತನ್ನ ಮೇಲೆ ಯಾವ ವಿಧದ ಸಂದೇಹವೂ ಬರದಂತೆ ಜಾಗರೂಕತೆಯನ್ನು ವಹಿಸಿಹಿಕೊಂಡಿದ್ದರು. ದೊಡ್ಡ ದೊಡ್ಡ ಪಂಡಿತರು ಮಂಗಲಕರರ ಭೇಟಿಗೆ ಬಂದಾಗ ಅವರು ಶೀನಣ್ಣನನ್ನೂ ಕರೆಯಿಸಿ, ಪರಿಚಯ ಮಾಡಿಸುವ ನೆವನದಿಂದ ಅಲ್ಲಿ ಕೂಡಿಸುವರು "ಶ್ರೀನಿವಾಸ, ಕರ್ಣಾಟಕ ಚರಿತ್ರ ಸಂಶೋಧಕರಾದ—ಸುಪ್ರಸಿದ್ಧ ನಂಜುಂಡ ಶಾಸ್ತ್ರಿಗಳಿವರು." "ಪ್ರಖ್ಯಾತ ಕವೀಶ್ವರರಾದ ಅಚ್ಯುತಾಚಾರ್ಯರಿವರು." ಎಂದು ಆ ಪಂಡಿತರ ಪರಿಚಯವನ್ನು ಅವನಿಗೆ ಮಾಡಿಸಿ, ಅವನ

ಪರಿಚಯವನ್ನು ಅವರಿಗೆ ಈ ರೀತಿಯಾಗಿ ಉಸಿರುವರು:—"ಇವನೊಬ್ಬ ಪ್ರಕೃತಿ ಕಳಾವಿದ. ನಿಸರ್ಗಕವಿ. ಚಿತ್ರ ಲೇಖನ–ಮುಂತಾದವುಗಳಿಂದ ಸರ್ವದಾ ಕಲಾವ್ಯವಸಾಯದಲ್ಲಿರುತ್ತಾನೆ. ನನ್ನ ಹತ್ತಿರ ಅಭ್ಯಾಸ ಮಾಡು ತಿದ್ದಾನೆ." ಹೀಗೆ ಹೇಳುತ್ತ, ಶೀನು ಬರೆದುಕೊಟ್ಟ ಗ್ರಂಥಗಳನ್ನು ಕೂಡಾ ಬಿಡಿಸಿ ಬಿಡಿಸಿ ಅವರಿಗೆ ತೋರಿಸುವುದೂ ಉಂಟು "ಈ ಕಥಾ ವಿಷಯವು ಹೇಗಿದೆ ನೋಡಿ?" ಎಂದು ಆ ಪಂಡಿತರಿಗೆ ಓದಲಿಕ್ಕೆ ಕೊಟ್ಟದೂ ಉಂಟು. ಆದರೆ "ಈತನು ಬರೆದ ಗ್ರಂಥವಿದು" ಎಂದು ಮಾತ್ರ ಅವರು ಹೇಳದೇ ಹೋದುದರಿಂದ, "ಮಂಗಲ್ಕರರೇ ಬರೆದ ಗ್ರಂಥವಿದು" ಎಂಬ ನಂಬುಗೆಯಿಂದ ಆ ಪಂಡಿತರು ಓದಿದುದೂ ಉಂಟು, ಅಭಿಪ್ರಾಯ ಕೊಟ್ಟದೂ ಉಂಟು, ಬಗ್ಗಿಬಗ್ಗಿ ಅಡುಗೆ ಮಾಡಿ ಮಾಡಿ, ಹೊಗೆ ಹಿಡಿದು, ಕಪ್ಪಾಗಿ ಕೃಶನಾದ ಶೀನುವಿನಂತಹ ಸಾಮಾನ್ಯ ಮೂರ್ತಿ, ಈ ಬಗೆಯ ಗ್ರಂಥಗಳನ್ನು ರಚನೆ ಮಾಡೀತೆಂದು,—ಊಹಿಸಲು ತಕ್ಕಷ್ಟು ಶಕ್ತಿಪ್ರೋಷಣೆಗಳು ಆ ಪಂಡಿತರಿಗಿಲ್ಲದೆ ಹೋದುವು. ತನ್ನ ಸ್ಪಷ್ಟ ಪರಿಚಯವನ್ನು ಕೊಡಲು ಶೀನುವಿಗೆ ಇಷ್ಟವಿಲ್ಲದಿರುವುದೂ ಮಂಗಲಕರರಿಗೆ ಒಳ್ಳೆಯ ಅನುಕೂಲವಾಗಿತ್ತು.

ಪ್ರಾರಂಭದಲ್ಲಿ ಶೀನು ತನ್ನ ಪರಿಚಯವನ್ನು ಈ ಮಂಗಲಕರ ರಿಗೆ ಸ್ಪಷ್ಟವಾಗಿ ಕೊಡದಿದ್ದರೂ, ಮುಂದೆ ಕೆಲವು ವಾರದೊಳಗಾಗಿ ಅವನ ಪರಿಚಯವನ್ನು ಅವರು ಊಹೆ ಮಾಡಿಕೊಳ್ಳುವ ಪ್ರಸಂಗ ವೊಂದು ಬಂದಿತ್ತು; ಹಿಂದೆ ಕೇಳಿದಂತೆ ಶೀನು ಕಿರುಗಟ್ಟೆ ಗ್ರಾಮದಿಂದ ಪತ್ತೆ ತಿಳಿಸದೆ ಹೊರಟುಹೋದ ಮೇಲೆ, ಕೃಷ್ಣನು ಅವನ ಪತ್ತೆಯನ್ನು ಹಿಡಿಯಲಿಕ್ಕಾಗಿ ಪ್ರಸಿದ್ಧವಾದ "ಹಿಂದೂ ಮೇಲ್" ಪತ್ರಿಕೆಯಲ್ಲಿ ಒಂದು ಪ್ರಕಟನೆಯನ್ನು ಮಾಡಿಸಿದುದನ್ನು ಓದುಗರು ಬಲ್ಲರು. ಅದರಲ್ಲಿ ಶೀನುವಿನ ರೂಪ–ಆಕಾರ–ಉದ್ಯೋಗ–ಅಭ್ಯಾಸ ಮತ್ತು–ಅವನೊಂದಿಗೆ ವಿಕಾರವಾದೊಬ್ಬಳು ಹೆಂಗುಸು ಕೂಡಾ ಇರಬಹುದೆಂಬ ಸಂದೇಹ, ಎಂಬ ಈ ಮುಖ್ಯ ಅಂಶಗಳನ್ನು ಕೂಡಾ ಕೃಷ್ಣನು ಒಕ್ಕಣಿಸಿದ್ದನಷ್ಟೆ? ಇದನ್ನು "ಹಿಂದೂ ಮೆಲ್" ಪತ್ರಿಕೆಯಲ್ಲಿ ಮಂಗಲಕರ ಮಹಾಶಯರು ಓದಿ ನೋಡುತ್ತಲೇ ಈ ಶೀನುವಿಗಾಗಿಯೇ ಈ ಪ್ರಕಟನೆ ಹೊರಟಿರುವು

ದೆಂದು ತಟ್ಟನೆ ಅವರ ಮನಸ್ಸಿಗೆ ಹೊಳೆಯಿತು. ವಿಕಾರವಾದ ಹೆಂಗುಸು ಮಾತ್ರ ಅವನೊಂದಿಗಿಲ್ಲದಿದ್ದುದರಿಂದ, ಅವರ ಮನಸ್ಸಿನಲ್ಲಿ ಏನೇನೋ ಸಂದೇಹಗಳೂ ಕುತೂಹಲಗಳೂ ಹುಟ್ಟಿದುವು. ತಮ್ಮ ಪೆಟ್ಟಿಗೆಯೊಳಗೆ ಅಡಗಿಸಿಟ್ಟಿದ್ದ ಕೆಲವು ಕಾಗದಗಳನ್ನೆಲ್ಲ ಹುಡುಕಿ, ನೋಡಿ ಏನೋ ಮನವರಿಕೆ ಮಾಡಿಕೊಂಡು " ಓಹೊ! ಅವನೇ ಇವನೊ! " ಎಂದು ತಿಳಿದುಕೊಂಡರು. "ಇದನ್ನು ಶೀನುವಿನೊಡನೆ ಪ್ರಸ್ತಾವಿಸಬೇಕೋ ಬೇಡವೋ? ಯಾಕೆ ಹೇಳಬೇಕು? ನನ್ನ ಮರ್ಯಾದೆ ತೆಗೆಯಲಿಕ್ಕಾಗಿ ಹುಟ್ಟಿದ ಆ ಮಗಳನ್ನಂತೂ ಆ ರಾಮಾ ಜೋಯಿಸ ಗಡೀಪಾರು ಮಾಡಿದ್ದಾನೆ! ಇನ್ನು ಇವನೊಡನೆ ಇವನ ಚರಿತ್ರೆಯನ್ನೆಲ್ಲಾ ಕೇಳಿ ಇವನ ಮನಸ್ಸನ್ನು ಯಾಕೆ ನೋಯಿಸಬೇಕು? ರಾಮಾ ಜೋಯಿಸ ಹುಡುಗಿಯನ್ನು ಗಂಡನ ಜತೆಯಲ್ಲಿ ಕೂಡಿಸಿರುವೆನೆಂದು ಸುಳ್ಳುವಾರ್ತೆ ಹುಟ್ಟಿಸಿರಬೇಕು. ಅಂತೆಯೇ ಪ್ರಕಟನೆಯಲ್ಲಿ ಹಾಗಿದೆ. ರಾಮಾಜೋಯಿಸನ ತಂತ್ರವು ಯಾರಿಗೂ ತಿಳಿಯದು. ಸರಿ, ತಿಳಿಯಿತೀಗ; ಈ ಶೀನು ಎಂದರೆ ನನ್ನ ಅಳಿಯನೇ! 'ಯೋಗಾಯೋಗವು ವಿಚಿತ್ರವಾದದ್ದು' ಎಂದು ಗಳಗನಾಥರು ಹೇಳಿದುದು ಸುಳ್ಳಲ್ಲವಯ್ಯಾ! ನನ್ನ ವಿರೂಪ ಕುಮಾರಿಗೆ ಈ ಸಾಧು ಪ್ರಾಣಿಯೇ ಗಂಡನಾಗಿ ದೊರೆಯಿತೆ? ಸರಿ. ಅದೇ ಇವನು ಹೀಗೆ ವಿರಕ್ತನಾಗಿ ಊರು ಬಿಟ್ಟು ಜಾರಲು ಕಾರಣ! ಆಗಲಿ. ಈ ವಿಷಯ ನನಗೆ ಗೊತ್ತಾಯಿತೆಂದು ಅವನಿಗೆ ತಿಳಿಸಿ ಏನಾಗಬೇಕಾಗಿದೆ? ನನ್ನ ಕೀರ್ತಿಗೆ ಸಾಕಷ್ಟು ಸಾರವನ್ನು ಇವನಿಂದ ಹೀರಿಕೊಂಡು ಆಮೇಲೆ ಬಿಸುಟುಬಿಟ್ಟರಾಯಿತು—" ಎಂದು ಯೋಚಿಸಿಕೊಂಡು, ತಮ್ಮ ಕರಾಳ ಹೃದಯದೊಳಗೇ ಆ ಗುಟ್ಟನ್ನು ಬಚ್ಚಿಟ್ಟುಕೊಂಡರು.

ಆಹಾ! ಈಗ ನಮಗೂ ತಿಳಿಯಿತು. ಈ ಮಂಗಲಕರರೇ ಸುಂದರಿಯ ತಂದೆಯಾದ ಮುಕುಂದರಾಯರೆಂದು! ಅವರು ಹುಡುಕಿ ನೋಡಿದ ಕಾಗದಗಳು, ಸುಂದರಿಯ ಸಂಬಂಧವಾಗಿ ರಾಮಾ ಜೋಯಿಸರು ಅವರಿಗೆ ಬರೆದಿದ್ದ ಪತ್ರಗಳಾಗಿದ್ದುವು. ಆ ಗುಪ್ತಪೆಟ್ಟಿಗೆಯಲ್ಲಿ ಸುಂದರಿಯ ಸಂಬಂಧವಾಗಿ ನಾರಾಯಣಯ್ಯನು ಅವರಿಗೆ ಬರೆದಿದ್ದ ಪತ್ರಗಳೂ ಅಡಗಿದ್ದುವೆಂದು—ನಮ್ಮ ಕಣ್ಣಿಗೆ ಹಾಯ್ದ ನಾರಾಯಣಯ್ಯನ ಒಂದು ಕಾರ್ಡಿನಿಂದ ಗೊತ್ತಾಯಿತು. ಇರಲಿ.

ಆದರೆ ನಾರಾಯಣಯ್ಯನೂ ರಾಮಾ ಜೋಯಿಸರೂ ಮುಕುಂದ ರಾಯರಿಗೆ ಬರೆದ ಪತ್ರಗಳು ಮಂಗಲಕರರ ಕೈಗೆ ಬರುವುದರ ಗುಟ್ಟು, ನಾರಾಯಣಯ್ಯ-ರಾಮಾ ಜೋಯಿಸರಿಗೇನೂ ತಿಳಿಯದು ಅಂದರೆ ಮುಕುಂದರಾಯರೇ ಮಂಗಲಕರರಾಗಿ ಬಳ್ಳಾರಿಯಲ್ಲಿರುವರೆಂಬುದನ್ನು ಅವರು ಅರಿಯರು. ಗುಟ್ಟಿಷ್ಟೆ:—ಅನಂತಪುರದಲ್ಲಿ ಮುಕುಂದರಾಯರಿಗೆ ಸ್ವಂತ ಮನೆಯುಂಟು. ಅವರು ಯಾವ ಊರಿನಲ್ಲಿದ್ದರೂ ಮುಕುಂದ ರಾಯರ ಹೆಸರಿಗೆ ಪತ್ರವನ್ನು ಅನಂತಪುರಕ್ಕೇ ಹಾಕಬೇಕೆಂದು ತಿಳಿಸಿ ದ್ದರು. ಅನಂತಪುರದಲ್ಲಿರುವ ಮುಕುಂದರಾಯರ ಮನೆಯಲ್ಲಿ ಮುಕುಂದ ರಾಯರ ಹಸ್ತಕನಾದ ಬಾಡಿಗೆಗಾರನೊಬ್ಬನಿದ್ದನು. ಅವನು ಮುಕುಂದ ರಾಯರ ಹೆಸರಿಗೆ ಬಂದ ಪತ್ರವನ್ನು ಕೂಡಲೇ ಮಂಗಲಕರರಿಗೆ ಕಳು ಹಿಸಿಬಿಡುತಿದ್ದನು. ತಾನು ವಿರೂಪ ಕುಮಾರಿ ಸುಂದರಿಯ ತಂದೆಯೆಂದು ಪರಿಚಿತನಾಗಬಾರದೆಂತಲೇ, ಮುಕುಂದರಾಯರು ಆಬಗೆಯ ವಕ್ರಸ್ಥಾನ ದಲ್ಲಿ ತಂತ್ರದ ಹೆಸರಿನಿಂದ ವಾಸವಾಗಿದ್ದರು.

ಅವರು ಕನ್ನಡ ನಾಡಿಗೆ ಪರಿಚಿತರಾಗಿರುವುದೆಲ್ಲಾ ಮಂಗಲಕರರಾ ಗಿಯೇ. ಈ ಮಂಗಲಕರರಿಗೆ ಬರಿಯ ಸರಕಾರೀ ಸಂಬಳದ ಬಲವು ಮಾತ್ರವೇ ಅಲ್ಲ, ಅದು ಮಾತ್ರವಾದರೆ ನಾರಾಯಣಯ್ಯನೂ-ರಾಮಾ ಜೋಯಿಸರೂ ಹಿಂಡಿಕೊಳ್ಳಲು ಅದೆಲ್ಲಿ ಸಾಕು? ಅವರು ಊರಿನಲ್ಲಿದ್ದ ಅವರ ಆಸ್ತಿಯನ್ನೆಲ್ಲ ಮಾರಿ ಹಣವನ್ನಾಗಿಸಿ ಸುಮಾರು ಐವತ್ತು ಸಾವಿರ ರೂಪಾಯಿಯನ್ನು' ಬ್ಯಾಂಕಿನಲ್ಲಿಟ್ಟಿದ್ದರು. ಅಲ್ಲದೆ ತಮ್ಮ ಕೆಳಗಿನ ಉದ್ಯೋಗಸ್ಥರಿಂದಲೂ ವಿದ್ಯಾರ್ಥಿಗಳಿಂದಲೂ ನಿಃಶಂಕೆಯಿಂದ ಲಂಚ-ರುಸುಮುಗಳನ್ನೂ ಪಡೆಯುತಿದ್ದರು. ಅಂತೆಯೆ ಕುರೂಪಿಯಾದ ಮಗ ಳನ್ನು ದೂರಿಂದೂರವೇ ಸಿಲ್ಲಿಸಲು ಶಕ್ತರಾಗಿದ್ದರು.

ಅವರ ಮೊದಲನೇ ಹೆಂಡತಿ ವೆಂಕಟಮ್ಮನು ತೀರಿಹೋದ ಮೇಲೆ, ಬಹಳ ವರ್ಷಗಳ ವರೆಗೆ ಅವರು' ಮದುವೆಯನ್ನು ಮಾಡಿಕೊಳ್ಳಲಿಲ್ಲ. ಅವರು ಕಲ್ಲಿಕೋಟೆಯ ಹೈಸ್ಕೂಲಿನಲ್ಲಿ ಹೆಡ್ಮಾಸ್ತರರಾಗಿದ್ದಾಗ ಕುಂಞಂ ಘೇರಿಯ ಶೆಂಬಗಭಟ್ಟರ ಮಗಳು ಕಮಲೆಯನ್ನು ನೋಡುವಂತಹ ಯೋಗವೊಂದು ಒದಗಿ, ಅವಳ ದಿವ್ಯರೂಪಕ್ಕೆ ಮೋಹಿಸಿ, ಶೆಂಬಗ

ಭಟ್ಟರ ಆಶೆಯ ಬಾಯಿಗೆ ಸುಮಾರು ಸಾವಿರ ರೂಪಾಯಿಃಯನ್ನು ಸುರಿದು ಕಮಲೆಯನ್ನು ಎರಡನೇ ಮದುವೆ ಮಾಡಿಕೊಂಡರು. ಧನಪಿಶಾಚಗ್ರಸ್ತನಾದ ಶಿಂಬಗಭಟ್ಟನು, ಹಣಕ್ಕಾಗಿ ಹದಿನಾರು ವರ್ಷದ ಮಗಳನ್ನು ಐವತ್ತು ವರ್ಷ ಮೀರಿ ವೃದ್ಧಾಪ್ಯದ ಬದಿಗೆ ಸೇರಿದ ಮಂಗಲಕರರಿಗೆ ಕೊಟ್ಟು, ಹಕ್ಕಿಯಂತೆ ಹಾರಾಡಿಕೊಂಡಿದ್ದ ಕಮಲೆಯನ್ನು ನಿರಂತರ, ದುಃಖಸಂತಾಪಕೂಪದೊಳಗೆ ಕೆಡವಿದನು. ತಂದೆಯಂತೆ ಕಾಣುವ ಪತಿಯನ್ನು ನೋಡಿ ಅವಳು ಎಷ್ಟು ನೋಯುವಳೋ, ಎಷ್ಟು ಬೇಯುವಳೋ ಭಗವಂತನಿಗೇ ಗೊತ್ತು.

ಆಮೇಲೆ ಕಲ್ಲಿಕೋಟೆಯ ಕಡೆಯಿಂದ ಮಂಗಲಕರರು ವಿದ್ಯಾಧಿಕಾರಿಗಳಾಗಿ ಬಳ್ಳಾರಿಗೆ ವರ್ಗಾಯಿಸಲ್ಪಟ್ಟರು. ಮೇಲೆ ಹೇಳಿದ ರೀತಿಯಾಗಿ ಶೀನುವಿನ ಸಂಬಂಧವೂ ಅವರೊಡನೆ ನೇರಿತು. ಅವನು ಆಗಾಗ ಅವರ ಮನೆಗೆ ಹೋಗಿಬರುತಿದ್ದರೂ, ಕಮಲೆಯ ದರ್ಶನವು ಮಾತ್ರ ಅವನಿಗಾಗಿರಲಿಲ್ಲ. ಮಂಗಲಕರರು ಅವಳ ಮೇಲೆ ಆ ಬಗೆಯ ವ್ಯವಸ್ಥೆಯನ್ನೆ ಇಟ್ಟಿದ್ದರು. ಎಷ್ಟಾದರೂ ವೃದ್ಧಪತಿ; ತರುಣಪತ್ನಿ. ತರುಣಪತ್ನಿಯ ಮೇಲೆ ವೃದ್ಧಪತಿಗೆ ಎಷ್ಟು ಮಮತೆಯೂ ಎಷ್ಟು ಪ್ರೇಮವೂ ಇರುವುದೋ ಅಷ್ಟೇ ಸಂದೇಹವೂ ಇಲ್ಲದೇ ಹೋಗಲಾರದು. ಅಂತೆಯೇ ಮಂಗಲಕರರು ತರುಣರ ವಿಷಯದಲ್ಲಿ ತುಂಬಾ ಜಾಗ್ರತರಾಗಿ ಅವರನ್ನು ಮನೆಯಲ್ಲಿ ಇರಗೊಡುತ್ತಿದ್ದಿಲ್ಲ. ಕಮಲೆಯನ್ನು ಹೊರಗೆ ಕಳುಹಿಸುತ್ತಿದ್ದಿಲ್ಲ. ಅವಳು ಸಿನೀಮಕ್ಕೋ ನಾಟಕಕ್ಕೋ ಹೋಗಬೇಕೆಂದರೆ ಅವರೇ ಸ್ವತಃ ಕರಕೊಂಡು ಹೋಗುತಿದ್ದರು. ಅದಾದರೂ ಎಂದೋ ವರ್ಷಕ್ಕೊಂದು ಬಾರಿಮಾತ್ರ. ಮನೆಯೊಳಗೆ ಅಡುಗೇ ಕೆಲಸಕ್ಕೆ ಒಬ್ಬಳು ವೃದ್ಧವಿಧವೇ ಹೆಂಗುಸಿದ್ದಾಳೆ. ಅವಳು ನಿಯಮಿತವಾದ ಹೊತ್ತಿಗೆ ಬಂದು ಕೆಲಸ ತೀರಿಸಿ ಹೊರಟುಹೋಗುತ್ತಿದ್ದಳು. ಮನೆಯ ಹೊರಗೆ ಗುಡಿಸಲಿನಲ್ಲಿ ವೃದ್ಧಸೇವಕ ಸಿದ್ದಪ್ಪನೂ ಅವನ ಹೆಂಡತಿಯೊಂದಿಗೆ ಇದ್ದನು. ಈ ಸೇವಕ ದಂಪತಿಗಳ ಮೇಲೆ ಮಂಗಲಕರರ ವಿಶ್ವಾಸ ಬಹಳ. ಅವರು ಮಂಗಲಕರರ ಆದೇಶಾನುಸಾರವಾಗಿ ಕಮಲೆಯ ಮೇಲೆ ನಿರಂತರ ಹೊರಗಾವಲವನ್ನು ಕಾದುಕೊಂಡಿದ್ದರು. ಆದರೆ—

ಅವರು ಇಷ್ಟೆಲ್ಲ ಎಚ್ಚರದಿಂದಿರಲು ಕಮಲೆಯ ನಡತೆಯಲ್ಲಿರುವ ಯಾವ ಕಾರಣವೂ ಅಲ್ಲ. ಅವಳು ತನ್ನ ಅದೃಷ್ಟವೇ ಹೀಗಿದೆ, ಮಾಡುವುದೇನು?-ಎಂದುಕೊಂಡು 'ಪಾಲಿಗೆ ಬಂದ ಪಂಚಾಮೃತ'ವನ್ನು ಚಪ್ಪರಿಸಿಕೊಳ್ಳುತ್ತ, ಇದ್ದುದರಲ್ಲಿ ತೃಪ್ತಳಾಗಿರುವಂತಹ ಸಾಧ್ವಿಯಾಗಿದ್ದಳು. ಇದು ಪರಹೃದಯಗ್ರಾಹಿಗಳಾದ ಮಂಗಲಕರರಿಗೂ ಗೊತ್ತು. ಆದರೂ ಯಾರಿಗೆ ಗೊತ್ತು? ಯಾವ ಕಾಲವು ಹೇಗಿರುತ್ತದೋ ಎಂಬ ಸಂದೇಹವೇ ಅವರನ್ನು ಯಾವಾಗಲೂ ಮುಂಜಾಗ್ರತೆಯಿಂದಿರಿಸುತ್ತಿದ್ದಿತು.

ಮಂಗಲಕರರಿಗೆ ಮೊದಲನೆಯ ಹೆಂಡತಿ ವೆಂಕಟಮ್ಮನ ಹೊಟ್ಟೆಯಲ್ಲಿ ಹುಟ್ಟಿದ ಹಿರಿಯ ಮಗನೇ ವರದ. ಅವನು ಪ್ರಕೃತ ಮದರಾಸಿನ ಕಾಲೇಜಿನಲ್ಲಿ ಕಲಿಯುತಿದ್ದನು. ಅವನು ಚಿಕ್ಕತನದಿಂದಲೇ ಬಲುತುಂಟ. ಈಗ ಮದರಾಸಿನಲ್ಲಿ ಕೇಳುವವರಿಲ್ಲದೆ ಕೊಂಚವೂ ಭಯವಿಲ್ಲದೆ, ದುರ್ಜನಸಂಗದಿಂದ ದುರ್ವ್ಯಸನಿಯಾಗಿ ದುಡ್ಡನ್ನು ದುರ್ವ್ಯಯಮಾಡುತ್ತ ದುಷ್ಟನಾಗಿಹೋಗಿದ್ದನು. ವಿದ್ಯಾರ್ಜನೆಯಲ್ಲಿಯೂ ಬಹಳ ಹಿಂದೆ. ಕೇಳಿದ ಹಾಗೆ ದುಡ್ಡು ಮಾತ್ರ ಮಂಗಲಕರರು ಕಳುಹಿಸಲೇಬೇಕಾಗುತ್ತು. ಇಲ್ಲದಿದ್ದರೆ ಬಹಳ ರಗಳೆ ಮಾಡಿಬಿಡುತಿದ್ದನು. ಹೀಗೆ ಅವನು ಕೆಟ್ಟುಹೋಗುವುದನ್ನು ನೋಡಿ ಮಂಗಲಕರರಿಗೆ ತುಂಬಾ ಪಶ್ಚಾತ್ತಾಪವುಂಟು. ತನ್ನಂತಹ ಕೀರ್ತಿಶಾಲಿಗೆ ಇಂತಹ ಕಲಂಕಪ್ರಾಯನಾದ ಪುತ್ರನು ಹುಟ್ಟಿದನಲ್ಲಾ ಎಂದು ಒಳಗೊಳಗೇ ಮರುಗಿಕೊಂಡಿದ್ದರು. ಆದರೆ ಯಾರಾದರೂ ಕೇಳಿದರೆ, ತಮ್ಮ ಮಗ ಇಂಜಿನೀಯರಿಂಗ್ ಕಲಿಯುತ್ತಾನೆಂದೂ, ಉದ್ಯೋಗಕ್ಕೆ ಪ್ರಯತ್ನ ಮಾಡುತ್ತಾನೆಂದೂ, ಹಾಗೆಂದೂ ಹೀಗೇಂದೂ—ಉಪಾಯವಾಗಿ ಹೇಳುತ್ತ ಕಾಲದೂಡಿಕೊಂಡಿದ್ದರು. ಅವನು ಆಗಾಗ ಮನೆಗೆ ಬಂದಾಗಲೂ ಅವನೊಡನೆ ಬಹಳ ಜಾಗರೂಕತೆಯಿಂದ ವರ್ತಿಸುತ್ತಿದ್ದರು. ಇತ್ತೀಚೆಗೆ ಅವರಿಗೆ ಇನ್ನೊಂದು ಭಯವೂ ಸೇರಿಕೊಂಡಿತ್ತು; ಕಮಲೆ ಅವನನ್ನು ಕಂಡರೆ, ಅವನು ಅವಳಿದಿರು ಸುಳಿದರೆ ಬೆದರಿದ ಹರಿಣಿಯಂತಾಗುವುದನ್ನು ಅವರು ಕಂಡುಹಿಡಿದಿದ್ದರು. ಈ ಅವಿಧೇಯ ಅನಾಚಾರಿ ಪುತ್ರನಿಂದ ಎಲ್ಲಿ ತನ್ನ ಮಾನವು ಸೂರೆಯಾಗಿಹೋಗುವುದೋ ಎಂದು ಭಯಭೀತರಾಗಿ ಅವನು ಮತ್ತೆ

ಮದರಾಸಿಗೆ ಹೋಗುವವರೆಗೆ, ಕಟ್ಟೆಚ್ಚರದಿಂದ ಕಣ್ಣಿಟ್ಟು ಕಮಲೆಯನ್ನು ಕಾಯುವುದೆಂದರೆ ಅವರಿಗೆ ಬಹುಭಾರವಾಗಿಹೋಗುತಿತ್ತು. ಆಗ ಅವರು ಕಾಯಿಲೆ ರಜೆಯನ್ನು ಪಡೆದು ಮನೆಯಲ್ಲೇ ಇದ್ದುಬಿಡುತಿದ್ದರು. ಆ ಪುಂಡ ಹುಡುಗನಿಗೊಂದು ಮದುವೆಯನ್ನಾದರೂ ಮಾಡಿ ಕಟ್ಟಿಹಾಕೋಣವೆಂದರೆ, ತನಗೆ ಮದುವೆಯೇ ಬೇಡವೆಂದು ಖಂಡಿತವಾಗಿ ಹೇಳಿಬಿಡುತಿದ್ದನು. ಇಂತಹ ಕೈಮೀರಿದ ಕೊಬ್ಬಿದ ಮಗನನ್ನು ಮರ್ಯಾದೆಗೆ ಭಯಪಡುವ ತಂದೆ ಏನು ಮಾಡಿಯಾನು ?

ಆದರೆ ನಮ್ಮ ಶೀನುವಿನ ಗುರುತುಪರಿಚಯವಾದ ಕೆಲವೇ ದಿನಗಳಲ್ಲಿ ಶೀನುವಿನ ಗುಣಾದಿಗಳನ್ನು ಮಂಗಲಕರರು ಕಂಡುಹಿಡಿದುಕೊಂಡಿದ್ದರು. “ಇವನು ನಿಜವಾಗಿ ಸಾತ್ವಿಕಭಾವವೃತ್ತಿಯವನು. ಇವನಿಂದ ಎಂದಿಗೂ ಅನಾಚಾರಗಳಾಗಲಾರವು” ಎಂದು ಅವರಿಗೆ ನಂಬುಗೆಯಾಗಿತ್ತು. ಆದರೂ ಸಲಿಗೆಯನ್ನು ಕೊಟ್ಟಿರಲಿಲ್ಲ. ಅವರ ಹೆಚ್ಚಿನ ಸಲಿಗೆಗೆ ಶೀನು ಒಳಗಾಗುವವನಾಗಿಯೂ ಇರಲಿಲ್ಲ. ಈ ವಿದ್ಯಾಧಿಕಾರಿಗಳ ಗೃಹ ಹೀಗಿದೆ, ಗೃಹಛಿದ್ರ ಹೀಗಿದೆ, ಹೆಂಡತಿ ಹೀಗಿದ್ದಾಳೆ, ಮಗ ಹಾಗಿದ್ದಾನೆ—ಎಂಬ ಯಾವ ವಿಚಾರವನ್ನೂ ಶೀನು ಅರಯ್ಯಲಿಲ್ಲ. ಅವುಗಳನ್ನು ಅರಯ್ದು ನೋಡಬೇಕೆಂಬ ಕುತೂಹಲವು ಅವನಿಗಿರಲಿಲ್ಲ. ಶೀನುವೂ ವರದನೂ ಒಂದೆರಡು ಬಾರಿ ಮಾತ್ರ ಸಂಧಿಸಿದ್ದರು “ಇವನೊಬ್ಬ ಸಾಹಿತಿಯೆಂದೂ, ತನ್ನ ತಂದೆ ಈ ಪ್ರಾಣಿಯನ್ನು ಪೂರಾ ಕೈಯೊಳಗೆ ಸೇರಿಸಿಕೊಂಡಿದ್ದಾರೆಂದೂ, ಅದನ್ನು ಅರಿಯದೆ ಇವನು ತನ್ನ ತಂದೆಗೆ ಕೃತಜ್ಞತಾಭಾವದಿಂದ ವಿಧೇಯನಾಗಿರುವನೆಂದೂ ವರದನು ಅರಿತುಕೊಂಡಿದ್ದನು. “ವರದನು ಮಂಗಲಕರರ ಹಿರಿಯ ಮಗ. ಮದರಾಸಿನಲ್ಲಿ ಏನೋ ಕಲಿಯುತ್ತಾನೆ” ಎಂದಷ್ಟೆ ಶೀನುವಿಗೆ ಗೊತ್ತು.

ಮಂಗಲಕರರ ಒಳಗತೆಯೆಲ್ಲ ಈ ಬಗೆಯ ಕಂಟಕಮಯವಾಗಿದ್ದು, ಆ ಕಂಟಕಗಳನ್ನೆಲ್ಲ ತೆಳುವಾದ ಮಿದುವಾಸಿನಿಂದ ಮರೆಸಿಟ್ಟುಕೊಂಡು, ತಾವು ನಿಷ್ಕಂಟಕರಾಗಿ ತಲೆಯೆತ್ತಿ ಮೆರೆಯುವ ಸಾಹಸದಲ್ಲಿ ಅವರು ತೊಡಗಿದ್ದರು. “ಕಾರುಣ್ಯ ಮೂರ್ತಿ” ಪ್ರಕಾಶಕ್ಕೆ ಬಂದು, ಕೆಲವು ತಿಂಗಳಾಗಿತ್ತು. “ಕಾರುಣ್ಯ ಮೂರ್ತಿ” ಯ ಕರ್ತ “ಕನ್ನಡ ಗೆಳೆಯ”ನು

ಯಾರು–ಯಾರು? ಎಂದು ಕನ್ನಡ ನಾಡು ಕೇಳುತ್ತಿತ್ತು. ಈ ಸಂಧಿಯಲ್ಲಿ ಶೀನು ಬರೆದುಕೊಟ್ಟ "ಅಮೃತ ಭೂಜ" ವು ಪ್ರಕಾಶಕ್ಕೆ ಬರಲು ತಯಾರಾಗಿ ನಿಂತಿತ್ತು. "ಅಮೃತ ಭೂಜ" ದಲ್ಲಿ "ಕನ್ನಡ ಗೆಳೆಯ" ನ ಗುರುತನ್ನು ಕರ್ಣಾಟಕ್ಕೆ ತಿಳಿಸಬೇಕೋ ಬೇಡವೋ ಎಂದು ಮಂಗಲಕರರು ತಮ್ಮೊಳಗೆ ತಾವೇ ತರ್ಕಮಾಡುತಿದ್ದರು ಏತತ್ಸಮಯದಲ್ಲಿಯೇ ಅವರಿಗೆ ಸುತ್ತುಮುತ್ತಿದ ಕಂಟಕಗಳಿಂದ ಒಂದು ಮೊನೆ ಚುರುಕ್ಕನೆ ಚುಚ್ಚಿದಂತೆ ಬೆಂಗಳೂರಿನ "ಕನ್ನಡ ಚಿತ್ರಮಾಲೆ" ಯ ಅಧಿಕಾರಿ ರಾಘವರಾಯರಿಂದ ಒಂದು ಹೊಸ ಪತ್ರವು ಅವರಿಗೆ ಬಂತು! ಅದರಲ್ಲಿ ಕಿರುಗಟ್ಟೆ ಕೃಷ್ಣ ಎಂಬಾತನು, ಅವನ ಅಣ್ಣ ಶ್ರೀನಿವಾಸ ಎಂಬಾತನು ಬರೆದ "ಕಾರುಣ್ಯ ಮೂರ್ತಿ" ಯ ಮೂಲ ಗ್ರಂಥವೊಂದು ಅವನಲ್ಲಿದೆಯಂತೆ ಎಂದೂ, ಶ್ರೀನಿವಾಸನ ಪತ್ತೆಯನ್ನು ಅವನಿಗೆ ತಿಳಿಸಬೇಕಂತೆಂದೂ, ಅದಕ್ಕಾಗಿ ಅವನೇ ಬೆಂಗಳೂರಿಗೆ ಹೊರಟು ಬರುವುದಾಗಿ ಬರೆದಿರುವನೆಂದೂ–ಮುಂತಾಗಿ ಕೃಷ್ಣನು ಬರೆದ ಪತ್ರಾಭಿಪ್ರಾಯವನ್ನು ತಿಳಿಯಪಡಿಸಿದ್ದರು. ಹೀಗೊಂದು ಮೂಲಪ್ರತಿ ಊರಿನಲ್ಲಿರುವುದೆಂದು ಶೀನು ಅವರಿಗೆ ತಿಳಿಸುವ ಸಂದರ್ಭ ಬಂದಿರಲಿಲ್ಲ. ಆ ಪ್ರತಿ ಕೃಷ್ಣನ ಕೈಯಲ್ಲಿರುವುದರಿಂದ, ಆ ಕಳ್ಳ ಕೃಷ್ಣನಿಂದ, ತನ್ನ ರಹಸ್ಯ ಯೋಜನೆಗೆ ಅಪಾಯ ತಟ್ಟುವುದೆಂದು ಭಾವಿಸಿ, ಅವರು ಕೃಷ್ಣನು ಬೆಂಗಳೂರಿಗೆ ಬರುವ ದಿನಕ್ಕೆ ಸರಿಯಾಗಿ, ರಜೆತೆಗೆದುಕೊಂಡು ಬೆಂಗಳೂರಿಗೆ ಹೊರಟಿದ್ದರು.

ಅವರು ಎರಡನೆಯ ದಿನವೇ ಹಿಂದಿರುಗಿ ಬರುವೆನೆಂದು ಶೀನುವಿನೊಡನೆ ಹೇಳಿದ್ದ ಕಾರಣ, ಇವರು ಬಂದರೋ ಹೇಗೆಂದು ತಿಳಿದುಕೊಳ್ಳಲಿಕ್ಕಾಗಿ, ಶೀನು ರಾತ್ರಿ ಹತ್ತುಗಂಟೆಯ ಸಮಯಕ್ಕೆ ಅವರ ಮನೆಗೆ ಬಂದಿದ್ದನು. ಆ ದಿನ ಬೆಳಗ್ಗೆ ಮದರಾಸಿನಿಂದ ವರದನು ಅಲ್ಲಿಗೆ ಬಂದಿದ್ದ ಸಂಗತಿ ಅವನಿಗೆ ಗೊತ್ತಿಲ್ಲ. ಮನೆಯಲ್ಲಿ ಮಂಗಲಕರರಿರುವಂತೆ ಕಾಣದೆ, ಎಲ್ಲರೂ ಬಾಗಿಲು ಹಾಕಿ ಮಲಗಿದ್ದ ಲಕ್ಷಣವನ್ನು ನೋಡಿ, ಅವನು ಹಾಗೆಯೇ ಹಿಂದಿರುಗಲಿಕ್ಕಿದ್ದನು. ಅಷ್ಟರಲ್ಲಿ ಒಳಗಿನ ಕೋಣೆಯಲ್ಲಿ ಯಾರೋ ಪುರುಷನ ಧ್ವನಿಯನ್ನು ಕೇಳಿ—'ಯಾರಿರಬಹುದೆ' ಎಂದು ನಿಂತನು. ಕೂಡಲೇ ಹೆಂಗುಸಿನ ಚೀರ್ದನಿಯೊಂದು

ಅವನ ಕಿವಿಯನ್ನು ಪ್ರವೇಶಿಸಿತು. ಆದರಿಂದ ಒಳಗಣ ವಿದ್ಯಮಾನದ ಪ್ರಕಾರವೂ ಒಂದಿಷ್ಟು ಹೊಳೆದಂತಾಯಿತು. ಈ ರಹಸ್ಯ ಸಂದರ್ಭದಲ್ಲಿ ಗದ್ದಲ ಮಾಡಿದರೆ ಆ ರಹಸ್ಯವು ತನಗೆ ತಿಳಿಯಲಾರದೆಂದೂ. ಕಳ್ಳನು ಪಲಾಯನವಾದಾನೆಂದೂ, ಭಾವಿಸಿ, ಸದ್ದು ಮಾಡದೆ ಹಿಂಬದಿಗೆ ಹೋಗಿ ಅತ್ತಿತ್ತ ನೋಡಿ, ಕತ್ತಲೆಯಲ್ಲಿ ತಡವಿ, ಒಂದು ಕಿಟಕಿಯ ಕಂಬವನ್ನು ಹಿಡಿದು, ಗೋಡೆಯನ್ನು ಆನಿಸಿಕೊಂಡು ನೇತಾಡಿ ಮೇಲೇರಿ, ಒಳ ಭಾಗಕ್ಕೆ ಧುಮುಕಿದನು. ಆ ಶಬ್ದವನ್ನು ಒಳಗಣವರು ಗಮನಿಸಿದಂತೆ ಕಾಣಲಿಲ್ಲ. ಶೀನು ಮೆಲ್ಲನೆ ಬಲಾತ್ಕಾರವು ನಡೆಯುವ ಕೋಣೆಯ ಬಳಿಗೇ ಬಂದು, ಇಕ್ಕಿದ ಬಾಗಿಲ ಬಳಿಯಲ್ಲಿ ನಿಂತನು ಒಳಗೆ ಮೆಲ್ಲ ಮೆಲ್ಲನೆ ನಡೆಯುವ ಪುರುಷನ ಬಲಾತ್ಕಾರ, ಹೋರಾಡಿಕೊಂಡು ಮೆಲ್ಲ ಮೆಲ್ಲನೆ ಹೊರಡುವ ಹೆಂಗುಸಿನ ಆರ್ತಾಲಾಪಗಳನ್ನು ಸ್ಪಷ್ಟವಾಗಿ ಕೇಳಿ ದನು. ಪುರುಷನು ಅಬಲೆಯ ಕೊರಳನ್ನು ಅಮುಕಿದಂತೆ ಭಾಸವಾಗಲು ಶೀನು ತಡೆಯಲಾರದೆ ಬಾಗಿಲನ್ನು ತಟ್ಟಿ,—"ಯಾರೊಳಗೆ? ಅನಾ ಚಾರವೋ-ಸದಾಚಾರವೋ?" ಎಂದು ಕೂಗಿದನು ಒಡನೆಯೇ ಬಾಗಿಲು ತೆರೆದು ವರದನು ಕೋಪೋಗ್ರನೇತ್ರದಿಂದ ಅವನನ್ನು ದುರುದುರು ನೋಡಿ—"ಯಾರು-ಯಾರು ನೀನು? ಹಾ! ಕಳ್ಳ! ಬಾ ಮುಂದೆ! ಆಃ! ಎಷ್ಟು ಧೈರ್ಯವೋ ನಿನಗೆ?—" ಎಂದು ರೊಚ್ಚಿನಿಂದ ಶೀನುವಿನ ಜುಟ್ಟು ಹಿಡಿದು, ಒಳಕ್ಕೆ ಎಸೆದು ಹಾಕಿ ಒದ್ದು ಝಾಡಿಸಿ ಬಯ್ದನು. ಅದೇ ಸಮಯದಲ್ಲಿಯೇ ಮಂಗಲಕರರು ಹಿಂದೆ ಹೇಳಿದ ಚಂದದಿಂದ, ಬೆಂಗಳೂರಿನಿಂದ ಹಿಂತಿರುಗಿ ಬಂದವರು ಧಡಧಡನೆ ಬಾಗಿಲು ತಟ್ಟಿ ತೆರೆಯಿಸಿ ಒಳಹೊಕ್ಕು ವಿದ್ಯಮಾನಗಳನ್ನು ಕಂಡು—ಏನೇನು ಮಾಡಿ ಮಲಗಿದರೆಂಬುದನ್ನು ಪ್ರಿಯ ಓದುಗರಿಗೆ ಓದಿಸಿದ್ದೇವೆ.

---

## ೨೨. "ಶೀನು! ಶೀನು!! ಶೀನು!!!"

ಬೆಂಗಳೂರಿನಲ್ಲಿ "ಕನ್ನಡ ಚಿತ್ರಮಾಲಾಧಿಕಾರಿ" ರಾಘವರಾಯರು ಮಂಗಲಕರರನ್ನು ಕುರಿತು—"ಇನ್ನು ತಾವು ಗುಪ್ತನಾಮದಿಂದ ತಿರು ಗುವ ಆವಶ್ಯಕಾಣುವುದಿಲ್ಲ. "ಕಾರುಣ್ಯಮೂರ್ತಿ" ಮೊದಲಾದ ಇತರ

ಪ್ರಕಟವಾದ ತಮ್ಮ ಕೃತಿಗಳು ಕನ್ನಡ ನಾಡಿನಲ್ಲಿ ನಿರ್ವಿಘ್ನದಿಂದ ವಿಜಯ ಲಕ್ಷ್ಮಿಯನ್ನು ಹೊಂದಿವೆ. ಇನ್ನೇನೂ ತಡೆಬಡೆಗಳಿಲ್ಲದೆ ತಾವು ಗುಪ್ತ ನಾಮದೊಳಗಣಿಂದ ಹೊರಗೆ ಬರಬೇಕಾಗಿ ನಮ್ಮ ಕೋರಿಕೆ. ಈಗ ಅಚ್ಚಾಗುತ್ತಿರುವ "ಅಮೃತ ಭೋಜ"ದಲ್ಲಿ ತಮ್ಮ ಸರಿಯಾದ ಹೆಸರನ್ನೆ ಹಾಕಬೇಕೆಂದಿದ್ದೇವೆ.'' ಎಂದು ಪ್ರಸ್ತಾವಿಸಿದ್ದರು. ಅದಕ್ಕೆ ಒಪ್ಪದಿರಲು ಸರಿಯಾದ ಕಾರಣವೂ ಇರಲಿಲ್ಲ. ಇದರ ಮೇಲೆ, ಕೃಷ್ಣನ ಆಗಮನವಿವಾದ ಗಳಿಂದ ರಾಘವರಾಯರಿಗೆ ಸಂದೇಹವೇಳುವ ಸಂಭವವೂ ಉಂಟಾ ದೀತು. ಮುಂದೆಯಾದರೂ ತನ್ನ ಹೆಸರು ಬಹಿರಂಗವಾಗಲೇಬೇಕಲ್ಲವೆ? ಅದು ಈಗಲೇ ಆಗಲಿ. ಇದರಿಂದ ಒಂದು ವೇಳೆ ಶ್ರೀನಿವಾಸನ ಮನಸ್ಸು ಮುರಿದೀತು. ಮುಂದೆ ನನಗೆ ಗ್ರಂಥಗಳನ್ನು ಬರೆದು ಕೊಡಲಾರನು. ಮುಂದೆ ಕೊಡದಿದ್ದರೆ ಬೇಡ. ಕೊಟ್ಟುದನ್ನೆಲ್ಲಾ ಚಾತುರ್ಯದಿಂದ ಸಮೂಲವಾಗಿಯೇ ಪಡೆದಿರುವೆನಲ್ಲವೆ? ತನ್ನ ಕೀರ್ತಿಯ ಬಳಿವಣಿಕೆಗೆ ಇಷ್ಟು ಅನುವು ಸಿಕ್ಕಿದರೆ ಸಾಲದೆ? ನನ್ನ ಈ ಉದ್ಯಮಕ್ಕೆ ದೈವದ ಸಹಾಯವಿರುವುದರಿಂದಲೇ ತಪ್ಪಿಹೋದ "ಕಾರುಣ್ಯ ಮೂರ್ತಿ"ಯ ಮೂಲಪ್ರತಿ ತನ್ನ ಕೈಗೇ ದೊರೆಯಿತು. ಇನ್ನು ತನ್ನ ಬಳಿಯಲ್ಲಿರುವ ಶೀನುವಿನ ಕೈಬರೆಹದ ಮೂಲಪ್ರತಿಗಳನ್ನೆಲ್ಲಾ ಸುಟ್ಟುಹಾಕಿಬಿಟ್ಟರೆ ತೀರಿ ಹೋಯಿತು. ಆ ಮೇಲೆ ಏನಾದರೂ ತನಗೇ ಜಯ. ಆದರೆ ಶೀನುವನ್ನು ಆದಷ್ಟು ಹಿಡಿಕೆಯೊಳಗೇ ಇಟ್ಟುಕೊಳ್ಳಲಿಕ್ಕೆ ನೋಡಬೇಕು. ಇರಲಿ, ನೋಡೋಣ, ಎಂದು ಈ ಬಗೆಯಾಗಿ ಯೋಚನೆ ಮಾಡಿಕೊಂಡು "ಅಮೃತ ಭೋಜ"ದಲ್ಲಿ ತನ್ನ ಸರಿಯಾದ ಹೆಸರನ್ನು ಹಾಕುವಂತೆ ಒಪ್ಪಿಗೆಯನ್ನು ಕೊಟ್ಟು ಬಂದಿದ್ದರು. ಮನೆಗೆ ಬಂದಾಗ ಮನೆಯಲ್ಲಿ ಆ ಬಗೆಯ ಅನರ್ಥವು ಕಣ್ಣಿಗೆ ಬಿತ್ತು. ಆದರಲ್ಲಿ ಶೀನು ಸಿಕ್ಕಿರುವುದನ್ನು ನೋಡಿ ಅವರು ಬಹಳ ಗಲಿಬಿಲಿಗೆ ಒಳಗಾದರು. ಅವನು ಗೋಡೆ ಯನ್ನು ಹತ್ತಿ ಹಾರಿ ಮನೆಯೊಳಗೆ ಹೊಕ್ಕುದು, ಆದರಲ್ಲಿಯೂ ತನ್ನ ತರುಣ ಪತ್ನಿಯ ಮಾನವನ್ನು ಕಾಪಾಡಿದುದು ಆವರ ವಕ್ರಮನಸ್ಸಿಗೆ ಖೇದಜನಕವಾಗಿಯೇ ಇತ್ತು. ತನ್ನ ಕಮಲೆಯ ಸತೀತ್ವವು ಉಳಿದುದು ಸಮಾಧಾನಕರವಾಗಿದ್ದರೂ, ತನ್ನ ಗೃಹಛಿದ್ರವು ಆ ಕವಿಹೃದಯಿಗೆ

ತಿಳಿದು ಹೋಯಿತಲ್ಲ! ಅವನ ಒಳಗಣ್ಣಿಗೆ ತಾನೊಬ್ಬ ಅಲ್ಪನಂತಾದೆ ನಲ್ಲ!—ಎಂದು ಕರಕರೆಪಡಹತ್ತಿದರು. ಶೀನು ಗೋಡೆ ಧುಮುಕಿ ಒಳಗೆ ಬರಬಾರದಿತ್ತೆಂದೂ, ಹೊರಗಿನಿಂದಲೇ ಎಚ್ಚರಿಸುತಿದ್ದರೆ ಸಾಕಿತ್ತೆಂದೂ ಭಾವಿಸಿಕೊಂಡರು. ಆದರೆ ಹಾಗೆಂದು ಶೀನುವನ್ನು ಖಂಡಿಸಲಿಕ್ಕೂ ಧೈರ್ಯವಿಲ್ಲ. ಒಳಗಾರೋ ಕಳ್ಳರಿರುವಂತೆ ತೋರಿತೆಂದೂ, ಹೊರಗಿನಿಂದ ಶಬ್ದ ಮಾಡಿದರೆ ಕಳ್ಳನು ಪಲಾಯನ ಮಾಡಿಯಾನೆಂದೂ ಯೋಚಿಸಿ, ಗೋಡೆ ಧುಮುಕಿ ಒಳಗೆ ಹೋದೆನೆಂದು, ಶೀನು ಉತ್ತರಿಸಿಯಾನು. ಮುಖ್ಯ ಈ ಗೃಹಾಂತರ ವಿಷಯವು ಶೀನುವಿನಿಂದಾಗಿ ಹೊರಗೆ ಹರಡ ದಿದ್ದರೆ ಸಾಕಾಗಿತ್ತು. ಶೀನು ಅವರಿವರೊಡನೆ ವ್ಯರ್ಥಾಲಾಪನೆ ಮಾಡು ವಷ್ಟು ತಿಳಿಗೇಡಿಯಲ್ಲ; ಬಾಯಾಡಿಯಲ್ಲ. "ಆದರೆ ಕಮಲೆಯಾದರು ತನ್ನ ಮನೆಯ ಒಳಗುಟ್ಟನ್ನು ಮುಚ್ಚಿಟ್ಟುಕೊಳ್ಳಬಾರದಿತ್ತೆ? ಶ್ರೀನಿವಾ ಸನ ಇದಿರೇ ವರದನ ತಪ್ಪನ್ನು ಹೇಳಿಬಿಟ್ಟಳಲ್ಲ? "ಯಾರದೂ ಏನೂ ತಪ್ಪಿಲ್ಲ, ನಾನೇನೋ ಹೆದರಿಕೊಂಡು ಕೂಗಿದೆ. ಅಷ್ಟರಲ್ಲಿ ವರದನು ನನ್ನ ಕೋಣೆಗೆ ಬಂದ, ಆ ಮೇಲೆ ಶ್ರೀನಿವಾಸನೂ ಬಂದ" ಎಂದು ಹೇಳಿ ಹಾರಿಸಿಬಿಡಬಹುದಿತ್ತು ಅವಳು. ಆದರೆ ಪಾಪ, ಅವಳದೂ ತಪ್ಪಲ್ಲ. ಹರಾಮಿ ವರದನು ನಿರಪರಾಧಿಯಾದ ಶ್ರೀನಿವಾಸನನ್ನು ಮಿತಿ ಮೀರಿ ಕಂಡಾಬಟ್ಟೆ ಜರೆದೀಡಾಡುವುದನ್ನು ನೋಡಲಾರದೆ, ತಟಕ್ಕನೆ ವರದನ ಮೇಲೆ ದೂರನ್ನು ಏರಿಸಿಬಿಟ್ಟಳು. ಆ ಸಂದಿಗ್ಧ ಸಮಯದಲ್ಲಿ ಯಾರಿಗಾದರೂ ಹಾಗೆಯೇ ಆಗತಕ್ಕುದು. ಅಲ್ಲದೆ ಶ್ರೀನಿವಾಸನ ಮೇಲೆ ಪಕ್ಷಪಾತ ಮಾಡಲಿಕ್ಕೆ ಅವಳಿಗೆ ಏನುಗೊತ್ತು ಅವನು ಯಾರೆಂದು?— ಆದುದರಿಂದ ಆ ಇಬ್ಬರನ್ನೂ ವೃಥಾ ದೂರಬಾರದು! ವರದನೇ ದುರಾ ಚಾರಿ!.... ...ಆದರೆ ... ...ಆದರೆ ... ...ಯಾರಿಗೆ ಗೊತ್ತು? "ಸ್ತ್ರೀಣಾಂಚ ಚಿತ್ತಂ ಪುರುಷಸ್ಯ ಭಾಗ್ಯಂ ದೇವೊ ನ ಜಾನಾತಿ ಕುತೋ ಮನುಷ್ಯಃ" ಎಂಬಂತೆ ಕಮಲಾ ಶ್ರೀನಿವಾಸರೊಳಗೆ ಈ ಮೊದಲು ಕರಭಾಷೆ-ನೇತ್ರ ಭಾಷೆ-ಭಾವಭಾಷೆಗಳಾಗಿರಲಿಕ್ಕಿಲ್ಲವೆಂದು ಹೇಳಿಬಿಡುವ ಬಗೆ ಹೇಗೆ? ಈಗೆಂಟು ತಿಂಗಳಿಂದಲೂ ಶ್ರೀನಿವಾಸನು ಆಗಾಗ ಇಲ್ಲಿಗೆ ಬಂದು ಹೋಗುತಿದ್ದಾನೆ. ಅವನು ಕಮಲೆಯನ್ನು ನೋಡಲೇ ಇಲ್ಲವೆ? ನಾನಿಲ್ಲ

ದಿರುವ ವೇಳೆಯಲ್ಲಿ ಅವನು ಇಲ್ಲಿಗೆ ಬರಲೇ ಇಲ್ಲವೆ? ನಾನೇನೋ ಸೇವಕ ಸಿದ್ದಪ್ಪನ ಮೇಲೆ ತುಂಬಾ ವಿಶ್ವಾಸವಿಟ್ಟಿದ್ದೇನೆ........ಏನೋ! ಇಲ್ಲದಿದ್ದರೆ ರಾತ್ರಿಯ ವೇಳೆಯಲ್ಲಿ ಶ್ರೀನಿವಾಸನು ಏಕೆ ಬರಬೇಕು?.... ಛೆ ಛೆ, ಶೀನು ತುಂಬ ಸಜ್ಜನನು; ಸಾಧು. ಯಥಾರ್ಥವಾಗಿಯೇ ಇದ್ದಾನೆ.—ಆದರೆ—ನನ್ನ ಮಗ ವರದನು ಹೇಳುವಂತಾದರೂ ಯಾಕಾಗಿರಬಾರದು? ಎಲ್ಲಾ ನಿಧಾನವಾಗಿ ಪರಾಂಬರಿಸಬೇಕು. ಶ್ರೀನಿವಾಸನೊಡನೆ ದ್ವೇಷಕಟ್ಟಿಕೊಳ್ಳಬಾರದು. ನನ್ನ ಕೀರ್ತಿಯ ಅಮರತ್ವಕ್ಕೆ ಬೇಕಾದಷ್ಟು ಸತ್ವವನ್ನು ಆದಷ್ಟು ಅವನಿಂದ ಹೀರಿಕೊಳ್ಳಬೇಕು." ಈ ಬಗೆಯ ಯೋಚನೆಗಳಿಂದ ಮಂಗಲಕರರು ಮಂಚದಲ್ಲಿ ಮಲಗಿ ಅತ್ತಿತ್ತ ಹೊರಳಾಡುತ್ತ ನಿದ್ರೆ ಮಾಡಿಯೂ ಮಾಡದೆಯೂ ಆ ರಾತ್ರಿಯನ್ನು ಕಳೆದರು.

ಬೆಳಗಾದ ಮೇಲೆ ಮಂಗಲಕರರು ಸಿದ್ದಪ್ಪನನ್ನು ಕರೆದು,-"ಏನೋ ಸಿದ್ದ? ರಾತ್ರಿ ನಾನು ಬಂದದ್ದೇ ನಿನಗೆ ಗೊತ್ತಿಲ್ಲವೇನು?"

"ಇಲ್ಲರೀ ಬುದ್ಧಿ."

"ಎಲ್ಲಿಗೆ ಹೋಗಿದ್ದಿ?"

"ಗುರುವಪ್ಪನ ಸಂಗಾತ ಸಿನೇಮಕ್ಕೆ ಹೋಗಿದ್ದೀನ್ರಿ."

"ನಾನು ಊರಲ್ಲಿಲ್ಲದಾಗ ಸಿನೀಮಾಕ್ಕೆ ಯಾಕೋ ಹೋದಿ? ಎಚ್ಚರದಿಂದ ಮನೆಯಲ್ಲಿ ಮಲಗಿರಬೇಕಂತ ನಾನು ಹೇಳಿದ್ದೆನೋ ಇಲ್ಲವೋ?"

"ಹೌದ್ರಿ. ಆದ್ರೆ, ಚಿಕ್ಕರಾಯರು, 'ಗುರುವಪ್ಪ ಹೋಕ್ತಾನೆ, ಬೇಕಾದ್ರೆ ನೀನೂ ಸಿನೀಮಕ್ಕೆ ಹೋಗೂಂತ ಅಂದು ದುಡ್ಡು ಕೊಟ್ಟು ಕಳ್ಸಿದ್ರು ಬುದ್ಧಿ. ಮನೇಲಿ ಚಿಕ್ಕರಾಯರು ಬಂದಿದ್ದಾರಲ್ಲಾಂತ ಹೋದ್ವಿ ಬುದ್ಧಿ."

"ಓಹೋ! ಚಿಕ್ಕರಾಯರು! ಚಿಕ್ಕರಾಯರು!" ಎಂದು ಮಂಗಲಕರರು ವರದನನ್ನೊಮ್ಮೆ ನೋಡಿದರು.

ವರದನು ಆಗ ತಾನೇ ನಿದ್ದೆಯಿಂದೆದ್ದು ಕಣ್ಣುಜ್ಜಿಕೊಳ್ಳುತ್ತ, ಮುಖದಲ್ಲಿ ನೀರು ಹಾಕಿಕೊಂಡು ಬಂದು ಅಲ್ಲಿಯೇ ಕುರ್ಚಿಯಲ್ಲಿ ಕುಳಿತಿದ್ದನು.

ತಂದೆಯ ನೋಟದಿಂದ ಅವನಿಷ್ಟು ಕೆರಳಿ—"ಹೌದಪ್ಪ, ಹೌದು! ನಾನೇ ಸಿನೇಮಕ್ಕೆ ಕಳುಹಿಸಿದೆ. ತಪ್ಪೇನಾಯಿತು? ಯಾಕೆ ನೀನಿಷ್ಟು ರೇಗುತ್ತೀ?" ಎಂದನು.

"ನೀನೇಕೋ ಆ ಬಗೆಯ ಅಧಿಕಪ್ರಸಂಗತನವನ್ನು ಮಾಡಬೇಕು? ಆಳುಕಾಳುಗಳನ್ನು ಇಟ್ಟುಕೊಳ್ಳುವ ಕ್ರಮವೋ ಅದು?" ಎಂದರು ಮಂಗಲಕರರು ಮಗನನ್ನು ನೋಡಿ.

"ನನಗೇನು ಗೊತ್ತಪ್ಪಾ ಮನೆಯೊಳಗೆ ಹೀಗೆಲ್ಲಾ ಅನ್ಯಾಯ ಜರುಗುತ್ತೇಂತ? ಛಕ್! ಈ ಮನೆಗೆ ಬಂದರೆ ಹೀಗೆಯೇ, ಇಲ್ಲದ್ದೊಂದು ಜಗಳ-ರಗಳೆ ಉಂಟೇ ಉಂಟು ಹಾಳು!" ಎನ್ನುತ್ತಾ ವರದನು, ಎದ್ದು ಜಗುಲಿಯಲ್ಲಿ ಅತ್ತಿತ್ತ ತಿರುಗಾಡಲಾರಂಭಿಸಿದನು.

"ಹಾಗೇನಾಯ್ತ್ರೀ ಬುದ್ಧಿ?" ಎಂದು ಸಿದ್ದನು ಬಾಯಿ ತೆರೆದನು.

"ಏನೂ ಇಲ್ಲ ನಡೀ ನಿನ್ನ ಕೆಲಸಕ್ಕೆ" ಎಂದು ಮಂಗಲಕರರು ದಟ್ಟಿಸಲು, ಸಿದ್ದನು ಹೊರಟುಹೋದನು.

ವರದನು ಸ್ವಲ್ಪ ಹೊತ್ತು ಅತ್ತಿತ್ತ ತಿರುಗಿ ಆ ಮೇಲೆ ಮನೆಯ ಹಿಂದುಗಡೆಗೆ ಹೊರಟುಹೋದನು. ಮಂಗಲಕರರು ಕನ್ನಡಿಯ ಮುಂದೆ ಕುಳಿತುಕೊಂಡು ಮುಖ ಕ್ಷೌರಮಾಡಿಕೊಳ್ಳುವಾಗ ಸಿಗರೇಟಿನ ವಾಸನೆ ಅವರ ಮೂಗನ್ನು ಹೊಕ್ಕಿತು. "ಅಬ್ಬ! ಅಪ್ಪನ ಮರೆಯಲ್ಲಿ ಸೇದುವಷ್ಟೊಂದು ಗೌರವವನ್ನಾದರೂ ಇಟ್ಟಿದ್ದಾನಲ್ಲಾ! ಪುಣ್ಯಾತ್ಮ!" ಎಂದು ತಮ್ಮೊಳಗೆ ತಾವೇ ಹೇಳಿಕೊಂಡರು.

ವರದನು ಸಿಗರೇಟು ಸೇದಿ ಮುಗಿಸಿ ಅಡುಗೆಯ ಮನೆಗೆ ಹೋಗಿ ಕಾಫಿಯನ್ನು ಗಂಟಲಲ್ಲಿ ಸುರಿದುಕೊಂಡು, ಆಚೆಯ ಕೋಣೆಯಲ್ಲಿ ಕುಳಿತುಕೊಂಡು ಪುಸ್ತಕವಾಚನದಲ್ಲಿ ಮಗ್ನಳಾಗಿದ್ದ ಕಮಲೆಯನ್ನು ದುರುಗುಟ್ಟಿ ನೋಡುತ್ತಾ, ಮತ್ತೆ ಜಗುಲಿಗೆ ಬಂದು ಕುರ್ಚಿಯಲ್ಲಿ ಕುಳಿತನು. ಆಗ ಮಂಗಲಕರರು ಆಫೀಸಿಗೆ ಹೋಗಲಿಕ್ಕಾಗಿ ಡ್ರೆಸ್ ಹಾಕಿಕೊಳ್ಳುತ್ತಿದ್ದರು.

"ಅಪ್ಪಾ, ನನಗೊಂದು ಐವತ್ತು ರೂಪಾಯಿ ಬೇಕು ಇವತ್ತು

"ಏಕೋ-ಫಕ್ಕನೆ ಏನಾಯಿತು?"

"ಸ್ವಲ್ಪ ಅರ್ಜಂಟ್ ಇತ್ತು."

ಸೂಟು ಹಾಕಿಕೊಳ್ಳುತ್ತಾ ಮಂಗಲಕರರು—"ಅರ್ಜಂಟೆಂದರೆ ? ಏನಾಯಿತು ?"

"ನಾನೊಂದು ಬಿಜಿನೆಸ್ ಪ್ರಾರಂಭಮಾಡಬೇಕಂತ ಇದ್ದೇನೆ."

"ಎಂಥಾ ಬಿಜಿನೆಸ್ ? ನಿನ್ನ ಓದುವಿಕೆ ಮುಗಿದಮೇಲಲ್ಲವೇ ಆ ವಿಚಾರ ?"

"ಓದಿನ ಮೇಲೆ ನನಗೇನೂ ಮನಸ್ಸಿಲ್ಲ ಅಪ್ಪಾ. ಸುಮ್ಮನೆಪರೀಕ್ಷೆಗೆ ಯಾಕೆ ರೊಕ್ಕ ದಂಡಮಾಡಬೇಕು ಅಂತ ಎಲ್ಲಾ ಬಿಟ್ಟುಬಿಟ್ಟಿದ್ದೇನೆ ಈಗ."

"ಏನಂದಿ ?" ಮಂಗಲಕರರು ತುಸು ಬೆರಗಾದರು.

"ಕಲಿಯುವುದೆಲ್ಲಾ ಬಿಟ್ಟು ಈಗೊಂದು ಬಿಜಿನೆಸ್‌ನಲ್ಲಿ ಇಳಿದಿದ್ದೇನೆ; ಒಳ್ಳೇ ಸಂಪಾದನೆಯೂ ಉಂಟು."

"ಓಹೊ ! ನನಗೇಕೆ ಈ ಮೊದಲು ತಿಳಿಸಲಿಲ್ಲ ?"

"ನಿನಗೇನು ತಿಳಿಸುವುದು? ನನಗೇನು ಬುದ್ಧಿ ಬರಲಿಲ್ಲವೆಂತಲೋ? ನೀನು ಯಾವಾಗಲೂ ವಿದ್ಯಾವಿದ್ಯಾ ಅಂತ ತಲೆಚಚ್ಚಿಕೊಳ್ಳುವುದರಿಂದ, ನೀನು ಒಪ್ಪಲಿಕ್ಕಿಲ್ಲವೆಂತಲೇ ತಿಳಿಸಲಿಲ್ಲ. ಈಗ ನನ್ನ ವ್ಯಾಪಾರವು ತಕ್ಕಮಟ್ಟಿಗೆ ಲಾಭದಾಯಕವಾಗಿ ಬಂದದ್ದರಿಂದ ಸ್ವಲ್ಪ ಮಟ್ಟಿಗೆ ತಿಳಿಸಿದ್ದೇನೆ."

"ಏನು ತಿಳಿಸಿದಿ?"

"ಕಲಿಯುವುದನ್ನು ಬಿಟ್ಟುಬಿಟ್ಟಿದ್ದೇನೇಂತ."

"ಬಿಟ್ಟು ?"

"ಸಂಪಾದನೆಗೆ ಇಳಿದಿದ್ದೇನೆ."

"ಏನು ?—ಎಷ್ಟು ಸಂಪಾದನೆ ಮಾಡಿದಿ ? ನಾನು ನಿನಗೆ ಮೊನ್ನೆ ತಾನೇ ನೂರು ರೂಪಾಯಿ ಕಳುಹಿಸಿದೆನಲ್ಲ ?"

"ಅದೆಲ್ಲಾ ಹಳೇ ಹೋಟಲ್ ಬಿಲ್ಲಿಗೂ—ಬಾಕಿಯಾಗಿದ್ದ ಮನೆ ಬಾಡಿಗೆಗೂ ಸರಿಹೋಯಿತು. ಆ ಲೆಕ್ಕವೆಲ್ಲಾ ಕ್ರಮಪ್ರಕಾರ ನನ್ನ ಹತ್ತಿರ ಉಂಟು."

“ ಬೀಡೀ ಸಿಗರೇಟುಗಳ ಲೆಕ್ಕಕೂಡಾ ಅದರೊಂದಿಗುಂಟೆ?''

ವರದನು ಮಾತಾಡಲಿಲ್ಲ.

“ ಸರಿ, ನೀನು ಏನೋ ಸಂಪಾದನೆಗೆ ಇಳಿದಿದ್ದೇನೆಂದೆಯಲ್ಲ? ಎಷ್ಟು ಸಂಪಾದನೆ ಮಾಡಿದಿ?”

“ಹಾಗೆ ಸಂಪಾದಿಸುತ್ತಿದ್ದರೆ ನಿನ್ನ ಹತ್ತಿರ ಈಗ ಐವತ್ತು ರೂಪಾಯಿ ಯಾಕೆ ಕೇಳುತ್ತೇನೆ?''

“ ಅದೇ ಯಾಕೆ—ಏನು ರಹಸ್ಯ ಅಂತ ನಾನು ಕೇಳುವುದು.”

“ ರಹಸ್ಯವೇನಿದೆ? ನನಗೆ ಈ ಬಿಜಿನೆಸ್‌ನಲ್ಲಿ ಲಕ್ಕ್ ಇತ್ತು, ಇಳಿದೆ. ಒಳ್ಳೇ ಹೆಸರೂ ಬಂತು. ಸಂಪಾದನೆ ಇನ್ನು ಮೇಲೆ ತಾನೇ ಚೆನ್ನಾಗಿ ಆಗಬೇಕು. ಆಗ ಎಲ್ಲವೂ ನಿನಗೆ ತಾನಾಗಿಯೇ ಗೊತ್ತೂ ಆಗುತ್ತೆ. ಈಗಲೇ ಹೇಳಿದರೆ ವ್ಯರ್ಥವಾಗಿ ನೀನು ನನಗೆ ಬುದ್ಧೀ ಹೇಳ ಲಿಕ್ಕೆ ಬರುತ್ತೀ!''

“ ಬುದ್ಧೀ ಹೇಳಿದರೆ ಕೇಳುವ ಮಗನಲ್ಲವೇ ನೀನು ?”

“ ನನಗೆ ಬುದ್ಧಿ ಇಲ್ಲದಿದ್ದರೆ ನಿನ್ನ ಬುದ್ಧಿಯನ್ನು ಕೇಳುತಿದ್ದೆ. ಅಪ್ಪಾ, ಈಗ ನನಗೆ ಬುದ್ಧಿ ಬಂತು ನನ್ನ ದಾರಿಯನ್ನು ನಾನು ಹುಡುಕಿ ಕೊಳ್ಳಬಲ್ಲೆ.''

“ ಓಹೊ! ಇಷ್ಟರ ಮಟ್ಟಿಗೆ ಏರಿಹೋಗಿರುವಿಯಾ? ಇದು ಮದ ರಾಸು ಮಹಾತ್ಮೆ ಎಂದು ಕಾಣುತ್ತೆ!''

“ ಕಾಣಲಿ! ಅಪ್ಪಾ. ನೀನು ಹೀಗೆ ಹಟಗುಟ್ಟಿಕೊಂಡೇ ಇರು. ನಿನಗೆ ಇಷ್ಟವಿದ್ದು ಒಳ್ಳೆಯತನದಲ್ಲಿ ಕೊಡುವುದಾದರೆ ಐವತ್ತು ರೂಪಾಯಿ ಕೊಡು. ಇಲ್ಲದಿದ್ದರೆ ಇಲ್ಲಾ ಅಂತ ಹೇಳಿಬಿಡು. ಅಷ್ಟೇ ಮಾತು ಸಾಕು!''

“ ಘಟಿಂಗ! ನನಗೆ ಬುದ್ಧಿ ಹೇಳುವಿಯಾ? ನನ್ನ ಮಗನಾಗಿ ನನ್ನ ಅಪ್ಪನ ಹಾಗೆ ಮಾತಾಡುತ್ತೀಯಾ?'' ಮಂಗಲಕರರು ಕೋಪದ ಉರಿ ಗಣ್ಣಿನಿಂದ ಮಗನನ್ನು ನೋಡಿದರು.

“ ಆಯಿತಾಯಿತು! ನಾನು! ಘಟಿಂಗ! ಹಾಗೇ ಆಗಲಿ! ನೀನು ಕೊಟ್ಟರೂ ನನಗೆ ನಿನ್ನ ರೂಪಾಯಿ ಬೇಡ. ಈವರೆಗೆ ನೀನು ಕಳುಹಿಸಿದ

ರೂಪಾಯಿಯನ್ನು ನಾನು ಸಾಲವಾಗಿ ಇಟ್ಟುಕೊಂಡು, ಬಡ್ಡಿಸಮೇತ ಮುಟ್ಟಿಸದಿದ್ದರೆ ನಾನು ಗಂಡುಸಲ್ಲ! ಓಹ್ಹೊ! ನಿನ್ನ ಹಾಳು ದುಡ್ಡಿನಿಂದಲೇ ನನಗೆ ಬೆಳಗಾಗುತ್ತದೆಂದು ಯೋಚಿಸಿದ್ದೀಯಾ! ಎಂದು ಕೂಗಾಡುತ್ತಾ ವರದನು ಕರ್ಚಿಯಿಂದೆದ್ದನು.

ಮಂಗಲಕರರಿಗೂ ಸಿಟ್ಟು ಸಹಿಸಲಾರದೆ—"ಮೂರ್ಖ! ನಡೀ ಹೊರಗೆ! ಇಂಥಾ ಅವಿಧೇಯ–ಅನಾಚಾರಿ ಮಗನು ಇದ್ದರೂ ಒಂದೇ! ಸತ್ತರೂ ಒಂದೇ!" ಎಂದು ಕೈಕಾಲುಗಳನ್ನು ಝಾಡಿಸಿದರು.

"ಅನಾಚಾರಿ" ಎಂದುದೇ ಅದು ವರದನ ಮರ್ಮಕ್ಕೆ ತಾಕಿತು, "ಅನಾಚಾರಿ! ನಾನು! ಕಿರೀಹೆಂಡತೀ? ಪಾಪ! ಬಹಳ ಒಳ್ಳೇಯವಳು. ಗಂಡನ ಕಿವೀ ಬಹಳ ಚಂದಾಗಿ ಹಿಡಿದಿದ್ದಾಳೆ!—ನಾನು ಅನಾಚಾರೀ-ಅತ್ಯಾಚಾರೀ–ಅಂತ! ಅವಳ ಮಾತನ್ನೆ ವೇದವಾಕ್ಯಾಂತ ನಂಬು ನೀನು! ಗೊತ್ತಾದೀತು ಬೇಗದಲ್ಲೆ ಯಾರು ಅನಾಚಾರೀ ಅಂತ! ಆಹಾಹಾ! ನೀನು ಮಾತ್ರ ಒಳ್ಳೇ ಸದಾಚಾರಿ ಅಪ್ಪಾ! ಗೊತ್ತಿದೆ ನನಗೆ ನಿನ್ನ ತಂತ್ರವೆಲ್ಲಾ! ಇನ್ನೊಬ್ಬರ ಮಕ್ಕಳಿಗೆ ತಾನೇ ಅಪ್ಪಾಂತ ಅಂದ ಹಾಗಿದೆ ನಿನ್ನ ಸದಾಚಾರ! ಅದಕ್ಕೇ ಅವನೂ ಮಾಡುತ್ತಾನೆ ಒಳಗಿಂದೊಳಗೇ..........."
ಎಂದು ಬಾಯಿಗೆ ಬಂದ ಹಾಗೆ ವಟಗುಡುತ್ತ ತನ್ನ ಕೋಣೆಗೆ ಹೋಗಿ, ಸ್ವಲ್ಪ ಹೊತ್ತಿನಲ್ಲಿ, ರೋಜ್‌ಪೊಮ್ಯಾಡಿನ ಲೇಪನದಿಂದ ಘಮಘಮಿಸಿಕೊಂಡು ನಯವಾಗಿ ಬಾಚಲ್ಪಟ್ಟು ಹೊಳೆಯುವ ಕ್ರಾಫಿನ ತಲೆ, ಕಿರಿದಾಗಿ ಕತ್ತರಿಸಿದ ಹರೆಯುದ ಮೀಸೆಯ ಸಾಲು, ಒಳಗೊಂದು ಸಿಲ್ಕ್ ಶರ್ಟ್ ಅದರ ಮೇಲೆ ಆಕಾಶವರ್ಣದ ಪ್ಲೈನರ್‌ಕೋಟು, ಅದಕ್ಕೊಪ್ಪುವ ಸೂಟು, ಬೂಟು, ಹೀಗೆ ಆ ತರುಣನು ನವನಾಗರಿಕ ಸುಂದರನಾಗಿ, ಮನೆಯಿಂದ ಹೊರಟು ಎಲ್ಲಿಗೋ ನಡೆದನು.

ಆಫೀಸಿಗೆ ಹೊರಟು ಸಿದ್ಧರಾಗಿದ್ದ ಮಂಗಲಕರರು ಇದೆಲ್ಲವನ್ನೂ ನೋಡಿದರು, ಏನೂ ಮಾತಾಡಲಿಲ್ಲ. ತಂದೆ ಮಗನ ಆ ವಾಗ್ವಾದವನ್ನು ಕೇಳಿದ ಕಮಲೆ, ಆ ಮೇಲೆ ಮೆಲ್ಲಮೆಲ್ಲನೆ ಪತಿಯ ಬಳಿಗೆ ಬಂದು,—

"ಹೋಗಿಯೇ ಬಿಟ್ಟನಲ್ಲ! ಇನ್ನು ಬರುವುದೇ ಇಲ್ಲಂತೋ?" ಎಂದಳು.

"ಬರದಿದ್ದರೆ ಬೇಡ, ಹೋಗಲಿ. ಎಲ್ಲಿಗೆ ಹೋದಾನು? ನಾಯಿ ಎಲ್ಲಿಗೆ ಹೋದರೂ ಮನೆಗೇ ಬರುತ್ತೆ" ಮಂಗಲಕರರಂದರು.

"ಎಷ್ಟು ಸೊಕ್ಕಿದ್ದಾನೆ ನೋಡಿದಿರಾ? ತಂದೆ ಅಂತ ಸ್ವಲ್ಪ ಗೌರವ ಕೊಡಬೇಡವೆ?"

"ಹಾಳುಗರ್ಭದಲ್ಲಿ ಹುಟ್ಟಿದರೆ ಮತ್ತೆ? ಅಣ್ಣನ ಗುಣ ಹೀಗಾಯಿತು! ಇವನ ತಂಗಿ—" ಮಂಗಲಕರರು ನಾಲಿಗೆಯನ್ನು ಕಚ್ಚಿಕೊಂಡರು. ಅವರ ಮೊದಲನೇ ಹೆಂಡತಿ ವೆಂಕಟಮ್ಮನಿಗೆ ವರದನೊಬ್ಬನೇ ಮಗನೆಂದು ಕಮಲೆಯ ತಿಳಿವಳಿಕೆ. ಅಂತೆಯೆ ಕಮಲೆ,— "ತಂಗಿ ಬೇರೆ ಇತ್ತೇನು ಇವನಿಗೆ?" ಎಂದು ಕೇಳಿದಳು.

"ಹೂಂ. ಒಂದು ವಿಕಾರ ಸ್ವರೂಪದ ಹೆಣ್ಣೂ ಹುಟ್ಟಿತ್ತು-ಮಾರಿ ಪುಣ್ಯಕ್ಕೆ ಅದು ಸತ್ತಿತು!"

"ಓಹೊ! ನನಗಿದು ಗೊತ್ತೇ ಇಲ್ಲ!"

"ಹೇಗೆ ಗೊತ್ತಾದೀತು? ಗೊತ್ತಾಗಿ ನಿನಗೇನಾಗಬೇಕು?— ಅದು ಹೋಗಲಿ, ಕಮಲಾ!—ಇಕೊ, ಈ ಪುಸ್ತಕವನ್ನು ಕಟ್ಟಿಗೆ ಮೂಲೇಲಿ ಹಾಕು. ನಾಳೆ ಬೆಳಗ್ಗೆ ಬಚ್ಚಲು ಒಲೆಯೊಳಗೆ ಸೇರಿಸಿ ಬಿಸಿ ನೀರು ಕಾಯಿಸು. ಇನ್ನೂ ನಾಲ್ಕು ಪುಸ್ತಕ ಆಫೀಸಿನಿಂದ ತರುತ್ತೇನೆ ಅದನ್ನೂ ಬಚ್ಚಲೊಲೆಗೆ ಹಾಕಬೇಕು." ಮಂಗಲಕರರು, ಬೆಂಗಳೂರಿನಿಂದ ಕೃಷ್ಣನ ಕೈಯಿಂದ ಕಸಿದುಕೊಂಡು ಬಂದ "ಕಾರುಣ್ಯಮೂರ್ತಿ" ಮೂಲ ಪ್ರತಿಯನ್ನು ಕಮಲೆಯ ಕೈಯಲ್ಲಿ ಕೊಟ್ಟರು

"ಇಷ್ಟು ದೊಡ್ಡ ಪುಸ್ತಕ ಒಲೆಗೆ ಹಾಕಬೇಕೋ? ಚಂದಾಗಿ ನೋಡಿದಿರಾ ಏನಾದರೂ ಅಗತ್ಯದ ಕಾಗದಪತ್ರಗಳಿದ್ದೀತು?"

"ಏನೂ ಇಲ್ಲ. ಇದು ಪ್ರಿಂಟಾಯಿತಲ್ಲ? ಇನ್ನೇಕೆ ಸಂತೆ?"

ಕಮಲೆ ಆ ಪುಸ್ತಕದ ತಲೆಬರಹವನ್ನು ನೋಡಿ "ಓ, ನಿಮ್ಮ "ಕಾರುಣ್ಯಮೂರ್ತಿ!"

"ಹೌದು. ಪ್ರಿಂಟಾದ ಪುಸ್ತಕ ಓದಿದ್ದೀಯಷ್ಟೆ?"

"ಹೌದು. ತುಂಬಾ ರುಚಿಯಾಗಿದೆ. ಇನ್ನೊ ಒಮ್ಮೆ ಓದುವಾ

ಅನಿಸುತ್ತೆ! ಅಲ್ವಾ! ಇಷ್ಟೆಲ್ಲಾ ಚೆಲೋ ಕತೆಗಳನ್ನು ಆಲೋಚನೆ ಮಾಡಿ ಹೇಗೆ ಬರೆಯುತ್ತೀರಿ? ಯಾವಾಗ—ಎಲ್ಲಿ ಬರೆಯುತ್ತೀರಪ್ಪಾ?"

"ಆಲೋಚನೆ ಮಾಡೋದು ತಲೇಲಿ. ಬರೆಯೋದು ಆಫೀಸಿನಲ್ಲಿ ಯಾವಾಗ ಬಿಡುವು ಸಿಕ್ಕುತ್ತೋ ಆವಾಗ. ಅದಿರಲಿ, ಕಮಲೂ, ನನ್ನ ಇನ್ನೊಂದು ಪುಸ್ತಕ ಬೇಗದಲ್ಲೇ ಪ್ರಿಂಟಾಗಿ ಬರುತ್ತೆ ನೋಡು ನನ್ನ ಪುಸ್ತಕಗಳನ್ನು ಓದುವುದೆಂದರೆ ನಿನಗೆ ತುಂಬಾ ಸಂತೋಷವೋ?"

"ಅಲ್ಲವೇ ಮತ್ತೆ? ಕಾರುಣ್ಯ ಮೂರ್ತಿಯನ್ನು ನೂರು ಬಾರಿ ಓದಿದರೂ ನನಗೆ ತೃಪ್ತಿಯಾಗಲಿಕ್ಕಿಲ್ಲ!"

ಹೆಂಡತಿಯ ಅರಳು ಮೊಗವನ್ನೂ ಸವಿ ನುಡಿಯನ್ನೂ ಕೇಳಿ, ಮಂಗಲಕರರ ಮನಸ್ಸು ಸ್ತಿಮಿತವನ್ನು ಹೊಂದುತ್ತ, ಪ್ರಸನ್ನವಾಗುತ್ತ ಬಂದಿತ್ತು. "ಹೌದೇನೆ? ನೀನೂ ಸಾಹಿತ್ಯದ ಸವಿಯನ್ನು ಸವಿಯುವವಳಾಗಿರುವುದನ್ನು ನೋಡಿ, ನಿನ್ನಂತಹಳನ್ನು ಹೆಂಡತಿಯಾಗಿ ಪಡೆದೆನೆಂದು ನನಗೆ ತುಂಬಾ ಸಂತೋಷವಾಗುತ್ತೆ ನೋಡೆ! ಇನ್ನೊಂದು ಪುಸ್ತಕ ಬೇಗದಲ್ಲೇ ಪ್ರಿಂಟಾಗಿ ಬರುತ್ತೇ ಅಂದೆನಲ್ಲ? "ಅಮೃತ ಭೋಜ" ಅಂತ ಅದರ ಹೆಸರು. ಅದು ಕಾರುಣ್ಯ ಮೂರ್ತಿಗಿಂತಲೂ ಚೆನ್ನಾಗಿದೆ ನೋಡು!"

"ಅದರಲ್ಲಿ ಕೂಡಾ ನಿಮ್ಮ ಹೆಸರು "ಕನ್ನಡ ಗೆಳೆಯ" ಅಂತಲೇ ಹಾಕುತ್ತೀರೇನು?"

"ಇಲ್ಲ, ಸರಿಯಾದ ಹೆಸರೇ ಬರುತ್ತೆ ನೋಡು"—ಹೀಗೆಂದು ಮಂಗಲಕರರು ರಿಸ್ಟ್‌ವಾಚನ್ನು ನೋಡಿಕೊಂಡು, "ಹೊತ್ತಾಯಿತು ಆಫೀಸಿಗೆ—ಜಾಗ್ರತೆಯಾಗಿರು—" ಎಂದು ಅವಳ ಗಲ್ಲಕ್ಕೊಂದು ಮೃದುವಾದ ಪೆಟ್ಟನ್ನು ಕೊಟ್ಟು ಹೊರಟುಹೋದರು.

ಕಮಲೆ 'ಕಾರುಣ್ಯ ಮೂರ್ತಿ'ಯ ಆ ಮೂಲಪ್ರತಿಯನ್ನು ತೆಗೆದುಕೊಂಡು, ತನ್ನ ಕೋಣೆಗೆ ಹೋಗಿ ಕುರ್ಚಿಯ ಮೇಲೆ ಕುಳಿತುಕೊಂಡು, ಅದನ್ನು ಸಹಜವಾಗಿ ಬಿಡಿಸಿ ನೋಡಲಾರಂಭಿಸಿದಳು. ಮೊದಲನೆಯ ಪುಟದಲ್ಲಿ ತಲೆಬರೆಹದ ಬುಡದಲ್ಲಿ "ಕೆ. ಶ್ರೀನಿವಾಸರಾವ್" ಎಂದು

ಬರಯಲ್ಪಟ್ಟಿತ್ತು. ಮಂಗಲಕರರು ಈ ಪುಸ್ತಕವನ್ನು "ಕೆ. ಶ್ರೀನಿವಾಸ ರಾವ್" ಎಂಬವನಿಂದ ನಕಲು ತೆಗೆಯಿಸಿರಬೇಕೆಂದು ಅವಳೆಣಿಸಿದಳು. ಬೇರೆ ವಿಧವಾಗಿ ಅವಳೇಕೆ-ಹೇಗೆ ಎಣಿಸಿಯಾಳು? ಆದರೆ ಆ ಪುಟ ವನ್ನು ತಿರುಗಿಸಿದ ಕೂಡಲೇ ಒಂದು ಪದ್ಯವು ಕಂಗೊಳಿಸಿತು. ಅದೊಂದು ಶಾರದಾಸ್ತುತಿ:

"ಸೃಷ್ಟೀಶ ಬೊಮ್ಮನ ಪಟ್ಟದ ರಾಣಿಯೆ!
ಸೃಷ್ಟಿ ಮಾತೆಯೆ ಸರ್ವ ಶ್ರೇಷ್ಠೆ ||
ಪುಟ್ಟಬಾಲನು ನಾನು ಸ್ಪಷ್ಟ ಮಾತರಿಯೆನು
ದಿಟ್ಟಿಸಿ ವರವ ನೀಡಮ್ಮ!"

ಹೀಗೆಯೇ ಎಂಟು ಸಾಂಗತ್ಯ ಪದ್ಯಗಳು. ಈ ಪದ್ಯದ ಮೊದಲ ಪಙ್ತಿಯನ್ನು ಓದಿದ ಕೂಡಲೆ, ಇದು ಅವಳ ಬಾಯಿಪಾಠವಾದ ಪದ್ಯ ವೆಂದು ತಿಳಿದುಹೋಯಿತು. ಅತ್ಯಾಶ್ಚರ್ಯದಿಂದ ಎಲ್ಲವನ್ನೂ ಓದಿ ನೋಡಿದಳು. ಹೌದು. ಪೂರಾ ಅವಳಿಗೆ ಬರುವ ಪದ್ಯವೇ! ಅಂದು ಕುಂಞಂಘೇರಿಯಲ್ಲಿದ್ದಾಗ, ನೆರೆಮನೆಯ ಬಾಲ ಮಿತ್ರ ಶೀನು, ಕುಳಿತಲ್ಲಿ ಕಟ್ಟಿದ ಪದ್ಯವಿದು. ಆ ಸುಂದರ ಸುಚಿತ್ರವು ಆ ಪದ್ಯಗಳ ಮಧ್ಯದಲ್ಲಿ ಅವಳ ಕಣ್ಣಿಗೆ ಕಾಣಿಸಲಾರಂಭಿಸಿತು. ನವರಾತ್ರಿಯ ಹಬ್ಬದ ಸಮಯ. ಶಂಬಗಭಟ್ಟರ ಮನೆಯಲ್ಲಿ ನವರಾತ್ರಿಯ ಬೊಂಬೇಕೊಲವು ಕೂಡಿಸಿ ದ್ದಾರೆ. ಬಗೆಬಗೆಯ ಬೊಂಬೆಗಳ ಮಧ್ಯದಲ್ಲಿ, ಆ ಶೀನು ತನ್ನ ಸ್ವಂತ ಕೈಯಿಂದ ಚಿತ್ರಿಸಿದ ಒಂದು ಶಾರದೆಯ ಚಿತ್ರವನ್ನು ಇಟ್ಟ ಕೈಜೋಡಿಸಿ,- "ನಮಸ್ತೆ ಶಾರದಾದೇವಿ ಕಾಶ್ಮೀರಪುರವಾಸಿನಿ ತ್ವಾಮಹಂ ಪ್ರಾರ್ಥಯೆ ದೇವಿ ವಿದ್ಯಾದಾನಂಚದೇಹಿಮೆ'' ಎಂದು ಪ್ರಾರ್ಥಿಸಿದ್ದಾನೆ. ಆಗ ಈ ಕಮಲೆ "ಶೀನು! ಈ ಶಾರದೆಯ ಮೇಲೆ ಈಗಲೇ ಒಂದು ಪದಾ ಕಟ್ಟು ನೋಡುವಾ!'' ಎಂದಳು. "ಹುಂ" ಎಂದು ಶೀನು ಒಂದು ಕ್ಷಣ ಕಣ್ಣು ಮುಚ್ಚಿ—"ಕಮಲಾ! ಬರೆದುಕೊ!" ಎಂದವನೇ "ಸೃಷ್ಟೀಶ ಬೊಮ್ಮನ" ಎಂಬ ಈ ಸಾಂಗತ್ಯವನ್ನು ಕಟ್ಟಿಕಟ್ಟಿ ಹೇಳಿದನು. ಕಮಲೆ ಅದನ್ನು ಬರೆದುಕೊಂಡಳು. ಈ ಒಂದನೇ ಪದ್ಯದ ಉತ್ತರಾರ್ಧದ ಪ್ರಥಮ ಪಙ್ತಿಯಲ್ಲಿ, "ಪುಟ್ಟಬಾಲನು ನಾನು" ಎಂಬುದನ್ನು ಕಮಲೆಯ

ಬಾಯಿಯಿಂದ "ಪುಟ್ಟಬಾಲೆಯು ನಾನು" ಎಂದು ಒತ್ತಿಒತ್ತಿ ಹೇಳಿಸಿದ್ದನು. ಇದು ಅವಳಿಗೆ ಮರೆತಿರಲಿಲ್ಲ. ಹಾಗೆಯೇ ಆ ಪದ್ಯಗಳೂ ಅವಳಿಗೆ ಬಾಯಿಪಾಠವಾಗಿದ್ದುವು.

ಇಂತಹ ಪೂರ್ವಸ್ಮರಣೆಯ ಮಹತ್ವದ ಪದ್ಯವು ಆ ಪುಸ್ತಕದಲ್ಲಿ ಕಣ್ಣಿಗೆ ಬೀಳುತ್ತಲೇ—"ಶೀನು! ಶೀನು!! ಶೀನು!!!' ಎಂಬ ಉದ್ಗಾರವು ಅವಳ ಬಾಯಿಯಿಂದ ಹೊರಟಿತು! ಅದೇ ಶೀನುವೇ ನಿನ್ನೆ ರಾತ್ರಿ ಅವಳ ಮಾನಸಂರಕ್ಷಕನಾಗಿ ಕಣ್ಣಿಗೆ ಬಿದ್ದಿದ್ದಾನೆ! ಅದೇ ಶೀನುವೇ ಈ ಪುಸ್ತಕವನ್ನು ಬರೆದಿದ್ದಾನೆ! ತನ್ನ ವೃದ್ಧಪತಿಯು ಲೇಖಕನಲ್ಲ ಹಾಗಾದರೆ! ಸ್ವಯಂ ಅವನೇ ಬರೆದ ಲೇಖನವಿದು! "ಇದು, ಆಹಾ! ಇದು ಶೀನು ನನ್ನ ಶೀನೂ ಬರೆದ ಕಾರುಣ್ಯ ಮೂರ್ತಿ! ಮಂಗಲಕರರು ಬರೆದುದಲ್ಲ! ಅಲ್ಲ!—" ಎಂದು ಆ ಪುಸ್ತಕದೊಳಗಣ ಪ್ರತಿಯೊಂದು ಅಕ್ಷರಗಳೂ ಅವಳ ಕಿವಿಯಲ್ಲಿ ನೊರೆದುವು. "ಆಹಾ! ಆ ಶೀನು ಇಲ್ಲಿಯೇ ಇದ್ದಾನೆ! ಆಗಾಗ ಬರುತ್ತಾನೆ! ಇದೆಂತಹ ಯೋಗ! ನಾನು ಆ ಕಲಾವಿದ ಶೀನುವನ್ನೂ ನೋಡಲಾರೆನೆ? ಮಾತಾಡಲಾರೆನೆ? ಅವನು ಈ ಊರಿನಲ್ಲಿಯೇ ಇದ್ದಾನೆ! ಈಗಲೇ ಓಡಿಹೋಗಿ ಅವನನ್ನು ನೋಡಲಾ? ಹಾ! ಶೀನು! ಶೀನು! ನನ್ನ ಶೀನು!—" ಅಷ್ಟರಲ್ಲಿ ಅವಳ ಹಾರುವ ಮನಸ್ಸಿನ ಮುಂದೆ ವೃದ್ಧಪತಿ ಮಂಗಲಕರರ ಸಂದೇಹದ ದೃಷ್ಟಿ ಸುಳಿದಾಡುತ್ತ, ಅವಳನ್ನು ನಡುಗಿಸಿತು! ಕಡೆಗೆ ಅವಳೊಂದು ನಿಟ್ಟುಸಿರಿಟ್ಟು, ಆ ಪುಸ್ತಕದೊಳಗೆ ತನ್ನ ಮುಖವನ್ನು ಮುಚ್ಚಿಕೊಂಡಳು! .. . ..

---

## ೨೩. "ಕಮಲೇ ಚೆನ್ನಾಗಿದ್ದೀಯಾ?"

ಇತ್ತೀಚೆಗೆ ಒಂದು ತಿಂಗಳಿನಿಂದ ಶೀನು ವೆಂಕೋಬರಾಯರ ಮನೆಯಲ್ಲಿ ವಾಸವಾಗಿರುವುದನ್ನು ಬಿಟ್ಟಿದ್ದನು. ತನ್ನ ಸಾಹಿತ್ಯ ವ್ಯವಸಾಯಕ್ಕೆ ಸ್ವಲ್ಪ ಹೆಚ್ಚಿನ ಅನುಕೂಲವಾಗುವಂತೆ, ಸತ್ಯನಾರಾಯಣ ಪೇಟೆಯಲ್ಲಿ ಒಂದು ಚಿಕ್ಕ ಕೋಣೆಯನ್ನು ಬಾಡಿಗೆಗೆ ತೆಗೆದುಕೊಂಡಿದ್ದನು.

ದಿನಾಲು ಬೆಳಿಗ್ಗೆ ಒಂಭತ್ತು ಗಂಟೆಗೆ ವೆಂಕೋಬರಾಯರ ಮನೆಗೆ ಬಂದು, ಅಡುಗೆಗೆ ಪ್ರಾರಂಭಿಸಿ, ಮಧ್ಯಾಹ್ನ ಒಂದು ಗಂಟೆಗೆ ತನ್ನ ಕೋಣೆಗೆ ಮರಳುವನು. ಆ ಮೇಲೆ ಸಂಜೆ ಆರುಗಂಟೆಗೆ ಹೋಗಿ, ರಾತ್ರಿ ಹತ್ತುಗಂಟೆಯ ಸಮಯಕ್ಕೆ, ಮತ್ತೆ ತನ್ನ ಕೊರಡಿಗೆ ಹಿಂದಿರುಗಿ ಮಲಗುತ್ತಿದ್ದನು. ಊಟ ತಿಂಡಿ ವೆಂಕೋಬರಾಯರಲ್ಲಿಯೇ ಸರಿ. ಅಡಿಗೆಯ ಸಂಪಾದನೆ ಮಾತ್ರವಲ್ಲದೆ ಮಂಗಲಕರರು ಅವನ ಪುಸ್ತಕಗಳ ಬಾಬ್ತು "ಇಗೋ, ಶ್ರೀನಿವಾಸ, ಇಷ್ಟು ರೂಪಾಯಿ ಬಂದಿದೆ, ತೆಗೆದುಕೊ" ಎಂದು ಹೇಳಿ ಕೊಡುತ್ತಿದ್ದರು ಪುಸ್ತಕದ ಬಗ್ಗೆ ಸಿಕ್ಕಿದ ರೂಪಾಯಿಯಷ್ಟನ್ನೂ ಕೊಡುತ್ತಾರೆಂದೇ ಶೀನುವಿನ ನಂಬುಗೆ. ಮಂಗಲಕರರು ಬಹಳ ದೊಡ್ಡ ಮನಸ್ಸಿನವರೆಂದೂ, ತನ್ನಂತಹ ಅಲ್ಪನ ಎಂಜಲಿಗೆ ಕೈಯೊಡ್ಡುವಂತಹರಲ್ಲವೆಂದೂ ಅವನ ದೃಢವಿಶ್ವಾಸ.

ಹಿಂದೆ ಹೇಳಿದಂತೆ ಅವನು ಮಂಗಲಕರ ಕೋಣೆಯಲ್ಲಿ ಸಿಕ್ಕಿಬಿದ್ದು, ವರದನಿಂದ, ಅನ್ಯಾಯವಾದ ಬೈಗಳೊದೆಗಳನ್ನು ಅನುಭವಿಸಿ, ಮಂಗಲಕರರ ದೃಷ್ಟಿಗೆ ಬಿದ್ದಾಗ, ಅವರು ಶೀನುವಿನ ಮೇಲೆ ಕೊಂಚವೂ ಕೋಪವನ್ನು ತೋರಿಸದೆ, ಹೇಗೆ ಸಮಾಧಾನವನ್ನು ತಂದುಕೊಂಡರು! ಎಷ್ಟು ಸಂಯಮನ ಶಕ್ತಿಯನ್ನು ವ್ಯಕ್ತಪಡಿಸಿದರು! ಹೇಗೆ ತನ್ನ ನಿರಪರಾಧಿತ್ವ ತಿಳಿದುಕೊಂಡರು! ಎಷ್ಟು ಔದಾರ್ಯ! ಎಷ್ಟು ಸಹಾನುಭೂತಿ! ಅದಲ್ಲವೇ ದೊಡ್ಡ ಮನಸ್ಸು! ವೈಜ್ಞಾನಿಕ ಮನಸ್ಸು!—ಎಂದು ಮಂಗಲಕರರನ್ನು ಎಷ್ಟೋ ಹೊಗಳಿಕೊಂಡನು!

ಅದೇ ಸಮಯದಲ್ಲಿ ಅಲ್ಲಿ ಅವನ ಕಣ್ಣಿಗೆ ಬಿದ್ದ ರಮಣೀಮೂರ್ತಿ ಯಾರದು? ಕಮಲೆಯಲ್ಲವೆ? ಕಮಲೆ! ಅವನ ಹೃದಯಾಂತರಾಳದಲ್ಲಿ, ಸ್ಮರಣಾಂತರಂಗದ ತಳದಲ್ಲಿ, ಎಷ್ಟು ಮಾಯಿಸಿದರೂ ಕಲೆಯ ರೂಪದಲ್ಲಿ, ಛಾಯೆಯ ರೂಪದಲ್ಲಿ ಮಾಯದೆ ಉಳಿದಿದ್ದ ಆ ಹುಡುಗಿ ಕಮಲೆಯ ಪ್ರತಿಮೂರ್ತಿಯಲ್ಲವೇ ಮಂಗಲಕರರ ಶಯ್ಯಾಮಂದಿರದಲ್ಲಿ ಆಪತ್ತಿಗೀಡಾಗಿದ್ದ ಆ ತರುಣೀಮಣಿ? ಕಮಲವು ಮೊಗ್ಗೆಯಾಗಿರುವಾಗ, ಅದು ಅರಳಿದರೆ ಹೀಗೆಯೇ ರೂಪಾಂತರ ಹೊಂದುವುದೆಂದು ಹೇಗೆ ತಿಳಿದುಕೊಳ್ಳಬಹುದೋ ಹಾಗೆಯೇ ಅದು ಹುಡುಗಿಯಾಗಿದ್ದ ಅದೇ ಕಮಲೆ

ಇಂದು ತರುಣಿಯಾಗಿ ಹೀಗಿದ್ದಾಳೆಂದು ಊಹಿಸಬಹುದು. ಆ ಬಾಲೆ ಕಮಲೆಯೇ ಈ ತರುಣಿ ಕಮಲೆಯೆನ್ನಲು ಏನೇನೂ ಸಂದೇಹವಿಲ್ಲ. ಮಗನು ತಂದೆಯು ಹಾಗಿದ್ದರೂ ಹೇಗೆ ವ್ಯತ್ಯಾಸವಿರುವುದೋ, ತಮ್ಮನು ಅಣ್ಣನಂತಿದ್ದರೂ ಹೇಗೆ ವ್ಯತ್ಯಾಸವಿರುವುದೋ, ಹಾಗೆಯೆ ಅಂದಿನ ಆ ಬಾಲೆ ಕಮಲೆಗೂ ಇಂದಿನ ಈ ತರುಣಿ ಕಮಲೆಗೂ ವ್ಯತ್ಯಾಸವಿತ್ತು, ಹೋಲಿಕೆಯೂ ಇತ್ತು. ವಯೋಮಾನಕ್ಕೆ ಅನುಗುಣವಾದ ಅಂಗ ವ್ಯತ್ಯಾಸವನ್ನು ನೋಡಿದರೆ ಅಂದಿನ ಮೊಗ್ಗೆಯೇ ಇಂದು ಅರಳಿದಂತೆ ಕಾಣುತಿತ್ತು. ಆದರೆ ಅರಳಿಕೊಂಡು ಆನಂದದಿಂದ ತಳತಳಿಸಿಕೊಂಡಿರ ಲಿಲ್ಲ. ಅದರ ನಾಳಕ್ಕೇನೊ ಆಘಾತವಾಗಿರುವಂತೆ, ಅಥವಾ ಆ ನಾಳವು ಬುಡದಿಂದ ಕಿತ್ತು ಬಂದು, ಹೂ ಮಾತ್ರ ನೀರಿನಲ್ಲಿರುವಂತೆ ಚಿಂತಾ ರೇಖೆಗಳಿಂದ ತುಸು ಬಾಡಿಕೊಂಡಿದ್ದಾಳೆ. ಪಾಪ! ಮಂಗಲಕರರಂತಹ ಪ್ರಾಯಮೀರಿದವರಲ್ಲವೇ ಅವಳ ಪತಿ? ಅದೇ ಆಗಿದ್ದೀತು ಅವಳ ಚಿಂತಾ ಕೃಶಾಭಂಗಕ್ಕೆ ಕಾರಣ. ಆದರ ಮೇಲೆ ದುಷ್ಟನ ದುರಾಕ್ರಮಣಕ್ಕೆ ಒಳ ಗಾಗಿ, ಬಾಡಿದ ಹೂ ಹಿಚುಕಲ್ಪಡುವಂತಹ ಸ್ಥಿತಿಯಲ್ಲಿ ಆವಳು ಅವನ ದೃಷ್ಟಿಗೆ ಬಿದ್ದಿದ್ದಳು. ಆ ಇದಿರು ನೋಡದ ರೀತಿಯಲ್ಲಿ ಒಮ್ಮೆಲೇ ಕಮಲೆಯನ್ನು ನೋಡುತ್ತಲೇ, ಶೀನುವಿನ ಮನಸ್ಥಿತಿ ಹೇಗಾಯಿತೆಂಬು ಅವನಿಗೇ ಗೊತ್ತಿಲ್ಲ. ಅಸಹನೆ, ಕೋಪ–ಭೀತಿ–ಧೈರ್ಯ–ಆಶ್ಚರ್ಯ– ಸಂತಾಪ–ಕರುಣ ಮುಂತಾದ ನಾನಾ ಭಾವಗಳ ಒತ್ತಾಟದಿಂದ, ಅವನು ನಿಶ್ಚೇಷ್ಟಾವಸ್ಥೆಗೆ ಈಡಾಗಿ, ಪರದನಿಂದ ಹಾಗೆ ಬೈಗಳೊದೆ ತಿಂದನು. ಆ ಮೇಲೆ ಮಂಗಲಕರರ ಆದರೋಪಚಾರಗಳಿಂದೆ ಪಾರಾಗಿ, ತನ್ನ ಕೋಣೆಗೆ ಹೋಗಿ ಮಲಗಿದರೂ ಆತನಿಗೆ ನಿದ್ದೆ ಹೇಗೆ ಹಿಡಿದೀತು? ”– ಕಮಲೆ! ಕಮಲೆ!! ಕಮಲೆ!!! ಏನಾಶ್ಚರ್ಯ! ಎಂತಹಯೋಗ! ಮಂಗಲಕರರ ಮನೆಯಲ್ಲಿ ಅಕಲ್ಪಿತವಾಗಿ ನನ್ನ ಕಮಲೆಯ ದರ್ಶನ! ಅವಳಿಗೂ ಹತ್ತಿಬಿಟ್ಟದೆ ನನ್ನ ಗುರುತು! ಆಹಾ! ನನ್ನ ಕಮಲೆ ಇಲ್ಲೇ ಇದ್ದಾಳೆ! ಛೆಛೆ! ನನ್ನ ಕಮಲೆ! ಅಲ್ಲಲ್ಲ ಅನ್ಯಾಯವದು! ನನ್ನ ಹೃದಯ ಕಮಲೆಯನ್ನು ಅಂದೇ ಕಿತ್ತುಹಾಕಿಯಾಯಿತು! ಇವಳೀಗ ಅನ್ಯ ಸ್ತ್ರೀ. ನನಗೇನು ಸ್ವಾತಂತ್ರ್ಯವಿದೆ ಇನ್ನು? ಆದರೂ ಅವಳೊಡನೆ ಮಾತಾಡ

ಬೇಕು—ಮಾತಾಡಬೇಕೆಂದು ಮನಸ್ಸು ಆತುರಪಡುತ್ತಿರುವುದಲ್ಲ? ನನ್ನ ಮೇಲೆ ಇಷ್ಟು ನಂಬುಗೆಯನ್ನಿಟ್ಟಿರುವ ಮಂಗಲಕರರು ನನ್ನ ಮೇಲೆ ಸಂದೇಹವನ್ನು ತಾಳಿಯಾರೆ? ಯಾರಿಗೆ ಗೊತ್ತು?—ಏನು ಮಾಡಲಿ? ನನ್ನ ಕಣ್ಣಿಗೆ ಕಮಲೆಯೇಕೆ ಬಿದ್ದಳು? ಮನಸ್ಸು ತುಂಬಿ ಹರಿಯುವ ಪ್ರವಾಹದಂತೆ ಅವಳ ಕಡೆಗೇ ಧಾವಿಸುತ್ತಿದೆಯಲ್ಲಾ! ಹೇಗೆ ಹತ್ತೋಟಿ ಕೊಳ್ಳಲಿ? ಅಲ್ಲಿಗೆ ಹೇಗೆ ಹೋಗಲಿ? ಆ ವರದನು ನನ್ನ ಮೇಲೆ ಕೆಂಡವನ್ನೆ ಸುರಿಸಬಹುದು. ಸುರಿಸಲಿ! ನನಗೇನು? ನಾನೇನು ಅಪರಾಧಿಯೆ? ಮಂಗಲಕರರಿಗೆ ನನ್ನ ಮೇಲೆ ನಂಬುಗೆಯುಂಟು. ನಾನು ಸ್ವಾಭಾವಿಕವಾಗಿಯೇ ಅವರ ಮನೆಗೆ ಯಾಕೆ ಹೋಗಬಾರದು? ತಪ್ಪುಮಾಡಿದ್ದರಲ್ಲವೇ ಹೆದರಬೇಕು? ನನಗೇನು?—ಅಲ್ಲದೆ ಮಂಗಲಕರರು ನಾಳೆ ಇನ್ನೊಂದು ಪುಸ್ತಕವನ್ನು ತೆಗೆದುಕೊಂಡು ಬಾರೆಂದು ಹೇಳಿದ್ದಾರೆ. ಆದುದರಿಂದ ನಿಶ್ಶಂಕೆಯಿಂದ ಹೋಗುತ್ತೇನೆ. ಹೋಗದೆ ಜಂಕಿಕೊಂಡರೇನೇ ವರದನು ನನ್ನ ಮೇಲೆ ಹಾಕಿದ ಅಪರಾಧವು ಸತ್ಯವೇನೋ ಎಂದು ಸಂದೇಹವಾದೀತು. ಹೋದರೂ ಆ ಕಮಲೆ ನನ್ನ ಕಣ್ಣಿಗೆ ಬಿದ್ದಾಳೆ? ಈ ವರೆಗೆ ಎಷ್ಟೋ ಬಾರಿ ಹೋಗಿದ್ದೆ. ಮಂಗಲಕರರ ಹೆಂಡತಿ ನನ್ನ ಕಣ್ಣಿಗೆ ಬಿದ್ದೇ ಇಲ್ಲ ನಾನು ಬೇಕೆಂದು ನೋಡಲೂ ಇಲ್ಲ ಈಗ ಹೇಗೆ ಮಾಡಲಿ. ಪಾಪ! ಅವಳಿಗೂ ನನ್ನೊಡನೆ ಮಾತಾಡಬೇಕೆಂದು ತುಂಬಾ ಕುತೂಹಲವಿದ್ದೀತು. ಆದುದರಿಂದ ನನ್ನನ್ನು ತಿಳಿದರೆ ಅವಳೂ ಇದಿರು ಬಂದಾಳು ಹಾಗೆ ಬಂದರೆ ಮಂಗಲಕರರ ಇದಿರೇ ನಾನು ಕಮಲೆಯನ್ನು ಮಾತಾಡಿಸಬಹುದೆ? ಹೌದು ಅದೇ ಸರಿ. ನಾನೂ ಕಮಲೆಯೂ ಪೂರ್ವಪರಿಚಿತರೆಂಬುದು ಅವರಿಗೂ ತಿಳಿಯಲಿ. ಆದರೆ ಇಷ್ಟರೊಳಗೆ ಆ ದುರುಳ ವರದನು ಏನಾದರೂ ಹೇಳಿ ತಂದೆಯ ಮನಸ್ಸನ್ನು ನನ್ನ ಮೇಲೆ ಕುಲುಷಿತ ಮಾಡಿರಬಹುದೆ? ಏನೊ! ಮಂಗಲಕರರ 'ಮನಸ್ಸು ಹೇಗಿದೆಯೆಂದು ನೋಡಿಕೊಂಡೇ ವರ್ತಿಸಬೇಕು. ಆಫೀಸಿಗೇ ಹೋಗಿ ಅವರನ್ನು ಕಾಣುತ್ತೇನೆ. ಮನೆಗೆ ಬೇಡ.. ಅಥವಾ ನಾನು ಯಾಕೆ ಹೀಗೆಲ್ಲಾ ಸಂದೇಹ ತಾಳಿಕೊಳ್ಳಬೇಕು?— ಹೇ, ಶೀನು! ಇನ್ನು ನೀನೇಕಯ್ಯಾ ಆ ಪರಸ್ತ್ರೀ ಕಮಲೆಯನ್ನು ಕುರಿತು

ಇಷ್ಟೆಲ್ಲ ಚಿಂತಿಸಬೇಕು ? ಛಿ, ಇನ್ನು ಬಿಡೋ ಕಮಲೆಯ ಹಂಬಲ !—ಹಂಬಲವೇನಿದೆ ?—ಪರಿಚಿತಳನ್ನು ನೋಡಿ ಮಾತಾಡಿಸಿದರೆ ಹಂಬಲ ವಾದಂತಾಯಿತೆ?—" ಈ ಬಗೆಯ ಯೋಚನೆಗಳಿಗೆ ಅಂತ್ಯವೇ ಕಾಣ ಲಿಲ್ಲ. ಮರೆತು ಕಂಡ ಕಮಲೆಯನ್ನು ಮರೆಯಬೇಕೆಂದರೆ ಸಾಧ್ಯವೇ ಆಗಲಿಲ್ಲ.

ಬೆಳಗಾಯಿತು. ಕೈಕಾಲುಗಳನ್ನಾಡಿಸುತ್ತ ಅನುದಿನವೂ ಮಾಡುವ ಕೆಲಸಗಳನ್ನು ಮಾಡಿಯೂ ಬಿಟ್ಟನು. ಅಪರಾಹ್ನದ ನಾಲ್ಕು ಗಂಟೆಯ ಸಮಯಕ್ಕೆ ಪೆಟ್ಟಿಗೆಯೊಳಗಣಿಂದೊಂದು ಕೈಬರೆಹದ ಪುಸ್ತಕವನ್ನು ತೆಗೆದುಕೊಂಡು, ಮಂಗಲಕರರ ಆಫೀಸಿಗೆ ಹೋಗಲೋ—ಮನೆಗೆ ಹೋಗಲೋ ಎಂದು ಚಂಚಲ ಮನಸ್ಕನಾಗಿಯೇ ನಡೆದನು. ಈಗ ಮಂಗಲಕರರು ಆಫೀಸಿನಲ್ಲಿಯೇ ಇರುತ್ತಾರೆ. ಅವನ ಕೋಣೆಯಿಂದ ಹೊರಟರೆ ಮಂಗಲಕರರ ಮನೆಯ ಬೀದಿಯಿಂದಾಗಿಯೂ ಹೋಗ ಬಹುದು; ಬೇರೆದಾರಿಯೂ ಇತ್ತು. ಆದರೆ ಶೀನುವಿನ ಕಾಲುಗಳು ಅವ ನನ್ನು ಮಂಗಲಕರರ ಇದಿರು ಬೀದಿಯಲ್ಲೇ ಕರಕೊಂಡು ಬಂದುವು. ನಿಧಾನವಾದ ನಡಿಗೆಯಿಂದ ಮನೆಯ ಕಡೆಗೆ ದೃಷ್ಟಿಹಾಯಿಸಿದನು ಮನೆಯ ಬಾಗಿಲು ಸರಿದಿತ್ತು. ಯಾರೂ ಕಾಣಿಸಲಿಲ್ಲ. ಇನ್ನು ಅವನು ಅಲ್ಲಿಂದ ಮುಂದಕ್ಕೆ ತೆರಳತಕ್ಕವನು. ಅಷ್ಟರಲ್ಲಿ ಬಾಗಿಲು ತೆರೆಯಲ್ಪಟ್ಟು, ಕಮಲೆಯೇ ಹೊರಗೆ ಬಂದಳು. ಅವಳ ಕೈಯಲ್ಲೊಂದು ಪುಸ್ತಕವಿತ್ತು. ಶೀನು ಆಕರ್ಷಣ ಶಕ್ತಿಯಿಂದ ನಿಲ್ಲಿಸಲ್ಪಟ್ಟವನ ಹಾಗೆ ನಿಂತನು. ಅವಳೂ ನಿಂತು ಅವನನ್ನು ನೋಡಿದಳು. " ಶೀನು " ಎಂಬ ಶಬ್ದವು ಅವಳ ಬಾಯಿಯಿಂದಲೂ, " ಕಮಲಾ " ಎಂಬ ಶಬ್ದವು ಇವನ ಬಾಯಿ ಯಿಂದಲೂ ಒಮ್ಮೆಗೇ ಹೊರಬಿತ್ತು. ಅರಿವಿಲ್ಲದೆ ಇಬ್ಬರ ಬಾಯಿಯಿಂ ದಲೂ, ಇನ್ನೊಬ್ಬರಿಗೆ ಕೇಳಿಸುವಂತಹ ಶಬ್ದರೂಪವಾಗಿಯೇ ಹೊರ ಬಿದ್ದಿತು ! ಆದರಿಂದ ತತ್ಕ್ಷಣವೇ ಇಬ್ಬರೂ ಪೆಟ್ಟುಬಿದ್ದೆಚ್ಚತ್ತು ಕೊಂಡರು. ಶೀನು ಪರಿಚಯದ ನಗುವನ್ನು ತುಟಿಯಲ್ಲಿ ಕಾಣಿಸಿಕೊಂಡು, ಗೇಟಿನ ಬಾಗಿಲನ್ನು ತೆರೆದು ಒಳಗೆ ಹೊಗಲು ಉಜ್ಜುಗಿಸಿದರು. ಕಮಲೆ ಅಲ್ಲೇ ನಿಲ್ಲುವಂತೆ ಅವನಿಗೆ ಕೈಸನ್ನೆ ಮಾಡಿ, ಜಗಲಿಯ ಬದಿಯಲ್ಲಿದ್ದ

ಕೋಣೆಯ ಕಡೆಗೆ ಕೊರಳು ತಿರುಗಿಸಿ ನೋಡಿ, ಸಮಾಧಾನದ ಮುದ್ರೆಯಿಂದ ಗೇಟಿನ ಬಳಿಗೆ ಓಡಿಬಂದಳು. ಆಕೆಯ ಆ ಭಾವದಿಂದ ಕೋಣೆಯೊಳಗೆ ಯಾರೋ ಇರಬೇಕೆಂದು ಸೂಚನೆಯಾಯಿತು.

"ಯಾರಿದ್ದಾರೆ? ರಾಯರಿದ್ದಾರೆಯೆ?" ಶೀನು ಕೇಳಿದನು.

ಕಮಲೆ ಪಿಸುದನಿಯಿಂದ—"ಇಲ್ಲ. ಆಫೀಸಿಗೆ ಹೋಗಿದ್ದಾರೆ. ಅವರ ಮಗ ಕೋಣೆಯಲ್ಲಿ ಮಲಗಿದ್ದಾನೆ."

"ಮಗ! ವರದ!" ಕ್ಷಣಕಾಲ ಶೀನು ಬೆಚ್ಚಿಬಿದ್ದನು

"ಪರವಾಯಿಲ್ಲ ಶೀನು! ಮಲಗಿದ್ದಾನೆ ಮಾರಾಯ"

"ಇದ್ದರೇನು? ನಾನು ಅನ್ಯಾಯ ಮಾಡಿರುವೆನೆ?" ಎಂಬ ಧ್ವನಿಯೊಂದು ಶೀನುವಿನ ಹೃದಯದಲ್ಲಿದ್ದು ಅವನಿಗೆ ಧೈರ್ಯವನ್ನು ಕೊಟ್ಟಿತು. "ಕಮಲೆ, ಕಮಲೆ! ನೀನು ಇಲ್ಲಿ ಇರುವಿಯಲ್ಲಾ!" ಶೀನುವಿನ ಬಾಯಿಯಿಂದ ಹೊರಬಿದ್ದ ಉದ್ಗಾರವಿದು.

"ನೀನೂ ಇಲ್ಲೇ ಇದ್ದಿ. ಏನಾಶ್ಚರ್ಯ! ಶೀನು! ನಿನ್ನೆ ರಾತ್ರಿ ಆ ಸಮಯದಲ್ಲಿ ನಿನ್ನನ್ನು ನೋಡಿ ನನಗೆ ಎಷ್ಟು ಆಶ್ಚರ್ಯ ಆಯಿತಂತೀ?"

"ನನಗೂ ಹಾಗೆಯೆ! ಕಮಲಾ! ಕಮಲಾ! ನೀನು ಇಲ್ಲಿ ಹೇಗೆ–?"

"ನೀನೂ–ಶೀನೂ! ಇಲ್ಲಿ?" ನೂರಾರು ಮಾತುಗಳು ಒಂದೇ ಬಾರಿಗೆ ಗಂಟಲಲ್ಲಿ ಅಡ್ಡಗಟ್ಟಿದುದರಿಂದಲೂ, ಹೆಚ್ಚು ಮಾತಾಡಲು ಅವಕಾಶವಿಲ್ಲವೇನೋ ಎಂಬ ಆತುರದಿಂದಲೂ ಇಬ್ಬರಿಗೂ ಏನು ಮಾತಾಡಬೇಕೆಂದು ತೋರದೆ ಹೋಯಿತು, ಒಬ್ಬರ ಮುಖವನ್ನೊಬ್ಬರು ಪಿಳಿಪಿಳಿ ನೋಡುತ್ತ ನಿಂತರು. ಇದ್ದಕ್ಕಿದ್ದ ಹಾಗೆಯೇ ಇಬ್ಬರ ಕಣ್ಣಲ್ಲಿಯೂ ನೀರು ತುಂಬಿ ಸೂಸಲಾರಂಭಿಸಿತು. ಎಲ್ಲಾ ಮಾತುಗಳೂ ಸೇರಿ ಬಾಯಿಯಿಂದ ಹೊರಹೊರಡಲು ಅವಕಾಶವಿಲ್ಲದೆ, ಮನಸ್ಸಿನ ಬೇಗೆಯಿಂದ ಕರಗಿ ಕಣ್ಣೀರಾಗಿ ಸುರಿಯಿತು! ಎರಡು ಮೂರು ನಿಮಿಷ ಇದೇ ಅವಸ್ಥೆಯಲ್ಲಿ ಕಳೆಯಿತು ಪಾಪ!

"ಕಮಲೆ, ಚೆನ್ನಾಗಿದ್ದಿಯಾ?" ಶೀನು ಬಾಯಿಬಿಟ್ಟನು.

"ಇದ್ದೇನೆ ಹೀಗೆ ಶೀನು" ಗದ್ಗದ ಕಂಠದ ಸಣ್ಣ ದನಿಯಿಂದ ಹೇಳುತ್ತಾ ಇಳಿಯುವ ಕಣ್ಣೀರನ್ನು ಸೆರಗಿನ ಕೊನೆಯಿಂದ ಒರೆಸಿ

ಕೊಂಡಳು ಕಮಲೆ. ಬಳಿಕ—"ಶೀನು! ನೀನು ಚೆನ್ನಾಗಿರುವಿಯಾ? ಎಷ್ಟು ಸಿಕ್ಕಿಹೋಗಿದ್ದೀಯಲ್ಲ? ಶೀನು! ನಿನ್ನ ತಾಯಿ ತಮ್ಮ ಎಲ್ಲರೂ ಎಲ್ಲಿದ್ದಾರೆ? ಚೆನ್ನಾಗಿದ್ದಾರೆಯೆ?"

"ಹುಂ, ಅಮ್ಮ ಪರಲೋಕವಾಸಿಯಾದಳು."

"ಅಯ್ಯೋ! ಯಾವಾಗ ಶೀನು?"

"ಎಲ್ಲಾ ಒಂದು ವರ್ಷದ ಕೆಳಗೆ."

"ಈಗ ನೀನು ಒಬ್ಬನೇ ಈ ಊರಿನಲ್ಲಿರುವಿಯಾ?"

"ಹೌದು, ಕಮಲಾ."

"ಮದುವೆ?"

"ಮದುವೆಯೂ ಆಯಿತು, ಎಲ್ಲವೂ ಆಯಿತು. ಕಮಲಾ! ನಿನ್ನ ಮದುವೆ ಯಾವಾಗ ಆಯಿತು? ಕಮಲಾ! ನನಗೆ ಗೊತ್ತೇ ಇಲ್ಲವಲ್ಲ?"

ತಟಕ್ಕನೆ ಕಮಲೆಯ ಕಣ್ಣಿನಲ್ಲಿ ಮತ್ತೆ ಜಲವುಕ್ಕಿತು. ಗಂಟಲು ಬಿಗಿದುಕೊಂಡಿತು. ಅಷ್ಟರಲ್ಲಿ ಸರ್ರನೆ ಸ್ಯಾಕಲ್ಲೊಂದು ಅಲ್ಲಿಗೆ ಬಂತು. ಅದರಿಂದೊಬ್ಬ ನವನಾಗರಿಕ ತರುಣನು ಕೆಳಗಿಳಿದು "ಮಿಸ್ಟರ್ ವರದ ರಾವ್! ವರದರಾವ್! ಏನಮ್ಮ, ವರದರಾಯರಿದ್ದಾರೆಯೆ?" ಎಂದನು ಬಾಯಿಯಿಂದ ಸಿಗರೇಟಿನ ಹೊಗೆಯನ್ನು ಬಿಡುತ್ತಾ.

"ಏಸ್! ಕಮಿಂಗ್" ಎಂದು ಕೂಗುತ್ತ ಜಗಲಿಯ ಕೋಣೆಯೊಳಗಣಿಂದ ವರದನು ಎದ್ದು ಹೊರಗೆ ಬಂದು—"ಕಮಾನ್ ಧೋಂಡುರಾವ್, ಕಮಾನ್" ಎಂದು ಕರೆದನು.

"ಗುಡ್ಡೀವ್ನಿಂಗ್ ವರದರಾವ್."

"ಗುಡ್ಡೀವ್ನಿಂಗ್."

ಧೊಂಡೂರಾಯನು ಸ್ಯಾಕಲ್ಲನ್ನು ಗೇಟಿನ ಬದಿಯಲ್ಲಿ ನಿಲ್ಲಿಸಿ ಒಳಗೆ ಹೋದನು. ಇಬ್ಬರೂ ಕೋಣೆಯೊಳಗೆ ಸೇರಿದರು.

ಈ ಅಕಲ್ಪಿತ ಸಂಭವದಿಂದ ಶೀನೂ ಕಮಲೆಯರು ಸ್ತಬ್ಧರಾದರು.

"ಶೀನು! ಸರಿಯಾಗಿ ಹೃದಯವನ್ನು ಬಿಚ್ಚಿ ಮಾತಾಡಲಿಕ್ಕೂ ದೇವರು ಅವಕಾಶವನ್ನು ಕೊಡಲಿಲ್ಲ. ನಿನ್ನೊಡನೆ ಹಲವು ಮುಖ್ಯ ವಿಷಯ ಮಾತಾಡಲಿಕ್ಕಿತ್ತು, ಇದೊಂದು ಬೆಕ್ಕಿನ ಹಾಗೆ ಅಡ್ಡ ಬಂತು."

"ಇರಲಿ ಕಮಲಾ ಇನ್ನೊಮ್ಮೆ ಸಂಧಿಸಿ ನಿಧಾನವಾಗಿ ಮಾತಾಡೋಣವಂತೆ. ಇಗೋ, ಈ ಪುಸ್ತಕವನ್ನು ರಾಯರು ಬಂದಕೂಡಲೇ ಅವರಿಗೆ ಕೊಡು."

"ಸರಿ. ಈ ಪುಸ್ತಕದ ವಿಚಾರವಾಗಿಯೆ ನಿನ್ನೊಡನೆ ಮಾತಾಡುವುದಿತ್ತು." ಕಮಲೆ ಪುಸ್ತಕವನ್ನು ಪಡೆದುಕೊಂಡಳು.

"ಎಲಾ ಮತ್ತೆ. ಕಮಲಾ! ನಿನ್ನ ಕೈಯಲ್ಲಿ ಕೂಡಾ ನಾನೇ ಬರೆದ ಪುಸ್ತಕವಿದೆಯಲ್ಲಾ?"

"ಹುಂ." ಎಂದು ಕಮಲೆ ಹಿಂದಿರುಗಿದಳು. ಶೀನುವೂ ತಿರುಗಿದನು. ಆಗ ಇಬ್ಬರ ನೋಟಗಳೂ ಒಂದು ಕ್ಷಣ ಸೇರಿ, ಅವು ಹಲವು ಬಗೆಯ ಭಾವಗಳನ್ನು ಪರಸ್ಪರರ ಹೃದಯದಲ್ಲಿ ನೆಟ್ಟುವು.

ಕಮಲೆ ಜಗುಲಿಯನ್ನೇರಿ ಒಳಗೆ ಹೋಗುತಿರುವಾಗ, ವರದನು ಅವಳನ್ನು ಅಡ್ಡಗಣ್ಣಿನಿಂದ ನೋಡುತ್ತ—"ಏನು ಕಮಲ! ಪ್ರೇಮಾಲಾಪವು ಮುಗಿಯಿತೆ?" ಎಂದು ಕೊಂಕುಮಾತನ್ನಾಡಿದನು.

"ಸಾಕು ವರದ! ಕೊಳಕು ಬಾಯಿಯನ್ನು ಸುಮ್ಮನೆ ತೆರೆಯಬೇಡ! ಮುಚ್ಚು!" ಕಮಲೆಯೆಂದಳು.

"ಒಹ್ಹೊ! ಬಹಳ ಬೆಳೆದೇ ಹೋದ ಹಾಗಿದೆ!" ವರದನು ಜಗ್ಗನೆದ್ದು ಹೊರಗೆ ಬಂದು, ಗಟ್ಟಿಯಾಗಿ—"ಎಲೊ! ಶೀನಾಚಾರಿ! ಶೀನಾಚಾರಿ!" ಎಂದು ಕರೆದನು.

ಹತ್ತು ಹೆಜ್ಜೆ ಹೋಗುತಿದ್ದ ಶೀನು ಹಿಂದಿರುಗಿ ಅಲ್ಲಿಗೆ ಬಂದು, ಅಂಗಳದಲ್ಲಿ ನಿಂತನು. "ಏನೊ ಆಚಾರಿ! ನಿನ್ನೆ ಬಿದ್ದ ಒದೆ ಅಷ್ಟು ಬೇಗನೇ ಮರೆತು ಹೋಯಿತೇನೋ ಮೂರ್ಖಾ!" ಎಂದು ವ್ಯಂಗ್ಯಭಾವದಿಂದ ಕೆಣಕಿದನು ವರದ.

"ಮೂರ್ಖಾ ಗೀರ್ಖಾಂತ ಒಮ್ಮೆಲೇ ಹೇಳಿ ಜಗಳಕ್ಕೇ ಕರೆಯುವ ಹಾಗಿದೆ! ನಿಮ್ಮ ಮೂರ್ಖತೆಯೊಂದಿಗೆ ನನಗೇನೂ ಸಂಬಂಧವಿಲ್ಲಯ್ಯಾ." ಎಂದು ಶೀನು ಸಟಕ್ಕನೆ ಅಲ್ಲಿಂದ ಹಿಂದಿರುಗಿದನು.

"ನಿಲ್ಲೊ! ಅಪ್ಪ ಇಲ್ಲದ ಈ ಸಮಯದಲ್ಲಿ ಇಲ್ಲಿಗೆ ಯಾಕೋ ಬಂದಿ ದುರಾತ್ಮ?"

"ದುರಾತ್ಮ! ದುರಾತ್ಮನು ಯಾರೆಂದು ನಿಮ್ಮ ಆತ್ಮಸಾಕ್ಷಿಗೆ ಗೊತ್ತುಂಟು! ನಾನೊಂದು ಪುಸ್ತಕವನ್ನು ರಾಯರಿಗೆ ಕೊಟ್ಟು ಹೋಗೋಣ ಅಂತ ಬಂದದ್ದು."

"ಅವರ ಹೆಂಡತಿಯೊಡನೆ ನಿನಗೇನೋ ಮಾತು?–ಫಟಿಂಗ!"

"ಏನೂ ಇಲ್ಲ! ರಾಯರು ಬಂದರೆ ಈ ಪುಸ್ತಕವನ್ನು ಅವರಿಗೆ ಕೊಡೀ ಅಂತ ಅಂದೆ."

"ಓಹೋ! ಎಲ್ಲಾ ಗೊತ್ತಿದೆ! ಅಷ್ಟು ಹೊತ್ತು ಗೇಟಿನ ಬದಿಯಲ್ಲಿ ಗುಸಗುಸಾ—ಪಿಸಪಿಸಾ! ಮಿಸ್ಟರ್! ಧೋಂಡೂರಾವ್! ನೀವೂ ನೋಡಿದಿರೋ ಇಲ್ಲವೋ?"

"ಹೌದು, ಏನು ಕತೆ? ಯಾರಿವನು?" ಧೋಂಡೂರಾಯನು ಬಾಯಿ ತೂರಿದನು.

"ಇವನೊಬ್ಬ ಬೇವರ್ಸಿ ಅಡುಗೆಯವ. ಅಡುಗೆ ಮಾಡುತ್ತ ಮಾಡುತ್ತ ಏನೋ ಕತೆ–ಗೀತೆ ಬರೆಯುತ್ತಾನೆ ದೊಡ್ಡ ಕವೀ ಹಾಗೆ. ನಮ್ಮ ಅಪ್ಪನಿಗೂ ಇದರ ಹುಚ್ಚು ಭಾರಿ. ಹಾಗಂತ ಈ ಬೇವರ್ಸಿಗೂ ಅವರಿಗೂ ಒಳ್ಳೆಯ ಅಚ್ಚು ಮೆಚ್ಚು. ಹೋಗಲಿ. ಎಲ್ಲಾ ಹೇಳುವಂತಾದ್ದಲ್ಲ. ಹಾಂಗತ ಮಾಡುವುದೇನು ಹೇಳಿ? ಒಳಗಿನ ಹೇಸಿಗೆ ಹೊರಗೆ ಕಾಣಲಿಕ್ಕೆ ಕೂಡಾ ಪ್ರಾರಂಭವಾಯಿತು! ನೀವೇ ನೋಡಿದಿರಲ್ಲ?"

ಧೋಂಡೂ:— ಏನು? ನನಗೇನೂ ವಿಶೇಷವೆನಿಸಲಿಲ್ಲ. ಅಂತೂ ನೀವೀಗ ಹೇಳಿದ ಮೇಲೆ ಮಾತ್ರ ಏನೋ ಅನಿಸುತ್ತೆ. ಅಂತೂ ಈ ಅಡಿಗೇ ಆಚಾರಿಗಳನ್ನೆಲ್ಲಾ ನಂಬಬಾರದು ವರದರಾವ್!

ವರದ:—ಸರಿಯಾಗಿ ಹೇಳಿದಿರಿ ಧೋಂಡೂರಾವ್! ಇಂದು ನೀವು ನೋಡಿದ್ದು ಕೇಳಿದ್ದೆಲ್ಲಾ ನಿಮ್ಮೊಳಗೇ ಜೀರ್ಣಿಸಿಕೊಳ್ಳಿರಿ! ಹೊರಗೆ ಬಿಡಬೇಡಿ!

ಧೋಂಡೂ:— ನನಗೆ ಗೊತ್ತಿಲ್ಲವೆ? ನೀವು ಹೇಳಿದಿರೀಂತ ನಾನು ಇಂತಾದ್ದೆಲ್ಲ ನಂಬುವುದೇ ಇಲ್ಲ. ಹೀಗೆಲ್ಲಾ ಮಾತಾಡಿದ ಮಾತ್ರಕ್ಕೆ ಒಮ್ಮೆಗೇ ಅಪಾರ್ಥವನ್ನು ಕಲ್ಪಿಸಿಕೊಳ್ಳಲಾದೀತೆ? ಅಲ್ಲದೆ ನಿಮ್ಮ ತಂದೆ ಎಲ್ಲ ವಿಷಯದಲ್ಲಿ ತುಂಬಾ ದೂರಾಲೋಚನಿಗಳಾಗಿರುತ್ತಾರೆ. ಅವರಿಗೇ

ಇಲ್ಲದ ಸಂದೇಹ ನಿಮಗೇಕೆ? ಇದನ್ನೆಲ್ಲಾ ನೀವು ನನ್ನ ಇದಿರಿನಲ್ಲಿ ಯಾದರೂ ಬಿಡಿಸಬಾರದಿತ್ತು; ಹೋಗಲಿ.

ವರದನು ತುಸು ಅಪ್ರತಿಭನಾಗಿ—" ಅಷ್ಟೇಷ್ಟೆ." ಎಂದು ನಗುವಿನ ಮುಖವಾಡವನ್ನು ತಂದುಕೊಂಡನು. ಈ ಅವಕಾಶದಲ್ಲಿ ಶೀನು ಹೊರಟುಹೋಗಿದ್ದನು.

ಥೋಂಡು:— ಅದಿರಲಿ ವರದರಾವ್, ಆ ನಟಿಯನ್ನು-ಇವತ್ತು ಫಸ್ಟ್ ನೋಡಿ, ಹದಿನೈದನೆ ತಾರೀಕಿಗಾದರೆ ಒಳ್ಳೆ ಅನುಕೂಲ. ಆ ದಿನ ಹೇಗೂ ಆದಿತ್ಯವಾರ, ಅಲ್ಲದೆ ಹನ್ನೆರಡನೆ ತಾರೀಕಿನಿಂದ ಆ ನಟಿಯು ಮುಖ್ಯ ಪಾತ್ರವಿರುವ "ವಿಧಿಯ ಬಲೆ" ಫಿಲಿಂ ಕೂಡಾ ತರಿಸಬೇಕೆಂದಿದ್ದೇವೆ. ಆಗ ಆ ನಟಿಯೇ ಪ್ರತ್ಯಕ್ಷ ಬಂದುಬಿಟ್ಟರೆ ಒಳ್ಳೇ-ಹಣ ಕೊಳ್ಳೆಯಾದೀತು. ಆದಿತ್ಯವಾರ ಸಾಯಂಕಾಲ ನಾಲ್ಕು ಗಂಟೆಯಿಂದ ರಾತ್ರಿ ಎಂಟು ಗಂಟೆಯ ವರೆಗೆ ಪ್ರೋಗ್ರಾಂ ಹಾಕಿಬಿಡಬಹುದು. ಅದಕ್ಕೆ ಸರಿಯಾಗಿ ಆ ನಟಿಯನ್ನು ಬರಮಾಡುವುದು ನಿಮ್ಮ ಕೆಲಸ.

"ಓ ಯಸ್, ನಾನು ನಾಡದು ಮದರಾಸಿಗೆ ಹೋಗಿ ಅವಳೊಡನೆ ಮಾತಾಡಿ ಎಲ್ಲಾ ಫಿಕ್ಸ ಮಾಡಿ ನಿಮಗೆ ಬರೀತೇನೆ."

"ಅಂತೂ ಜಾಹೀರು ನೋಟೀಸು ಈಗಲೇ ಹೊರಡಿಸುತ್ತೇವೆ."

"ಓ ಯಸ್" ಈ ರೀತಿಯಾಗಿ ಮಾತಾಡುತ್ತ, ವರದನೂ, ಥೋಂಡೂವೂ ಸಿಗರೇಟನ್ನು ಸುಟ್ಟು ಬೂದಿಮಾಡುತ್ತಾ, ಮನೆಯಿಂದ ಹೊರಟುಹೋದರು. "ಪೀಡೆಗಳು ತೊಲಗಿದುವು" ಎಂದು, ಅಲ್ಲೇ ಇದ್ದು ಅವರ ಮಾತುಗಳನ್ನು ಕೇಳುತ್ತಿದ್ದ ಕಮಲೆ, ಬಾಗಿಲು ಹಾಕಿಕೊಂಡು ಒಳಗೆ ಹೋದಳು.

---

## ೨೪. ವಕ್ರ ಪರೀಕ್ಷೆ

ಎರಡನೆಯ ಬಾರಿ ಕಮಲೆಯ ಅನಿರೀಕ್ಷಿತ ದರ್ಶನ, ದುಃಖ-ಆನಂದಾದಿ ಭಾವನೆಗಳ ಉದ್ವೇಗ, ಮಧ್ಯೆ ದುರಾತ್ಮ ವರದನಿಂದಾದ ಭಂಗ ಇವುಗಳಿಂದ ಶೀನುವಿನ ಮನಸ್ಸು ತುಂಬಾ ಅಸ್ವಸ್ಥವಾಗಿ ಹೋಯಿತು. ಕಮಲೆಯನ್ನು ಸಂಧಿಸಿದ ಮೇಲೆ ಅದು ವ್ಯರ್ಥಾಲಾಪ

ವಾಗದಂತೆ ಬಹಿರಂಗ ಕಾರಣವಾಗಿ ಆ ಪುಸ್ತಕವೊಂದನ್ನು ಆವಳ ಕೈಗೆ ಕೊಟ್ಟಿದ್ದನು—ಮಂಗಲಕರರಿಗೆ ಕೊಡಲಿಕ್ಕಾಗಿ. ಆ ಮೇಲೆ ಕಮಲೆಯ ದರ್ಶನದಿಂದಾದ ದುಃಖ, ವರದನ ವಕ್ರದೃಷ್ಟಿಯ ಭಯ, ಮಂಗಲಕರರಿಗೆ ಅವನೇನಾದರೂ ಇಲ್ಲದ ದೂರು ಹೇಳಿ ತನ್ನ ಮೇಲೆ ಅವರಿಗೆ ಸಿಟ್ಟು ಬರುವಂತೆ ಮಾಡುವನೇನೋ ಎಂದು ಮತ್ತೆ ಮತ್ತೆ ಏಳುವ ಸಂದೇಹ, ಕಮಲೆಯನ್ನು ನೋಡಿಯೂ ನೋಡಿದಂತಾಗಲಿಲ್ಲ, ಮಾತಾಡಿಯೂ ಮಾತಾಡಿದಂತಾಗಲಿಲ್ಲ ಎಂಬ ಅತೃಪ್ತಿಯ ಆಂದೋಳನ ಮೊದಲಾದ ಆತಂಕಗಳಿಂದ ಮತ್ತೆ ಅವನಿಗೆ ಮಂಗಲಕರರನ್ನು ಪೋಗಿ ನೋಡುವಷ್ಟು ಧೈರ್ಯವುಂಟಾಗಲಿಲ್ಲ. ಈ ಅಧೀರ ಸ್ಥಿತಿಯಲ್ಲಿಯೇ ಎರಡು ದಿನಗಳು ಕಳೆದುವು.

ಮೂರನೆಯ ದಿನ ಸಾಯಂಕಾಲ ನಿತ್ಯದಂತೆ ವೆಂಕೋಬರಾಯರ ಮನೆಗೆ ಅಡುಗೆಗೆ ಹೋಗಲಿಕ್ಕಾಗಿ ಹೊರಟುನಿಂತಿದ್ದನು. ಆಗ ಸಿದ್ದಪ್ಪನು ಅಲ್ಲಿಗೆ ಬಂದು—" ಶೀನಯ್ಯಾ, ಇವತ್ತು ರಾತ್ರಿ ಕೆಲಸ ಬೊಗಸೆಯೆಲ್ಲಾ ಮುಗಿದ ಮ್ಯಾಕ, ಮನೇತನಕ ಬಂದು ಹೋಗಬೇಕೂಂತ ದಣೇರು ಅಪ್ಪಣೆ ಮಾಡ್ಯಾರ" ಎಂದನು.

ಶೀನು:— ಚಿಕ್ಕರಾಯರು ಇದ್ದಾರೇನಪ್ಪಾ ಮನೇಲಿ ?

ಸಿದ್ಧ:— ಇಲ್ರಿ. ಅವರು ಇವತ್ತೇ ಬೆಳಗ್ಗೆ ಮದರಾಸಿಗೆ ಪೋಗಿದ್ದಾರೆ.

ಶೀನು:— ದಣೇರು ನನ್ನ ಮೇಲೆ ಸಿಟ್ಟುಗಿಟ್ಟು ಮಾಡಿದಾಂಗೆ ಕಾಣಸ್ತೇನಪ್ಪಾ ?

ಸಿದ್ದ:— ಇಲ್ಲರೀ. ನಿಮ್ಮ ಮೇಲೆ ಯಾಕ್ರೀ ಸಿಟ್ಟು ಅವರಿಗೆ ?

ಶೀನು:— ಯಾಕಿಲ್ಲ. ಮೊನ್ನೇನೇ ಬಾಂತಂದಿದ್ರು. ನನಗೆ ಸ್ವಲ್ಪ ಮೈಯಲ್ಲಿ ಸರಿಯಾಗಿದ್ದಿಲ್ಲ. ಬರ್ತೇನೇಂತ ಹೇಳು ಸಿದ್ದಾ.

" ಒಳ್ಳೇದ್ರಿ." ಎಂದು ಸಿದ್ದನು ಹೊರಟುಹೋದನು.

ಶೀನು ತನ್ನ ಕೆಲಸಗಳನ್ನು ಮುಗಿಸಿಕೊಂಡು ರಾತ್ರಿ ಒಂಭತ್ತುವರೆ ಗಂಟೆಗೆ ಮಂಗಲಕರರ ಮನೆಗೆ ನಡೆದನು. ಮಂಗಲಕರರು ವಿರಾಮಾಗಾರದಲ್ಲಿ ಈಸೀಚೆಯಿರಿನ ಮೇಲೆ ಒರಗಿಕೊಂಡು, ದೀಪದ ಪ್ರಕಾಶ

ದಲ್ಲಿ ಒಂದು ಪುಸ್ತಕವನ್ನು ಓದುತ್ತಿದ್ದರು. ಅದು ಎರಡು ದಿನಗಳ ವೊ[illegible]ಲು, ಶೀನು ಕಮಲೆಯ ಕೈಯಲ್ಲಿ ಯಾವ ಪುಸ್ತಕವನ್ನು ಕೊಟ್ಟಿದ್ದನೋ ಆ ಪುಸ್ತಕ. ಅದನ್ನು ಶೀನು ಮೊನ್ನೆ ತಾನೇ ಬರೆದು ಮುಗಿಸಿದ್ದನು. ಹೆಸರು "ತ್ಯಾಗಿ" ಐತಿಹಾಸಿಕ ನವನ್ಯಾಸ. ಈ ಮೊದಲು ಬರೆದ "ಅಮೃತ ಭೋಜ," ಮತ್ತು "ತ್ಯಾಗಿ" ಇವುಗಳ ಐತಿಹಾಸಿಕ ಅಡಿಗಟ್ಟುಗಳಿಗೆ ಅಗತ್ಯವಾದ ಅನೇಕ ಚರಿತ್ರ ಗ್ರಂಥಗಳ ಸಹಾಯವು ಮಂಗಲಕರರ ಪುಸ್ತಕ ಭಾಂಡಾರದಿಂದಲೇ ಶೀನುವಿಗೆ ದೊರೆತಿತ್ತು. ಅಲ್ಲದೆ ಇನ್ನು ಮುಂದೆ ಬರೆಯಬೇಕಾದ ನವನ್ಯಾಸಗಳ ಅಡಿಗಟ್ಟುಗಳನ್ನೂ ಶೀನು ತಯಾರಿಸಿಕೊಂಡಿದ್ದನು. ಅವನು ಒಂದು ಗ್ರಂಥವನ್ನು ಸಂಪೂರ್ಣವಾಗಿ ಬರೆದು ಮುಗಿಸಿ ಮಂಗಲಕರರ ಕೈಯಲ್ಲಿ ಕೊಟ್ಟ ಮೇಲೆ, ಮಂಗಲಕರರು ಒಂದು ಪೆನ್ಸಿಲನ್ನು ಕೈಯಲ್ಲಿಟ್ಟುಕೊಂಡು ಅದನ್ನು ಓದುತ್ತಾ, ಅಲ್ಲಲ್ಲಿ ತಮ್ಮ ಪಾಂಡಿತ್ಯಸೂಚಕ ವಾಕ್ಯಗಳನ್ನೂ ತಮಗೆ ಅನುಭವವುಳ್ಳ ಶಬ್ದರತ್ನಗಳನ್ನೂ ಸೇರಿಸಿ, ಹಾಗೆ ಮಾಡಿದುದರಿಂದಾದ ಒಪ್ಪು ಅಂದಗಳನ್ನು ಎತ್ತಿ ಶೀನುವಿಗೆ ವ್ಯಾಖ್ಯಾನ ಮಾಡಿ ತೋರಿಸುತ್ತ ತಾನು ಆ ಗ್ರಂಥವನ್ನು ಚೆಲೋ ರೀತಿಯಿಂದ ತಿದ್ದಿ ಉತ್ತಮಗೊಳಿಸಿದೆನೆಂಬ ಸಂತೃಪ್ತಿ ಅವನ ಮನಸ್ಸಿನಲ್ಲಿ ಹುಟ್ಟುವಂತೆ ಮಾಡುತ್ತಿದ್ದರು. ಅಂತೆಯೇ ಶೀನೂ-ಮಂಗಲಕರರ ಮಾತುಕತೆಗಳೆಂದರೆ, ಲೇಖನ ಸಾಹಿತ್ಯ ವಿಚಾರವಾದೊಂದು ಸ್ವಾರಸ್ಯವಾದ ಚರ್ಚೆಯೇ ಆಗುತ್ತಿತ್ತು. ಈ ಬಗೆಯ ಚರ್ಚೆಯಿಂದ ಶೀನುವಿಗೆ ಹೊಸಹೊಸ ಪಾಠಗಳು ಮನನವಾಗುತಿದ್ದುವು. ಇಂತಹ ಚರ್ಚೆಯಲ್ಲಿ ಈಡಾಗುವುದೆಂದರೆ ಶೀನುವಿಗೆ ಆತ್ಮಾನಂದ.

ಈಗ ಮಾತ್ರ ವರದನ ವಕ್ರಚಿಂತನೆಯಿಂದ ಮಂಗಲಕರರು ತನ್ನ ಮೇಲೆ ಅನ್ಯರೀತಿಯಾಗಿರಬಹುದೇನೋ ಎಂಬ ಶಂಕೆಯಿತ್ತು. ಸಿದ್ದಪ್ಪನ ಮಾತಿನಿಂದ ಅದೂ ನಿವಾರಣೆಯಾಯಿತು ಆದರೆ ಶೀನು ಕಮಲೆಯ ಕೈಯಲ್ಲಿ, ರಾಯರಿಗೆ ಕೊಡುವಂತೆ ಪುಸ್ತಕವೊಂದನ್ನು ಕೊಟ್ಟ ವಿಧಾನವು ಮಾತ್ರ ವಿಶೇಷವೆಂದು ಮಂಗಲಕರರ ಧೂರ್ತ ಮನಸ್ಸಿಗೆ ತಟ್ಟದೆ ಹೋಗಲಿಲ್ಲ. ಏಕೆಂದರೆ ಈವರೆಗೆ ಹಾಗೆ ಜರುಗಿರಲಿಲ್ಲ. ಆದರೆ

ಕಮಲೆ ಪತಿಯ ಸಂದೇಹದ ಮನಸ್ಸಿಗೆ, ಹೆಚ್ಚಿಗೆ ಸಂದೇಹವಾಗಲೆಡೆ ಇಲ್ಲದಂತೆ ಆ ಪುಸ್ತಕವನ್ನು ಅವರಿಗೆ ಕೊಡುವಾಗ—"ಅದು ನೋಡಿ, ನಿನ್ನೆ ರಾತ್ರಿ ನನ್ನ ಮರ್ಯಾದೆ ಉಳಿಸಿದನಲ್ಲಾ, ಶ್ರೀನಿವಾಸ ಎಂಬವ? ಅವನು ಈ ಪುಸ್ತಕವನ್ನು ನಿಮಗೆ ಕೊಡಬೇಕಂತ ಕೊಟ್ಟಿದ್ದಾನೆ" ಎಂದಷ್ಟೇ ಹೇಳಿದ್ದಳು. ಅದನ್ನು ಕೇಳಿದೊಡನೆ ಅವರಿಗೊಂದು ರೀತಿ ಯಾಯಿತು. ಒಂದು ನಿಮಿಷ ಕಮಲೆಯನ್ನು ವಿಚಿತ್ರ ದೃಷ್ಟಿಯಿಂದ ನೋಡಿ, "ಮತ್ತೇನಾದರೂ ಹೇಳಿದನೆ?" ಎಂದು ಕೇಳಿದರು. "ಏನೋ ಹೇಳಬೇಕೆಂತಲೇ ಇದ್ದ; ಅಷ್ಟರೊಳಗೆ ಅವನನ್ನು ನೋಡಿ ನಿಮ್ಮ ವರದರಾಯ ಹುಲಿಯ ಹಾಗೆ ಬೈದು ಗರ್ಜಿಸಿ ಪಾಪ ಅವನನ್ನು ಓಡಿಸಿ ಬಿಟ್ಟ!" ಎಂದು ಕಮಲೆಯೆಂದಳು. ಆ ವರದನು ಮನೆಗೆ ಬಂದು ಮಂಗಲಕರರ ಮುಂದೆ ಏನಾದರೂ ಚಾಡಿ ಹೇಳಿಯಾನೆಂದೇ, ಜಾಗ ರೂಕಳಾದ ಕಮಲೆ, ಅವನಿಗಿಂತ ಮೊದಲು ತಾನೇ ಹಾಗೆಂದಳು.

ಮೊನ್ನೆ ಬೆಳಗ್ಗೆ ವರದನು ತಂದೆಯೊಡನೆ ಐವತ್ತು ರೂಪಾಯಿ ಯನ್ನು ಕೇಳಿ, ಕಡೆಗೆ ಬಾಯಿಗೆ ಬಂದ ಹಾಗೆ ಜಗಳವಾಡಿ ಹೋದನಷ್ಟೆ? ಅದೊಂದು ವಿಶೇಷವಾದ ಜಗಳವಾಗಿರಲಿಲ್ಲ. ಆ ತಂದೆ-ಮಗಂದಿರ ಸಂಧಿಕಾಲದಲ್ಲೆಲ್ಲಾ ಅನೇಕವಾಗಿ ಈ ಬಗೆಯ ಜಗಳಗಳು ಸರ್ವಸಾಧಾ ರಣವೇ ಆದುದರಿಂದ, ಮಂಗಲಕರರು ಮಧ್ಯಾಹ್ನ ಆಫೀಸಿಗೆ ಹೋದಾಗ ವರದನು ಮನೆಗೆ ಬಂದೇಬಂದನು. ಆ ತಂದೆ-ಮಗಂದಿರೊಳಗೆ ಎಷ್ಟೇ ಪ್ರಚಂಡವಾದ ಜಗಳವಾದರೂ, ಕಮಲಾ ಸುಂದರಿ ಆ ಮನೆಯೊಳಗೆ ಇರುವುದರಿಂದ, ವರದನು ಯಾವುದಾದರೊಂದು ನೆವನದಿಂದ ಮನೆಗೆ ಬಂದೇ ಬಂದು, ಕಮಲೆಯ ಮುಖಕಮಲವನ್ನು ನೋಡಿಯೇ ನೋಡದೆ ಬಿಡಲಾರದವನಾಗಿದ್ದನು. ಅಲ್ಲದೆ ಪ್ರಸಿದ್ಧ ಪುರುಷರಾದ ತಂದೆಯೊಡನೆ ಜಗಳವಾಡಿ ಮನೆಬಿಟ್ಟು ತಿರುಗಿದರೆ, ತನಗೇ ಗೌರವಹೀನವೆಂದೂ, ತಂದೆಯಿಂದಾಗಿಯೇ ತನಗೂ ಗೌರವ ಬಂದಿರುವುದೆಂದೂ ಅವನಿಗೆ ಗೊತ್ತಿತ್ತು. ಅಂತೆಯೇ ಅಂದು ಅಪರಾಹ್ನದಲ್ಲಿ ಮನೆಯಲ್ಲೇ ಇದ್ದನು. ಮತ್ತೆ ಮತ್ತೆ ಘೋಂಡೂರಾಯನೊಂದಿಗೆ ಹೊರಗೆ ಹೋದ ಮೇಲೆ, ರಾತ್ರಿ ಊಟದ ವೇಳೆಗೆ ಬಂದಿದ್ದನು. ಈ ಬಾರಿ ಅವನು ಊರಿಗೆ ಬಂದು

ಎಸಗಿದ ದುಶ್ಚೇಷ್ಟೆಯಿಂದಾಗಿ ಕಮಲೆ ಅವನ ಮೇಲೆ ತುಂಬಾ ಅಪ್ರಸನ್ನಳೂ ಕ್ರುದ್ಧಳೂ ಆಗಿದ್ದಳು. ಮೊನ್ನೆ ರಾತ್ರಿಯ ಪ್ರಸಂಗದಿಂದಂತೂ ಅವನ ಮೇಲೆ ಕಟುತರವಾದ ಅಸಹ್ಯವು ಅವಳಿಗಾಗಿತ್ತು. ಅವನೂ ಹಾಗೆಯೆ! ಹೇಗಾದರೂ ಕಮಲೆಯ ಮೇಲೆ ಹಗೆ ತೀರಿಸಿಕೊಳ್ಳಬೇಕೆಂದು ತನ್ನೊಳಗೆ ತೀರ್ಮಾನಿಸಿಕೊಂಡಿದ್ದನು. ಅಂತೆಯೆ ರಾತ್ರಿಯಲ್ಲಿ ತಂದೆಯನ್ನು ಕುರಿತು—"ಅಪ್ಪ, ನಾನು ಹೇಳಿದರೆ ನೀನು ನಂಬಲಿಲ್ಲ. ಈ ದಿನವೂ ಲಫಂಗ, ನೀನು ಆಫೀಸಿಗೆ ಹೋದ ಹೊತ್ತು ನೋಡಿಕೊಂಡು ಇಲ್ಲಿಗೆ ಬಂದು, ಯಾವುದೋ ಪುಸ್ತಕದ ನೆವನದಿಂದ ನಮ್ಮ ಕಮಲಮ್ಮನೊಡನೆ—" ಎಂದು ತನ್ನ ಹೊಲಸು ಬಾಯಿಯನ್ನು ತೆರೆದಾಗ, "ಸಾಕು, ಗೊತ್ತಿದೆ. ಎಲ್ಲಾ ಅವಳು ಹೇಳಿ ಪುಸ್ತಕ ನನ್ನ ಕೈಗೆ ಕೊಟ್ಟಿದ್ದಾಳೆ" ಎಂದು ಮಂಗಲಕರರು ತೀವ್ರವಾಣಿಯಿಂದ ಮಗನ ಬಾಯಿಯನ್ನು ಮುಚ್ಚಿಸುವ ಪ್ರಯತ್ನ ಮಾಡಿದರು.

ವರದನು ತನ್ನೊಳಗೆ ತಾನೇ ಹೇಳಿಕೊಳ್ಳುವವನಂತೆ ತಂದೆಯ ಕಿವಿಗೆ ಹಲವಾರು ಹೊಲೆಮಾತುಗಳನ್ನು ಬೀಳಿಸಿದನು. ಇದರಿಂದ ಶೀನೂ ಕಮಲೆಯರ ಮೇಲೆ ಸಂಶಯವಾಗುವುದಕ್ಕಿಂತಲೂ ಹೆಚ್ಚಾಗಿ, ವರದನ ಕರಾಳ ಹೃದಯದ ಪ್ರತಿಬಿಂಬವೇ–ಅವರ ಕರಾಳ ಹೃದಯದಲ್ಲಿ ಮೂಡಲಾರಂಭಿಸಿತು.

ಈ ದಿನ ದುರುಳ ವರದನು ಮದರಾಸಿಗೆ ಹೊರಟುಹೋದನು. "ತ್ಯಾಗಿ" ಗ್ರಂಥವನ್ನು ಕೊಟ್ಟುಹೋದ ಶೀನು ಎರಡು ದಿನವಾದರೂ ಮುಖವನ್ನು ಕಾಣಿಸದಿದ್ದುದರಿಂದ, ಇಂದು ಸಿದ್ದಪ್ಪನೊಡನೆ ಮಂಗಲಕರರು ಅವನಿಗೆ ಹೇಳಿಕಳುಹಿಸಿದರು. ಅದರಂತೆಯೇ ಶೀನು ಹೊರಟು ಬಂದನಷ್ಟೆ? ರಾಯರು, ಈ ಮೊದಲೇ ಆಲೋಚನೆ ಮಾಡಿಟ್ಟುಕೊಂಡಂತೆ "ಯಾವುದಕ್ಕೂ ಒಳ್ಳೇದು; ಶೀನುವನ್ನು ಸ್ವಲ್ಪ ಸೌಮ್ಯವಾಗಿ ಖಂಡಿಸಲೇಬೇಕು," ಎಂದು ತೀರ್ಮಾನಿಸಿದ್ದರು.

ಶೀನು ಅವರ ಮನೆಯ ಜಗುಲಿಯನ್ನು ಹತ್ತಿದ ಕೂಡಲೇ ಒಮ್ಮೆ ಅವನ ಕಣ್ಣು ಮನೆಯ ಒಳಗೆಲ್ಲಾ ಕಂಡಷ್ಟು ಹುಡುಕಾಡಿತು. ಯಾರನ್ನು? ಕಮಲೆಯನ್ನಲ್ಲದೆ ಇನ್ನಾರನ್ನು? ಕಮಲೆ ಒಳಗೆ ಶಯ್ಯಾಮಂದಿರದಲ್ಲಿ

ಓದುತ್ತಿದ್ದಳು. ರಾತ್ರಿಯಲ್ಲಿ ವ್ಯರ್ಥವಾಗಿ ಹೊರಗೆ ಬರಬಾರದೆಂದು ಪತಿಯ ಆಜ್ಞೆಯಿತ್ತು. ಆದರ ಮೇಲೆ ರಾತ್ರಿಯಲ್ಲಿ ಯಾರಾದರೂ ಮಾತಾಡ ಲಿಕ್ಕೆ ಬರುವರೆಂದೂ ಆಗೆಲ್ಲಾ ಕಮಲೆ ಅವರ ಕಣ್ಣಿಗೆ ಬೀಳದಂತೆ ಜಾಗರೂಕಳಾಗಿರಬೇಕೆಂದೂ ಅವರು ಅವಳಿಗೆ ಆಗಾಗ ಬೋಧಿಸಿದ್ದರು.

ಶೀನುವನ್ನು ಕಾಣುತ್ತಲೇ ರಾಯರು ಪುಸ್ತಕವನ್ನು ಮೇಜಿನ ಮೇಲಿಟ್ಟು—"ಬಾ ಶ್ರೀನಿವಾಸ, ಕುಳಿತುಕೊ ಏನು ಬಹಳ ಅಪರೂಪ ವಾಯಿತಲ್ಲ ? " ಎಂದು ಕೇಳಿದರು

ಶೀನು ಹಸನ್ಮುಖದಿಂದ ಬೆಂಚಿಯಲ್ಲಿ ಕುಳಿತು—"ಮತ್ತೇನಿಲ್ಲ ಸ್ವಾಮಿ. ಈಗ್ಗೆ ಎರಡು ದಿನಗಳಿಂದ ಮೈ ಸರಿಯಿದ್ದಿಲ್ಲ. ಸ್ವಲ್ಪ ತಲೆ ನೋವು. ಮೈಕೈ ಶೂಲಿ, ಬಹಳ ಜಡವಾಗಿತ್ತು. ಯಾವುದಕ್ಕೂ ಉಲ್ಲಾಸ ವಿರಲಿಲ್ಲ."

"ಈಗ ಹೇಗಿದೆ ? ''

"ಪರವಾಯಿಲ್ಲ. ಹುಷಾರಿದ್ದೇನೆ.''

"ಅಡುಗೇ ಕೆಲಸಕ್ಕೇನೂ ಬಾಧೆ ಬರಲಿಲ್ಲವಷ್ಟೆ ? "

"ಅದು ಮಾಡದಿದ್ದರೆ ಆಗುತ್ತೆಯೆ ಸ್ವಾಮಿ? ಕೂಡದಿದ್ದರೂ ಹೇಗಾ ದರೂ ಸಂಬಳದ ಕೆಲಸ ಮಾಡಲೇಬೇಕಾಯಿತು. ನಾಳೆ ನಿಮ್ಮ ಆಫೀ ಸಿಗೆ ಬಂದು ಭೇಟಿಮಾಡುವಾಂತ ಇದ್ದೆ; ಸಿದ್ದಪ್ಪ ಹೇಳಿದ್ದರಿಂದ ಇವತ್ತೇ ಬಂದೆ. ನನ್ನ "ತ್ಯಾಗಿ" ಓದುತ್ತಿದ್ದೀರಂತ ಕಾಣುತ್ತೆ. ಹೇಗಿದೆ ? ''

''ಹೇಗಿರುವುದೇನು ? ನಿನ್ನ ನುರಿತ ಕೈಯ ಪಾಕವು ಸುರಸವಾ ಗಿಯೇ ಇದೆ. ಆದರೂ ಸುಂದರವಾದ ಸುವರ್ಣಾಭರಣಕ್ಕೆ ಇನ್ನೂ ಮ್ಮೆ ಒಪ್ಪಕೊಡುವಹಾಗೆ, ಓದುವಾಗ ಸಂದರ್ಭೋಚಿತವಾಗಿ, ನನಗೆ ಹೊಳೆದ ಅಂಶಗಳನ್ನು ಸೇರಿಸುತ್ತಾ ಬಂದಿದ್ದೇನೆ. ಇನ್ನು ಕಡೆಯ ಎರಡು ಅಧ್ಯಾಯಗಳ ಪರಿಶೀಲನೆಯಾದರೆ ತೀರಿತು ನಂತರ ಕಾಪೀ ತೆಗೆಯಿಸು ತ್ತೇನೆ. ಅದಿರಲಿ, ಶ್ರೀನಿವಾಸ, ನಾನೊಂದು ಹೇಳುತ್ತೇನೇಂತ ವಿಕಲ್ಪ ವಾಗಿ ಎಣಿಸಬೇಡ. ಯಾವ ಪುಸ್ತಕವೇ ಆಗಲಿ, ಇನ್ನು ಮೇಲೆ ನನ್ನ ಕೈಯಲ್ಲೇ ತಂದುಕೊಟ್ಟು ಹೋಗು. ಮನೆಯಲ್ಲಿ ಅವರಿವರೊಡನೆ ಕೊಟ್ಟು ಹೋಗಬೇಡ."

"ತಿಳಿಯಿತು ಸ್ವಾಮಿ. ನಾನು ಈ ಮೊದಲು ಹಾಗೆಂದಾದರೂ ಕೊಟ್ಟಿರುವೆನೆ? ನೀವು ಈ "ತ್ಯಾಗಿ" ಯನ್ನು ಮೊನ್ನೆಯೇ ತಂದು ಕೊಡಬೇಕೆಂದು ಮುಂಚಿನ ದಿನವೇ ಹೇಳಿದುದರಿಂದ ಗಂಟೆ ಗೊತ್ತಾಗದೆ ನೀವು ಮನೆಯಲ್ಲಿದ್ದೀರಂತ ಮಾಡಿ, ಬಂದೆ. ಆಫೀಸಿನ ವರೆಗೆ ಬರಲು ಸೌಖ್ಯವಿಲ್ಲದ ನಿರುತ್ಸಾಹದಿಂದ, ಮನೆಯಲ್ಲಿ ಕೊಟ್ಟು ಹೋದೆನು. ಅಷ್ಟಕ್ಕೇ ಚಿಕ್ಕರಾಯರು ಬೇಕಾದಷ್ಟು ಬುದ್ಧಿ ಹೇಳಿಬಿಟ್ಟರು ನನಗೆ."

"ಆ ದುಡುಕುಗಾರನ ಮಾತಿರಲಿ. ನಾನು ಹೇಳಿದುದು ಯಾಕೆಂದರೆ, ಪುಸ್ತಕವನ್ನು ಹಾಗೆಲ್ಲಾ ಅನ್ಯರು ನೋಡುವುದು ಒಳ್ಳೇದಲ್ಲಾಂತ. ನೋಡು, ಈಗ ನೀನು ಸ್ವಾಭಾವಿಕವಾಗಿ ನನ್ನ ಗೃಹಿಣಿಯ ಕೈಯಲ್ಲಿ ಕೊಟ್ಟುಹೋದಿ; ಅವಳು ನೆರೆಮನೆಯಾಕೆಗೆ ಕೊಡುವುದು; ಅಥವಾ ಅಡುಗೆಯ ಮನೆಯ ಹೊಗೆಹಲಗಿಯಲ್ಲಿಯೋ, ಬಚ್ಚಲು ಮೂಲೆಯಲ್ಲಿಯೋ ಮರೆತು ಅಲಕ್ಷ್ಯದಿಂದ ಇಡುವುದು–ಹೀಗೆಲ್ಲಾ ಜರುಗಬಾರದೂಂತ ಹೇಳಿದೆ."

"ಓ! ಹಾಗಾದರೆ ಈ ಪುಸ್ತಕವು ಸರಿಯಾದ ಕಾಲದಲ್ಲಿ ತಮ್ಮ ಕೈಗೆ ಸಿಕ್ಕಲಿಲ್ಲವೊ?"

"ಎಲ್ಲಿಯೋ ಇಟ್ಟಿದ್ದಳು ಮರೆತು. ಮರುದಿನ ಬೆಳಗ್ಗೆ ಹುಡುಕಿ ತಂದುಕೊಟ್ಟಳೂಂತ ಇಟ್ಟುಕೊ."

"ಓಹೊ! ನನ್ನಿಂದ ಇದೊಂದು ಅಪರಾಧವೇ ಆಯಿತು. ಇಷ್ಟೆಲ್ಲಾ ವ್ಯಾವಹಾರಿಕ ಸೂಕ್ಷ್ಮ ವಿಚಾರಗಳು ನನಗೆ ಎಲ್ಲಿಂದ ಬರಬೇಕು? ನಾನು ಬಹಳ ಅನನುಭವಿಕನೇ ಸರಿ."

"ಅಲ್ಲದೆ ಮತ್ತೊಂದು ಅನರ್ಥವೂ ಉಂಟು. ನಮ್ಮೊಳಗಿನ ಈ ಒಳವಿಚಾರಗಳು ಹೊರಗಿನವರಿಗೆಲ್ಲಾ ಏನು ಗೊತ್ತು? ಈಗಾಗಲೇ ಕೆಲವರು ಬೀಸುವ ಸಂದೇಹದ ಗಾಳಿ ಸ್ವಲ್ಪ ಸ್ವಲ್ಪ ನನ್ನ 'ಕಿವಿಗೂ ಮುಟ್ಟಲಾರಂಭಿಸಿದೆ—"

ಶೀನು ಆತಂಕದಿಂದ—"ಏನದು?"

"ಮತ್ತೇನಿಲ್ಲ ಮಣ್ಣು! ನಾನು ನಿನ್ನ ಗ್ರಂಥವನ್ನೆಲ್ಲಾ ನನ್ನದನ್ನಾಗಿಸಿಕೊಂಡು, ನನ್ನ ಹೆಸರಿನಲ್ಲಿಯೇ ಪ್ರಕಟ ಮಾಡಿಸುತ್ತಿದ್ದೇನೆ-ಅಂತ!"

"ಛೆ, ಅದು ಬಿಡಿರಿ ಸ್ವಾಮಿ! ಅರ್ಥವಿಲ್ಲ. "ಕನ್ನಡ ಗೆಳೆಯ" ಎಂಬ ಸಂಕೇತನಾಮವಲ್ಲವೇ ಈಗ ಪ್ರಕಟವಾಗಿದೆ?"

"ಅದು ಸರಿ. ಆದರೆ ಬಾಯಿಗೆ ಬಂದ ಹಾಗೆ ಮಾತಾಡುವವರಿಗೆಲ್ಲಾ ಏನಾದರೊಂದು ಕಾರಣವು ಸಿಕ್ಕಿದಹಾಗಾಗಬಾರದು ನೋಡು. ಅದಕ್ಕಾಗಿಯೇ ನಾನು ನಿನ್ನ ಪುಸ್ತಕವನ್ನೆಲ್ಲ ನನ್ನ ವಿಶ್ವಾಸದ ಜನರಿಂದಲೇ ಕಾಪೀ ತೆಗೆಯಿಸಿ, ನಿನ್ನ ಮೂಲ ಪುಸ್ತಕಗಳನ್ನು ಭದ್ರವಾಗಿ ಜೋಪಾನ ಮಾಡಿಡುವುದು! ಈಗ ನೀನು ಮೇಲು ದೃಷ್ಟಿಯಿಂದಲೇ ನೋಡು; ಪುಸ್ತಕವನ್ನು ಬರೆದವನೆಲ್ಲ ನೀನೇ ಆದರೂ, "ಕನ್ನಡಗೆಳೆಯ" ಎಂಬ ಸಂಕೇತ ನಾಮವು ನಿನ್ನನ್ನೆ ನಿರ್ದೇಶಿಸುವುದಾದರೂ, ನಿನ್ನ ಪುಸ್ತಕಗಳನ್ನು ಪ್ರಕಟ ಮಾಡಿಸುವುದರಲ್ಲಿ ನನ್ನ ಉಮೇದೇ ಎಲ್ಲರಿಗೂ ಮುಂದಾಗಿ ಕಾಣುವುದರಿಂದ ಎಲ್ಲವೂ ನನ್ನ ಗ್ರಂಥಗಳೆಂದೇ ನೋಡಿದವರ ಸಾಮಾನ್ಯ ತಿಳುವಳಿಕೆಯಾಗುತ್ತೆ. ನಾನೇನೋ ಕರ್ಣಾಟಕ ಸಾಹಿತ್ಯವು ಮೇಲ್ಮೆಯನ್ನು ಐದಲೆಂಬ ಸದುದ್ದೇಶದಿಂದ ನಿನ್ನನ್ನು ಮುಂದಕ್ಕೆ ತರಲು ಪ್ರಯತ್ನಪಡುತ್ತಿದ್ದೇನೆ. ಇದರಿಂದ ನನಗೆ ಕೆಟ್ಟ ಹೆಸರು ಬಾರದಂತೆ ನನ್ನ ನಿನ್ನ ಸಂಬಂಧವು ರಹಸ್ಯವಾಗಿರಬೇಕು."

"ನಿಜ ನಿಜ. ನನ್ನ ಯೋಚನೆ ಇಷ್ಟು ಮುಂದಕ್ಕೆ ಹರಿಯಲಿಲ್ಲ. ಛೆ, ಒಂದು ಕಸದಂತಿರುವ ನನ್ನಂತಹ ಅಲ್ಪನಿಂದ ತಮ್ಮ ಹೆಸರಿಗೆ ಕಳಂಕವು ಪ್ರಚಾರವಾಗುವುದಾದರೆ ನಾನು ಹಿಂದೆಯೇ ನಿಂತುಬಿಡುತ್ತೇನೆ. ಸಾಧ್ಯವಾದರೆ ನಾನೇ ಸ್ವಯಂ ಪ್ರಕಾಶನೋದ್ಯೋಗಕ್ಕೆ ಇಳಿಯುತ್ತೇನೆ, ಇಲ್ಲವೇ ಮೊದಲಿನ ಹಾಗೆ ಬರೆಬರೆದು ನನ್ನ ಪೆಟ್ಟಿಗೆಯೊಳಗೇ ಅಡಗಿಸಿಬಿಡುತ್ತೇನೆ."

"ಹಾಗೇಕೆ? ನಾನು ಹೀಗೆ ಹೇಳಿದೆನೆಂತ ನಿರುತ್ಸಾಹ ಪಡಬೇಡ."

"ನಿರುತ್ಸಾಹವೇನೂ ನನಗಿಲ್ಲ. ಪ್ರಿಂಟು–ಪ್ರಚಾರ ಮುಂತಾದುದರಲ್ಲಿ ಉತ್ಕಟೇಚ್ಛೆಯಿದ್ದರಲ್ಲವೇ ಹಾಗಾಗದಿದ್ದರೆ ನಿರುತ್ಸಾಹವಾಗಬೇಕು? ನನ್ನ ಗ್ರಂಥಗಳು ತಮ್ಮ ಸಂಬಂಧದಿಂದಾಗಿ ಅಚ್ಚಾಗತೊಡಗಿದುದು ಇತ್ತೀಚೆಗೆ ತಾನೇ? ಅದಕ್ಕಿಂತ ಮೊದಲೂ ನಾನು ಯಾವ ಉತ್ಸಾಹದಲ್ಲಿದ್ದೆನೋ–ಅದು ಎಂದಿಗೂ ಇದ್ದೀತು!"

"ಪ್ರಕೃತಿ ಕವಿಯ ಲಕ್ಷಣವೇ ಹಾಗೆ ಆದರೆ ಶ್ರೀನಿವಾಸ, ನಾನು ಇಷ್ಟೊಂದು ಹೇಳಿದೆನೆಂದು ನೀನು ಮನಸ್ಸು ನೊಂದುಕೊಳ್ಳಬೇಡ. ನೀನು ಹಿಂದೆ ನಿಂತರೂ ನಾನು ನಿನ್ನನ್ನು ಎಂದಿಗೂ ಬಿಡಲಾರೆ. ನೋಡು, ನೀನೂ ನಾನೂ ಒಂದೇ ಮಂಗಳೂರು ಪ್ರಾಂತದವರು. ನೀನೂ-ನಾನೂ ಸೇರಿ ನಮ್ಮ ಜಿಲ್ಲೆಗೆ ಒಳ್ಳೆಯ ಹೆಸರನ್ನು ತರಬೇಕು. ಈ ಅಲ್ಪವಿಷಯ ಗಳಿಗೆಲ್ಲಾ ಜಂಕಿ ಮುಂದಿಟ್ಟ ಅಡಿಯನ್ನು ಹಿಂದಿಡಬಹುದೆ? ಇದು ಹಾಗಿರಲಿ. ಈಗ ನಾನು ಮೊನ್ನೆ ಬೆಂಗಳೂರಿನಿಂದ ಬರುವಾಗ "ಅಮೃತ ಭೂಜ" ವನ್ನು ಪ್ರಕಾಶಕರ ಕೈಗೆ ಕೊಟ್ಟುಬಂದಿದ್ದೇನೆ ನೂರೈವತ್ತು ರೂಪಾಯಿಗೆ ಅದರ ಹಕ್ಕು ಸ್ವಾತಂತ್ರ್ಯಗಳನ್ನು ಪೂರಾ ಅವರಿಗೇ ಕೊಡು ವಂತೆ ಮಾತಾಗಿದೆ. ನಿನ್ನದೇನೂ ಆಕ್ಷೇಪಣೆಯಿಲ್ಲವೆಂದು ನಂಬುತ್ತೇನೆ."

"ಸರಿ."

"ಈ ಮೊದಲು ಪ್ರಕಟವಾದುವುಗಳಿಗೆ ಹೆಚ್ಚು ಹಣವನ್ನು ಕೇಳಲು ಎಡೆಯಿಲ್ಲದೆ ಐವತ್ತು, ನೂರಕ್ಕೆಲ್ಲಾ ಹಕ್ಕುಗಳನ್ನು ಕೊಡಲಿಲ್ಲವೆ? ಈಗ ನಮ್ಮ ಗ್ರಂಥಗಳಿಗೆ ಸ್ವಲ್ಪ ಬೆಲೆ ಬರುವಂತಾಗಿದೆಯೆಂದು ನಾವು ತಿಳಿಯ ಬಹುದು."

"ಸಂತೋಷ."

"ಇನ್ನೊಂದು ಮುಖ್ಯ ವಿಚಾರ. "ಕನ್ನಡ ಗೆಳೆಯ"ನ ನಿಜನಾಮ ಧೇಯವನ್ನು ತಿಳಿಸಬೇಕೆಂದು ಕನ್ನಡ ನಾಡಿನ ನಾನಾ ಪ್ರಾಂತಗಳಿಂದ ಪ್ರಕಾಶಕರ ಕಡೆಗೆ ಪತ್ರಗಳು ಬಂದಿವೆಯಂತೆ. ಆದುದರಿಂದ "ಅಮೃತ ಭೂಜ" ದಲ್ಲಿ ಗ್ರಂಥಕರ್ತನ ನಿಜವಾದ ಹೆಸರನ್ನು ಸರಿಯಾಗಿ ಹಾಕ ಬೇಕೆಂದು ಪ್ರಕಾಶಕರು ಕೋರಿದ್ದಾರೆ."

"ಓಹೊ!"

"ನಾನು ಅವರ ಆ ಕೋರಿಕೆಗೆ ಉತ್ತರ ಕೊಡಲಿಲ್ಲ. ನಿನ್ನನ್ನು ಕೇಳಿಕೊಂಡೇ ಕೊಡೋಣವೆಂದು."

"ಆದರಿಂದ ನನಗೊಂದು ತೊಂದರೆಯುಂಟಲ್ಲ? ನಾನು ಕಡೆಯ ವರೆಗೆ ಹೀಗೆಯೇ ಅಜ್ಞಾತ ಕ್ಷೇತ್ರದಲ್ಲಿ ವಾಸವಾಗಿರಬೇಕೆಂದು

ಮಾಡಿದ್ದೇನೆ. ನನ್ನ ಹೆಸರನ್ನು ಸ್ಪಷ್ಟವಾಗಿ ಹಾಕಿಸುವುದರಿಂದ ನನ್ನ ಊರಿನವರಿಗೆ ನನ್ನ ಪತ್ತೆ ಹತ್ತುವ ಸಂಭವವುಂಟಲ್ಲವೆ?"

"ಅದು ದೊಡ್ಡದಲ್ಲ ಬಿಡು. ಈಗ ಇನ್ನೊಂದು ತೊಂದರೆ ಬಂದು ನಿಂತಿದೆ. ಈಗ ಪ್ರಕಾಶಕ ಮುಂತಾದವರೆಲ್ಲ ನಿಜವಾದ ಗ್ರಂಥಕರ್ತನು ನಾನೇ ಎಂದು ತಿಳಿದಿದ್ದಾರೆ. ಮೊನ್ನೆ ತಾನೇ ಅವರು ಸ್ಪಷ್ಟವಾಗಿ ಹಾಗಂದುದಕ್ಕೆ 'ಗ್ರಂಥಕರ್ತನು ನಾನಲ್ಲ, ನನ್ನ ಕಡೆಯ ಒಬ್ಬ ಹುಡುಗ. ಪಂಡಿತನಲ್ಲ; ಆದರೆ ಹುಟ್ಟುಕವಿ. ಇಂತಹನನ್ನು ಮುಂದಕ್ಕೆ ತರಬೇಕೆಂದುಕೊಂಡು, ನಾನು ಅವನ ಗ್ರಂಥಗಳನ್ನು ನಿಮ್ಮ ಕಡೆಗೆ ಕಳುಹಿಸಿದೆನು. ಆದುದರಿಂದ ಸ್ಪಷ್ಟವಾದ ಹೆಸರು ಹಾಕುವುದಾದರೆ ಅವನ ಹೆಸರನ್ನೆ ಹಾಕಬೇಕು. ಇದಕ್ಕೆ ಅವನೊಡನೆ ಕೇಳಿ ನಿಮಗೆ ತಿಳಿಸುತ್ತೇನೆ' ಅಂದೆನು. ಇದನ್ನು ಕೇಳಿ ಪ್ರಕಾಶಕರು ಸ್ವಲ್ಪ ಹಿಂದೆ ಮುಂದೆ ನೋಡಿದರು. "ಏನಯ್ಯಾ?" ಅಂತ ಕೇಳಿದುದಕ್ಕ "ನೀವು ಬರೆದುದೆಂಬ ನಂಬುಗೆಯಿಂದಲೇ ನಾವು ಪ್ರಕಾಶ ಮಾಡಲಿಕ್ಕೆ ತೊಡಗಿದ್ದು. ಅಲ್ಲದೆ ಯಾರೋ ಒಬ್ಬ ಸಾಮಾನ್ಯದವನು ಬರೆದುದೆಂದು ತಿಳಿದಿದ್ದರೆ, ನಾವೀ ಪುಸ್ತಕಗಳನ್ನು ಮುಟ್ಟಿಕೂಡಾ ನೋಡುತಿದ್ದಿಲ್ಲ. ನಾವು ನಿಮ್ಮ ಹೆಸರನ್ನೆ ಗ್ರಂಥಕರ್ತನ ಸ್ಥಾನದಲ್ಲಿ ಪ್ರಕಟಪಡಿಸುವವರಿದ್ದೇವೆ ಅಂದರು."

"ಓಹೊ!"

"ನಿಜವಾದ ಗ್ರಂಥಕರ್ತನನ್ನು ಮರೆಮಾಡಿ ನನ್ನ ಹೆಸರನ್ನು ಹಾಕಕೂಡದೆಂದು ನಾನು ಸ್ಪಷ್ಟವಾಗಿ ಹೇಳಿದ್ದೇನೆ."

"ಬಹಳ ವಿಚಿತ್ರವಾಗಿದೆಯಲ್ಲ ಸ್ವಾಮಿ! ಗ್ರಂಥದೊಳಗಿನ ತಿರುಳು ಮುಖ್ಯವಲ್ಲದೆ, ಗ್ರಂಥಕರ್ತನ ಹೆಸರಿನಲ್ಲಿ ಏನಂತೆ ಅಷ್ಟು ವಿಶೇಷ?"

"ಈಗಿನ ಕಾಲದ ಮಹಿಮೆಯೇ ಹೀಗಿದೆ ಶ್ರೀನಿವಾಸ! ಗ್ರಂಥದೊಳಗಣ ವಿಷಯವನ್ನು ವಿಚಾರಿಸಿಕೊಳ್ಳುವುದಕ್ಕಿಂತಲೂ—ಗ್ರಂಥದ ಹೆಸರನ್ನು ಕೇಳುವುದಕ್ಕಿಂತಲೂ ಮೊದಲು ಗ್ರಂಥಕರ್ತನ ಹೆಸರನ್ನೆ ವಿಚಾರಿಸುತ್ತದೆ ಜನತೆ! ಹೆಸರು ದೊಡ್ಡದಾಗಿ ಪಟ್ಟ ಪದವಿಬಿರುದುಗಳ ಮಾಲೆಯಿಂದ ಕೂಡಿದ್ದರೆ ಗ್ರಂಥಗಳು ಬೇಗಬೇಗ ವ್ಯಾಪಾರವಾಗಿ ಹೋಗುತ್ತವೆ. ಹೀಗೆ ಯಾರೋ ಬರೆದ ಎಷ್ಟೋ ಗ್ರಂಥಗಳು, ಅದರಲ್ಲಿ

ಏನೂ ಪ್ರವೇಶವಿಲ್ಲದ ಒಬ್ಬ ದೊಡ್ಡ ಪಂಡಿತನ ಹೆಸರಿನಿಂದ ಪ್ರಕಟವಾದುದುಂಟು!"

"ಈ ಬಗೆಯ ಅಕ್ಷರ ಸ್ವರೂಪವಾದ–ಪರಮಾತ್ಮ–ಸ್ವಾತ್ಮ ವಂಚಕತನಕ್ಕೆ ಆ ದೊಡ್ಡ ಪಂಡಿತನು ಹೇಗೆ ಒಪ್ಪುವನೋ?"

ಶೀನುವಿನ ಆ ಮಾತಿನ ಕೊನೆ ಚುರುಕ್ಕನೆ ಮಂಗಲಕರರ ಕುಟಿಲ ಹೃದಯಕ್ಕೆ ನಾಟಿತು! ಮುಂದೆ ಒದಗುವ ಸಂಭವಗಳಲ್ಲಿ ಶೀನುವಿನ ಮನಸ್ಥಿತಿ ಹೇಗಾದೀತೆಂಬುದನ್ನು ಮುನ್ನೆಚ್ಚರಿಕೆಯಿಂದ ಪರೀಕ್ಷಿಸಿಕೊಳ್ಳಲಿಕ್ಕಾಗಿಯೋ, ಆ ಬಗೆಯ ಸೂಚನಾಸಂಕೇತದಿಂದ ಅವರು ಮಾತಾಡಲಾರಂಭಿಸಿದ್ದರು. ಶೀನುವಿನ ಬಾಯಿಯಿಂದ ಹೊರಟ "ಸ್ವಾತ್ಮ ವಂಚಕತನ" ಎಂಬ ಶಬ್ದವು ಅವರ ಮರ್ಮಕ್ಕೆ ತಾಗಿದುದರಲ್ಲಿ ಏನಾಶ್ಚರ್ಯ? ಆದರೆ ಇಂತಹ ಕ್ಷುದ್ರಗಳಿಗೆಲ್ಲಾ ಹೆದರುವಂತಹುದಲ್ಲ ಅವರ ಕರುಳು. ಆ ನೋವನ್ನು ಮುಗುಳ್ನಗುವಿನಿಂದ ಮರೆಸಿಕೊಳ್ಳುತ್ತ ಹೇಳಿದರು:—

"ಶ್ರೀನಿವಾಸ! ನಿನಗೆ ಪ್ರಕಟನೆಯ ಪಾಡು ಗೊತ್ತಿಲ್ಲ ನೀನು ಕವಿ; ಮಾನಸವಿಹಾರಿ. ಸಾಹಿತ್ಯವು ಕವಿಯ ಸ್ವಾಧೀನದಲ್ಲಿರುವಷ್ಟು ಕಾಲ ಸತ್ಯಸಾಹಿತ್ಯ. ಪ್ರಕಟನೆಗೆ ಇಳಿಯಿತೆಂದರೆ ಅದೊಂದು ವ್ಯಾವಹಾರಿಕ ವಿಷಯವಾಗುವುದು. ಆಗ ಸಂಭವಿಸತಕ್ಕ ನೀನು ಹೇಳಿದ ಪ್ರವಂಚನೆಗಳೆಲ್ಲವೂ 'ಸಾಹಿತ್ಯ ಪ್ರಕಾಶನ' ಅಥವಾ "ಭಾಷಾಸೇವೆ" ಎಂಬ ಪುಣ್ಯಕಾರ್ಯದಲ್ಲಿ ಇಂಗಿಹೋಗುವುದೆಂದು ತಿಳಿಯಲ್ಪಡುತ್ತೆ.'

"ಓಹೊ! ಹಾಗೇನು? ಹಾಗಿದ್ದರೆ ಈ ಬಗೆಯ ಗೊಂದಲಕ್ಕೆ ಈಗಲೇ ಅವಸರವೇನು ಬಂತು? ಪ್ರಕೃತ "ಕನ್ನಡ ಗೆಳೆಯ" ಎಂಬ ಗುರುತೇ ಇರಲಿ. "ಕನ್ನಡ ಗೆಳೆಯ" ನು ಇಂತಹ ವ್ಯಕ್ತಿಯೆಂದು ಸ್ಪಷ್ಟವಾಗಿ ತಿಳಿಸುವುದೇ ಬೇಡ. ಜನರು ಹೇಗಾದರೂ ಊಹಿಸಿಕೊಳ್ಳಲಿ."

"ಆದರೆ ಪ್ರಕಾಶಕರ ಒತ್ತಾಯ—ಮಾತಿನ ಹೊಲಬುಗಳನ್ನು ನೋಡಿದರೆ ನಾನೇ "ಕನ್ನಡ ಗೆಳೆಯ" ನೆಂದು ಅವರು ಎಷ್ಟೋ ಮಂದಿಗೆ ತಿಳಿಸಿರುವ ಹಾಗೆ ತೋರುತ್ತೆ."

"ತಿಳಿಸಲಿ. ನಾವಾಗಿ ಆತ್ಮವಂಚನೆಯನ್ನೇಕೆ ಮಾಡಿಕೊಳ್ಳಬೇಕು? ಈಗ ನನ್ನ ಗ್ರಂಥವು ತಮ್ಮ ಕರ್ತೃತ್ವದಲ್ಲಿ ಪ್ರಕಟವಾದರೆ,

ನಾನೋ ಒಬ್ಬ ಅಲ್ಪ, ಅವಿದ್ಯಾವಂತ;—ಮಾನಾವ ಮಾನಗಳೆಲ್ಲಾ ನನಗೆ ಸಮಾನ; ಅಂತಹ ನನ್ನ ಸ್ಥಾನವನ್ನು ಗೌರವಾನ್ವಿತ ಮಹನೀಯರಾದ ನೀವು ಸ್ವೀಕರಿಸಿದರೆ, 'ಅಲ್ಪನ ಸಂಗ, ಅಭಿಮಾನ ಭಂಗ' ಎಂಬಂತೆ ತಮ್ಮ ಗೌರವಕ್ಕೇ ಹಾನಿ ತಟ್ಟಬಹುದಲ್ಲವೆ? ಅಲ್ಲದೆ ಇದಕ್ಕೆ ನಾನು ಒಪ್ಪಿದೆನಾದರೆ, ತಮ್ಮ ಆತ್ಮವಂಚನೆಗೆ ಸಮ್ಮತಿಪಟ್ಟ ದೋಷದೊಂದಿಗೆ, ನನ್ನ ಆತ್ಮವನ್ನೂ ವಂಚಿಸಿಕೊಂಡಂತೆ ಆಗುತ್ತದಲ್ಲ? ನನಗೆ ಹಣ—ಕೀರ್ತಿ—ಗೌರವ—ಮುಂತಾದವುಗಳ ಮೇಲೆ ಏನೂ ಅಪೇಕ್ಷೆಯಿಲ್ಲ. ಅಂತಹ ಅಪೇಕ್ಷೆಯಿಂದಾಗಿ, ಕೃತಿರಚನೆ ಮಾಡಿದುದೂ ಅಲ್ಲ. ಪ್ರಕಾಶಮಾಡಬೇಕೆಂದು ಮುನ್ನುಗ್ಗಿ ಬಂದವನೂ ಅಲ್ಲ. ಆಟವಾಡುವುದು ಮಕ್ಕಳ ಸ್ವಭಾವವು ಹೇಗೋ ಪಂಚಮರಾಗದಿಂದ ಹಾಡುವುದು ಕೋಗಿಲೆಯ ಗುಣವು ಹೇಗೋ—ಹಾಗೆಯೇ ಕೃತಿರಚನೆ ಮಾಡುವುದು ನನ್ನ ಸ್ವಭಾವವಾಗಿಹೋಯಿತು. ಮಕ್ಕಳ ಆಟವನ್ನು ನೋಡಿ ಹಿರಿಯರು ಸಂತೋಷಪಡುವ ಹಾಗೆ, ನನ್ನ ಕೃತಿಗಳನ್ನು ಓದಿ ಕನ್ನಡ ನಾಡು ಸಂತೋಷಪಟ್ಟರೆ, ಕನ್ನಡ ತಾಯಿ ಆನಂದದಿಂದ ನನ್ನ ಬೆನ್ನು ತಟ್ಟಿದರೆ ಅದು ನನಗೆ ತೃಪ್ತಿ. ಹಾಡು ಕೇಳಿ ಇದು ಇಂತಹ ಹಕ್ಕಿಯದು ಎಂದು ಯಾರಿಗೂ ತಿಳಿಯದಿದ್ದರೆ, ಆಟವನ್ನು ನೋಡಿ, ಇದು ಇಂತಹ ಮಗುವಿನದು ಎಂದೂ ಯಾರೂ ಅರಿಯದಿದ್ದರೆ "ಯಾರದು ? ಯಾರದು ?" ಎಂಬ ಪ್ರಶ್ನೆ ಮಾತ್ರ ಸ್ಥಾಯಿಯಾದೀತು, ಇದರಿಂದ ಯಾರಿಗೂ ಏನೂ ದೋಷವಿಲ್ಲ. ಏಕೆಂದರೆ ಯಾರೂ ಯಾರನ್ನೂ ಬೇಕೆಂದು ವಂಚಿಸಲಿಲ್ಲ ಆದರೆ ಬುದ್ಧಿಪೂರ್ವಕವಾಗಿ ಸತ್ಯಕರ್ತೃವಿನ ಸರ್ವನಾಮ ಸಮರ್ಪಣೆಯನ್ನು ಬಿಡುವುದರಿಂದಾಗಲೀ ಪಡೆಯುವುದರಿಂದಾಗಲೀ ಇಬ್ಬರೂ ಆತ್ಮವಂಚಕರೇ ಆಗುವರೆಂದು ನನಗೆ ತೋರುತ್ತೆ. ಇದಕ್ಕೆ ಇಲ್ಲಿ ಅಲ್ಲದಿದ್ದರೂ ಪರಲೋಕದಲ್ಲಿಯಾದರೂ ದೇವರ ಮುಂದೆ ಇಬ್ಬರೂ ಉತ್ತರ ಕೊಡಬೇಕಾದೀತು. ಆದುದರಿಂದ ನನ್ನ ಕೃತಿಯನ್ನು ನನ್ನ ಕೃತಿಯಲ್ಲವೆಂದು ನನ್ನ ಆತ್ಮವು ಹೇಳಲಾರದು; ಒಪ್ಪಲಾರದು. ನನ್ನ ಒಪ್ಪಿಗೆಯಿಲ್ಲದೆ ಏನಾದರೂ ಆದರೆ ನನಗೇನೂ ಬಾಧಕವಿಲ್ಲ. ಏಕೆಂದರೆ, ನಾನು ಪರಮಾತ್ಮನ ಮುಂದೆ ನಿರಪರಾಧಿಯೇ ಆಗಿರುವೆನು."

ಶ್ರೀನಿವಾಸನ ಈ ದೀರ್ಘ ಭಾಷಣವನ್ನು ಸಾವಧಾನವಾಗಿಯೇ ರಾಯರು ಆಲಿಸಿದರು. ಆಲಿಸಲೇಬೇಕಿತ್ತು. ಆಮೇಲೆ ತಲೆದೂಗುತ್ತ— "ಸರಿಯಾದ ಮಾತೇ ಸರಿ, ಶ್ರೀನಿವಾಸ! ಆದರೆ ಇಷ್ಟೆಲ್ಲ ಅಂತರ್ವಿಚಾರಗಳು ಆ ಪ್ರಕಾಶಕರಂತಹ ವ್ಯಾವಹಾರಿಕರಿಗೆ ಏನು ಬೇಕಾಗಿದೆ?"

"ಹಾಗಿದ್ದರೆ ಅವರು ಪ್ರಕಟಿಸುವುದೇ ಬೇಡ. ಇರಲಿ ನನ್ನ ಪೆಟ್ಟಿಗೆಯಲ್ಲಿಯೇ!"

"ಅದೂ ಸರಿಯಲ್ಲ. ನಾನು ಖಂಡಿತವಾಗಿ ಅವರಿಗೆ ಬರೆಯುತ್ತೇನೆ. "ಕನ್ನಡ ಗೆಳೆಯ" ಎಂದೇ ಹಾಕಲಿ ನೀನು "ಕನ್ನಡಗೆಳೆಯ"ನೆಂದೇ ಕಡೆಯತನಕವೂ ಸ್ಥಿರವಾಗಿದ್ದುಬಿಡು. ಇದಕ್ಕಾಗಿ ಲೇಖನ ಕಾರ್ಯದಲ್ಲಿ ಏನೂ ಕಂಗೆಡಬೇಡ ನೀನು ಹೇಳಿದ ಸಂಕಲ್ಪದಂತೆ, ವಿಜಯನಗರದ ಇತಿಹಾಸಕ್ಕೆ ಸಂಬಂಧಿಸಿದ ಇನ್ನೂ ಮೂರು ಗ್ರಂಥಗಳನ್ನು ಆದಷ್ಟು ತೀವ್ರವಾಗಿ ಮುಗಿಸಿಬಿಡು. ಈ ಬೆಂಗಳೂರಿನ ಪ್ರಕಾಶಕರಿಲ್ಲದಿದ್ದರೆ ಇನ್ನೊಬ್ಬರಿಲ್ಲವೆ?"

"ಸ್ವಾಮಿ, ಎಲ್ಲಾ ನಿಮಗೆ ಗೊತ್ತುಂಟು ನನ್ನೊಡನೆ ಕೇಳಿದುದಕ್ಕೆ ನಾನು ಇದ್ದುದನ್ನು ಹೇಳಿದೆನು. ನಿಮ್ಮ ಮನಸ್ಸಿಗೆ ನ್ಯಾಯದೋರಿದಂತೆ ಮಾಡಿಸಿರಿ. ಕೊಡು ಅಂದರೆ ಕೊಡುತ್ತೇನೆ; ಬೇಡಾ ಅಂದರೆ ಪೆಟ್ಟಿಗೆಯೊಳಗೆ ಇಡುತ್ತೇನೆ. ಬರೆಯುವುದನ್ನು ಮಾತ್ರ ಎಂದಿಗೂ ನಿಲ್ಲಿಸಲಾರೆನು."

"ಆಗಲಿ, ಶ್ರೀನಿವಾಸ! ನಿನ್ನ ಅಭಿಪ್ರಾಯವು ತಿಳಿದಂತಾಯಿತು. ನನ್ನ ಅಭಿಪ್ರಾಯವೂ ಹೀಗೆಯೇ ಇತ್ತು. ಬಹಳ ಹೊತ್ತಾಯಿತು. ಇನ್ನು ನೀನು ಹೋಗಪ್ಪ. ಇನ್ನೊಮ್ಮೆ ಬಂದು ಸಂಧಿಸುವಿಯಂತೆ."

"ಬರುತ್ತೇನೆ ಸ್ವಾಮಿ" ಎಂದು ಶೀನು ಎದ್ದು ನಮಸ್ಕರಿಸಿ ಹೊರಟನು. ಅಷ್ಟರಲ್ಲಿ, ಈ ಸಂಭಾಷಣೆಗಳನ್ನು ಆಲಿಸಿದ ಸ್ತ್ರೀ ಮೂರ್ತಿಯ ಛಾಯೆಯೊಂದು ಫಕ್ಕನೆ ಕದಲಿಹೋದಂತೆ ಅವನ ಅಡ್ಡಗಣ್ಣಿಗೆ ಹಾಯ್ದಿತು.

## ೨೫. "ರಾಯರು ಇದ್ದಾರೆಯೆ?"

ಮಂಗಲಕರರಿಗೂ ಶೀನುವಿಗೂ ನಡೆದ ಸಂಭಾಷಣೆಯನ್ನು ಕಮಲೆ ಅಂದು ಮಾತ್ರವೇ ಹೊಂಚಿಕೇಳಿದ್ದಳು. ಇದಕ್ಕೆ ಮುಂಚೆ ಅನೇಕ ಬಾರಿ ರಾತ್ರಿಯಲ್ಲಿ ಶೀನೂ ಮಂಗಲಕರರು ಮಾತಾಡಿಕೊಂಡಿದ್ದರೂ ಕಮಲೆ ಲಕ್ಷ್ಯಗೊಟ್ಟಿರಲಿಲ್ಲ. ಆಗ ಶೀನು ಎಂದರೆ ಯಾರೋ ಏನೋ ಎಂದು ಕೊಂಡಿದ್ದಳು. ಆ ಶೀನು ಯಾರೆಂದು ಗೊತ್ತಾದ ಮೇಲೆ ಅದೇಕೊ ಅವಳ ಮನಸ್ಸು ಸದಾಸರ್ವದಾ ಅವನ ಮೇಲೆಯೆ ಹರಿದುಕೊಂಡು ಹೋಗುತಿತ್ತು. "ಕಾರುಣ್ಯ ಮೂರ್ತಿ"ಯ ಮೂಲಪ್ರತಿಯ ಅವಲೋಕನ ದಿಂದ ಅವಳು ತುಂಬಾ ಗಲಿಬಿಲಿಗೆ ಒಳಗಾಗಿದ್ದಳು. ಅದುವರೆಗೆ "ಕಾರುಣ್ಯ ಮೂರ್ತಿ"ಯ ಕರ್ತನು ಮಂಗಲಕರರೆಂದು ಅವಳು ತಿಳಿ ದಿದ್ದಳು. ಮಂಗಲಕರರೂ ಹಾಗೆಯೇ ಹೇಳಿದ್ದರು. ಈಗ ಅದು ಶೀನು ವಿನ ಕೃತಿಯೆಂದು ತಿಳಿದ ಮೇಲೆ, ಅವಳು ಮಂಗಲಕರರ ಕೃತ್ಯಕ್ಕೆ ಅಸಹ್ಯಪಟ್ಟಳು. ತನ್ನ ಪತಿ ಸಾಧುವಾದ ಶೀನುವನ್ನು ಚೆನ್ನಾಗಿ ಮೋಸ ಪಡಿಸುತಿದ್ದಾನೆಂದು ಅವಳಿಗೆ ತಿಳಿದುಹೋಯಿತು. ಅವಳು ಆ ಗ್ರಂಥ ವನ್ನು ಬೆಂಕಿಗೆ ಹಾಕದೆ ಬಚ್ಚಿಟ್ಟುಬಿಟ್ಟಳೆಂದು ಇನ್ನು ನಾವು ಬೇರೆ ಹೇಳಬೇಕೆ?

ಅದುಮಾತ್ರವಲ್ಲದೆ ಮಂಗಲಕರರು ಆಫೀಸಿನಿಂದ ಶೀನುವಿನ ಕೈಬರೆಹದ ಸಣ್ಣ ಕತೆಗಳು, ಪದ್ಯಗಳು, "ಅಮೃತ ಭೋಜ" ಮೊದಲಾದ ಪುಸ್ತಕಗಳನ್ನೂ ತಂದು ಬಚ್ಚಲು ಒಲೆಯೊಳಗೆ ಹಾಕಿ ಬೆಂಕಿ ಉರಿಸಿ ಬಿಡುವಂತೆ ಹೇಳಿ, ಕಮಲೆಯ ಕೈಯಲ್ಲಿ ಕೊಟ್ಟಿದ್ದರು. ಅವುಗಳಲ್ಲಿ "ಅಮೃತ ಭೋಜ"ದ ಹೊರತು, ಉಳಿದವುಗಳು "ಕನ್ನಡ ಗೆಳೆಯ"ನ ಗುರುತಿನಲ್ಲಿ ಈ ಮೊದಲೇ ಪ್ರಕಟವಾಗಿದ್ದುವು. ಕಮಲೆ ಅವಾವುದನ್ನೂ ಬೆಂಕಿಗೆ ಹಾಕದೆ ತನ್ನ ಹಳೆಯರುವೆಯ ಗಂಟಿನಲ್ಲಿ ಬಚ್ಚಿಟ್ಟು, "ಅವುಗ ಳಿಂದ ಬಿಸಿನೀರು ಕಾಯಿಸಿ, ನಿಮ್ಮ ಸ್ನಾನವೇ ಆಗಿಹೋಯಿತೆ"ಂದು ಗಂಡನೊಡನೆ ಸುಳ್ಳು ಹೇಳಿದ್ದಳು.

ಈ ದಿನ ಆದಿತ್ಯವಾರ. ಮಂಗಲಕರರ ಆಫೀಸಿಗೆ ರಜೆ. ಅವರು

ಮನೆಯಲ್ಲಿ ಕುಳಿತುಕೊಂಡು ಹಳೆಯ ಕಾಗದ ಪತ್ರಗಳನ್ನು ಪರಿಶೋಧನೆ ಮಾಡುತ್ತ, ಅನಗತ್ಯವಾದ ಪತ್ರಗಳನ್ನು ಹರಿದು ಒಂದು ಬದಿಗೆ ಹಾಕುತಿದ್ದರು. ಹಾಗೆಯೇ ಕಮಲೆಯನ್ನು ಕರೆದು—"ಇಕೊ, ಈ ಬೇಡದ ಕಾಗದ ಚೂರೆಲ್ಲಾ ಕೊಂಡೊಯ್ದು ಬಚ್ಚಲು ಒಲೆಗೆ ಹಾಕು" ಎಂದು ಆಣತಿಯಿತ್ತರು.

ಕಮಲೆ ಒಂದು ನಿಮಿಷ ಅವರ ಕುರ್ಚಿಯ ಹಿಂದೆಯೇ ನಿಂತು ನೋಡಿದಾಗ ರಾಯರ ಕೈಯಲ್ಲಿದ್ದೊಂದು ಕಾರ್ಡಿನಲ್ಲಿ—

"ಮುಕುಂದರಾಯರಿಗೆ, ನಾರಾಯಣಯ್ಯನು ಮಾಡುವ ಬಿನ್ನಹಗಳು, ತರುವಾಯ. ನಿಮ್ಮ ಮಗಳಾದ ಸೌ ಸುಂದರಿಬಾಯಿಗೆ ಕಿರುಗಟ್ಟಿ ವೆಂಕಪ್ಪಯ್ಯನ ಮಗ ಶ್ರೀನಿವಾಸ ಎಂಬಾತನನ್ನು ವರನನ್ನಾಗಿ ಗೊತ್ತು ಮಾಡಲ್ಪಟ್ಟಿದೆ, ರಾಮಾ ಜೋಯಿಸನ ಪ್ರಯತ್ನವಿದು. ಮಾತೆಲ್ಲಾ ಗಟ್ಟಿಯಾಗಿ ಮುಹೂರ್ತವೂ ನಿಶ್ಚಯವಾಯ್ತು. ಕಣ್ವತೀರ್ಥದಲ್ಲಿ ಲಗ್ನ. ನಿಮ್ಮ ವಿಷಯದಲ್ಲಿ ಅನ್ಯಥಾ ಕಲ್ಪನೆಯಾಗದಂತೆ, ಮುಹೂರ್ತವಿಟ್ಟಿರುವ ಹದಿನಾರನೇ ತಾರೀಖಿಗೆ ಸರಿಯಾಗಿ ಒಂದು ತಂತೀ ಕೊಟ್ಟುಬಿಡಿ. ಬಾಕಿ ಎಲ್ಲಾ ದೇವರ ದಯದಿಂದ ಸರಿಯಾದೀತು ನೀವು ಕಳುಹಿಸಿದ ಹಣವೂ ಕೈಸೇರಿದೆ ಇನ್ನು ಮೇಲೆ ನಿಮ್ಮನ್ನು ನಾನು ತೊಂದರೆಪಡಿಸುವುದೂ ಇಲ್ಲ; ನಿಮ್ಮ ಮಗಳ ಯಾವ ಬಗೆಯ ಸಂಬಂಧವನ್ನು ಇಟ್ಟುಕೊಳ್ಳುವುದೂ ಇಲ್ಲ. ಇತಿ ನಮಸ್ಕಾರಗಳು.

ನಾರಾಯಣಯ್ಯ"

ಇದನ್ನು ಕಮಲೆ ಗಂಡನಿಗೆ ತಿಳಿಯದಂತೆಯೇ ಓದಿಕೊಂಡಳು. ಮಂಗಲಕರರೂ ಅದನ್ನು ಓದಿ—"ತೊಲಗಿತಲ್ಲ ಮಾರಿ" ಎಂದು ತನ್ನೊಳಗೆ ತಾನೇ ಅಂದುಕೊಳ್ಳುತ್ತ, ಆ ಕಾರ್ಡನ್ನು ಎರಡು ತುಂಡು ಮಾಡಿ ಕೆಳಕ್ಕೆ ಬಿಸುಟಿದರು. ಕಮಲೆ ಕೂಡಲೇ ಆ ಕಾರ್ಡಿನ ತುಂಡುಗಳನ್ನೂ ಉಳಿದ ಪತ್ರದ ರಾಶಿಯನ್ನೂ ಬಾಚಿ ಬುಟ್ಟಿಗೆ ಹಾಕಿಕೊಂಡು—"ಆಯಿತೇ ? ಇದೆಲ್ಲಾ ಯಾವ ಕಾಲದ ರಿಕಾರ್ಡುಗಳೊ!" ಎಂದಳು. "ಹುಂ, ಇನ್ನೂ ಕೊಂಚ ಇವೆ. ಎಲ್ಲಾ ಹಳೆಯ ಕಾಲದ ಕಂತೆಗಳು. ಕೈಯಲ್ಲಿರುವುದನ್ನು ಹಾಕಿ ಬಾ." ಎಂದರು ಮಂಗಲಕರರು.

ಕಮಲೆ ಬಚ್ಚಲು ಮನೆಗೆ ಹೋಗಿ ಎಲ್ಲಾ ಚೂರುಗಳನ್ನೂ ಒಲೆಗೆ ತುರುಕಿ, ಮರಳಿ ಬರುವಾಗ ರಾಯರು ಈಸೀ ಚೇರಿನಲ್ಲಿ ಒರಗಿದವರು, ಆಗಲೇ ಮಧ್ಯಾಹ್ನ ಉಂಡು ಭಾರವಾದ ಹೊಟ್ಟೆಯಿಲ್ಲವೇ— ಹಾಗೆಯೇ ಜಂಪು ಹತ್ತಲಾರಂಭಿಸಿ ಕಣ್ಣು ಮುಚ್ಚಿ ಬಿಟ್ಟಿದ್ದರು. ಕಮಲೆ ಬಂದ ಶಬ್ದದಿಂದ ತುಸು ಎಚ್ಚೆತ್ತು—"ನಿದ್ದೆ ಬರುತ್ತೆ ಕಮಲೂ, ಉಳಿದ ಈ ಪತ್ರಗಳೆಲ್ಲಾ ಹೀಗೆಯೇ ಇರಲಿ ಆ ಮೇಲೆ ನೋಡುತ್ತೇನೆ" ಎಂದು ಹೇಳಿ ಹಾಗೆಯೆ ನಿದ್ದೆಮಾಡಲಾರಂಭಿಸಿದರು.

ಕಿರುಗಟ್ಟೆ ಶ್ರೀನಿವಾಸನ ಸಂಬಂಧದ ಕಾರ್ಡೊಂದು ಅವರ ಪತ್ರಗಳ ಗುಂಪಿನಲ್ಲಿ ಕಾಣಿಸಿದ ಕಾರಣ ಕಮಲೆಗುಂಟಾದ ಕೌತುಕಾಶ್ಚರ್ಯಗಳು ಅಷ್ಟಿಷ್ಟಲ್ಲ. ಕಿರುಗಟ್ಟೆ ಶ್ರೀನಿವಾಸನೆಂದರೆ ತನ್ನ ಬಾಲಮಿತ್ರ ಶೀನುವೆಂಬುದು ಅವಳಿಗೆ ಗೊತ್ತು. ಈ ಬಗೆಯ ಪತ್ರಗಳು ಇನ್ನೇನಾದರೂ ಹೊರಟಾವೋ ಎಂದು, ಅವರು ನಿದ್ದೆಯ ಗುಂಗಿನಲ್ಲಿರುವಾಗ, ಕಮಲೆ ಉಳಿದಿದ್ದ ಕೆಲವೇ ಪತ್ರಗಳನ್ನು ಮೆಲ್ಲನೆ ಹುಡುಕಲಾರಂಭಿಸಿದಳು. ಆಗ ಗುಂಡು ಸೂಜಿಯಿಂದ ಪೋಣಿಸಲ್ಪಟ್ಟ ಎರಡು ಪತ್ರಗಳು ಸಿಕ್ಕಿದುವು ಮೇಲಿನ ಪತ್ರದಲ್ಲಿ—"ಮಹಾರಾಜೇಶ್ರೀ ಮುಕುಂದರಾಯರಿಗೆ—" ಎಂದು ಪ್ರಾರಂಭವಾಗಿತ್ತು. ಹಾಗೆಯೇ ಕಣ್ಣೋಡಿಸಿಕೊಂಡು ಓದಲು ಕಿರುಗಟ್ಟೆ ಶ್ರೀನಿವಾಸನ ಹೆಸರೂ ಅದರಲ್ಲಿತ್ತು ಅದು ರಾಮಾ ಜೋಯಿಸರು ಕಡೆಯ ಬಾರಿ ಮುಕುಂದರಾಯರನ್ನು ಹಿಂಡುವುದಕ್ಕಾಗಿ ಬರೆದ ಪತ್ರ. ಅದಕ್ಕೆ ಗುಂಡು ಸೂಜಿಯಿಂದ ಸೇರಿಸಿದ್ದ ಎರಡನೆಯ ಪತ್ರವು ರಾಮಾ ಜೋಯಿಸರು ತಮ್ಮ ಮಗಳ ಕೈಯಿಂದ, ಸುಂದರಿ ಬರೆದಂತೆ ಬರೆಯಿಸಿದ ಸೃಷ್ಟಪತ್ರ. ಈ ಪತ್ರಗಳನ್ನು ಹದಿಮೂರನೆಯ ಪ್ರಕರಣದಲ್ಲಿ ರಾಮಾ ಜೋಯಿಸರು ಬರೆಯುವಾಗಲೇ ಪ್ರಿಯ ಓದುಗರು ನೋಡಿದ್ದಾರೆ. ಇದರಿಂದಾಗಿ ರಾಮಾ ಜೋಯಿಸರಿಗೆ ಮುಕುಂದರಾಯರಿಂದ ಇನ್ನೂರು ರೂಪಾಯಿಗಳೂ ಸಿಕ್ಕಿರುವುದು ಓದುಗರಿಗೆ ಗೊತ್ತಿಗೆ. ಕಮಲೆ ಈ ಪತ್ರಗಳನ್ನೂ ಬಚ್ಚಿಟ್ಟುಕೊಂಡಳು. ಇಷ್ಟೆ ಹೊರತು ಶ್ರೀನಿವಾಸನ ಸಂಬಂಧವಾಗಿ ಮತ್ತೇನೂ ಅವಳಿಗೆ ಸಿಕ್ಕಲಿಲ್ಲ. ಆದರೆ ಅವಳ ಕುತೂಹಲವನ್ನು ಇಮ್ಮಡಿ ಮುಮ್ಮಡಿ ನಾಲುಮಡಿಗೇರಿಸಲಿಕ್ಕೆ ಅವಷ್ಟೇ ಕಿಡಿಗಳು

ಸಾಕಾಗಿದ್ದುವು. ಅವಳಿಗೆ ಈಗ ಮುಕುಂದರಾಯರು ಯಾರೆಂದು ಗೊತ್ತಾಗಲಿಲ್ಲ. ಮುಕುಂದರಾಯರ ಪತ್ರವು ಮಂಗಲಕರರ ಪೆಟ್ಟಿಗೆಯಲ್ಲಿ ಹೇಗೆ ಬಂತು? ವಿಳಾಸವನ್ನು ನೋಡಿದರೆ ಆ ಪತ್ರವು ಅನಂತಪುರಕ್ಕೆ ಮುಟ್ಟಿ, ಮತ್ತೆ ಅಲ್ಲಿಂದ ಮಂಗಲಕರರ ವಿಳಾಸಕ್ಕೆ ಬಂದ ಹಾಗೆ ಪೋಷ್ಟ ಮುದ್ರೆಗಳಿಂದ ತಿಳಿಯುತ್ತಿತ್ತು. ಯಾಕೆ ಬಂತು? ಸುಂದರಿ ಎಂಬವಳು ಮುಕುಂದರಾಯರ ಮಗಳು, ನಾರಾಯಣಯ್ಯ ರಾಮಾಜೋಯಿಸರ ಮೂಲಕವಾಗಿ ಮಾಡಿಸಿದ ತಂತ್ರದ ಮದುವೆ, ಸುಂದರಿಯನ್ನು ಬಿಟ್ಟು ಶೀನುವಿನ ಕಾಣೆ, ರಾಮಾ ಜೋಯಿಸರು ಮಾಡಿದ ಸುಂದರಿಯ ಗಡೀಪಾರು–ಇದೆಲ್ಲಾ ಒಂದೊಂದು ಪ್ರಶ್ನೆಯಾಗಿ ಅವಳ ಮನಸ್ಸಿನಲ್ಲಿ ತಿರುಗುತಿತ್ತು. ಯೋಚಿಸಿದಂತೆ ಶೀನು ಒಂದು ಸಾಧು ಪಶುವಿನಂತೆಯೂ, ಆ ಬಗೆಯ ಪ್ರಶ್ನೆಗಳೆಲ್ಲ ಕೊಲೆಗತ್ತಿಗಳಂತೆಯೂ, ಮುಕುಂದರಾಯನೊಬ್ಬ ಕಟುಕನಂತೆಯೂ ಅವಳ ಮನಸ್ಸಿಗೆ ಭಾಸವಾಯಿತು. ಈ ಸಂದೇಹಗಳನ್ನು ನಿವಾರಿಸಿಕೊಳ್ಳಲು ಮಂಗಲಕರರನ್ನು ನಂಬಿ ಏನೂ ಕೇಳಕೂಡದೆಂದೂ, ಆ ಶೀನುವನ್ನೆ ಕೇಳಿ ತನ್ನ ಕುತೂಹಲವನ್ನು ತೀರಿಸಿಕೊಳ್ಳಬೇಕೆಂದೂ ಎಣಿಸಿಕೊಂಡು, ಆ ಪತ್ರಗಳನ್ನು ಭದ್ರವಾಗಿ ಬಚ್ಚಿಟ್ಟು ಕೊಂಡಳು. ಆದರೆ ಶೀನುವನ್ನು ಸಂಧಿಸಿ ಮಾತಾಡಲಿಕ್ಕೆ ಸಮಯವು ದೊರೆಯಬೇಕಲ್ಲವೆ?

ಆ ಪತ್ರಗಳನ್ನೂ ಹಳೆಯ ಪುಸ್ತಕಗಳನ್ನೂ ಸುಟ್ಟು ಹಾಕಿಸಿಬಿಟ್ಟೆನೆಂದು ಮಂಗಲಕರರು ನೆಮ್ಮದಿಯ ಶ್ವಾಸವನ್ನು ಬಿಟ್ಟರು. ತಮ್ಮ ಹೆಂಡತಿ ಕಮಲೆ, ಶೀನುವಿನ ಸಂಬಂಧದ ಪುಸ್ತಕ ಪತ್ರಗಳನ್ನು ಅಡಗಿಸಿಟ್ಟಾಳೆಂದು ಅವರಿಗೇನು ಗೊತ್ತು? ಅವಳೇಕೆ ಅಡಗಿಸಿಯಾಳು? ಶೀನುವಿಗೂ ಕಮಲೆಗೂ ಇದ್ದ ಪೂರ್ವಪರಿಚಯ ಗಂಧವೇ ಪಾಪ, ಅವರಿಗಿಲ್ಲ! 'ಇನ್ನು ಬೇಗದಲ್ಲಿ "ಅಮೃತ ಭೋಜ"ವು ಹೊರಗೆ ಬರುತ್ತೆ. ಅದರಲ್ಲಿ "ಕನ್ನಡ ಗೆಳೆಯ" "ಮಂಗಲಕರ"ರೆಂದು ಗ್ರಂಥಕರ್ತೃವಿನ ಸ್ಥಾನದಲ್ಲಿ ಪ್ರಕಟವಾಗಲಿಕ್ಕಿದೆ.' ಎಂದು ನೆನೆನೆನೆದು ಸಂತಸಬಡುತ್ತಿದ್ದರು. ಅದು ಅಕ್ಷರದ್ರೋಹವಾದರೂ ಸರಿ, ಆತ್ಮವಂಚಕತನವಾದರೂ ಸರಿ. ಅವನ ಎದೆಯ ಮೇಲೆ ಅವರ ವಿಜಯ ಪತಾಕೆಯನ್ನು ನಿಃಶಂಕೆಯಿಂದ

ನೆಟ್ಟು ಬಿಡುವ ಏರ್ಪಾಡು ಮಾಡಿಯೇ ಆಯಿತು. ಇದರ ಅರಿವು ಅವನಿಗಾಗುವುದಕ್ಕೆ ಮೊದಲೇ, ಇನ್ನೂ ಒಂದೆರಡು ಗ್ರಂಥಗಳನ್ನಾದರೂ ಅವನಿಂದ ಪಡೆದೇತೀರಬೇಕು. ಆದುದರಿಂದ "ಅನ್ನೃತ ಭೋಜ"ವು ಪ್ರಕಟವಾದರೂ "ಇನ್ನೂ ಆಗಿಲ್ಲ, ಆಗಿಲ್ಲ"ವೆನ್ನುತ್ತಾ ಅದಷ್ಟು ದಿನ ದೂಡಿಕೊಂಡು ಅವನನ್ನು ಒಳ್ಳೆಯದು ಮಾಡಿಕೊಂಡಿರಬೇಕು, ಹಾಗೂ ಆವರ ದ್ರೋಹವು ಅವನಿಗೆ ತಿಳಿದುಹೋದರೂ ಬಾಧಕವಲ್ಲವೆಂದು ಆವರ ಧೈರ್ಯ—ಅವನ ಮೂಲಪ್ರತಿಗಳೆಲ್ಲಾ ಬೂದಿಯಾಗಿ ಹೋಗಿರುವಾಗ ಆವನು ಏನು ತಾನೇ ಮಾಡಲು ಸಾಧ್ಯವುಂಟು? ಆದರೆ ಮುಂದೆ ಬರೆದುಕೊಡಲಿಕ್ಕಿಲ್ಲ. ಬೇಡ, ಇಷ್ಟರವರೆಗೆ ಸಿಕ್ಕಿದ ಗ್ರಂಥಗಳೇ ಸಾಕು ಆವರ ಕೀರ್ತಿಯನ್ನು ಸ್ಥಾಪಿಸಲಿಕ್ಕೆ. ಈ ಸಮಯದಲ್ಲಿ ಶೀನು ತನ್ನ ಅಳಿಯನೆಂಬ ನೆನಪೇ ಇರಬಾರದೆಂದುಕೊಂಡು, ಅವನ ಸಂಬಂಧದ ಪತ್ರಗಳನ್ನೂ ಬೆಂಕಿಗೆ ಹಾಕಿಸಿದ್ದಾರೆ. ಎಲ್ಲವೂ ಬೂದಿಯಾಯಿತೆಂಬ ನಂಬುಗೆಯಿಂದ ನೆಮ್ಮದಿಯಾಗಿದ್ದಾರೆ, ಸ್ಥಿರವಾಗಿದ್ದಾರೆ.

ಕಮಲೆಯ ಆತುರವಾದರೋ ಹೊಟ್ಟೆಯಲ್ಲಿ ಹಿಡಿಯಲಾರದೆ ಹೋಗುತಿತ್ತು. ಶೀನುವಿನೊಡನೆ ಸರಿಯಾಗಿ ಮಾತಾಡಬೇಕೆಂಬ ಸಮಯಕ್ಕಾಗಿ ಅವಳು ಹೊಂಚುತಿದ್ದಳು. ಎರಡು ದಿನಗಳಾದರೂ ಶೀನುವಿನ ಸುಳಿದಾಟವನ್ನೆ ಕಾಣದೆ ಬಹಳ ಮಿಡುಕಿದಳು. ಸಿದ್ದಪ್ಪನ ಹೆಂಡತಿಯಾದ ಫಕ್ಕೀರಮ್ಮನ ಮೇಲೆ ಕಮಲೆಗೆ ತುಂಬ ನಂಬಿಗೆಯಿತ್ತು. ಆ ಮುದುಕಿ ಫಕ್ಕೀರಮ್ಮನಿಗಾದರೂ ಕಮಲೆಯ ಮೇಲೆ ತುಂಬಾ ಭಕ್ತಿ ಪ್ರೀತಿ ವಿಶ್ವಾಸಗಳಿದ್ದುವು. ಕಡೆಗೆ ಕಮಲೆ ಫಕ್ಕೀರಮ್ಮನ ಕೈಯಲ್ಲಿ ಒಂದು ಚೀಟಿ ಬರೆದುಕೊಟ್ಟು—"ಫಕ್ಕೀರಮ್ಮ! ಈ ಚೀಟಿಯನ್ನೊಯ್ದು—ಅಕ್ಕೋ ಅಲ್ಲಿ ಸತ್ಯನಾರಾಯಣ ಗುಡಿಯ ಬದಿಯಲ್ಲಿ—ಶೀನಾಚಾರಿಯ ಬಾಡಿಗೆ ಕೋಣೆ ಗೊತ್ತೆ?"

"ಗೊತ್ತು—ಯಾಕ ತಾಯಿ?"

"ಆವನಿಗೆ ಈ ಚೀಟಿಯನ್ನು ಕೊಟ್ಟು ಬಾ."

"ಏನಾಗಬೇಕಮ್ಮ ಆವನಿಂದ?"

"ಅವನಿಗೆ ಮಂಡಿಗಿ ಮಾಡಲಿಕ್ಕೆ ಬರುತ್ತೋ ಕೇಳಬೇಕು.—"

ಎಂದು ಕಮಲೆ ಸುಳ್ಳು ಹೇಳಿ ಅವಳನ್ನು ನಂಬಿಸಿ ಕಳುಹಿಸಿದಳು. ಆ ಚೀಟಿಯಲ್ಲಿ ಅವಳು ಬರೆದುದಿಷ್ಟೆ.

“ಶೀನು, ನಿನ್ನೊಡನೆ ಬಹಳ ರಹಸ್ಯವಾಗಿ ಮಾತಾಡಲಿಕ್ಕಿದೆ. ನನ್ನ ಪತಿಯೂ-ಅಡುಗೆಯವಳೂ ಮನೆಯಲ್ಲಿಲ್ಲದಿರುವಾಗ ಸಾಯಂಕಾಲ ನಾಲ್ಕು ಗಂಟೆಗೆ ನೀನು ಇಲ್ಲಿಗೆ ಬರಲೇಬೇಕು—ಕಮಲಾ.”

ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ಮಂಗಲಕರರೊಡನೆ ನಡೆದ ಸಂಭಾಷಣೆಯಿಂದಾಗಿ ಶೀನುವಿನ ಮನಸ್ಸು ಸ್ವಲ್ಪ ವ್ಯಸ್ತವಾಗಿತ್ತು. ಮಂಗಲಕರರ ಮಾತೆಲ್ಲಾ ಅದುವರೆಗಣ ಹಾಗಿರದೆ ಒಂದು ವಿಶಿಷ್ಟ-ವಿಚಿತ್ರ ರೀತಿಯಾಗಿ ಅವನಿಗೆ ತೋರಿದುವು. ಅವನು ಖಂಡಿತವಾದ ಉತ್ತರವನ್ನು ಹೇಳಿದುದನ್ನು ಕೇಳಿ, ಅವರ ಮನಸ್ಸಿಗೆ ನೋವಾದಂತೆಯೂ ಅವನಿಗೆ ತೋರಿತ್ತು. ಸರಳ ರೀತಿಯ ಮನೋಭಾವದವರಿಗಾದರೆ ಅವನ ಭಾಷಣದಿಂದ ನೋವಾಗುವ ಸಂಭವವಿದ್ದಿಲ್ಲ. ಹಾಗಾದರೆ ಮಂಗಲಕರರಂತಹ ವಿದ್ವಾನ್ ಮಹನೀಯರು ಕ್ಷುದ್ರಭಾವನೆಯನ್ನು ತಾಳಿರಬಹುದೆ?— ಎಂದು ಅಲ್ಪ ಸಂದೇಹವೂ ಎಡತಾಕದಿರಲಿಲ್ಲ. ಅಸಂಭವ. ಹಾಗಿರದು. ಯಾವುದಕ್ಕೂ “ಅಮೃತ ಭೋಜ”ವು ಪ್ರಕಟವಾಗುವಾಗ ಎಲ್ಲವೂ ತಿಳಿಯುತ್ತದಲ್ಲ?—'' ಎಂದು ಸಮಾಧಾನವೂ ಬೆನ್ನಿಗೇ ಉಂಟಾಯಿತು.

ಇನ್ನು ಕಮಲೆ;-- ಬಾಲ್ಯದ ಗೆಳತಿ ಕಮಲೆಯೊಡನೆ ಅವನಿನ್ನೂ ಸರಿಯಾಗಿ ಮಾತಾಡಿರಲಿಲ್ಲ. ಆದುದರಿಂದ ಮನಸ್ಸಿನ ಒಂದು ಭಾಗವು ಅವಳ ಕಡೆಗೆ ಧಾವಿಸುತ್ತಲೇ ಇತ್ತು. ಮತ್ತೆ ಮಾತಾಡಲಿಕ್ಕೆ ಅನುವೂ ಸಿಕ್ಕಿರಲಿಲ್ಲ. ಕ್ರಮೇಣ, ಈ ನಿಧಾನ ಪರಿಸ್ಥಿತಿಯಲ್ಲಿ ಮನಸ್ಸು ಸ್ತಿಮಿತಕ್ಕೆ ಬಂದು ಒಂದು ದೃಢವಾದ ಆಲೋಚನೆ ಹುಟ್ಟಲಾರಂಭಿಸಿತು. “ಯಾವಾಗ ಕಮಲೆ ಪರಸ್ತ್ರೀ ಎನಿಸಿದಳೋ, ಇನ್ನು ಅವಳನ್ನು ಕುರಿತು ಚಿಂತಿಸುವುದು ತರವಲ್ಲ. ಅವಳೊಡನೆ ಎಷ್ಟು ಮಾತಾಡಿದರೂ ಅಷ್ಟೇ ಸರಿ. ಆದುದರಿಂದ ನಾನು ಗಟ್ಟಿಮನಸ್ಸು ಮಾಡಿಕೊಳ್ಳುತ್ತೇನೆ. ಇನ್ನು ಕೆಲವು ದಿನ ಮಂಗಲಕರರ ಮನೆಯ ಕಡೆಗೇ ಸುಳಿಯಬಾರದು.''

ಈ ಬಗೆಯ ದೃಢಭಾವನೆಯಲ್ಲಿದ್ದಾಗಲೇ ಫಕ್ಕೀರಮ್ಮನು

ಕಮಲೆಯು ಚೀಟಿಯನ್ನು ತಂದುಕೊಟ್ಟಳು. ಅದನ್ನು ಓದುತ್ತಲೇ ಶೀನುವಿನ ಮನಸ್ಸು ಕದಲತೊಡಗಿತು. "ರಹಸ್ಯದ ಮಾತು ? ತನ್ನೊಡನೆ! ಆಹಾ ! ಹೋಗಲೆ? ಬಾಲ್ಯದ ಪ್ರೇಮದ ಉಗಮವು ಈಗ ಅವಳ ಹೃದಯದಿಂದ ಉಕ್ಕಿ ಚೆಲ್ಲುತ್ತಿರಬೇಕು! ಅವಳ ಪ್ರೇಮಸರ್ವಸ್ವವೂ ನನ್ನ ಮೇಲೆಯೆ ಇದ್ದಿರಬೇಕು! ವೃದ್ಧಪತಿಯಿಂದಾಗಿ ಅವಳ ಜೀವನವು ಸಂತಾಪದಲ್ಲಿ ತಪಿಸುತ್ತಿದೆ! ನಾನು ಹೋಗಲೆ? ಪರಸ್ಪರ ಪ್ರೇಮಾಮೃತ ಸೇಚನಗಳಿಂದ, ಪರಸ್ಪರರ ಹೃದಯಗಳನ್ನು ಶಾಂತಿಗೊಳಿಸಲಾಗದೆ? ಹೌದು! ನಾವಿಬ್ಬರೂ ಸಂತಾಪಿಗಳು! ಘೋರವಿರಹಿಗಳು! ಅವಳೇ ಕರೆಯುವಾಗ ನಾನು ಹಿಂಜರಿಯಬಾರದು !—ಆದರೆ ಏನಿದು? ಮಂಗಲಕರರು ಅವಳ ಪತಿಯಲ್ಲವೆ? ಅವಳನ್ನು ಪತಿದ್ರೋಹಿನಿಯಾಗಲೀಸಲೆ? ನಾನು ಗುರುದ್ರೋಹಿ–ಧರ್ಮದ್ರೋಹಿಯಾಗಲೆ?—ಛಿ! ಛಿ! ಧಿಕ್ಕಾರ ನನಗೆ! ತಪ್ಪು! ಕೂಡದು! ಕೂಡದು!—" ಶೀನು ಕಡೆಗೆ ಹೀಗೆ ನಿಶ್ಚಯಿಸಿ, ಒಡನೆಯೆ ಆ ಪತ್ರದ ಆಚೆಯ ಬದಿಯಲ್ಲಿ—"ಕಮಲೆ, ನನಗೆ ಈ ದಿನ ಸಮಯವಿಲ್ಲ ಮುಂದೆ ನಿಧಾನವಾಗಿ ಮಾತಾಡೋಣವಂತೆ" ಎಂದು ಪ್ರತ್ಯುತ್ತರವನ್ನು ಬರೆದು ಫಕ್ಕೀರಮ್ಮನ ಕೈಯಲ್ಲಿ ಕೊಟ್ಟನು.

"ಏನ್ರಿ? ಶೀನಪ್ಪನೋರೆ! ಏನಂತ ಬರೆದ್ದೀರಿ? ನಿಮಗೆ ಮಂಡಿಗೆ ಮಾಡೋಕೆ ಬರೋಲ್ವಾ?" ಎಂದು ಬಾಯಾಡಿ ಫಕ್ಕೀರಮ್ಮ ಕೇಳಿದಳು.

"ಇಲ್ಲ. ಬರೋದಿಲ್ಲಾಂತ ಕಮಲಮ್ಮನವರಿಗೆ ಹೇಳು." ಎಂದು ಶೀನು ಅವಳನ್ನು ಕಳುಹಿಸಿದನು. ಆ ಪ್ರತ್ಯುತ್ತರವನ್ನು ನೋಡಿ ಕಮಲೆ ಖಿನ್ನಳಾದುದನ್ನೂ ನಾವು ಹೇಳಬೇಕೆ?

ಆ ದಿನ ಸಾಯಂಕಾಲ ಆಫೀಸಿನಿಂದ ಬರುವಾಗ ಮಿಸ್ಟರ್ ಮಂಗಲಕರರೂ ತುಂಬಾ ಉದ್ವಿಗ್ನರಾಗಿದ್ದರು. ಸಾವಧಾನದ ನಡಿಗೆಯಿಂದ ತಲೆಯಲ್ಲಿ ಏನೇನೋ ಯೋಚನೆ ಮಾಡುತ್ತ, ಪ್ರಜ್ಞೆ ಇಲ್ಲದವರಂತೆ ನಡೆದಿರಲು—"ಏನಯ್ಯಾ, ಮಿಸ್ಟರ್ ಮಂಗಲಕರ್! ನಿಮ್ಮ ಯಶಸ್ಸು ಫಿಲಿಂ ವರ್ಲ್ಡನಲ್ಲಿ ಕೂಡಾ ಧ್ವನಿಸುತ್ತಿದೆಯಲ್ಲಾ? ನನಗೆ ಗೊತ್ತೇಯಿಲ್ಲ! ಒಳ್ಳೇ 'ಮಹಾಸಂಪಂಡಿತ ಲಕ್ಷಣೆ'ಗಳಯ್ಯಾ ನೀವು!" ಎಂಬ ಶಬ್ದಗಳು ಅವರನ್ನು ತಿರುಗಿ ನೋಡಿಸಿದುವು.

ಆವರ ಮಿತ್ರರಾದ ರಾಮಚಂದ್ರರಾಯರು ಅವರನ್ನು ಹಾಗೆ ಸಂಧಿಸಿದರು.

"ಹಾಗೇನಾಯಿತೀಗ?'' ಮೀಸೆಗಳ ಅಡಿಯಲ್ಲಿ—ತುಟಿಗಳ ಕೊನೆಯಲ್ಲಿ ನಗುವನ್ನು ಮೂಡಿಸಿಕೊಂಡು ಕೇಳಿದರು ಮಂಗಲಕರರು.

"ಕೈಯಲ್ಲೇ ಪೇಪರನ್ನು ಹಿಡಿದುಕೊಂಡು ನನ್ನನ್ನೆ ಕೇಳ್ತೀರಲ್ಲಾ? ಪೇಪರ್‌ನಲ್ಲಿ ನಿಮ್ಮ ಫಿಲಿಂನ ಎಡ್ವರ್ಟೈಯಿಸ್ಮೆಂಟು ಬಹಳ ಪ್ರಮಾದವಾಗಿ ಪ್ರಕಟವಾಗಿದೆಯಲ್ಲಾ ಈ ದಿನ! ಬಳ್ಳಾರಿಯ ಥಿಯೇಟರಿಗೂ ಬರುತ್ತಂತೆ ನಾಡದು?''

"ಓಹೊ! ಇಷ್ಟೇನೊ! ಹ್ಹಿ ಹ್ಹಿ ಹ್ಹಿ!" ಮಂಗಲಕರರು ನಗೆಯನ್ನೆ ಹಾರಿಸಲಾರಂಭಿಸಿದರು.

"ನನ್ನೊಡನೆ ಈ ಗುಟ್ಟು ಹೇಳಲೇ ಇಲ್ಲ ನೀವು?''

"ಹಾಗೆಲ್ಲ ಹೇಳಿಕೊಳ್ಳಲಿಕ್ಕೆ ಇದೇನು ಪ್ರಮಾದಕಾರ್ಯ ಮಹಾ?"

"ವಿದ್ಯೆಗೆ ವಿನಯವೇ ಭೂಷಣವೆಂಬುದು ನಿಮಗೇ ಒಪ್ಪುತ್ತೆ. ನೀವು 'ಕನ್ನಡಗೆಳೆಯ' ಗುಪ್ತನಾಮದಿಂದ, ಪುಸ್ತಕರೂಪದಲ್ಲಿ ಮಾತ್ರ ಸಂಚಾರ ಮಾಡುತ್ತಿರುವಿರೆಂದು ತಿಳಿದರೆ, ಈಗ ಫಿಲಿಂ ಯಂತ್ರದ ಮೇಲೆಯೂ ಸಾಗುತ್ತಿದೆಯಲ್ಲ ನಿಮ್ಮ ಸಾಹಿತ್ಯ?"

"ಹಿಹ್ಹಿ ಹ್ಹಿ!—'' ಈ ವಿಚಾರವೆಲ್ಲ ಮಂಗಲಕರರಿಗೆ ಹೊಚ್ಚ ಹೊಸತಾಗಿತ್ತು. ಹಿಂದು ಮುಂದು ಏನೂ ತಿಳಿಯದೆ, ಸ್ನೇಹಿತನ ಕಿವಿಗೆ ಏನು ಉತ್ತರ ಕೊಡಬೇಕೆಂದು ತಿಳಿಯದೆ, "ಹಿಹ್ಹಿ ಹ್ಹಿ!'' ಎಂದು ನಕ್ಕು ನಕ್ಕು ತಪ್ಪಿಸಿಕೊಳ್ಳಬೇಕಾಯಿತು. ಆದರೆ ಆ ಮಿತ್ರ ಮಹಾಶಯರು ಅಷ್ಟಕ್ಕೇ ಅವರನ್ನು ಬಿಡದೆ—"ಆದಲ್ಲದೆ ನಿಮ್ಮ ಮಗ ವರದನೇ ಆದರಲ್ಲಿ ಮುಖ್ಯ ಪಾತ್ರ ವಹಿಸಿರುವನಂತಲ್ಲಾ?"

"ಆಂ!?" ಆಶ್ಚರ್ಯದ ಉದ್ಗಾರವಿದು!

"ಗೊತ್ತಿಲ್ಲವೋ ನಿಮಗೆ?''

"ಯಾರು ಹೇಳಿದರು?''

"ಕ್ಲಬ್ಬಿನಲ್ಲಿ ಕೆಲವರು ಮಾತಾಡುತಿದ್ದರು. ಅಲ್ಲದೆ ಆ ಕತೆಯಲ್ಲಿ ಒಂದು ವಿಚಿತ್ರ ಸ್ತ್ರೀಪಾತ್ರವೂ ಬರುತ್ತೇನು?"

" ಇದ್ದೀತು. ಸರೀ ಜ್ಞಾಪಕವಿಲ್ಲ!"

" ಉಂಟಂತೆ! ಆ ವಿಕಾರ ವ್ಯಕ್ತಿಯು ಜತೆಯಲ್ಲಿ ನಿಮ್ಮ ವರದನು ಆಕ್ಟ್ ಮಾಡಿದ್ದಾನಂತೆ!"

" ಓಹೊ!"

" ಉಂ, ನಿಮ್ಮ ಕತೆಯ ಫಿಲಿಂಮನ್ನು ನೋಡಿ ಆನಂದ ಪಡೆಯುವ ಸುಸಂಧಿಯೊಂದು ಬೇಗನೇ ಸಿಕ್ಕಿದಹಾಗಾಯಿತು. ನಾಡದು ಹನ್ನೆರಡನೆಯ ತಾರೀಖಿಗೆ ಇಲ್ಲಿಗೂ ಬರುತ್ತಂತೆ! ನಾನೂ ನೀವೂ ಒಟ್ಟಿಗೇ ಹೋಗಬೇಕು ನೋಡೀ! ಏಕೆಂದರೆ ಕತೆ ಎಲ್ಲಿಯಾದರೂ ಒಗಟಾಗಿದ್ದರೆ, ಕತೆ ಗಟ್ಟಿದವರಾದ ನೀವೇ ಪಕ್ಕದಲ್ಲಿದ್ದುಬಿಟ್ಟರೆ?"

" ಹಿಹ್ಹಿಹ್ಹಿ!"

" ಅಂತೂ ಈ ಬಳ್ಳಾರಿಯ ಸಿನಿಮಾ ಚಾಲಕರು ಒಳ್ಳೇ ಲಾಭ ಹೊಡೆಯುವ ಏರ್ಪಾಡೇ ಮಾಡಿಬಿಟ್ಟಿದ್ದಾರೆ! ಅದೋ-ಆ ವಾಲ್‌ಪೋಸ್ಟ್ ನೋಡಿದಿರಾ?"

ಮಂಗಲಕರರು ತಲೆಯೆತ್ತಿ ಬೀದಿಯ ಅಂಗಡಿ ಗೋಡೆಯಲ್ಲಿ ಅಂಟಿಸಿರುವ ದೊಡ್ಡ ಅಕ್ಷರಗಳ ಕಾಗದವನ್ನು ನೋಡಿದರು.

" ಸುಸಂಧಿ! ಸುಸಂಧಿ!! 'ಅಶೋಕವನ' 'ವಿಧಿಯ ಬಲಿ' ಫಿಲಿಂಗಳಲ್ಲಿ ನಟಿಸಿ ವಿಖ್ಯಾತಳಾದ ವಿಕೃತ ಪ್ರಕೃತಿಕಳಾ ವಿಶಾರದೆ–ವಿಲಕ್ಷಣ ನಾಟ್ಯಗಾನ ನಿಪುಣೆ ಸುಂದರೀಬಾಯಿಯ ಚಿತ್ತಾಕರ್ಷಕವಾದ ನರ್ತನ! ೧೫ನೇ ತಾರೀಕು ಆದಿತ್ಯವಾರ. ಸಾಯಂಕಾಲ ಗಂಟೆ ನಾಲ್ಕರಿಂದ ರಾತ್ರಿ ಗಂಟೆ ಎಂಟರತನಕ. ಬಳ್ಳಾರಿ ಲಲಿತಕಳಾ ನಾಟ್ಯಶಾಲೆಯಲ್ಲಿ!"

ಓದಿ ನೋಡಿ ಮಂಗಲಕರರು ತಲೆದೂಗಿದರು. ಅವರ ಮಿತ್ರರು– " ನೋಡಿದಿರಾ–ಪ್ರೊಂಗ್ರಾಂ ಹೇಗಿದೆ? ಇದೆಲ್ಲಾ ಆ ಸಿನಿಮಾ ಮ್ಯಾನೇಜರ್ ಧೋಂಡೂರಾವನ ಪ್ರಯತ್ನ. ಪ್ಲ್ಯಾನು ಸರಿಯಾಗಿಲ್ಲವೆ?"

" ಹಿಹ್ಹಿಹ್ಹಿ!"

ಹೀಗೆಯೇ ಸ್ವಲ್ಪ ಮಾತುಕತೆಯಾಡುತ್ತ ನಡೆದ ಮೇಲೆ ರಾಮಚಂದ್ರರಾಯರು ಅಗಲಿ ಹೋದರು. ಮಂಗಲಕರರು ತಮ್ಮ ಮನೆಯನ್ನು

ಸೇರಿ "ಉಸ್ಸ್" ಎಂದು ದೇಹವನ್ನು ಕುರ್ಚಿಯಲ್ಲಿ ಒಗೆದುಕೊಂಡರು. ಯಾವಾಗಲೂ ರುಮಾಲನ್ನು ತೆಗೆದು, ಕೋಟನ್ನು ತೆಗೆದುಕೊಂಡು-ಸೂಟನ್ನು ಜಾರಿಸಿಕೊಳ್ಳುವ ಅವರು ಹಾಗೆಯೇ ಕುಳಿತುಬಿಟ್ಟುದನ್ನು ನೋಡಿ ಕಮಲೆಗೆ ಆಶ್ಚರ್ಯವಾಯಿತು.:..................

ಕುಳಿತಹಾಗೆಯೇ ಅವರು ಆ ದಿನದ ವಾರ್ತಾಪತ್ರಿಕೆಯನ್ನು ಬಿಡಿಸಿ ನೋಡಿದರು. ಅದರಲ್ಲಿ ಅವರ ಕಣ್ಣು ನೆಟ್ಟ ಭಾಗದಲ್ಲಿ ಈ ರೀತಿಯಾಗಿತ್ತು.

"ಪ್ರಕೃತಿ ಕಳೋದ್ಧಾರಕ ಮಂಡಲಿ ಇವರ ಅಮೋಘವಾದ ಚಿತ್ರ ರಾಜ—"ವಿಧಿಯ ಬಲೆ" (ಕತೆಗಾರರು—"ಕನ್ನಡ ಗೆಳೆಯ") ಇದರಲ್ಲಿ ಅಶೋಕ ವನದಲ್ಲಿ ನಟಿಸಿ ವಿಖ್ಯಾತಳಾದ 'ವಿಕೃತ ಪ್ರಕೃತಿ ಕಳಾ ವಿಶಾರದೆ-ವಿಲಕ್ಷಣ ನಾಟ್ಯಗಾನ ನಿಪುಣೆ-ಸುಂದರೀಬಾಯಿ ಮುಖ್ಯ ಪಾತ್ರ ಧಾರಿಣಿ. ಇತರ ಪಾತ್ರಗಳೂ ನವೀನ ನಟನಾನಿಪುಣರು:—ವರದನ್, ನಟೇಶ್, ಮಕಲೀಲಾಲ್,-ಮುಂತಾದ ಹೊಸ ಪಟುಗಳು. ಇದೇ ತಿಂಗಳು ಹನ್ನೆರಡನೇ ತಾರೀಕು ಗುರುವಾರದಿಂದ ಈ ಕೆಳಗಿನ ಸ್ಥಳಗಳಲ್ಲಿ ಪ್ರಾರಂಭ:— ಮದರಾಸು-'ಹಾರ್ನ್ಟನ್' ಮಧುರೆ-'ಮಿನಾ' ಬೆಂಗಳೂರು-'ಕಾಳಿಂದೀ' ಬಳ್ಳಾರಿ-'ವೆರ್ರೈಟೀ ಹಾಲ್'

ಡೈರೆಕ್ಶನ್:— ಬಿ. ಟಿ. ಮುಖರ್ಜಿ"

"ಈ ಕತೆಯನ್ನು ಶೀನು ಯಾವಾಗ ಫಿಲಿಂ ಕಂಪೆನಿಗೆ ಕಳುಹಿಸಿದನು? ನನ್ನೊಡನೆ ಹೇಳದೆ ಅವನು ಒಳಗಿಂದೊಳಗೆ ಹಾಗೇಕೆ ಮಾಡಿದನು? ಅಥವಾ 'ಕನ್ನಡ ಗೆಳೆಯ' ನೆಂಬ ಗುಪ್ತನಾಮಧಾರಿ ಬೇರೆ ಯಾರಾದರೂ ಇರಬಹುದೆ? ಇರದು. ಇದು ಶ್ರೀನಿವಾಸನ ಒಳಗೆಲಸವೇ ಸರಿ. ಇವನೊಡನೆ ಉಪಾಯದಿಂದ ಕೇಳಿ ತಿಳಿದುಕೊಳ್ಳಬೇಕು.—" ಎಂದೀರೀತಿಯಾಗಿ ಯೋಚಿಸುತ್ತ ಮಂಗಲಕರರ ಕಣ್ಮನಗಳು ಶೀನುವಿನ ದಾರಿಯನ್ನು ನೋಡಲಾರಂಭಿಸಿತ್ತು. ಆದರೆ ಶೀನು ಆ ದಿನ ರಾತ್ರಿಯೂ ಅಲ್ಲಿಗೆ ಬರಲಿಲ್ಲ. ಅವರು ವಿಚಾರದಿಂದಲೇ ಆ ರಾತ್ರಿಯನ್ನು ಕಳೆದ ಮೇಲೆ—

ಬೆಳಗ್ಗೆ ಯಥಾಕ್ರಮವಾಗಿ ಅವರು ಆಫೀಸಿಗೆ ಹೊರಡಲು ಸಿದ್ಧ ಮಾಡಿಕೊಳ್ಳುತಿರುವಾಗ, ಹೊರಗೆ ಅಂಗಳದಲ್ಲಿ—"ವಿದ್ವಾನ್, ಪಿ.ಎಂ.

ಮಂಗಲಕರ್, ಎಂಬವರ ಮನೆ ಇದೇ ಏನು?'' ಎಂದು ಯಾರೋ ಜವಾನ ಗುರುವಪ್ಪನನ್ನು ಕೇಳಿದುದು ಕೇಳಿಸಿತು.

'' ಹೌದು, ಇದೇ'' ಗುರುವಪ್ಪನು ಉತ್ತರಿಸಿದನು.

'' ರಾಯರು ಇದ್ದಾರೆಯೆ? ''

'' ಇದ್ದಾರೆ—ಯಾಕೆ ? ''

'' ಅವರೊಡನೆ ಸ್ವಲ್ಪ ಮಾತಾಡುವುದಿದೆ '' ಎನ್ನುತ್ತಾ ಆಗಂತುಕ ವ್ಯಕ್ತಿ ಜಗುಲಿಯನ್ನೇರಿದಂತಾಯಿತು.

'' ಯಾರೊ ಅದು ?—'' ಮಂಗಲಕರರು ಸಾಕ್ಸನ್ನು ತುರುಕಿಸಿ ಕೊಳ್ಳಲು ಕುರ್ಚಿಯಲ್ಲಿ ಕುಳಿತಂತೆಯೇ ಬಾಗಿ, ರುಂಡಮುಂಡಗಳನ್ನು ಬಾಗಿಲ ಹೊರಗೆ ಚಾಚಿ ನೋಡಿದರು; ತತ್ಕ್ಷಣವೇ ಅವರ ಸರ್ವಾಂಗವೂ ಒಮ್ಮೆ ಕಂಪಿಸಿತು!

ಆಗಂತುಕ ವ್ಯಕ್ತಿ—ಕೃಷ್ಣ! ಅವರ ಶತ್ರು ಕೃಷ್ಣ !

---

## ೨೬ " ದೇವಾ! ಅಣ್ಣನು ಸಿಕ್ಕಲಿ! "

ಕೃಷ್ಣ! ಎಣ್ಣೆಯಿಲ್ಲದೆ ಕೆದರಿಹಾಕುತಿರುವ ಕ್ರಾಫಿನ ಕೂದಲು, ಮಲಿನವಾದ ಕೋಟು-ಪಂಚೆಗಳು, ಅಂಡಲೆದು ಬಾಡಿಹೋದ ಮೈ, ಕೋಪಾತುರ ಕಾತರ ಲೇಪನಗಳ ಮುಖಭಾವ, ಕೈಯಲ್ಲೊಂದು ಪುಟ್ಟ ಸೂಟುಕೇಸು, ಹೀಗೆ ನಿಂತಿರುವ ಕೃಷ್ಣನ ಮೂರ್ತಿ, ಮಂಗಲಕರರಿಗೆ ಭಯಂಕರ ಮೂರ್ತಿಯಾಗಿ ತೋರಿತು. ನಿನ್ನೆಯಿಂದಲೇ ಅವರಿಗೇನೋ ದುರ್ಗ್ರಹದ ವಕ್ರದೃಷ್ಟಿಗೆಪ್ರಾರಂಭವಾದಹಾಗಿತ್ತು. ಸುಟ್ಟುಬೂದಿಯಾದ '' ಕಾರುಣ್ಯ ಮೂರ್ತಿ'' ಮೊದಲಾದ ಶೀನುವಿನ ಕೈಬರೆಹಗಳೆಲ್ಲ— ಹೊಗೆಯ ರೂಪವನ್ನು ಹೊಂದಿ ಆಕಾಶದಲ್ಲಿ ಮಾಯದಿಂದ ಹಾರಿಹೋಗಿ, ಕೃಷ್ಣನನ್ನು ಬರಮಾಡಿಕೇನೋ ಎಂದು ಕೆಲವು ಕ್ಷಣ ನಡುಗಿದರು. ಅವನ ಆಕಲ್ಪಿತ ದರ್ಶನದಿಂದ ದಿಗಿಲಾಯಿತು. ಒಂದು ಹಳೆಯ ಪುಸ್ತಕಕ್ಕಾಗಿ ಹೀಗೆ ಸಾಹಸ ಮಾಡಿ ಇಲ್ಲಿಯ ವರೆಗೆ ಬರಲಾರನೆಂದು ಊಹಿಸಿದ್ದರು. ಬರುವುದಾದರೂ ಬರತಕ್ಕ ಅವಧಿ ಕಳೆದು ಹೋಗಿತ್ತು. ಈಗ

ಅವನೊಡನೆ ಏನು ಮಾತಾಡಬೇಕೆಂದು ತೋರದೆ ಒಂದು ನಿಮಿಷ ದೊಳಗೆ ನೂರಾರು ಮಾತಿನ ವಿಧಾನಗಳು ಅವರ ನಾಲಗೆಯ ಕೊನೆಯನ್ನು ತಲುಪಿ ತಲುಪಿ ಗಂಟಲಿಗಿಳಿದು ಹೋದುವು. "ಸಿಟ್ಟಿನ ಆವಿರ್ಭಾವವನ್ನು ತೋರಲೆ? ಯಾರೆಂದು ಗುರುತೇ ತಿಳಿಯದವನಂತೆ ನಟಿಸಲೇ? ಶಾಂತಿ ಯಿಂದಲೇ ಪ್ರಾರಂಭಿಸಲೆ?'— ಎಂದು ಅನೇಕ ವಿಧವಾಗಿ ಯೋಚಿಸಿ ಕಡೆಗೆ ಒಂದೂ ನಿರ್ಣಯವಾಗದೆ, ಒಂದು ನಿಮಿಷ ಅವನ ಮುಖವನ್ನೆ ನೋಡುತ್ತ ಕುಳಿತರು. ಕೃಷ್ಣನೂ ಅವರ ಮುಖವನ್ನೆ ಒಂದು ನಿಮಿಷ ನೋಡಿ—" ನಮಸ್ಕಾರ ಸ್ವಾಮಿ" ಎಂದು ಕೈ ಜೋಡಿಸಿದನು. ಅವನ ಶಬ್ದದಲ್ಲಿ ಸಮಾಧಾನವೇ ಧ್ವನಿತವಾದುದರಿಂದ, ರಾಯರಿಗೂ ತುಸು ಧೈರ್ಯವಾಯಿತು. ಕಂಪನವು ಹೃದಯದೊಳಗಡೆಗೇ ಹಿಂದಿರುಗಿ ಅಲ್ಲಿ ಮಾತ್ರ ಡವಡವಿಸಿಕೊಂಡಿತ್ತು. ಬಲಗೈಯನ್ನು ಕೊಂಚ ಎದೆಯವರೆಗೆ ಎತ್ತಿ ಪ್ರತಿನಮಸ್ಕಾರವನ್ನು ಸೂಚಿಸಿ, ಕಣ್ಣಿನ ಮೂಲಕವಾಗಿ "ಏನು?" ಎಂಬ ಪ್ರಶ್ನೆಯನ್ನು, ಆಶ್ಚರ್ಯ ಸೂಚಕವಾದ ಮುಖಮುದ್ರೆಯಿಂದ ವ್ಯಕ್ತಪಡಿಸಿದರು.

ಕೃಷ್ಣನು ಸೂಟುಕೇಸನ್ನು ಜಗುಲಿಯ ಬೆಂಚಿಗೆ ಒರಗಿಸಿಟ್ಟು "ತಮಗೆ ನನ್ನ ಗುರುತು ಹತ್ತಿತಷ್ಟೆ?" ಎಂದು ಕೇಳಿದನು.

ರಾಯರು ಹುಬ್ಬು ತಿರುಗಿಸಿಕೊಂಡು ಮೇಲು ದೃಷ್ಟಿಯಿಂದ, ಯೋಚಿಸಿ ನೋಡುವ ಭಾವವನ್ನು ವ್ಯಕ್ತಪಡಿಸುತ್ತ—" ಈಗ್ಗೆ–ಆರೇಳು ದಿನಗಳ–ಹಿಂದೆ–ನಾನು–ನಿನ್ನನ್ನು ಬೆಂಗಳೂರಿನಲ್ಲಿ ನೋಡಿರುವೆನೆಂದು-ಕಾಣುತ್ತೆ ಕೃಷ್ಣನೆಂದು ನಿನ್ನ ಹೆಸರಲ್ಲವೆ?"

"ಹಾ! ಹಾ! ನೆನಪಿಗೆ ಬಂತಲ್ಲವೆ?"

"ಸರಿ, ಏಕೆ ಬಂದಿ? ಏನಾಗಬೇಕು?" ಎನ್ನುತ್ತಾ ರಾಯರು ಕುರ್ಚಿಯಿಂದೆದ್ದು ಕೋಟನ್ನು ಸಿಕ್ಕಿಸಿಕೊಂಡರು. ಅವರ ಮುಖಭಾವ ದಿಂದ 'ಹೀಗೆಯೇ ಇವನೊಡನೆ ಮಾತಾಡಬೇಕೆಂಬ' ನಿರ್ಧಾರವಾದ ಹಾಗಿತ್ತು.

"ಮತ್ತೇನಿಲ್ಲ ಸ್ವಾಮಿ; ನನ್ನ ಅಣ್ಣ ಶ್ರೀನಿವಾಸನು ಬರೆದ 'ಕಾರುಣ್ಯ ಮೂರ್ತಿ' ಎಂಬ ಪುಸ್ತಕದ ಮೂಲಪ್ರತಿ—"

ರಾಯರು ರುಮಾಲನ್ನು ಇಟ್ಟುಕೊಂಡು, ರಿಸ್ಟ್‌ವಾಚನ್ನು ಕಟ್ಟಿಕೊಳ್ಳಲಿಕ್ಕಾಗಿ ಕೈಯಲ್ಲಿ ಹಿಡಿದುಕೊಂಡು—“ಹೌದು. ಅದನ್ನು ಬೆಂಗಳೂರಿನಲ್ಲಿ ನಿನ್ನ ಕೈಗೆ ಕೊಟ್ಟೆನಲ್ಲ?” ಎಂದು ಗಡಿಯಾರವನ್ನು ಕೈಗೆ ಕಟ್ಟಿಕೊಳ್ಳಲಾರಂಭಿಸಿದರು.

“ಕೊಟ್ಟಿರಿ; ನೀವು ತಿರುಗಿ ಕೊಟ್ಟ ಸ್ವಲ್ಪ ಹೊತ್ತಿನಲ್ಲಿಯೇ ಕಳವಾಗಿ ಹೋಯಿತು. ಈಗ ಅದು ತಮ್ಮ ಬಳಿಯಲ್ಲಿರಬಹುದೆಂಬ ನನ್ನ ಊಹೆ.”

“ಅಂದರೆ?”—ರಾಯರು ನಿರ್ಲಕ್ಷ್ಯದಿಂದ ಹೊರಟು ಜಗುಲಿಯಿಂದ ಕೆಳಗಿಳಿಯುತ್ತ:—“ಗುರುವ ಆ ಕಟ್ಟು ಆಫೀಸಿಗೆ ತೆಗೆದುಕೊ” ಎಂದು ಆಜ್ಞಾಪಿಸಿದರು.

ಕೃಷ್ಣನೆಂದ:—“ಈಗ ಆ ಪುಸ್ತಕವು ತಮ್ಮ ಬಳಿಯಲ್ಲಿರಲಿ, ಇಲ್ಲದಿರಲಿ; ಅದಕ್ಕಾಗಿ ನಾನು ಬಂದುದಲ್ಲ. ಇನ್ನು ಆ ಪುಸ್ತಕವು ನನಗೆ ಎಂದಿಗೂ ಸಿಕ್ಕಲಾರದೆಂದು ಬಲ್ಲೆನು. ಇಷ್ಟರೊಳಗೆ ಅದು ಬೂದಿಯಾಗಿ ಹೋಯಿತೋ ಏನೊ!—”

ಮಂಗಲಕರರು ಆ ಮಾತಿಗೆ ಲಕ್ಷ್ಯಗೊಡದವರಂತೆ—“ನೀನು ಏನು ಹೇಳುವಿಯೋ ಬೇಗನೇ ಹೇಳಿ ಮುಗಿಸಿಬಿಡು. ನನಗೆ ಆಫೀಸಿಗೆ ಹೊತ್ತಾಯಿತು.” ಎಂದು ಮೆಟ್ಟಿಲನ್ನು ಇಳಿಯಲಾರಂಭಿಸಿದರು

ಕೃಷ್ಣನೂ ತನ್ನ ಸೂಟುಕೇಸನ್ನು ಎತ್ತಿಕೊಂಡು—“ನನ್ನ ಅಣ್ಣನ ವಿವರಗಳು ಖಂಡಿತವಾಗಿಯೂ ನಿಮಗೆ ಗೊತ್ತಿದೆ. ಅದನ್ನು ತಿಳಿದುಕೊಂಡು ಹೋಗೋಣವೆಂತಲೇ ನಾನು ಬಂದಿದ್ದೇನೆ.”

“ನನಗೆ ಗೊತ್ತಿಲ್ಲ. ಖಂಡಿತವಾಗಿಯೂ ಗೊತ್ತಿಲ್ಲ. ಬೇರೆ ಎಲ್ಲಿಗಾದರೂ ಹೋಗಿ ವಿಚಾರಿಸಿಕೊ.” ರಾಯರು ಅಂಗಳಕ್ಕಿಳಿದು ನಡೆಯಹತ್ತಿದರು.

ಕೃಷ್ಣನೂ ಅವರ ಹಿಂದೆಯೇ ಹೋಗುತ್ತ—“ಅದೆಯದೆ! ಸ್ವಾಮಿ! ಅವನ ಪತ್ತೆಯನ್ನು ನನಗೆ ತಿಳಿಸಿರಿ. ಹೋಗಿ ವಿಚಾರಿಸಿಕೊಳ್ಳುತ್ತೇನೆ.”

“ಬಹಳ ಮೊಂಡಗಾರನಾಗಿದ್ದೀ! ನನಗೆ ಏನೂ ಗೊತ್ತಿಲ್ಲವೆಂದೆನೋ ಇಲ್ಲವೋ?” ರಾಯರು ಬೀದಿಯಲ್ಲಿ ನಡೆಯಲು, ಕೃಷ್ಣನೂ ಅವರ ಹಿಂದೆ ಹೋಗಲಾರಂಭಿಸಿದನು.

"ಗೊತ್ತಿಲ್ಲಾ ಅಂತ ಒಂದೇ ಮಾತೆಂದರೆ ಹೇಗೆ ಸ್ವಾಮಿ? ಹಿಂದೊಮ್ಮೆ ಗೊತ್ತುಂಟೂ ಅಂತ ಅಂದಿರಲ್ಲಾ? ಆದುದರಿಂದ ಈಗಲೂ ಅವನ ವಿಚಾರ ನಿಮಗೆ ಗೊತ್ತೇ ಇರಬಹುದೆಂದು ನನ್ನ ನಂಬುಗೆ. ಇಲ್ಲವೇ ಅವನು ಇರಬಹುದಾದ ಸ್ಥಳವನ್ನಾದರೂ ನನಗೆ ತೋರಿಸಿರಿ. ಒಟ್ಟಾರೆ ನನ್ನ ಅಣ್ಣನ ಪತ್ತೆ ನಿಮ್ಮ ಮೂಲಕವಾಗಿಯೇ ಆಗಬೇಕೆಂದು, ನಾನಂತೂ ಗಟ್ಟಿಯಾಗಿ ನಂಬಿ ಇಷ್ಟು ದೂರಕ್ಕೆ ಬಂದಿದ್ದೇನೆ."

ಈ ಅಂಟಿಕೊಂಡ ಶನಿಯಿಂದ ಬಿಡುಗಡೆಯಾಗಬೇಕಾದರೆ, ಇವನ ಮನಸ್ಸಿನ ಸಂದೇಹವನ್ನು ಹೋಗಲಾಡಿಸದೆ ಗತ್ಯಂತರವಿಲ್ಲವೆಂದು ಭಾವಿಸಿ, ಮಂಗಲಕರರು ಹೀಗೆಂದರು:—"ಕೃಷ್ಣ! ನೀನು ಈ ಬಗೆಯ ಶುಷ್ಕವಾದ ನಂಬುಗೆಯನ್ನಿಟ್ಟು ತಿರುಗುವುದನ್ನು ನೋಡಿ ನಾನು ತುಂಬಾ ವ್ಯಸನಪಡುತ್ತೇನೆ. ಶ್ರೀನಿವಾಸನ ವೃತ್ತಾಂತ—ಪತ್ತೆ ಮುಂತಾದ ಎಲ್ಲವೂ ನನಗೆ ಗೊತ್ತಿದ್ದರೂ ಅದನ್ನು ನಾನು ಹೇಳುವಂತಿಲ್ಲ. ನಾನು ಹಾಗೆ ಅವನಿಗೆ ವಚನಬದ್ಧನಾಗಿದ್ದೇನೆ. ಅವನಿಗೆ ನಿನ್ನನ್ನು ನೋಡ ಬೇಕೆಂದಾಗಲೀ, ಊರಿಗೆ ಹೋಗಬೇಕೆಂದಾಗಲೀ ಇಚ್ಛೆಯಿಲ್ಲ. ಅವನು ಅಜ್ಞಾತವಾಸಿಯಾಗಿ ಸೌಖ್ಯದಿಂದ ಕನ್ನಡ ಭಾಷೆಯ ಸೇವಕನಾಗಿ ಇದ್ದಾನೆಂದು ತಿಳಿ."

"ಓಹೊ! ಅದೇ ಸ್ವಾಮಿ, ಎಲ್ಲವೂ ನಿಮಗೆ ಗೊತ್ತಿದೆಯೆಂ ನನಗೆ ಗೊತ್ತು. ಯಾವ ಊರಿನಲ್ಲಿದ್ದಾನೆ? ಅದನ್ನಾದರೂ ಸ್ವಲ್ಪ ತಿಳಿಸಿರಿ. ನಾನು ಅವನ ಪಾದಕ್ಕೆ ಬಿದ್ದಾದರೂ ಕ್ಷಮಾಪಣೆ ಕೇಳಿಕೊಳ್ಳುತ್ತೇನೆ."

"ಅದೆಂದಿಗೂ ನಿನಗೆ ತಿಳಿಸಲಾಗುವುದಿಲ್ಲವೆಂದೆನಲ್ಲ? ನಿನ್ನನ್ನು ಸುಮ್ಮಸುಮ್ಮನೆ ಊರೂರು ಅಂಡಲೆಯಿಸಿ ಏನು ಪ್ರಯೋಜನ? ತನು–ಮನ–ಧನಗಳ ಮೂಲಕವಾಗಿ ಈಗಲೇ ನೀನು ತುಂಬಾ ದಣಿದಿರುತ್ತೀ. ನೆಮ್ಮದಿಯಾಗಿ ಊರಿಗೆ ಹೋಗಿ ಸೇರು."

"ಅದಿರಲಿ, ಸ್ವಾಮಿ. ತಾವು ಹೇಳುವುದನ್ನು ನೋಡಿದರೆ, ತಾವು ಬೆಂಗಳೂರಿನಲ್ಲಿ ನನ್ನೊಂದಿಗೆ ಹೇಳಿದ್ದು—"

"ನಿಜ ನಿಜ, ಬಲ್ಲೆನು! ಅಣ್ಣನನ್ನು ಹುಡುಕಿಕೊಂಡು ಹೊರಟಿರುವ

ನೀನು, ಮುಂದೆ ಮುಂದೆ ಆ ಕೆಲಸಕ್ಕೆ ಹೋಗಿ, ಆ ಕನ್ನಡ ತಾಯಿಯ ಕುಮಾರನ ಉದ್ದೇಶ ಸಿದ್ಧಿಗೆ ಭಂಗಬರಬಾರದೆಂದು ನಿನ್ನೊಡನೆ ನಾನು ಸ್ವಲ್ಪ ಸುಳ್ಳು ಹೇಳಿದುದು ನಿಜವೇ!"

"'ಹಾಗಾದರೆ 'ಕನ್ನಡ ಗೆಳೆಯು' ಎಂಬ ಸಂಕೇತ ನಾಮವು ತಮ್ಮ ಗುರುತಲ್ಲವೇನು?"

"ಅದು ನಿನ್ನ ಮನಸ್ಸಿಗೆ ಗೊತ್ತಿದೆಯಷ್ಟೆ? ನಿನಗೆ ನನ್ನ ಮೇಲೆ ಹೊಲ್ಲದ ಸಂದೇಹವು ಬೇಡ. ನಾನು ಹೇಳಿದ ಸುಳ್ಳೆಲ್ಲವೂ ಅವನಿಗೆ ಕೊಟ್ಟ ವಚನವನ್ನು ಸಾಧಿಸಿಕೊಳ್ಳಲಿಕ್ಕಾಗಿಯೇ."

"ಅಂತೂ ನಾನು ಕಷ್ಟಬಟ್ಟರೂ ಅಣ್ಣನು ಸಿಕ್ಕುವುದಿಲ್ಲವೆಂದಾಯಿತೆ!"

"ನೀನು ಸುಮ್ಮನೆ ಚಂಚಲ ಮನಸ್ಕನಾಗದೆ! ಬೇಗನೇ ಊರಿನ ದಾರಿಯನ್ನು ಹಿಡಿಯುವುದು ಲೇಸು."

ಹೀಗೆಂದು ಮಂಗಲಕರರು ಗುರುವಪ್ಪನನ್ನು ಕುರಿತು—"ಲೊ, ನಿಲ್ಲು." ಎಂದು ಅಲ್ಲಿದ್ದ ಅವರ ಸ್ನೇಹಿತರ ಮನೆಯ ಕಂಪಾವುಂಡಿನೊಳಗೆ ಹೊಕ್ಕರು. ಗುರುವಪ್ಪನೂ ಅವರ ಹಿಂದೆಯೇ ಹೊಕ್ಕನು. ಆಗ ರಾಯರು ಗುರುವಪ್ಪನಿಗೆ—"ಇವರ ಮನೆಯಲ್ಲಿ ಕೆಲವು ಪುಸ್ತಕಗಳುಂಟು. ಅವನ್ನೂ ಆಫೀಸಿಗೆ ಒಯ್ಯಬೇಕು" ಎಂದು, ಕೃಷ್ಣನನ್ನು ನೋಡಿ ಗಟ್ಟಿಯಾಗಿ—"ನನಗಿಲ್ಲಿ ಸ್ವಲ್ಪ ಕೆಲಸವಿದೆ, ಕೃಷ್ಣ! ನಾನು ಹೇಳಿದುದು ತಿಳಿಯಿತಷ್ಟೆ? ವ್ಯರ್ಥವಾಗಿ ಅಂಡಲೆಯದೆ ನೆಮ್ಮದಿಯಿಂದ ಊರಿಗೆ ಹೋಗು." ಎಂದಂದು—ಆ ಮನೆಯ ಕೋಣೆಯೊಳಗೆ ಹೊಕ್ಕರು. ಅಲ್ಲಿ ಅವರು ಯಾರೊಡನೆಯೋ ನಗುನಗುತ್ತ ಸಂಭಾಷಿಸುವುದು ಕೇಳಿಸುತಿತ್ತು.

ಕೃಷ್ಣನು ಸ್ವಲ್ಪ ಹೊತ್ತು ಅಲ್ಲಿ ನಿಂತು, ತರುವಾಯ ಬಾಜಾರಿನ ಮಾರ್ಗವನ್ನು ಹಿಡಿದು ಹೋದುದನ್ನು ನೋಡಿ, ಮಂಗಲಕರರಿಗೆ ಸ್ವಲ್ಪ ಸಮಾಧಾನವಾಯಿತು. ಆದರೂ ಅವನು ಊರುಬಿಟ್ಟು ಹೋಗುತ್ತಾನೋ ಇಲ್ಲವೋ ಎಂದು ಸಂದೇಹವೇನೋ ಇದ್ದೇ ಇತ್ತು. ಎಲ್ಲ್ಯಾದರೂ 'ಕಾಕತಾಲೀಯ ನ್ಯಾಯ'ದಂತೆ ಶೀನೂ-ಕೃಷ್ಣರ ಪರಸ್ಪರ ಬಂಧು

ದರ್ಶನವಾದರೆ, ಅವರ ಮರೆಮೋಸಗಳೆಲ್ಲಾ ಶೀನುವಿಗೆ ಗೊತ್ತಾದೀತು. ಆದುದರಿಂದ ಕೃಷ್ಣನನ್ನು ಆದಷ್ಟು ಬೇಗ ಬಳ್ಳಾರಿಯಿಂದ ಹೊರಡಿಸಿ ಬಿಡಬೇಕು. ಕೃಷ್ಣನ ಮನಸ್ಸಿಗೆ ನಂಬುಗೆಯಾಗುವಂತಹ ಮಾತಿನಿಂದ, ಪ್ರಕೃತ ಅವನ ದೃಷ್ಟಿಪಥದಿಂದ ಪಾರಾದರೂ, ಅವರ ಮಾತನ್ನೆಲ್ಲಾ ಅವನು ನಂಬಿರುವನೆಂದು ನಂಬುವುದೆಂತು? ಶ್ರೀನಿವಾಸನಿಗೂ ಮಂಗಲ ಕರರಿಗೂ ನಿಕಟ ಸಂಬಂಧವಿರುವುದೆಂಬುದು, ಅವರ ಮಾತಿನಿಂದ ಕೃಷ್ಣ ನಿಗೆ ಗೊತ್ತಾಗಿರುತ್ತದೆ. ಆದುದರಿಂದ ಧೂರ್ತನಾದ ಕೃಷ್ಣನು ಅಷ್ಟಕ್ಕೇ ಹೊರಟು ಹೋಗದೆ, 'ಶೀನಣ್ಣನು ಮಂಗಲಕರರ ಬಳಿಗೆ ಬಾರದೆ ಇರಲಿ ಕ್ಕಿಲ್ಲ–ಎಂದುಕೊಂಡು, ಅವರ ಮನೆಗೂ ಆಫೀಸಿಗೂ ಕೆಲವು ದಿನಗಸ್ತೀ ಹಾಕುವ ಸಂಭವವಿದ್ದೀತು. ಅಥವಾ ಮನೆಯಲ್ಲಿಯೋ ಆಫೀಸಿನಲ್ಲಿಯೋ ಜವಾನ–ಸೇವಕ–ಗುಮಾಸ್ತೆಗಳೊಂದಿಗೆ ವಿಚಾರಿಸುವ ಸಂಭವವೂ ಉಂಟು. ಮಂಗಲಕರರು ಇದಕ್ಕೊಂದು ಉಪಾಯ ಮಾಡಿದರು. ಕೃಷ್ಣ ನನ್ನು ಕಣ್ಣಾರೆ ಕಂಡಿರುವ ಗುರುವಪ್ಪನ ಮೂಲಕವಾಗಿಯೆ, ಆ ಉಪಾಯ ವನ್ನು ಪ್ರಯೋಗ ಮಾಡಿ, ಕೃಷ್ಣನ ಮೇಲೆ ಬಿಟ್ಟರು. ಹಾಗು ಬೇರೆ ಗುಮಾಸ್ತಾದಿ ಜನರನ್ನು ಕುರಿತು—'' ಕೆ. ಶ್ರೀನಿವಾಸರಾವ್, ಎಂಬವ ನನ್ನು ವಿಚಾರಿಸಿಕೊಂಡು, ಪರಸ್ಥಳದವನಂತೆ ಕಾಣುವ ತರುಣನೊಬ್ಬನು ಇಲ್ಲಿಗೆ ಬಂದಾನು. ಬಂದರೆ—'ಒಂದೂ ನಮಗೆ ಗೊತ್ತಿಲ್ಲ' ಎಂದಿಷ್ಟೇ ಹೇಳಿಕಳಿಸಿಬಿಡಿ. ಬೇರೆ ಹೆಚ್ಚು ಮಾತೇ ಇಟ್ಟುಕೊಳ್ಳಬಾರದು." ಎಂದು ಶಾಸನಮಾಡಿದರು.

ಹಾಗೆಯೇ ಅಂದು ರಾತ್ರಿಯಲ್ಲಿ ಮನೆಯಲ್ಲಿಯೂ ಕೆಲಸದಾಳು ಸಿದ್ದಪ್ಪನಿಗೂ ಹಾಗೆಯೇ ಆಜ್ಞಾಪಿಸಿದರು. ಕಮಲೆಯೊಡನೆಯೂ ಹೀಗೆಂ ದರು:—"ಕಮಲೂ, ನಾನಿಲ್ಲದಿರುವಾಗ ಯಾರೋ ಒಬ್ಬ ಹುಡುಗ, ಇಲ್ಲಿಗೆ ಬಂದು, ಕೆ. ಶ್ರೀನಿವಾಸರಾವ್ ಎಂಬವನನ್ನು ಕುರಿತು, ವಿಚಾ ರಿಸಿಯಾನು. "ನನಗೆ ಗೊತ್ತಿಲ್ಲ, ಮನೆಯಲ್ಲಿ ಯಾರೂ ಗಂಡಸರಿಲ್ಲ, ಹೋಗು" ಎಂದು ಹೇಳಿ ಕಳುಹಿಸಿಬಿಡು. ಅವನು ಸಾಧಾರಣದಲ್ಲಿ ಬಿಡು ವವನಲ್ಲ. ಅವನಿಗೆ ಹೆಚ್ಚು ಮಾತಿಗೆ ಅವಕಾಶವನ್ನೆ ಕೊಡಕೂಡದು ಜಾಗ್ರತೆ!" ಎಂದು ಎಚ್ಚರಿಸಿದರು.

"ಕೆ. ಶ್ರೀನಿವಾಸರಾವ್ ಎಂದರೆ ಯಾರು? ಇಲ್ಲಿ ಎಲ್ಲಿದ್ದಾನೆ? ಅವನನ್ನು ವಿಚಾರಿಸಿಕೊಂಡು ಬರುವವನು ಇಲ್ಲಿಗೇಕೆ ಬರುತ್ತಾನೆ?" ಎಂದು ಕಮಲೆ ಪ್ರಶ್ನಿಸಿದಳು.

"ಇವತ್ತು ಬೆಳಗ್ಗೆ ಕೃಷ್ಣ ಅಂತ ಒಬ್ಬ ಬಂದನಲ್ಲಾ?—ನಾನು ಆಫೀಸಿಗೆ ಹೊರಡುವಾಗ? ನೀನು ನೋಡಿಲ್ಲವೆ?''

"ಇಲ್ಲವಲ್ಲಾ!" ಕಮಲೆ ನಿಜವಾಗಿಯೂ ನೋಡಿರಲಿಲ್ಲ

"ಬಂದಿದ್ದ. ಇನ್ನೊಮ್ಮೆ ನಾನಿಲ್ಲದಾಗಲೂ ಬಂದಾನೋ ಏನೊ! ಬಂದರೆ ಹಾಗೆ ಹೇಳಿ ಅಟ್ಟಿಬಿಡು!"

"ಒಳ್ಳೇದು. ಆದಿರ್ಲಿ?—ಕೆ. ಶ್ರೀನಿವಾಸರಾವ್ ಎಂದರೆ—ಆದಿನ ರಾತ್ರಿ—?"

"ಹೌದು. ಅವನೆ!''

"ಅವನ ಗುರುತು ನಿಮಗೆ ಉಂಟಲ್ಲಾ? ಆ ಕೃಷ್ಣ ಎಂಬವನಿಗೆ ಹೇಳಿದರೆ ಏನಾಗುತ್ತೆ?''

ರಾಯರು ಹುಬ್ಬು ತಿರುಗಿಸಿ—"ಕುಂಬಳಕಾಯಿ ಆಗುತ್ತೆ! ನಿನಗೇಕೆ ಬೇಡದ ಪ್ರಶ್ನೆ? ನಾನು ಹೇಳಿದ ಹಾಗೆ ಮಾಡು!" ಎಂದರು ಖಂಡಿತ ಸ್ವರದಿಂದ.

"ಏನೋ ಸ್ವಲ್ಪ ವಿಚಿತ್ರವಾಗಿದೆ ಮಾತೂಂತ ಕೇಳಿದೆ. ಇಷ್ಟೊಂದು ಕೇಳಿದ್ದೂ ತಪ್ಪೆ?''

"ತಪ್ಪಲ್ಲವೇ ಮತ್ತೆ? ಪತಿ ಎಷ್ಟು ಹೇಳಿದನೋ ಅಷ್ಟು ಮಾಡಬೇಕಾದುದು ನಿನ್ನ ಕರ್ತವ್ಯ. ಅಡ್ಡ ಪ್ರಶ್ನೆ ಹಾಕಿ ಹೀಗೆಲ್ಲಾ ಕೇಳಬಾರದು."

"ಆಯಿತು" ಕಮಲೆ ತನ್ನೊಳಗೆ—"ಅಯ್ಯೋ! ಪ್ರೇಮಾತ್ಮನಾದ ತರುಣ ಪತಿಯಾಗಿರುತ್ತಿದ್ದರೆ ಹೀಗೆ ಹೇಳುತಿದ್ದನೆ?" ಎಂದುಕೊಂಡಳು. ಆಗವಳ ಒಳಗಣ್ಣಿನಲ್ಲಿ ಶೀನುವಿನ ಪ್ರತಿಬಿಂಬವು ಮೂಡಿತು. ಇರಲಿ.

ಮಂಗಲಕರರು ಸಂದೇಹಪಟ್ಟಂತೆಯೇ ಕೃಷ್ಣನು ವರ್ತಿಸಿದನು. ಮಂಗಲಕರರ ಮಾತನ್ನು ನಂಬಲಿಕ್ಕೆ ಕೃಷ್ಣನಿಗೇನೂ ಆಧಾರವಿರಲಿಲ್ಲ. ಅವರ ಮಾತುಗಳೆಲ್ಲಾ ನರಿಯ ತಂತ್ರದಂತೆಯೇ ಅವನಿಗೆ ತೋರಿತು.

ಆದರೆ ಒಂದು ಮಾತ್ರ ನಿಶ್ಚಯವೆಂದು ಅವನ ತಿಳಿವಳಿಕೆ; ಶೀನುವಿಗೂ ಮಂಗಲಕರರಿಗೂ ಸಂಬಂಧವುಂಟು. ಆದರೆ ಅದು ವಿಶ್ವಾಸುಕ ಸಂಬಂಧವೋ—ಘಾತುಕ ಸಂಬಂಧವೋ ಗೊತ್ತಾಗಬೇಕಾಗಿದೆ. ವಿಶ್ವಾಸುಕ ಸಂಬಂಧವಾಗಿರುತ್ತಿದ್ದರೆ, ಕೃಷ್ಣನು ಭ್ರಾತೃಪ್ರೇಮದಿಂದ ಇಷ್ಟು ತಲ್ಲಣಿಸಿ ಪ್ರಾರ್ಥಿಸುವಾಗ ಅವರು ಶೀನಣ್ಣನ ಪತ್ತೆಯನ್ನು ಅವನಿಗೆ ತಿಳಿಸಬೇಕಿತ್ತು. ಅದಕ್ಕೆ ಅವರೊಂದು ವಚನಬದ್ಧತೆಯ ನೆವನವೊಡ್ಡಿದರಲ್ಲಾ?—ಅದೆಂತಹ ವಚನಬದ್ಧತೆ-ಕ್ಷಾತ್ರವಚನಬದ್ಧತೆಯಂತೆ ಹಾಗೇನು ಬಂಧಿರಬಹುದು? ಆ ಕ್ಷುದ್ರ ಅಡುಗೆಯ ಭಟ್ಟನಿಗಾಗಿ, ಈ ಘನಶಾಲಿಗಳು ಅಷ್ಟು ಸ್ವಕೀಯರಂತೆ ವಚನಬದ್ಧರಾಗುವುದೆಂದರೇನು? ಅವನ ಸ್ವಂತ ಸಹೋದರನಾದ ಕೃಷ್ಣನಿಗಿಂತಲೂ, ಈ ಕಪಟಿ ಮಂಗಲಕರರು ಅವನಿಗೆ ಸಮೀಪದವರಾಗಿರುವರೇನು? ಶೀನಣ್ಣನು ಈ ಬಳ್ಳಾರಿಯಲ್ಲೇ ಎಲ್ಲಿಯೋ ಇದ್ದು, ಇವರು ಅವನನ್ನು ಯಾವುದೋ ಒಂದು ವಿಧವಾಗಿ ನಂಬಿಸಿ, ಅವನ ಲೇಖನಗಳನ್ನು ಸ್ವಾಧೀನಪಡಿಸಿಕೊಂಡಿರಬಹುದು. ಇಲ್ಲದಿದ್ದರೆ ಕೃಷ್ಣನ ಕೈಯಲ್ಲಿದ್ದ "ಕಾರುಣ್ಯಮೂರ್ತಿ"ಯ ಮೂಲವನ್ನು, ಅಷ್ಟು ಸಾಧನೆ ಮಾಡಿ ಅಪಹರಿಸಬೇಕೆಂದು ಇವರಿಗೇನು ಬಂತು? ಕೃಷ್ಣನು ಅಣ್ಣನನ್ನು ಸಂಧಿಸುವುದು ಇವರಿಗೇನೋ ಅಪಾಯಕಾರಿಯಾಗಿರಬೇಕು. ಈ ಕಾರಣಗಳಿಂದ ನೋಡಿದರೆ, ಶೀನಣ್ಣನು ಇವರಿಂದ ತುಂಬಾ ಮೋಸಹೋಗಿರುತ್ತಾನೆ. ಅಥವಾ ಮೋಸಹೋಗುತ್ತಲೇ ಇದ್ದಾನೆ. ವಿಶ್ವಾಸುಕ ಸಂಬಂಧವಿದ್ದು 'ಕಾರುಣ್ಯಮೂರ್ತಿ'ಯ 'ಕನ್ನಡಗೆಳೆಯ'ನ ಗುರುತು ಶೀನಣ್ಣನನ್ನೆ ನಿರ್ದೇಶಿಸುವಂತಹುದಾಗಿದ್ದರೆ, ಕೃಷ್ಣನ ಕೈಯಲ್ಲಿದ್ದ 'ಕಾರುಣ್ಯಮೂರ್ತಿ'ಯ ಪ್ರತಿಯನ್ನು ಅಷ್ಟು ಒತ್ತಾಯದಿಂದ ಇವರೇಕೆ ಕೈವಶಪಡಿಸಿರಬೇಕು? ಅಲ್ಲದೆ ಇವರು ಹೇಳುವಂತೆ ಶೀನಣ್ಣನು ಇಷ್ಟು ಕಟ್ಟುನಿಟ್ಟಾಗಿ—ಪಾಂಡವರಂತಹ ಅಜ್ಞಾತದಲ್ಲಿ ಹುದುಗಿರುವಂತಹ ಸ್ಥಿತಿಯೇನೂ ಬಂದಿಲ್ಲ. ಅವನು ಹಾಗಿರಲಿಕ್ಕೂ ಇಲ್ಲ. ಖಂಡಿತವಾಗಿಯೂ ಈ ಮಂಗಲಕರರು ಘಾತುಕರೇ ಸರಿ! ಇವರ ಮಾತನ್ನು ನಂಬಿ ಅಣ್ಣನನ್ನು ಹುಡುಕದೆ ಜಾರಿಬಿಡಬಾರದು. ಅವರ ಆಫೀಸು-ಮನೆಗಳ ಸುತ್ತುಮುತ್ತಿನಲ್ಲಿ ವಕ್ರಶೋಧನೆ ಮಾಡಿ, ಮನಸ್ತೃಪ್ತಿಯಾದ ಮೇಲೆಯೆ ಹೊರಡಬೇಕಷ್ಟೇ.

ಹೀಗೆ ನಿಶ್ಚಯ ಮಾಡಿಕೊಂಡು ಕೃಷ್ಣನು ತನ್ನ ಕೈಯಲ್ಲಿದ್ದ ಹಣವನ್ನೊಮ್ಮೆ ಎಣಿಸಿ ನೋಡಿಕೊಂಡನು. ಬರೇ ಹತ್ತುರೂಪಾಯಿ ಚಿಲ್ಲರೆ ಮಾತ್ರವೇ ಇತ್ತಷ್ಟೆ. ಊರಿನಿಂದ ಹೊರಡುವಾಗ ನೂರು ರೂಪಾಯಿಯೊಂದಿಗೆ ಹೊರಟಿದ್ದನು; ಈಗ ಉಳಿದಿರುವುದನ್ನು ನೋಡಿ ಅವನ ಮುಖವು ಸಂಕುಚಿತವಾಯಿತು.—"ಪರಮಾತ್ಮ! ಇನ್ನು ನಾಲ್ಕು ದಿನಗಳು ಇಲ್ಲಿದ್ದು ಒಂದೇ ಹೊತ್ತು ಊಟಮಾಡುತ್ತ, ಈ ಬಳ್ಳಾರಿಯ ನಾಲ್ಕು ದಿಕ್ಕನ್ನೂ ಹುಡುಕಿ ನೋಡಿಬಿಡುವೆನು! ದೇವಾ! ಅಣ್ಣನು ಸಿಕ್ಕಲಿ!" ಎಂದು ಪ್ರಾರ್ಥಿಸಿಕೊಂಡು- ಡಿ. ಇ. ಒ. ಆಫೀಸಿನ ಕಡೆಗೆ ನಡೆದನು.

ಆಫೀಸಿನ ಹೊರಗೆ ನಿಂತಿದ್ದ ಒಬ್ಬ ಬಿಲ್ಲೆಯ ಜವಾನನ ಬಳಿಗೆ ಹೋಗಿ—"ಏನಪ್ಪಾ, ಆಫೀಸರಿದ್ದಾರೋ–ಮನೆಗೆ ಹೋದರೊ?" ಎಂದು ಕೇಳಿದನು.

"ಈಗ ತಾನೇ ಮನೆಗೆ ಹೋದರು, ಯಾಕೆ? ನೀವು ಯಾರು?"?

ಆಗ ಒಳಗಣಿಂದ ಪುಸ್ತಕದ ಕಟ್ಟಿನೊಂದಿಗೆ, ಗುರುವಪ್ಪನು ಹೊರಗೆ ಬಂದು, ಕೃಷ್ಣನನ್ನು ನೋಡಿ—"ಏನ್ರೀ ರಾಯರೆ! ಮತ್ತೇನ್ರೀ ನೀವಲ್ಲವೇ ಬೆಳಗ್ಗೆ ರಾಯರ ಜತೇಲಿ ಮಾತಾಡಿದೋರು? ಯಾವೂರಾಯ್ತ್ರೀ? ಯಾವ ಇಸ್ಕೂಲದಾಗ ಟೀಚರ್‍ರಾಗಿದೀರೀ?" ಎಂದು ಪ್ರಶ್ನೆಗಳ ಮಾಲಿಕೆಯನ್ನೆತ್ತಿದನು.

ಕೃಷ್ಣ:— ಟೀಚರ್ ಗೀಚರ್ ಅಲ್ಲಪ್ಪಾ ನಾನು. ಬೇರೊಂದು ವಿಷಯಕ್ಕಾಗಿ ಅವರ ಹತ್ತರ ಬಂದೆ. ನೀನು ಅವರ ಮನೇಜವಾನ ತಾನೇ?

ಗುರುವ:— ಹೌದ್ರೀ. ಮನೆಗೂ ಆಫೀಸಿಗೂ ಎಡತಾಕೋದೇ ಕೆಲಸರಿ.

ಕೃಷ್ಣ:— ಹಾಗಾದರೆ ನಿನಗೆ ಅವರ ಮನೆಗೋ–ಆಫೀಸಿಗೋ ಬರೋ ಹೋಗೋ ಅವರ ಪರಿಚಯ ಕೊಂಚಾದರೂ ಇದ್ದೀತಷ್ಟೆ?

ಗುರುವ:— ಇದ್ದೀತೂಂತನ್ನಿ. ಯಾಕ್ರೀ?

ಕೃಷ್ಣ:— ಮತ್ತೇನಿಲ್ಲ; ನನ್ನ ಅಣ್ಣ ಶ್ರೀನಿವಾಸಾಂತ—ಅವನು ಊರಿನಿಂದ ಈ ಪ್ರಾಂತಕ್ಕೆ ಬಂದು, ಇಲ್ಲಿ ಎಲ್ಲಿಯೋ ಇದ್ದಾನಂತೆ—

ಗುರುವಪ್ಪನು ಯೋಚಿಸುತ್ತ— ಆ ?

ಕೃಷ್ಣ:— ಅವನು ಸಾಧಾರಣ ಅಡುಗೇ ಮಾಡುತ್ತಾನೆ. ಉಳಿದ ಸಮಯದಲ್ಲಿ ಯಾವಾಗಲೂ ಚಿತ್ರ ಬರೀತಾ–ಪುಸ್ತಕ ಬರೀತಾ–ಓದುತ್ತಾ ಹೀಗಿರುತ್ತಾನೆ. ಅವನು ಈ ರಾಯರ ಮನೆಗಾಗಲೀ–ಆಫೀಸಿಗಾಗಲೀ ಆಗಾಗ ಬರ್ತಾ–ಹೋಗ್ತಾ ಇದ್ದಾನೇಂತ ಕೂಡಾ ಗೊತ್ತಿದೆ. ನಿಮ್ಮ ರಾಯರನ್ನು ಕೇಳಿದರೆ ಗೊತ್ತಿಲ್ಲಾಂತ ಅಂದರು.

ಗುರುವ:—ಹೌದ್ರಿ ದೊಡ್ಡೋರು ಪಾಪ! ಬರೋರು ಹೋಗೋರು ಸಾವಿರ ಜನ, ಅವರಿಗೆಲ್ಲಾ ಎಲ್ಲಿ ನೆಂಪರಿ ?

ಕೃಷ್ಣ:—ನಿನಗೇನಾದರೂ ಗೊತ್ತೊ? ಶ್ರೀನಿವಾಸನ ಗುರುತುಂಟೆ?

ಗುರುವಪ್ಪನು ಗಡ್ಡಕೆರೆದು ಮೇಲೆ ನೋಡುತ್ತ— ಮನುಷಾ ಸ್ವಲ್ಪ ತೆಳ್ಳಗಿರ್ತಾನಾ ?—

ಕೃಷ್ಣ:— ಹೌದು. ಉದ್ದುರುಟಾದ ಮುಖ, ಎಣ್ಣೆಗಪ್ಪಾದ ಬಣ್ಣ, ಸಾಧಾರಣವಾಗಿ ಅಡ್ಡಪಂಚೆ, ಒಂದು ಷರಟು ಮಾತ್ರ ಹಾಕಿಕೊಳ್ಳು ತ್ತಾನೆ.

ಗುರುವ:— ಓ! ನಿಜನಿಜ. ಒಮ್ಮೆ–ಅಲ್ಲಲ್ಲ–ಎಷ್ಟೋ ಸಾರಿ ಈ ಆಫೀಸಿಗೆ ಬಂದಿದ್ದಾರೆ. ಈಗೊಂದು ಹತ್ತು ದಿನದ ಕೆಳಗೆ ಕೂಡಾ ಬಂದು ಹೋಗಿದ್ರು. ಅವರು ಬಹುಶಃ ನೀವು ಹೇಳುವ ಜನವೇ ಆಗಿ ದ್ದಾರೆ. ಯಾರೋ ಟೀಚರ್ರೂಂತ ಮಾಡಿ ನಾನು ಕೇಳಿದ್ದಕ್ಕೆ-ಟೀಚರ್ರಲ್ಲಾ-ಅಡಿಗೇಯವ ಅಂತ ಕೂಡಾ ಅಂದಿದ್ರು.

ಕೃಷ್ಣ:— ಸರಿ! ಅವನೇ ನನ್ನಣ್ಣ ಹಾಗಾದರೆ, ಎಲ್ಲಿರುವುದೇ ನೂಂತ ವಿಚಾರಿಸಿದಿಯೇನಪ್ಪಾ ?

ಗುರುವ:—ಮತ್ತಿಲ್ಲವೆ? ಹಾಗೆಲ್ಲಾ ವಿಚಾರಿಸುವುದೊಂದು ನಮಗೆ ಅಭ್ಯಾಸವೇ ಕಾಣ್ರೀ! ಅವರು ಹೊಸಪೇಟೇಲಿ ಎಲ್ಲಿಯೋ ಇರೋದು ಅಂತ ಅಂದಹಾಂಗೆ ನೆಂಪು.

ಕೃಷ್ಣ:— ಇದ್ದೀತು! ಮೊದಲು ಅಲ್ಲೆ ಇದ್ದದ್ದು.

ಗುರುವ:— ಹೌದ್ರಿ. ಇನ್ನೊಮ್ಮೆ ಕೂಡಾ ಅವರು ಇಲ್ಲಿಗೆ

ಬಂದಾರ್ರೀ. ಆಗ ನಾನು ಬೇಕಾದರೆ ಹೇಳ್ತೀನ್ರೀ ನೀವು ವಿಚಾರಿಸಿದಿರೀಂತ.

ಕೃಷ್ಣ:— ಅಂತೂ ಈ ಊರಲ್ಲಿಲ್ಲ.

ಗುರು:— ಈ ಊರಿನಲ್ಲಿ ಎಲ್ಲಿಯೂ ಅವರನ್ನ ನಾ ನೋಡಿಲ್ರೀ.

ಆ ಮೇಲೆ ಕೃಷ್ಣನು ಬೇಸರದಿಂದ ಅಲ್ಲಿಂದ ಹೊರಟನು. ಸ್ವಲ್ಪ ಹೊತ್ತಿಗೆ ಕತ್ತಲೆಯೂ ಆಯಿತು. ಬೀದಿಗಳಲ್ಲಿ ವಿದ್ಯುದ್ದೀಪಗಳು ಬೆಳಗಿದುವು ಆ ಬೆಳಕಿನಲ್ಲಿ ಬೀದಿಯಲ್ಲಿ ಬರಹೋಗುತ್ತಿರುವ ಮಂದಿಯ ತಲೆಗಳನ್ನು ಪರೀಕ್ಷಿಸುವ ಸಲುವಾಗಿ ಕೃಷ್ಣನು, ಕುತ್ತಿಗೆಯನ್ನು ಮೂದಿಕ್ಕುಗಳಿಗೂ ತಿರುಗಿಸುತ್ತ ತಿರುಗಿಸುತ್ತ ನಡೆಯುತ್ತಿದ್ದನು. ಥಕ್ಕನೆ ಗುಂಪುಗಳಲ್ಲಿ ಯಾರೋ ಒಬ್ಬನು ಶೀನಣ್ಣನ ಹಾಗೆ ಭಾಸವಾದರೆ ಕುತೂಹಲದಿಂದ ನಿಂತೋ-ಕುತ್ತಿಗೆಯನ್ನು ಎಕ್ಕಳಿಸಿಯೋ, ಹಿಂದಿರುಗಿ ದೃಷ್ಟಿಯನ್ನು ಹಾಯಿಸಿಯೋ ನೋಡಿ, ಯಾರೋ ಏನೋ ಎಂದಾಗಲು ನಿರಾಶೆಯ ನಿಡುಸುಯ್ಲನ್ನು ಬಿಡುವನು ಪಾಪ! ದೂರದಲ್ಲಿ ಮಸಮಸಕಾಗಿ ಕಾಣುವ ವ್ಯಕ್ತಿ, ಶೀನಣ್ಣನೇ ಆಗಲೆಂದು ದೇವರನ್ನು ಬೇಡಿಕೊಂಡು, ಪದೇಪದೇ ನಿಷ್ಫಲನಾಗಿ ಹೋಗುತ್ತಿದ್ದನು.

ದಾಹವಾದುದರಿಂದ ಒಂದು ಹೋಟೆಲನ್ನು ಹೊಕ್ಕನು. ಆಗ ಎಲೆಕ್ಟ್ರಿಕ್ ದೀಪದ ಬೆಳಕಿನಲ್ಲಿ, ಹೋಟೆಲ್ಲಿನ ಗೋಡೆಯಲ್ಲಿದ್ದ ಎರಡು ವಾಲ್‌ಪೋಸ್ಟ್ ಕಾಗದಗಳಲ್ಲಿರುವ ದೊಡ್ಡ ಅಕ್ಷರಗಳು ಅವನ ಕಣ್ಣಿಗೆ ಸಹಜವಾಗಿ ಬಿದ್ದುವು. ಒಂದು ಬಳ್ಳಾರಿಯ ವೆರ್ರ್ಯಾಟೀ ಹಾಲಿನಲ್ಲಿ ನಾಡದು ಹದಿನೈದನೇ ತಾರೀಕಿನಿಂದ ಪ್ರಾರಂಭವಾಗುವ "ವಿಧಿಯ ಬಲೆ" ಎಂಬ ಫಿಲಿಂನ ಮುನ್ನರಿಕೆಯ ಪ್ರಸಿದ್ಧಿ ಪತ್ರ. ಇನ್ನೊಂದು ಬಳ್ಳಾರಿ 'ಲಲಿತಕಳಾ ನಾಟ್ಯಶಾಲೆ'ಯಲ್ಲಿ ಸುಂದರೀಬಾಯಿಯ ನರ್ತನವನ್ನು ಪ್ರಸಿದ್ಧಿಸಲ್ಪಟ್ಟುದು. ಫಿಲಿಂನ ಪತ್ರದಲ್ಲಿ—"ಪ್ರಸಿದ್ಧ ಕತೆಗಾರ 'ಕನ್ನಡಗೆಳೆಯ'ನ "ವಿಧಿಯ ಬಲೆ" ಮುಖ್ಯ ನಟಿ 'ವಿಕೃತಪ್ರಕೃತಿ ಕಳಾವಿಶಾರದೆ--ವಿಲಕ್ಷಣ ನಾಟ್ಯಗಾನ ನಿಪುಣೆ ಸುಂದರೀಬಾಯಿ—" ಎಂದು ಮುಂತಾಗಿತ್ತು.

ಇದನ್ನು ನೋಡಿ ಕೃಷ್ಣನು ಆಶ್ಚರ್ಯಾನ್ವಿತನಾದನು. ಹಾಗೆಯೇ

ಸುಂದರಿಯನ್ನು ನೆನೆದು—“ಆ ಹರಾಮಿ ಇಲ್ಲಿಗೂ ಬರುತ್ತಾಳೆಯೇ ಕುಣಿಯಲಿಕ್ಕೆ?” ಎಂದು ಬೆರಗಾದನು.

“ಅವಳ ಕುಣಿತ ಹಾಳಾಗಲಿ! ‘ಕನ್ನಡ ಗೆಳೆಯ’ನ “ವಿಧಿಯ ಬಲೆ!” ಇದು ನನ್ನ ಅಣ್ಣನ ಕತೆಯೇ ಆಗಿರಬೇಕು! ಹಾಗಿದ್ದು ಇದರಲ್ಲಿ ಸುಂದರಿಯೇ ಪಾತ್ರವಹಿಸಿರುವುದೆಂದರೆ–ಏನು ಸೋಜಿಗವಾದ ಯೋಗಾಯೋಗವೋ ಪರಮಾತ್ಮ! ಏನೇ ಇರಲಿ! ಶೀನಣ್ಣನು ಈ ಊರಿನಲ್ಲಿದ್ದರೆ “ವಿಧಿಯ ಬಲೆ” ಅವನ ಕತೆಯೇ ಆದರೆ, ನಾಡದು ‘ವೈರ್ಯಾಟೀ ಹಾಲಿ’ಗೆ ಆ ಫಿಲಿಂಮನ್ನು ನೋಡಲಿಕ್ಕೆ ಅವನು ಖಂಡಿತವಾಗಿಯೂ ಬಂದಾನು. ಹೊಸಪೇಟೆಯಿಂದಲಾದರೂ ಬಂದಾನು. ಅದುತನಕ ಈ ಊರಿನಲ್ಲಿಯೇ ಕಾದಿರುವೆನು.

---

## ೨೭. ಸುಂದರಿಯ ಭೇಟಿ

ಹಿಂದೆ ಹೇಳಿದಂತೆ ಬೆಂಗಳೂರಿನಲ್ಲಿ–ರಾತ್ರಿಯಲ್ಲಿ–ಸಿನಿಮಾ ಥಿಯೇಟರಿನ ಇದಿರಿನಲ್ಲಿ “ಅಶೋಕವನ” ಎಂಬ ಫಿಲಿಂನ ಪ್ರಸಿದ್ಧಿ ಚಿತ್ರವನ್ನು ನೋಡುತ್ತಿರುವಾಗ, “ಕಾರುಣ್ಯ ಮೂರ್ತಿ”ಯ ಮೂಲಪ್ರತಿಯನ್ನು ಕಳೆದುಕೊಂಡು ಮಿಡುಕಾಡಿ, ಕಡೆಗೆ ಮರುದಿನ “ಅಶೋಕವನ” ಚಿತ್ರವನ್ನೆ ನೋಡಿ, ಅವನ ಅತ್ತಿಗೆಯಾದ ಸುಂದರಿಯ ಅತ್ಯದ್ಭುತವಾದ ಅಭಿನಯ ಕೌಶಲವನ್ನು ನೋಡಿ–ನಮ್ಮ ಕೃಷ್ಣನು ಬೆರಗಾಗಿ ಹೋದನು.

‘ಅಶೋಕವನ’ವು ಆಧುನಿಕ ರೀತಿಯಲ್ಲಿ ಬರೆದ ಪೌರಾಣಿಕ ಕತೆ ಸೀತಾದೇವಿಯ ಕಾವಲುಗಾರ ರಕ್ಕಸಿಯರೊಳಗೆ, ತ್ರಿಜಟೆಯ ಪಾತ್ರವು ಸುಂದರಿಯಾಗಿದ್ದಳು. ಅದರಲ್ಲಿ ತ್ರಿಜಟೆಗೊಬ್ಬ ಪ್ರಿಯನೂ ಕಲ್ಪಿಸಲ್ಪಟ್ಟಿದ್ದನು. ಅವನೊಡನೆ ತ್ರಿಜಟೆಯ ಪ್ರೇಮ ನರ್ತನ ಸಲ್ಲಾಪ ಮುಂತಾದುವು ಕಥೆಯೊಂದಿಗೆ ಹೊಂದಿಕೊಂಡು ಹೋಗಿದ್ದುವು. ತ್ರಿಜಟೆಯ ಪಾತ್ರವು ನೋಟಕರ ಮನಸ್ಸಿನಲ್ಲಿ ಮೂಡಿಹೋಗುವಂತೆ, ಮೂಡಿ ಹೋದರೂ ಇನ್ನೂ ಇನ್ನೂ ನೋಡಬೇಕೆಂಬ ಲವಲವಿಕೆಯನ್ನು ಹುಟ್ಟಿಸುವಂತೆ ಇತ್ತು. ಇಂತಹ ನಿಸರ್ಗ ಸೌಂದರ್ಯದ ಖನಿಯನು ಎಲ್ಲಿಂದ

ಹಿಡಿದರಪ್ಪಾ–ಈ ಫಿಲಿಂ ಕಂಪೆನಿಯವರು?—ಎಂದು ನೋಡಿದವರು ಮೂಗಿನ ಮೇಲೆ ಬೆರಳಾಡಿಸುವ ಹಾಗಿತ್ತು. ಅವಳ ವಿಲಕ್ಷಣ ರೂಪಕ್ಕೆ ಒಪ್ಪುವಂತಹ ವಿಚಿತ್ರ ನರ್ತನವನ್ನು ಕಂಡು, ಅವಳ ನಾಟ್ಯ ಶಿಕ್ಷಕನು ಧನ್ಯಧನ್ಯನೆಂದು ಎಲ್ಲರೂ ಏಕಕಂಠವಾಗಿ ಹೊಗಳುವ ಹಾಗಿತ್ತು. ಈ "ಅಶೋಕವನ" ದ ನಿರೀಕ್ಷಣೆಯಿಂದ ಸುಂದರಿ "ಪ್ರಕೃತಿ ಕಳೋದ್ಧಾರಕ ಮಂಡಲಿ'' ಯ ಕಡೆಯಲ್ಲಿರಬೇಕೆಂದು ಕೃಷ್ಣನು ಊಹಿಸಿದನು. ರಾಮಾ ಜೋಯಿಸರ ಹೇಳಿಕೆಯ ಪ್ರಕಾರವಾದರೆ, ಸುಂದರಿಯೊಂದಿಗೆ ಶೀನಣ್ಣನೂ ಇರಬೇಕಲ್ಲವೆ? ಶೀನಣ್ಣ ಕೂಡಾ ಕತೆಗಾರನೂ ಕಲಾವಿದನೂ ಆದುದರಿಂದ, ಸಿನಿಮಾ ಕಳಾಮಂದಿರದಲ್ಲಿ ಅವನೂ ಸೇರಿರಬಹುದೆಂದು ಊಹಿಸಲು ಎಡೆಯಿತ್ತು. ಏನೇ ಇರಲಿ. ಆ ಗಂಡ-ಹೆಂಡಿರು ಆ ಸಿನಿಮಾ ಮಂಡಲಿಯಲ್ಲಿ ಅಡಗಿರುವರೇನೋ ನೋಡಬೇಕೆಂದುಕೊಂಡು, "ಪ್ರಕೃತಿ ಕಳೋದ್ಧಾರಕ ಮಂಡಲಿ" ಮದರಾಸಿನಲ್ಲಿದೆಯೆಂದು ತಿಳಿದು ಆ ಭ್ರಾತೃಭಕ್ತನಾದ ಕೃಷ್ಣನು ಮದರಾಸಿಗೆ ಹೊರಟನು.

ಮದರಾಸನ್ನು ಸೇರಿ ಆ ದೊಡ್ಡ ರಾಜನಗರದಲ್ಲಿ ಅಲ್ಲಿ ಇಲ್ಲಿ ಸುತ್ತಾಡಿ, ಆ ಮಂಡಲಿಯ ಬೀದಿ ನಂಬರುಗಳ ಪತ್ತೆಯನ್ನು ವಿಚಾರಿಸಿಕೊಂಡು, ಅದನ್ನು ಕಂಡುಹಿಡಿದು ತಲುಪಿ, ಅಲ್ಲಿ ಸಿಕ್ಕಿದ ಒಬ್ಬನೊಡನೆ "ಇಲ್ಲಿ ಕೆ. ಶ್ರೀನಿವಾಸರಾವ್ ಎಂಬವರು ಯಾರಾದರೂ ಇದ್ದಾರೊ?" ಎಂದು ವಿಚಾರಿಸಿದನು. ಮಲಿನವಾದ ವೇಷ ಭೂಷಣಗಳಿಂದೊಪ್ಪುವ ಕೃಷ್ಣನ ಹಳ್ಳೀಕಡೆಯ ರೀತಿ–ನೀತಿ–ಹಾವ–ಭಾವಗಳನ್ನು ನೋಡಿ, ಆ ಪಟ್ಟಣದ ಪೋಕರಿಗಳಲ್ಲಿ ಒಬ್ಬನಾನ ಆ ತುಂಟನು "ನನಗೆ ಗೊತ್ತಿಲ್ಲ. ಅವರನ್ನೆ ಕೇಳು" ಎಂದು ಅತ್ತ ನಿಂತಿದ್ದ ಇನ್ನೊಬ್ಬನನ್ನು ತೋರಿಸಿದನು; ಆ ಇನ್ನೊಬ್ಬನು ಮತ್ತೊಬ್ಬ ಕುರ್ಚೀಮೇಜಿನ ಮಧ್ಯಸ್ಥಗಾರನ ಕಡೆಗೆ ಕಳುಹಿಸಿದನು. ಆ ಮತ್ತೊಬ್ಬನು ಬೇರೊಬ್ಬ ಗುಮಾಸ್ತನನ್ನು ತೋರಿಸಿ ಸುಮ್ಮನಾದನು. ಈ ಬೇರೊಬ್ಬನು—"ನಿನ್ನದು ಯಾವ ಊರು? ಏಕೆ? ಏನು? ನಮಗೆ ಗೊತ್ತಿಲ್ಲ. ಬೇರೆ ಡಿಪಾರ್ಟುಮೆಂಟು ವಿಚಾರಿಸು'' ಎಂದು ತಮಿಳಿನಲ್ಲಿ ಅಡ್ಡಾದಿಡ್ಡಿ ಹೇಳಿ ಕಳುಹಿಸಿಬಿಟ್ಟನು. ಕೃಷ್ಣನು ಅಲ್ಲಿಂದ ಇನ್ನೊಂದು ವರಾರದ ಕಂಪಾವುಂಡಿನೊಳಗೆ ಹುಸುಳಿ, ಅಲ್ಲಿದ್ದ

ಬಿಡಿಬತ್ತಲೆ-ಅರೆಬತ್ತಲೆ ಹೆಂಗುಸರಿಂದ ಛೀಮಾರಿ ಹಾಕಿಸಿಕೊಂಡು, ಅಲ್ಲಿ ಮೊರೆಯುತ್ತಿದ್ದ ನಾಟ್ಯಶಾಲೆಯ ಕಡೆಗೆ ಕಣ್ಣು ಹಾಯಿಸಿ, ಅಲ್ಲಿಯ ಮೇಳಪರಂಪರೆ-ನರ್ತನ ಪರಂಪರೆಗಳ ಭಾಸವಾಗಿ ಬೆರಗುವಡೆದು ಅಲ್ಲಿಯ ಘೂರ್ಕಾಜವಾನರಿಂದ ಹೊರಗೆ ಅಟ್ಟಿಸಲ್ಪಟ್ಟು, ಹೀಗೆಲ್ಲಾ ಎಡ ತಿರುಗಿ ತಗಲಿಸಿಕೊಂಡು, ಕಟ್ಟಕಡೆಗೆ ಅಲ್ಲಿಯ ಮುಖ್ಯ ಮ್ಯಾನೇಜರನ ದರ್ಶನವನ್ನು ಮಾಡಲ್ಪಟ್ಟನು. ಅವನು ಸರಿಯಾಗಿ ವಿಚಾರಿಸಿ ಕೃಷ್ಣ ನನ್ನು ಕರೆದುಕೊಂಡು ಹೋಗಿ, ಅಲ್ಲಿಯ ಸರ್ವಾಧಿಕಾರಿ ಮುಖರ್ಜಿ ಮಹಾಶಯನ ಭೇಟಿ ಮಾಡಿಸಿದನು.

ಕೃಷ್ಣನು ಮುಖರ್ಜಿಯನ್ನು ಕುರಿತು—"ತಮ್ಮ ಫಿಲಿಂ ಕಂಪೆನಿ ಯಲ್ಲಿ ಕೆ. ಶ್ರೀನಿವಾಸರಾವ್ ಎಂಬವರು ಇದ್ದಾರೆಯೆ?" ಎಂದು ಕೇಳಲು,

ಮುಖರ್ಜಿ:— ಇಲ್ಲ. ಅಂತಹರಾರೂ ಇಲ್ಲವಲ್ಲ?

ಕೃಷ್ಣ:— ತಮ್ಮ "ಅಶೋಕವನ'' ದಲ್ಲಿ ನಟಿಸಿದ ಸುಂದರೀ ಬಾಯಿ ಈಗೆಲ್ಲಿದ್ದಾಳೆ? ಗೊತ್ತಿದೆಯೆ?

ಮುಖರ್ಜಿ:— ಗೊತ್ತಿದೆ. ಅವರು ನಿಮಗೆ ಏನಾಗಬೇಕು?

ಕೃಷ್ಣ:— ಆದೇನೂ ಆಗಬೇಡ—

ಮುಖರ್ಜಿ:— ಮತ್ತೇಕೆ?

ಕೃಷ್ಣ;— ಕೆ. ಶ್ರೀನಿವಾಸರಾವ್ ಎಂಬವರ ವಿಚಾರ ಅವಳಿಗೆ ಗೊತ್ತಿರುವ ಸಂಭವವುಂಟು. ಅದಕ್ಕೆ.

ಮುಖರ್ಜಿ:— ಕೆ. ಶ್ರೀನಿವಾಸರಾವು ಅವರಿಗೇನಾದರೂ ಆಗ ಬೇಕೆ?

ಕೃಷ್ಣ:— ಆದೇನೂ ಇಲ್ಲ.

ಮುಖರ್ಜಿ:— ನಿಮಗೆ?

ಕೃಷ್ಣ:— ಅವನು ನನ್ನ ಬಂಧು.

ಮುಖರ್ಜಿ:-ಸುಂದರೀಬಾಯಿಯವರು, ಅವರ ಸ್ವೇಚ್ಛೆಯಿಂದಲೇ ನಮ್ಮ ಮಂಡಲಿಯನ್ನು ಸೇರಿ, ಒಳ್ಳೆಯ ಹೆಸರು ಗಳಿಸಿಕೊಂಡಿರುತ್ತಾರೆ.

ಕೃಷ್ಣ:— ಹೌದು, ಗೊತ್ತಿದೆ.

ಮುಖರ್ಜಿ:—ಅವರು ನಮ್ಮ ಮಂಡಲಿಯ ಸದಸ್ಯರೇ ಆಗಿದ್ದರೂ, ಈ ಮಂಡಲಿಯ ನಿರ್ಬಂಧದೊಳಗಿಲ್ಲ. ಸ್ವತಂತ್ರರಾಗಿ ಬೇರೆ ಕಡೆಯಲ್ಲಿ ಬೀಡಾರ ಮಾಡಿಕೊಂಡು ವಾಸವಾಗಿದ್ದಾರೆ.

ಮುಖರ್ಜಿ ಯಾವುದೋ ಒಂದು ಇಷ್ಟುದಪ್ಪದ ಪುಸ್ತಕವನ್ನು ಬಿಡಿಸಿ, ಸುಂದರಿಯ ವಿಳಾಸವನ್ನು ಬರೆದು ಕೃಷ್ಣನಿಗೆ ಕೊಟ್ಟನು.

ಅದರ ಸಹಾಯದಿಂದ ಕೃಷ್ಣನು ಸುಂದರಿಯ ವಾಸಸ್ಥಳವನ್ನು ಕಂಡುಹಿಡಿದು, ಬಾಗಿಲನ್ನು ತಟ್ಟಿದನು. ಬಾಗಿಲು ತೆರೆಯಲ್ಪಟ್ಟು ಹುಡುಗನೊಬ್ಬನು ಕಾಣಿಸಿ "ಏನು?" ಎಂದು ಪ್ರಶ್ನಿಸಿದನು.

"ಸುಂದರಿಬಾಯಿಯವರು ಇದ್ದಾರೆಯೇ?" ಕೃಷ್ಣನ ಮರುಪ್ರಶ್ನೆ.

"ಇಲ್ಲ, ಅವರೊಂದು ನಾಟ್ಯಕಛೇರಿಗಾಗಿ ವೇಲೂರಿಗೆ ಹೋಗಿದ್ದಾರೆ."

"ಯಾವಾಗ ಬಂದಾರು?"

"ನಾಳೆ ಸಂಜೆಯೊಳಗೆ ಬರುತ್ತಾರೆ"

"ನೀನು ಅವರಿಗೆ ಏನಾಗಬೇಕು?"

"ನಾನು ಅವರ ಸಂಬಂಧದ ಆಳು."

"ಓಹೊ! ಇಷ್ಟು ಉಚ್ಚಾವಸ್ಥೆಗೆ ಏರಿದ್ದಾಳೆಯೆ? ಅವಳ ಅದೃಷ್ಟವೇ ಸರಿ!" ಎಂದು ತನ್ನೊಳಗೆ ತಾನೇ ಹೇಳಿಕೊಂಡು, ಅವಳು ಹಿಂದಿರುಗಿ ಬರುವ ವರೆಗೆ ಕೃಷ್ಣನು, ಅಲ್ಲೊಂದು ಸಮೀಪದ ಹೋಟೆಲ್ಲಿನಲ್ಲಿ ತಳವೂರಿಕೊಂಡ.

ಮರುದಿನ ಸಾಯಂಕಾಲ ಸುಂದರೀಬಾಯಿಯ ಬಿಡದಿಗೆ ಬಂದು ಬಾಗಿಲು ತಟ್ಟಲು, ಅದೇ ಹುಡುಗಾಳು ಬಾಗಿಲು ತೆರೆದು—"ಅಮ್ಮನವರು ಇದ್ದಾರೆ. ಬನ್ನಿ. ಇಲ್ಲಿ ಕೂಡಿ."—ಎಂದು ಹಾಲಿನಂತಹ ಒಂದು ಸಣ್ಣ ಕೋಣೆಯೊಳಗೆ, ಕುರ್ಚಿಯ ಕಡೆಗೆ ಕೈ ತೋರಿಸಿದನು ಕೃಷ್ಣನು ಅದರಲ್ಲಿ ಅಮ್ಮನವರ ಸವಾರಿಯನ್ನು ನಿರೀಕ್ಷಣೆ ಮಾಡುತ್ತ ಕುಳಿತನು.

ಆ ಹುಡುಗಾಳು ಅಮ್ಮನವರ ಕರೆಯಿಂದ ಬಾಣದ ಹಾಗೆ ಒಳಕ್ಕೆ ಓಡಿದನು. ಒಳಗಣಿಂದ ಆ ಅಮ್ಮನವರ ಅಧಿಕಾರ ವಾಣಿಯ ಕೆಲವು

ಶಬ್ದಗಳು ಹಾರಿ ಹಾರಿ ಬಂದು ಕೃಷ್ಣನ ಕಿವಿಗೆ ನುಸುಳಿದುವು:— "ಲೋ! ಆ ಜಾರ್ಜೆಟ್ ಶೀರೆ ಇಲ್ಲಿ ತಾರೊ!" "ಆ ಕುಟಿಕುರಾ ಪೌಡರ್ ಡಬ್ಬಾ ತೆಗಿ, ಇದು ಬೇಡ" "ಯಾರು ಬಂದದ್ದು? ಆ ಉಪ್ಪರಿಗೇ ಅಯ್ಯ ವರದನ್ನೊ?" "ಬೇಗ ಒಂದು ಕಪ್ ಟೀ ತೆಗೆದುಕೊಂಡು ಬಾ." "ಎರಡು ಸ್ಲೈಸ್ ಬ್ರೆಡ್ ಟೋಸ್ಟ್ ಕೂಡಾ ತಂದಿಡು" "—" ಇತ್ಯಾದಿ. ಅದೇ ಕೃಷ್ಣನ ಅತ್ತಿಗೆ ಸುಂದರಿಯ ಕಂಠಸ್ವರದ ಗುರುತೇ. ಆ ಮಹಾರಾಯತಿ ಬೇಗನೆ ಹೊರಗೆ ಬರುವ ಲಕ್ಷಣವು ಕಾಣಿಸಲಿಲ್ಲ. ಕೃಷ್ಣನು ಹಾಗೆಯೆ ಕುಳಿತು, ಆ ಕೊಠಡಿಯ ಸೌಂದರ್ಯವನ್ನು ನಿರೀಕ್ಷಣೆ ಮಾಡುತಿದ್ದನು.

ಬಹಳ ಅಚ್ಚುಕಟ್ಟಾದ ಕೊಠಡಿ. ಉಡುಗಿ ಶುಭ್ರವಾಗಿ ಇಟ್ಟಿಗೆಯ ನೆಲ. ನಡುವಿನಲ್ಲಿ ಒಂದು ರವುಂಡು ಟೇಬಲ್ಲು. ಅದರ ಮೇಲೆ ಹೂಬಳ್ಳಿಗಳ ಕೈಕೆಲಸ ಮಾಡಿದ ಟೇಬಲ್ ಕ್ಲಾತ್. ನಡುವೇ ಒಂದು ಫ್ಲಾವರ್‌ಪಾಟ್, ಆ ಮೇಜಿನ ನಾಲ್ಕು ಬದಿಗಳಿಗೆ ನಾಲ್ಕು ಕುರ್ಚಿಗಳು ಇಡಲ್ಪಟ್ಟಿವೆ. ಕೋಣೆಯ ಮೂಲೆಗಳಲ್ಲಿ ಇದಿರು ಬದಿರಾಗಿ, ಕೈಗೆಲಸದ ಬಟ್ಟೆಯಿಂದ ಅಲಂಕೃತವಾದ, ಉದ್ದವಾದ ಮುಗ್ಗಾಲಸ್ಟೂಲಿನ ಮೇಲೆ, ನಡುವೆ ಇಟ್ಟಿದ್ದ ಹುವ್ವಿನ ಬುಕ್ಕೆಯ ಪಾರ್ಶ್ವದಲ್ಲಿ, ಒಂದರಲ್ಲಿ ಚಿಕ್ಕ ಪರಿಮಾಣದ–ನಗ್ನಪುರುಷ ವಿಗ್ರಹ, ಇನ್ನೊಂದರಲ್ಲಿ ಅದರಂತೆಯೇ ಸ್ತ್ರೀ ಮೂರ್ತಿ. ಇನ್ನೊಂದು ಮೂಲೆಯಲ್ಲಿ ವಿವಿಧವಾದ ಲೇಡಿಸ್‌ಶೂಗಳೂ, ಸ್ಲಿಪ್ಪರ್ಸ್‌ಗಳೂ ಇದ್ದುವು. ಗೋಡೆಯಲ್ಲಿ ಕ್ಲಾಕ್ ಸ್ಟಾಂಡಿನಲ್ಲೊಂದು ಟೈಂಪೀಸ್ ಗಡಿಯಾರವೂ–ಅದರ ಅಕ್ಕಪಕ್ಕಗಳಲ್ಲಿ ಓರಣಿಸಿಕೊಂಡು ಕೆಲವು ಬೀಭತ್ಸರೀತಿಯ ಚಿತ್ರಗಳೂ ಇದ್ದುವು. ಅವುಗಳ ಮಧ್ಯೆಮಧ್ಯೆ ನಾಲ್ಕು ನಮೂನೆಗಳ ನಾಟ್ಯಭಂಗಿಯಲ್ಲಿ ನಿಂತಿರುವ ಶ್ರೀಮತಿ ಸುಂದರೀ ಬಾಯಿಯ ಅದ್ಭುತರಮ್ಯವಾದ ವರ್ಣಚಿತ್ರಗಳು ಕಣ್ಣುಗಳನ್ನು ಸೆಳೆಯುತಿದ್ದುವು. ಕೌತುಕಾಹಾಸ್ಯಗಳಿಂದ ಕೃಷ್ಣನು ಅವುಗಳನ್ನು ನೋಡಿದನು. ಗಡಿಯಾರವು ತನ್ನೊಳಗೆ ತಾನೇ ನಿರಂತರ ಟಿಕಟಿಕವೆನ್ನುತ್ತ ಆರು ಗಂಟೆಯನ್ನು ತೋರಿಸಿಕೊಂಡಿತ್ತು. ಬಾಗಿಲಿಗೆ ಇಳಿಯಬಿಟ್ಟಿದ್ದ ಮಣಿಕೆಲಸವನ್ನೆ ಮಾಡಿದ ಚಿತ್ರವಿಚಿತ್ರವಾದ ತೆಳುವಾದ ಪರದೆಯ ಹಿಂದಿನಿಂದ

ಯಾರೋ ಬರುತಿರುವ ಶೀರೆಯ ಸಳಸಳಿಸುವ ಸದ್ದು ಕೃಷ್ಣನನ್ನು ಜಾಗ್ರತೆಗೊಳಿಸಿತು. ಕೂಡಲೇ ಆ ಪರದೆಯನ್ನು ಸರಿಸಿಕೊಂಡು, ಸುಂದರೀಬಾಯಿಯ ಉಜ್ವಲ ಮೂರ್ತಿ, ಕೃಷ್ಣನ ಇದಿರಿಗೆ ಪ್ರತ್ಯಕ್ಷವಾಗಿ- ''ಯಾರು? ಅರೆರೆರೆ! ಕೃಷ್ಣ! ಓಹೊ! ಏನು?'' ಎಂದು ಕೇಳುತ್ತ- ಆಶ್ಚರ್ಯ ಮುದ್ರೆಯಿಂದ, ದಪ್ಪದೊಂದು ಕುರ್ಚಿಯಲ್ಲಿ ದೊಪ್ಪನೆ ಕುಳಿತಿತು!

ಪಾರ್ಸೀ ಹೆಂಗುಸರ ಮಾದರಿಯಲ್ಲಿ ಎಡಬದಿಗೆ ಸೆರಗು ಹಾಕಿ ಕೊಂಡು ಉಟ್ಟಿದ್ದಾಳೆ-ಮಿರುಗುತಿರುವ ಜಾರ್ಜೆಟ್ ಸೀರೆ, ಹಣೆಯ ಮೇಲಿ ರುವ ಗುಳ್ಳೆಗೆ ನೇರಾಗಿ ವಾರೆ ಬೈತಲೆ ತೆಗೆದುಕೊಂಡು, ಹಿಂದಿನಿಂದ ಸೂಡಿ ಹಾಕಿಕೊಂಡಿದ್ದಾಳೆ. ಆ ಸೂಡಿಯ ಮೇಲೆ ಸಿಕ್ಕಿಕೊಂಡ ಹಿಂಜೆ ರಗು ಹಾಗೆಯೇ ಒಂದು ತೆರೆಯ ಹಾಗೆ ಹಿಂಗಾಲ ಮಣಿಗಂಟಿನವರೆಗೆ ಇಳಿಬಿದ್ದಿದೆ. ಹಣೆಯ ಗುಳ್ಳೆಗೊಂದು ತೂತುಮಾಡಲ್ಪಟ್ಟು, ಆ ತೂತಿ ನಲ್ಲಿ ಲೋಲಕಿನಂತಹ ಆಭರಣವೊಂದು ಸೇರಿಕೊಂಡು, ಎಡಹುಬ್ಬಿನ ಮೇಲೆ ಲಕಲಕಿಸುತ್ತಿತ್ತು. ಸಣ್ಣಾದ ಹಣೆಯಲ್ಲೊಂದು ಸಾಸಿವೆಯಂತಹ ಕುಂಕುಮ ಬೊಟ್ಟು. ಹುಬ್ಬುಗಳ ಕೈಗೆಲಸ ಮಾಡಿದಂತೆ ಬಿಲ್ಲಾಕಾರ ದಿಂದ ರಂಜಿಸುತಿದ್ದುವು. ಗುಡ್ಡಗಳ ತಪ್ಪಲುಗಳಲ್ಲಿ ಬೆಳಗುವ ಮಿಂಚು ಗಳಂತೆ, ಸಣ್ಣ ಕಿವಿಗಳ ಕೊನೆಗಳಿಂದ ಇಳಿದು, ದೊಡ್ಡ ಗಲ್ಲಗಳ ಮೇಲೆ ಸವರಿಕೊಂಡು, ನೇತಾಡಿ ತೊಳಗುತಿದ್ದುವು ಲೋಲಕುಗಳು! ಓರೆ ಯಾಗಿರುವ ಸಣ್ಣ ಬಾಯಿಯ ತುಟಿಗಳ ಒಳಯುರೆಗಳು ನಸುಕೆಂಬಣ್ಣ ದಿಂದ ರಂಗುಪೂಸಿದಂತೆ ರಾಜಿಸುತಿದ್ದುವು. ಗಿಡ್ಡ ದಪ್ಪದ ಕುತ್ತಿಗೆಯಲ್ಲಿ ಮಿರುಗಾಡುತ್ತಿತ್ತೊಂದು ಬಂಗಾರದ ಚೈನು. ಕೈಯೆತ್ತಿದರೆ ಕಂಕುಳು ಕಾಣುವಂತಹ, ಬಂಗಾರದ ಚುಕ್ಕಿಗಳಿಂದ ಮಿರುಗುವ ರೋಜಾರಂಗಿನ, ಎದೆತೆರೆದ ರವಕೆ. ಆ ರವಕೆಯ ಒಳಗಡೆಯಲ್ಲಿ ಘನಸ್ತನಗಳನ್ನು ಬಿಗಿ ದೆತ್ತಿ ಹಿಡಿದಿದ್ದ ಬಾಡೀ, ತನ್ನ ಇರುವಿಕೆಯನ್ನೂ ಸೂಚಿಸುತಿತ್ತು. ಸೆರ ಗಿನ ಮಧ್ಯದಲ್ಲಿ ಬ್ರೂಚನ್ನು ಸುರುಗಿದ್ದಾಳೆ. ತಲೆಯಲ್ಲಿ ಹುವ್ವಿನ ಕ್ಲಿಪ್ಪು. ಕಾಲಲ್ಲೊಂದು ಸಾದಾ ಶೂ. ಕೈಗಳಲ್ಲೊಂದೊಂದು ರೇಡಿಯೋ ಬಳೆ! ಪೌಡರುರಂಜಿತ ವದನಕೂಷ್ಮಾಂಡವು ನಸೆನಸೆಯಾಗಿ ಹೊಳೆಯು

ತ್ತಿತ್ತು! ಉಳಿದೆಲ್ಲಾ ವಿಧದಲ್ಲಿ ನಾವು ಹಿಂದೆ ನೋಡಿದ ಸುಂದರಿಯೇ! ಆದರೆ ದೇಹದಲ್ಲಿ ಇನ್ನಿಷ್ಟು ಸ್ಥೂಲಕಾಯಳೂ–ತುಂಬಿದವಳೂ–ಗಟ್ಟಿ ಮುಟ್ಟಿನವಳೂ ಆಗಿ ಬಳೆದಿದ್ದಾಳೆ; ಅಷ್ಟೆ.

ಅವಳು ಅಲ್ಲಿ ಬಂದು ಕುಳಿತುಕೊಳ್ಳುತ್ತಲೇ, ಅವಳ ಮುಖ ದಿಂದಲೂ, ತಲೆಯಿಂದಲೂ, ಕಂಕುಳುಗಳಿಂದಲೂ, ಸೀರೆಯಿಂದಲೂ, ಸೆಂಟು–ಪೌಡರು–ಪೊಮ್ಯಾಡ್–ವ್ಯಾಸ್ಲೇನುಗಳ ಘಮಘಮಾಯಿಕೆಗಳು ಒಂದಾಗಿ ಸೇರಿ ಕೃಷ್ಣನ ಮೂಗನ್ನಡರಿದುವು. ಒಂದು–ಒಂದೂ ಕಾಲು ವರ್ಷಕ್ಕೆ ಮೊದಲು, ಅನಾಗರಿಕ ಆಚಾರ ವಿಚಾರದವಳಾಗಿದ್ದ, ಹಳ್ಳಿಯ ಕೊಳಕು ಹೆಂಗುಸು–ಆ ಸುಂದರಿ, ಇಷ್ಟು ಬೇಗನೇ ಇಷ್ಟು ದೊಡ್ಡ ನಾಗರಿಕಳಾಗಿ ಮೆರೆಯುವುದನ್ನು ಪ್ರತ್ಯಕ್ಷ ನೋಡಿ, ಕೃಷ್ಣನಿಗಾದ ಆಶ್ಚರ್ಯವನ್ನು ಎಷ್ಟೆಂದು ಹೇಳೋಣ? ಆ ಆಶ್ಚರ್ಯದಿಂದಲೂ, ಅವಳ ಕೊಳಿಕೆಯಲ್ಲಿ ಧ್ವನಿತವಾದ ಝೇಂಕಾರದಿಂದಲೂ ಕೃಷ್ಣನು ಒಂದುನಿಮಿಷ ಪಿಳಿಪಿಳಿ ಅವಳನ್ನೆ ನೋಡಿ—"ಹಃ! ನಾನು! ಕೃಷ್ಣ! ಅಹ! ನೀನು! ಇಲ್ಲಿಗೆ ಹ್ಯಾಗೆ ಬಂದಿಯಮ್ಮ?" ಎಂದು ಬಾಯಿಬಿಟ್ಟನು.

ಸುಂದರಿ ಕುತ್ತಿಗೆಯನ್ನು ಕೊಂಕಿಸುತ್ತ—"ಓಹೊ! ಇದನ್ನು ವಿಚಾರಿಸಲಿಕ್ಕಾಗಿ ಇಷ್ಟು ದೂರ ಬಂದಿಯೇನು? ಬಹಳ ಥ್ಯಾಂಕ್ಸ್! ನಾನು ಹ್ಯಾಗೆ ಬಂದರೆ ನಿನಗೇನು? ನೀನಂತೂ ನನ್ನನ್ನು ಮನೆಯಿಂದ ಹೊರಡಿಸಿಬಿಟ್ಟೇ! ಈಗ ಇಲ್ಲಿಂದಲೂ ನನ್ನನ್ನು ಹೊರಡಿಸುವ ಉದ್ದೇಶ ವಿದೆಯೇನು?" ಎಂದು ವ್ಯಂಗ್ಯವಾಗಿ ಅಂದಳು.

ಕೃಷ್ಣನು ಸಮಾಧಾನದಿಂದ—"ಹೀಗೆಲ್ಲಾ ಕೆಣಕಿ ಮಾತಾಡುವು ದೇಕಮ್ಮ? ನೀನು ಎಲ್ಲಿಯಾದರೂ ಸುಖವಾಗಿದ್ದರ ತೀರಿತು!"

"ಓಹೊಹೊಹೊ! ಇಷ್ಟು ಒಳ್ಳೇ ಅಭಿಪ್ರಾಯದವನಾದ ನೀನು, ನನ್ನನ್ನು ಅಷ್ಟು ಕಠಿನವಾಗಿ ಹೊರಡಿಸಿಬಿಟ್ಟೆಯಲ್ಲಾ? ನೆನಪಿದೆಯೆ?"

"ಅದು ಹೋಗಲಿ, ತಾಯೇ! ಈಗೇಕೆ? ನೀನು ಈ ಸ್ಥಳಕ್ಕೆ ಹೇಗೆ ಬಂದೀ ಅಂತ ಕೇಳಿಕೊಂಡು ಹೋಗುವಾಂತ ನಾನು ಬಂದೆ.''

"ಏಕೋ ಪಾಪ?"

"ಮತ್ತೇಕಿಲ್ಲ. ಶೀನಣ್ಣ ನಿನ್ನ ಜತೇಲಿ ಇದ್ದಾನೆಂತ ಕೇಳಿ—"

"ಏನೇನು?" ಸುಂದರಿ ನಡುವೇ ಬಾಯಿ ತೂರಿದಳು. "ನಿನ್ನ ಅಣ್ಣ! ನನ್ನ ಜತೇಲಿ? ಹೇಗೆ? ನಾನು ಇರುವಾಗಲೇ ಅವನು ಓಡಿ ಹೋದನಲ್ಲಾ?"

"ಹೌದು, ಆ ಮೇಲೆ ರಾಮಾ ಜೋಯಿಸರು ನಿನ್ನನ್ನು ಕರ ಕೊಂಡು ಹೋಗಿ ಶೀನಣ್ಣನ ಜತೆಯಲ್ಲಿ ಬಿಟ್ಟರಂತಲ್ಲಾ?"

"ಯಾರು ಹೇಳಿದರು?"

"ರಾಮಾ ಜೋಯಿಸರೇ ನನಗೆ ಹೇಳಿದರು!"

"ಅಹ್ಹಹ್ಹ!—" ಎಂದು ಸುಂದರಿ ಮಾಡುಸಿಡಿದು ಹೋಗುವ ಹಾಗೆ ನಕ್ಕು—"ಓ! ಆ ಕಳ್ಳ ರಾಮಾ ಜೋಯಿಸ ಆಣಿಜಡಿದು ಕಳು ಹಿಸಿದನೇ ನಿನ್ನನ್ನು? ಪಕ್ಕಾ ಆಸಾಮಿ ಅವನು! ಅಂತವನ ಮಾತನ್ನು ನಂಬಿದಿಯಲ್ಲಾ ನೀನು?"

"ಕಳ್ಳರೆ! ಹಾಗೇನು ಮಾಡಿದರು?"

"ನನ್ನ ನಗವನ್ನೆಲ್ಲಾ ಕದಿಯುವ ಪ್ರಯತ್ನ ಮಾಡಿದ! ಪ್ರಯತ್ನ ಮಾತ್ರವಲ್ಲ—ಕದ್ದೆಬಿಟ್ಟ! ಆದರೆ ಉಪಾಯದಿಂದ ನಾನೇ ಆವನ ಕೈಯಿಂದ ಅದನ್ನು ಪೀಕಿಕೊಂಡು, ಹೋಗಲಿ ಪಾಪ ಬ್ರಾಹ್ಮಣಾಂತ ಅವನನ್ನು ಪೋಲೀಸರ ಕೈಗೆ ಒಪ್ಪಿಸದೆ ಬಿಟ್ಟಿದ್ದೇನೆ–ಅವನಿಂದಾಗಿಯೇ ನಾನು ಈ ಕಂಪೆನಿಗೆ ಬಂದು ಸೇರಿದೆನಲ್ಲಾಂತ ಕೂಡಾ ಯೋಚನೆ ಮಾಡಿ."

"ಓಹೊ! ಹೀಗೋ ಸಂಗತಿ? ಹಾಗಾದರೆ ಶೀನಣ್ಣನ ವಿಚಾರ ಯಾವುದೂ ನಿನಗೆ ಗೊತ್ತೇ ಇಲ್ಲಾಂತ ಆಯಿತು?"

"ಗೊತ್ತೇ ಇಲ್ಲಪ್ಪ! ಅವನಿಗೆ ನಾನು ತಕ್ಕ ಹೆಂಡತಿ ಅಲ್ಲಾಂತ ರೋಸಿಕೆಯಿಂದಲೇ ಅವನು ಓಡಿಹೋದದ್ದೂಂತ ನನಗೆ ಗೊತ್ತುಂಟು. ಹಾಗೆ ಹೋದವನು ಮತ್ತೆ ನನ್ನ ಬಳಿಗೆ ಯಾಕೆ ಬಂದಾನು?—" ಸುಂದರಿ ಊರ್ಧ್ವವದನಳಾಗಿ ಏನೋ ಆಲೋಚನೆ ಮಾಡಲಾರಂಭಿಸಿ ದಳು.

ಕೃಷ್ಣನು ಕುರ್ಚಿಯಿಂದ ಏಳುತ್ತ—"ಸರಿ. ಹಾಗಾದರೆ ನಾನು ಹೋಗುತ್ತೇನೆ ಬಿಡು. ಅಣ್ಣನನ್ನು ಹುಡುಕುತ್ತಾ ಇಲ್ಲಿಗೆ ಬಂದೆ ಅಷ್ಟೆ."

"ಇನ್ನೂ ಹುಡುಕುತ್ತೀಯೋ?"

"ಮತ್ತೆ ಹುಡುಕದೆ ಬಿಡುತ್ತೇನೆಯೆ?"

"ಕೃಷ್ಣ! ನೀನು ನಿನ್ನ ಅಣ್ಣನನ್ನು ಹುಡುಕುತ್ತಾ ಇರುವುದನ್ನು ನೋಡಿ ನನಗೆ ತುಂಬಾ ಸಮಾಧಾನ ಕಾಣುತ್ತೆ. ಅವನು ನಿನಗೆ ಎಲ್ಲಿಯಾದರೂ ಸಿಕ್ಕಿದರೆ, ಅವನನ್ನು ಇಲ್ಲಿಗೆ ಕಳುಹಿಸಿಕೊಡುತ್ತೀಯಾ? ನೋಡು! ನನಗೆ ಈಗ ಏನೂ ಕಡಿಮೆಯಿಲ್ಲ. ಅವನು ಅಲ್ಲಿ ಇಲ್ಲಿ ಅಡುಗೆ ಮಾಡಿ ಕಷ್ಟಪಡುವುದನ್ನು ನೆನೆದು ನನಗೆ ತುಂಬ ವ್ಯಸನವಾಗುತ್ತೆ ಕೃಷ್ಣ! ನಾನು ಈಗ ಹೀಗಿದ್ದು ಗಂಡನನ್ನು ಮರೆತಿದ್ದೇನೇಂತ ತಿಳಿದಿದ್ದೀಯಾ ನೀನು! ಇಲ್ಲ ಇಲ್ಲ! ಅವನನ್ನು ನಾನು ನನ್ನ ಮನಸ್ಸಿನೊಳಗೆ ಮರೆಯದೆ, ಭಕ್ತಿ–ಪ್ರೇಮ–ವಿಶ್ವಾಸದಿಂದ ಪೂಜೆ ಮಾಡುತ್ತಲೇ ಇದ್ದೇನೆ. ಇದನ್ನು ಅವನಿಗೆ ಹೇಳಿ ಇಲ್ಲಿಗೆ ಕಳುಹಿಸಿಕೊಡು, ಕೃಷ್ಣ. ಅವನು ನನ್ನೊಂದಿಗೆ ಸುಖವಾಗಿರಬಹುದು."

"ಆಹ! ಬಹಳ ಸಂತೋಷ, ಅವನು ದೇವರ ದಯದಿಂದ ಸಿಕ್ಕಿದರೆ ಅಗತ್ಯವಾಗಿ ಈ ಸಮಾಚಾರವನ್ನು ಹೇಳುತ್ತೇನೆ!"

"ನೀನು ಹೇಳುತ್ತೀಯೋ? ಏನೊ! ನಾನು ನಂಬಲಾರೆ!—"

ಹೀಗೆನ್ನುವಷ್ಟರಲ್ಲಿ ರಿಕ್ಷಾ ಬಂಡಿಯೊಂದು ಆ ಮನೆಯ ಮುಂದೆ ಬಂದು ನಿಂತಿತು. ಅದರಿಂದ ಸುಂದರ ನಾಗರಿಕ ತರುಣನೊಬ್ಬನು, ಸಿಗರೇಟದ ಕೈಯಿಂದಲೂ, ಹೊಗೆಯ ಬಾಯಿಂದಲೂ ಇಳಿದು ಬಂದನು. ಸೂಟು ಬೂಟುಗಳಿಂದ ದಡಬಡಿಸಿಕೊಂಡು ಬಂದ ಅವನ ಸೂಟುಕೇಸನ್ನು ಎತ್ತಿಕೊಂಡು, ಹಿಂದೆಯೇ ಬಂದ ರಿಕ್ಷಾವಾಲಾನನ್ನು ಕುರಿತು, ಆ ತರುಣನು—"ಡೇಯ್! ಸೂಟುಕೇಸು ಉಪ್ಪರಿಗೇ ಮೇಲಿಟ್ಟು ಬಾ." ಎಂದು ತಮಿಳಿನಲ್ಲಿ ಆಜ್ಞಾಪಿಸಿ ಕಳುಹಿಸಿದನು.

ಬಳಿಕ—"ಗುಡ್ಡೀವ್ನಿಂಗ್! ಶ್ರೀಮತಿ ಸುಂದರೀಬಾಯಿ!" ಎಂದು ಶಿಷ್ಟಾಚಾರದ ಮಾತನ್ನಾಡುತ್ತ ಒಳಗೆ ಬಂದನು.

"ಗುಡ್ಡೀವ್ನಿಂಗ್–ಮಾಸ್ಟರ್ ವರದನ್! ಈಗ ತಾನೇ ರೈಲಿನಿಂದ ಬರುವುದೋ?" ಸುಂದರಿಯ ಪ್ರಶ್ನೆ.

"ಏನ್" ಎಂದು ವರದನು ಹೊರಡಲು ಎದ್ದು ನಿಂತ ಕೃಷ್ಣನನ್ನು ನೋಡಿ—"ಯಾರಿವರು ?" ಎನ್ನುತ್ತಾ ಕುರ್ಚಿಯಲ್ಲಿ ಕುಳಿತನು.

"ಇವರೊಂದು ನಾಟ್ಯಕಛೇರಿಯ ವಿಷಯವಾಗಿ ಮಾತಾಡಲು ಬಂದರು. ನನಗೆ ತಕ್ಕ ರೇಟನ್ನು ಕೊಡಲು ಸಾಧ್ಯವಿಲ್ಲದೆ ಹಿಂದೆ ಹೋಗಬೇಕಾಯಿತು." ಎಂದು ಸುಂದರಿ ಕೃಷ್ಣನನ್ನು ನೋಡಿ—"ಹೋಗಬಹುದು ಹಾಗಾದರೆ" ಎಂದಳು.

ಕೃಷ್ಣನು ಎದ್ದು ಹೊರಟುಹೋದನು. ಅವನಿಗೆ ಸುಂದರಿಯ ದರ್ಶನದಿಂದಾದ ಪ್ರಯೋಜನವೆಂದರೆ, ರಾಮಾ ಜೋಯಿಸರು ಹೇಳಿದ ಸುಳ್ಳು ಮಾತು ಗೊತ್ತಾದುದು. ಆ ಕಳ್ಳ ರಾಮಾ ಜೋಯಿಸ ಸತ್ಯವನ್ನೆ ಹೇಳಿರುತ್ತಿದ್ದರೆ, ಅವನು ಮದರಾಸಿನವರೆಗೆ ಬಂದು, ಜಾತಿ-ನೀತಿಗೆಟ್ಟಂತಹ ಸುಂದರಿಯನ್ನು ನೋಡುವ ಸಂಕಟವೇ ಇದ್ದಿರಲಿಲ್ಲವೆಂದು, ರಾಮಾ ಜೋಯಿಸರನ್ನು ಹಳಿದುಕೊಂಡನು. ಇರಲಿ. ಇನ್ನು ಬಳ್ಳಾರಿಯವರೆಗೆ ರೈಲಿನಲ್ಲಿ ಹೋಗಿ, ಮಂಗಲಕರರನ್ನೊಮ್ಮೆ ಕಂಡು, ಹೊಸಪೇಟೆಯ ಮಾರ್ಗವಾಗಿ ಬಸ್ಸು ಹತ್ತಿ, ಮಂಗಳೂರನ್ನು ಸೇರುವುದೆಂದು ಯೋಚಿಸಿಕೊಂಡು, ಹಾಗೆಯೇ ಹೊರಟನು. ಮಂಗಲಕರರ ಮಾತಿನ ಧೋರಣೆಯಿಂದಲೂ, ಬಳ್ಳಾರಿ ಹೊಸಪೇಟೆ ಪ್ರಾಂತಗಳಲ್ಲಿ ಈ ಮೊದಲು ಶೀನು ವಾಸವಾಗಿದ್ದುದರಿಂದಲೂ, ಭ್ರಾತೃಭಾವವೆಂಬ ಅಂತರ್ವಾಹಿನಿಯ ಮಹಿಮೆಯಿಂದಲೂ, ತನ್ನ ಅಣ್ಣನು ಬಳ್ಳಾರಿಯ ಪ್ರಾಂತದಲ್ಲಿ ಎಲ್ಲಿಯೋ ವಾಸವಾಗಿರಬೇಕೆಂಬ ನಂಬುಗೆಯೊಂದು ಬಲವಾಗಿತ್ತು ಆವನ ಹೃದಯದಲ್ಲಿ. ಅವನು ಬಳ್ಳಾರಿಗೆ ಬಂದು, ಮಂಗಲಕರರನ್ನು ಸಂಧಿಸಿ, ಮಾತಾಡಿದ ಪರಿಣಾಮವನ್ನು ಹಿಂದಿನ ಪ್ರಕರಣದಲ್ಲಿ ಬರೆದಿರುತ್ತೇವೆ.

---

## ೨೮. ಸುಂದರೀ ವರದರ ಮೇಳ

ಕೃಷ್ಣನು ಹೊರಟುಹೋದ ಮೇಲೆ ಸುಂದರಿ ವರದನನ್ನು ಕುರಿತು, "ಏನಾಯಿತು ಮಾಸ್ಟರ್ ?—ಬಳ್ಳಾರಿ ಸಮಾಚಾರ ?" ಎಂದು ಕೇಳಿದಳು.

"ಅದನ್ನು ಹೇಳಬೇಕೆಂತಲೇ ಬಂದೆ. ನಾಡದು ಹನ್ನೆರಡನೇ ತಾರೀಕಿನಿಂದ ನಮ್ಮ 'ವಿಧಿಯ ಬಲಿ' ಬಳ್ಳಾರಿಯಲ್ಲಿಯೂ ಪ್ರಾರಂಭ ವಾಗುತ್ತೆ. ಅದೇ ಸಮಯಕ್ಕೆ ಸರಿಯಾಗಿ, ನಿನ್ನ ನಾಟ್ಯ ಬಜಾಯಿಸಿ ಬಿಡುವುದೊಂತ ಏರ್ಪಾಡು ಮಾಡಿದ್ದೇವೆ. ನಾನು ಪೂರಾ ನಿನ್ನನ್ನು ನಂಬಿ, ವಾಲ್‌ಪೋಸ್ಟ್–ಹ್ಯಾಂಡ್ ನೋಟೀಸುಗಳ ಏರ್ಪಾಡು ಕೂಡಾ ಮಾಡಿ ಬಂದಿದ್ದೇನೆ "

"ಅರೆ! ನೀವು ನನ್ನ ಮೇಲೆ ಅಷ್ಟು ನಂಬುಗೆ ಇಟ್ಟಿದ್ದೀರೇನು?"

"ಇಲ್ಲದಿದ್ದರೆ ನಾನು ಅಷ್ಟು ಕೆಲಸ ಮುಂದುವರಿಸುತ್ತಿದ್ದೆನೆ?"

"ಹಾಗಾದರೆ ನಾನೂ ನಿಮ್ಮನ್ನು ನಂಬಬಹುದಷ್ಟೆ?"

"ಓ ಯಸ್! ಸಂದೇಹವೇನು?"

ಸುಂದರಿ ವರದನನ್ನು ಅಡ್ಡಗಣ್ಣಿನಿಂದ ನೋಡುತ್ತ,—"ಹಾಗಾದರೆ ವರದನ್! ಈದಿನ ರಾತ್ರಿ ನಿಮ್ಮ ಊಟ ನನ್ನ ಒಟ್ಟಿಗೇ ಆಗಬೇಕು. ನಿಮ್ಮ ಕ್ಯಾರಿಯರು ಕೂಡಾ ಇಲ್ಲಿಗೇ ತರಿಸಿ, ಇಬ್ಬರೂ ಒಟ್ಟಿಗೆ ಊಟ ಮಾಡೋಣ."

"ಏಕೆ? ಇಂದು ಏನು ವಿಶೇಷ?"

"ವಿಶೇಷವೇನಿದೆ? ಮೊದಲೂ ನಾವಿಬ್ಬರೂ ಒಟ್ಟಿಗೆ ಎಷ್ಟೋ ಬಾರಿ ಉಂಡಿಲ್ಲವೆ?'

"ಓ! ಅಷ್ಟೇನೊ?—" ವರದನು ಜೇಬಿನಿಂದ ಸಿಗರೇಟು ಕೇಸನ್ನು ತೆಗೆದು ಒಂದು ಸಿಗರೇಟನ್ನು ತೆಗೆದು ತುಟಿಗಳ ಎಡೆಗಿಟ್ಟನು. ಒಡನೆಯೇ ಸುಂದರಿ ಬೆಂಕಿಪೆಟ್ಟಿಗೆಯನ್ನು ತೆಗೆದು, ಗೀಚಿ ಅವನ ಸಿಗರೇಟಿನ ಕೊನೆಗೆ ನೀಡಿದಳು. "ಇದೇನು ಚೇಷ್ಟೆ, ಸುಂದರೀಬಾಯಿ!" ಎನ್ನುತ್ತ ಆ ಕಡ್ಡಿಯನ್ನು ವರದನು ತನ್ನ ಕೈಗೆ ತೆಗೆದುಕೊಳ್ಳಲೆತ್ನಿಸಿದಾಗ, ಸುಂದರಿ ಒಲ್ಲದೆ–"ಅದೇನು? ನಾನು ಹಚ್ಚಿದರೆ ಬೆಂಕಿ ಹಿಡಿಯಲಾರದೆ?" ಎನ್ನುತ್ತ, ಅವನ ತುಟಿ ಜಾರಿ ಕೆಳಗೆ ಬಿದ್ದ ಸಿಗರೇಟನ್ನು ಹೆಕ್ಕಿ ತಾನೇ ಅವನ ತುಟಿಯೆಡೆಯಲ್ಲಿ ಕೂಡಿಸಿ, ಇನ್ನೊಂದು ಕಡ್ಡಿಯನ್ನು ಗೀಚಿ, ಬೆಂಕಿ ಹಚ್ಚಿಯೇಬಿಟ್ಟಳು. ಆ ಮೇಲೆ ವರದನು ಎದ್ದು ಉಪ್ಪರಿಗೆಯ ಮೇಲೆ ಹೋಗುವಾಗ ಸುಂದರಿ ಮತ್ತೊಮ್ಮೆ-"ವರದನ್! ರಾತ್ರಿಯ ಊಟ ನನ್ನ ಒಟ್ಟಿಗೆ!" ಎಂದು ಆಜ್ಞಾಪಿಸಿದಳು.

ವರದನಿಗೆ ಅವಳೊಂದಿಗೆ ಹೆಚ್ಚಾಗಿ ಸೇರಿಕೊಂಡಿರುವುದೆಂದರೆ ರೋಸಿಕೆಯೇ ಆಗಿತ್ತು. ಆದರೆ ಅವಳ ಸ್ನೇಹದಿಂದ ಅವನಿಗೂ ಲಾಭವಿದ್ದುದರಿಂದ ಅವಳೊಡನೆ ಸಾಧ್ಯವಾದಷ್ಟು ಅವಳ ಇಚ್ಛಾನುಸಾರವಾಗಿಯೇ ವರ್ತಿಸುತ್ತಿದ್ದನು. ಅವನಿಗೂ ಅವಳಿಗೂ ಪರಿಚಯವಾಗಿ ಸ್ನೇಹವಾಗಿ ಪರಿಣಮಿಸಿದುದು 'ಪ್ರಕೃತಿ ಕಳೋದ್ಧಾರಕ ಮಂಡಲಿ'ಯಲ್ಲಿಯೇ. ಸುಂದರಿ 'ಪ್ರಕೃತಿ ಕಳೋದ್ಧಾರ ಮಂಡಲಿ'ಗೆ ಸೇರಿದ ಮೇಲೆ, ಆ ಮಂಡಲಿಯ ನುರಿತ ಶಿಕ್ಷಕಗಣವು, ಏನೊಂದೂ ತಿಳಿಯದೆ ಮಣ್ಣು ಹಿಡಿದ ಲೋಹದಂತಿದ್ದ ಸುಂದರಿಯನ್ನು, ಶೀಘ್ರವಾಗಿಯೇ ತಮ್ಮ ಕಾರ್ಯರಂಗಕ್ಕೆ ತಕ್ಕ ಹಾಗೆ ತರಬೇತುಪಡಿಸಿಕೊಂಡಿತು. ಆ ಮಂಡಲಿಯವರ "ಅಶೋಕವನ" ಚಿತ್ರದಲ್ಲಿ ಮೊತ್ತಮೊದಲು ಅವಳು ವರದನೊಡನೆ ಉಪನಾಯಿಕೆಯಾಗಿ ನಟಿಸಿ ಯಶಸ್ವಿನಿಯಾದಳು. ಆಗಲೇ ವರದನೊಡನೆ ಅವಳ ಪ್ರಥಮ ಪರಿಚಯವಾದುದು. ವರದನೂ ಆ ಮಂಡಲಿಗೆ ಸೇರಿದ ಸದಸ್ಯನಾಗಿ, ಆಗಾಗ ಆ ಮಂಡಲಿಗೆ ಹೋಗಿಬರುತ್ತಿದ್ದುದರಿಂದ ಸುಂದರಿಯೂ ಅವನೂ ಆಗಾಗ ಸಂಧಿಸುವಂತೆ ಆಯಿತು. ವರದನು ಬಹಳ ಹಾಸ್ಯಪ್ರಿಯನಾಗಿದ್ದುದರಿಂದ, ಸುಂದರಿ ಅವಳ ಕಣ್ಣಿಗೆ ವಿಲಕ್ಷಣ ವ್ಯಂಗ್ಯಮೂರ್ತಿಯಾಗಿ ತೋರಿ, ಅವಳೊಡನೆ ಬೇಕುಬೇಕೆಂದೇ ನಗೆಚಾಟಿಯ ಮಾತುಗಳನ್ನೆ ಹೆಚ್ಚುಹೆಚ್ಚಾಗಿ ಆಡಲಾರಂಭಿಸಿದನು. "ವಿಧಿಯ ಬಲೆ" ಎಂಬ ಚಿತ್ರದಲ್ಲಿ ಸುಂದರಿಗೂ ವರದನಿಗೂ ಮುಖ್ಯವಾದ ಪಾತ್ರಗಳೇ ಇದ್ದು, ಇಬ್ಬರೂ ಸೇರಿಕೊಂಡು ಅಭಿನಯಿಸಿದ್ದರು. ಸುಂದರಿಗೆ ಆ "ವಿಧಿಯ ಬಲೆ"ಯಲ್ಲಿ ತನ್ನನ್ನು ಆವರಿಸಿದ ವಚನಾಭಿನಯಗಳನ್ನು ನೋಡಿ, ಅದೆಲ್ಲಾ ಈ ಮೊದಲು ಅವಳ ಜೀವನದಲ್ಲಿ, ಸತ್ಯವಾಗಿಯೇ ನಡೆದಂತಿದ್ದುದನ್ನು ಮನಗಂಡು, ತುಂಬಾ ಆಶ್ಚರ್ಯವಾಯಿತು. ಇಷ್ಟಾಗುವಾಗ ಅವಳು ಅವಳ ಅದ್ಭುತ ರೂಪಕ್ಕೆ ಒಪ್ಪತಕ್ಕ ಎಲ್ಲಾ ಅಭಿನಯ ಗಾಯನ ನರ್ತನಗಳಲ್ಲಿ ತೇರ್ಗಡೆಹೊಂದಿ, ಸ್ವತಂತ್ರಳಾಗಿ ಬೇಕಾದರೆ ಇರಬಹುದೆಂದೂ, ಮಂಡಲಿಯವರು ಕರೆದಾಗ ಬರಬೇಕೆಂದೂ ಕರಾರಿನ ಮೇಲೆ, ಆ ಮಂಡಲೀಮಂದಿರ ನಿವಾಸವನ್ನು ಬಿಟ್ಟು, ಸ್ವತಂತ್ರಳಾಗಿ ಹೊರಟಳು. ಮಂಡಲಿಯಿಂದ ಅವಳಿಗೆ ನಿಯಮಿತವಾದ ವೇತನವೂ

ಬರುತ್ತಿತ್ತು. ಅಲ್ಲದೆ ಹೊರಗಣಿಂದಲೂ ಅವಳಿಗೆ ಕರೆಗಳು ಬರಲಾರಂಭಿಸಿದ್ದುವು. ಹಾಗೆ ಹೋಗಿ ತನ್ನ ವಿಚಿತ್ರವಾದ ಗಾಯನ-ನರ್ತನ-ಅಭಿನಯಗಳ ಕಛೇರಿಯನ್ನು ನಡೆಯಿಸಿ, ಪ್ರತಿಫಲ-ಬಹುಮತಿಗಳನ್ನೂ ಹೊಡೆಯಲಾರಂಭಿಸಿದ್ದಳು. ಅವಳ ಕಲೆಗಳೆಲ್ಲಾ ವ್ಯಂಗ್ಯವಿಧಾನವಾದುದರಿಂದ, "ವ್ಯಂಗ್ಯ ವಿಲಾಸಿನೀ" "ಪೈಶಾಚ ನೃತ್ಯ ಪ್ರವೀಣೆ" "ವಿಕೃತ ಪ್ರಕೃತಿಕಳಾ ವಿಶಾರದೆ" "ವಿಲಕ್ಷಣ ನಾಟ್ಯಗಾನ ನಿಪುಣೆ" ಎಂಬ ಬಿರುದುಗಳೂ ಪದಕಗಳೂ ಅವಳಿಗೆ ಸಿಕ್ಕಿದ್ದುವು.

ಇವಳು ವರದನ ಸ್ನೇಹವನ್ನು ಬಲಪಡಿಸಿಕೊಂಡು, ಬೇಕೆಂದೇ, ವರದನ ಉಪ್ಪರಿಗೆಯ ಬಿಡದಿಯ ಕೆಳಭಾಗವನ್ನೆ ತನ್ನ ನಿವಾಸಕ್ಕಾಗಿ ದೊರಕಿಸಿಕೊಂಡಳು. ಮೊದಮೊದಲು ವರದನಿಗೂ ಇದು ತುಂಬಾ ಇಷ್ಟವಾಗಿಯೆ ಇತ್ತು. ಸುಂದರಿ ಒಂದು ಬಗೆಯ ಆಶ್ಚರ್ಯಕರವಾದ ಸೃಷ್ಟಿ, ತನಗಾತೆಯಾಗಿ ಮಾತಾಡಬಹುದು-ಎಂಬುದಷ್ಟೆ ಇದಕ್ಕೆ ಕಾರಣ. ಬರುಬರುತ್ತ ಅವಳ ಮನಸ್ಸಿನ ಓಘವು ಅವನಿಗೆ ಅರ್ಥವಾಗ, ಅವಳೊಡನೆ ಹೊಂದಿಕೊಂಡು ವಾಸಮಾಡುವುದೆಂದರೆ, ಅವನಿಗೊಂದು ಕೆಣಕಾಟದಂತೆಯೇ ಆಯಿತು. ಆದರೆ ಅವಳ ಪ್ರಾಕೃತಿಕವಾದ ವ್ಯಂಗ್ಯ ಸೌಂದರ್ಯದಿಂದ ಹೊರಡುವ ವ್ಯಂಗ್ಯ ಕಳಾಭಿನಯವನ್ನು ಬಳ್ಳಾರಿಯಲ್ಲಿ ಹೂಡಿಸಿ ತಾನೊಂದಿಷ್ಟು ಲಾಭಪಡೆಯಬೇಕೆಂಬ ಸ್ವಾರ್ಥದಿಂದ ಇತ್ತೀಚೆಗೆ ಆದಷ್ಟು ಅವಳ ಮನೋನುಕೂಲನಾಗಿ ನಡೆದುಕೊಳ್ಳುತ್ತಿದ್ದನು. ಆದರೆಡೆಯಲ್ಲಿ ತನ್ನಂತಹ ಗೌರವಾನ್ವಿತವಾದ ಸುಂದರ ಯುವಕನು, ಆ ವಿಕಾರ ರೂಪದ ನಿಧಿಯೊಂದಿಗೆ ನೇರಿಕೊಂಡಿರುವುದನ್ನು ಯಾರಾದರೂ ನೋಡಿದರೆ, ನಗೆಗೀಡಾದೇನೆಂಬ ಅಳುಕೂ ಅವನ ಮನಸ್ಸಿನಲ್ಲಿತ್ತು. ಈಗಾಗಲೇ ಸುತ್ತುಮುತ್ತಲಿನವರು ಅವನ ಹಾಗು ಅವಳ ಸಂಬಂಧದಲ್ಲಿ ವಕ್ರಮಾತುಗಳನ್ನು ಗುಸಗುಸಾಡುತಿರುವಂತೆಯೂ ಅವನಿಗೆ ಭಾಸವಾಗಿತ್ತು. "ಅಶೋಕವನ" "ವಿಧಿಯ ಬಲೆ" ಚಿತ್ರಗಳಲ್ಲಿಯೂ, ಅವನೂ ಅವಳೂ ಹೊಂದಿಕೆಯ ಪಾತ್ರಗಳನ್ನೆ ನಿರ್ವಹಿಸಿರುವುದು ಜನರ ಮಾತಿಗೆ ಒಳ್ಳೇಸರಾಗವೇ ಆಗಿತ್ತು. ಅಂತೂ ಇನ್ನು ಮೇಲೆ ಅವಳೊಂದಿಗೆ ನಟಿಸಬಾರದೆಂದು ತನ್ನೊಳಗೆ ತೀರ್ಮಾನಿಸಿಕೊಂಡಿದನು.

ಮೇಲೆ ಹೇಳಿದಂತೆ ಅಂದು ರಾತ್ರಿಯ ಊಟವನ್ನು ಇಷ್ಟವಿಲ್ಲದಿದ್ದರೂ ವರದನು ಸುಂದರಿಯ ಜತೆಯಲ್ಲಿಯೇ ಮಾಡಬೇಕಾಯಿತು. ಆಗ ಕೆಲಸದ ಹುಡುಗಾಳನ್ನು ಸುಂದರಿ ಮನೆಗೆ ಕಳುಹಿಸಿಬಿಟ್ಟಿದ್ದಳು. ಊಟ ಮಾಡುವಾಗ ಸುಂದರಿ ತೋರಿಸಿದ ವಿಲಾಸಗಳೂ ಚೇಷ್ಟೆಗಳೂ ವರದನಿಗೆ ತುಂಬಾ ಅಸಹ್ಯವಾದುವು. ಊಟನಾದ ಮೇಲೆ ವರದನು ಕುರ್ಚಿಯಲ್ಲಿ ಕುಳಿತಾಗ, ಅವಳೂ ಅವನ ಪಕ್ಕದಲ್ಲೆ ಕುರ್ಚಿಯಲ್ಲಿ ಕುಳಿತು, ಅವನ ಕೈಯಲ್ಲಿದ್ದ ಸಿಗರೇಟ್ ಕೇಸನ್ನು ತಾನು ಕಿತ್ತುಕೊಂಡು,—"ಛಿ,-ಛಿ–ಬೇಡ–ಬೇಡ–ಛೀ–ಇದೇನಿದೇನು!—" ಎಂದು ವರದನು ಎಷ್ಟು ನಿವಾರಿಸಿದರೂ ಕೇಳದೆ, ತನ್ನ ಕೈಯಲ್ಲಿದ್ದ ಬೀಡಾದುಂಡೆಯನ್ನು ಅವನ ಬಾಯಿಯೊಳಗೆ ತುರುಕಿ, ಅದರ ಮೇಲೆ ಸಿಗರೇಟನ್ನು ಇಟ್ಟು, ಬೆಂಕಿಯನ್ನೂ ಹಚ್ಚಿಬಿಟ್ಟಳು—ಮಹಾಲಂಕಿಣಿಯ ಹಾಗೆ!

ವರದನು ತನಗೆ ಬಂದ ಅಸಹ್ಯವನ್ನೂ ಸಿಟ್ಟನ್ನೂ ನುಂಗಿಕೊಂಡು ಬಳ್ಳಾರಿಯ ನಾಟ್ಯಯೋಜನವು ಮುಗಿಯುವವರೆಗೆ ಇವಳಿಗೆ ಸಿಟ್ಟು ಬರಿಸಬಾರದೆಂದು ಭಾವಿಸಿ, ಸ್ವಲ್ಪ ತಮಾಶೆಯನ್ನೆ ತಂದುಕೊಂಡು—"ಏನಿದು ಸುಂದರೀಬಾಯಿ! ಅಲ್ಲಾ, ನನ್ನ ಬಾಯಿಗೆ ಇಷ್ಟೆಲ್ಲಾ ಒತ್ತಾಯ ಮಾಡುವುದಕ್ಕಿಂತ, ನೀನೇ ಒಂದು ಸಿಗರೇಟ್ ಸೇದಿಬಿಡಬಾರದೇ—ಅಷ್ಟು ಆಶೆಯಿದ್ದರೆ?" ಎಂದನು ಹೊಗೆಯನ್ನು ಬಿಡುತ್ತಾ.

"ಓ! ಅಗತ್ಯ! ಆದರೆ ನೀವೇ ನನ್ನ ಬಾಯಿಗೆ ಇಟ್ಟು ಬೆಂಕಿ ಹಚ್ಚಿದರೆ ಮಾತ್ರ!"

"ಅಷ್ಟಾದರೂ ತೃಪ್ತಳಾಗಲಿ!" ಎಂದು ಅಂದುಕೊಂಡು, ವರದನು ಕೇಸಿನಿಂದ ಇನ್ನೊಂದು ಸಿಗರೇಟನ್ನು ತೆಗೆಯುತ್ತಿರುವಾಗ ಸುಂದರಿ—

"ಉಹುಂ, ಅದು ಬೇಡ. ನಿಮ್ಮ–ಇದೇ ನನಗೆ ಬೇಕು!—" ಎನ್ನುತ್ತಾ ತನ್ನ ಕರಿಮರದ ಕೊರಡಿನಂತಹ ಕೈಯಿಂದ, ವರದನ ಬಾಯಿಯ ಎಂಜಲು ಸಿಗರೇಟನ್ನು ಕಿತ್ತು, ತನ್ನ ಓರೆಬಾಯಲ್ಲಿ ಇಟ್ಟುಕೊಂಡು, ಬಲವಾಗಿ ದಮ್ಮೆಳೆದು ಕಣ್ಣು–ಮೂಗಿನಿಂದ ಹೊಗೆಯನ್ನು ಸುಮಿದು, ಗಂಟಲು ಕೆನೆದಳು.

"ಛಿ! ಎಂಥ ಚೇಷ್ಟೆಯಿದು ಸುಂದರಿ? ನನ್ನ ಎಂಜಲು ನೀನು ಸೇದಬಹುದೆ?"

"ನನ್ನ ಎಂಜಲೆಂದರೆ ನೀವು ಪರಕೀಯರೆಂದು ತಿಳಿದರೆ ತಾನೆ?"

"ಅಲ್ಲದೆ—ನಾನು ನಿನಗೆ ಏನಾಗಬೇಕು?"

"ಏನೂ ಆಗಬೇಡವೇ? ನೋಡಿ, ಫಿಲಿಂನಲ್ಲಿ ನೀವು ನನ್ನ ರಮಣನಾಗಿ ಅಭಿನಯಿಸಲಿಲ್ಲವೆ?"

"ಅಭಿನಯಿಸಿದ ಮಾತ್ರಕ್ಕೆ?"

"ಅದಲ್ಲ, 'ವಿಧಿಯ ಬಲೆ' ಯಲ್ಲಿ ನೋಡಿ-ನನಗೂ ನಿಮಗೂ ಒಂದು ಸ್ವಾರಸ್ಯವಾದ ಅಭಿನಯವಿತ್ತಲ್ಲಾ? ನೆನಪಿದೆಯೆ?"

"ಯಾವುದು?"

"ನಾನು ನಿಮ್ಮನ್ನು ಹೀಗೆ ಅಪ್ಪಿಕೊಳ್ಳಲಿಕ್ಕೆ—" ಸಂದರಿ ತಟ್ಟನೆ ಎದ್ದು ವರದನನ್ನು ಆಲಿಂಗಿಸಲು ಕೈಚಾಚಿ ಮುಂಬಾಯಲು, ವರದನೂ ಚಟಕ್ಕನೆದ್ದು—"ಹೌದೌದು. ಆಗ ನಾನು ನಿನ್ನನ್ನು ಹೀಗೆ ದೂಡಿದ್ದು-" ಎಂದು, ಅವಳ ಕೈಯನ್ನು ಹಿಂದಕ್ಕೆ ದೂಡಿ,—"ಆ ಮೇಲೆ ನಾನು ಹೀಗೆ ಓಡಿ ಪಲಾಯನ ಮಾಡಿದ್ದು—" ಎನ್ನುತ್ತಾ ಬಾಗಿಲು ತೆರೆದು ಹೊರಗೆ ಹಾರಿ ಬೀದಿಗೆ ಬಿದ್ದು ಓಡಿಯೇ ಹೋದನು!

ಸುಂದರಿಮನೋತೃಷ್ಣೆಯಿಂದ ಆರೆಬಾಯಿತೆರೆದುಕೊಂಡು, ಅವನು ಹೋದಕಡೆಯನ್ನೆ ನೋಡುತ್ತ ನಿಂತಿದ್ದಳು.

ಬೀದಿಗೆ ಓಡಿದ ವರದನು ಮತ್ತೆ ಸ್ವಲ್ಪ ಹೊತ್ತಿನ ಮೇಲೆ ಬಂದು-"ಸುಂದರಿ! ಆ ಅಭಿನಯ ಸಾಕು ಬಿಡು. ನನಗೆ ನಿದ್ದೆ ಬರುತ್ತೆ. ನಾಳೆ ಬೆಳಗ್ಗೆ ಮಾತಾಡುವ" ಎನ್ನುತ್ತಾ ಉಪ್ಪರಿಗೆಯ ಮೆಟ್ಟಲನ್ನು ಹತ್ತಲೆತ್ನಿಸುವಾಗ, ಸುಂದರಿ ಮುಂದೆ ಹರಿದು ಅವನ ಕೈಯನ್ನು ಹಿಡಿದು—"ವರದನ್!" ಎಂದಳು.

"ಏನಮ್ಮ? ಬಿಡು ಬಿಡು! ಇಂದು ರೈಲು ಪ್ರಯಾಣ ಮಾಡಿ ಬಹಳ ದಣಿದಿದ್ದೇನೆ. ಎಲ್ಲಾ ಮಾತು ನಾಳೆ" ಎಂದು ವರದನು ಅವಳ ಕೈಯನ್ನು ಕೊಸರಿಕೊಂಡು ಸರಸರನೆ ಮೇಲೇರಿಹೋದನು.

ಸುಂದರಿಯೂ ಅವನ ಹಿಂದೆಯೇ ಸಾರೇರಿ ಹೋಗಿ—"ವರದನ್! ವರದನ್! ನನ್ನದೊಂದು ಬಯಕೆ!—" ಎನ್ನುತ್ತಾ ಅವನ ಕೋಣೆಯೊಳಗೇ ಹೊಕ್ಕಳು.

ವರದನು ಲೈಟುಸ್ವಿಚ್ಚು ಹಾಕಿದನು. ಕೋಣೆ ಬೆಳಗಿತು.

"ಎಲ್ಲಾ ನಾಳೆ ಸುಂದರಿಬಾಯಿ! ನನಗೆ ತುಂಬಾ ತಲೆಶೂಲಿ!"

"ಅಬ್ಬಾ! ಸುಳ್ಳೇ! ವರದನ್! ನನಗೆಲ್ಲಾ ಗೊತ್ತಿದೆ! ನನ್ನ ನೋಡಿದರೆ ನಿಮಗೆ ಅಸಹ್ಯಾ ಕಾಣುತ್ತೆ!"

"ಛೆ ಛೆ! ಹಾಗೇನೂ ಇಲ್ಲಮ್ಮ. ಅಸಹ್ಯಕಂಡರೆ ನಿನ್ನೊಡನೆ ಹೀಗೆ ಇದ್ದೇನೇ?"

"ಹಾಗಾದರೆ ನಾನು ನಿಮ್ಮ ಕೋಣೆಯಲ್ಲಿ—?"

"ಛಿಛೀ! ತಪ್ಪು! ತಪ್ಪು!" ವರದನು ಕೋಣೆಯಿಂದ ಹೊರಗೆ ಬಂದನು.

ಸುಂದರಿಯೂ ಅವನೊಂದಿಗೇ ಹೊರಗೆ ಬಂದು—"ತಪ್ಪೇಕೆ ವರದನ್! ನಾನೇನೂ ಕೆಟ್ಟುಹೋದವಳಲ್ಲ! ಪ್ರಮಾಣ ಮಾಡಿ ಬೇಕಾದರೆ ಹೇಳುತ್ತೇನೆ!—"

ವರದನು ತನ್ನೊಳಗೆ "ನಿನ್ನ ರೂಪಾಕಾರವೇ ತಕ್ಕ ಪ್ರಮಾಣವಾಗಿದೆ!" ಎಂದುಕೊಂಡನು. ಸುಂದರಿ ಹೇಳುತ್ತಲೇ ಇದ್ದಳು.

"—ವರದನ್! ಪ್ರಿಯ ವರದನ್! ಪುರುಷ ಸಂಬಂಧವೇ ನನಗಿಲ್ಲ! ದೈವಯೋಗದಿಂದ ನೀನೂ ನಾನೂ ಕೂಡಿ ಆಡಿದೆವು. ಹಾಗಿರುವಾಗ ನಾವಿಬ್ಬರೂ ಕೂಡಿ ಮಲಗಿದ್ದರೆ ತಪ್ಪೇ?—" ಎಂದು ಅಂಗಲಾಚುತ್ತಾ, ಅವನ ನಿತ್ಯಕ್ಷೌರದ ನುಣುಗಲ್ಲವನ್ನು ಸವರಿ ಮುದ್ದಿಟ್ಟುಕೊಂಡಳು.

ವರದನು ಹಿಂದೆಹಿಂದೆ ಜರಿಯುತ್ತ ಮೆಲ್ಲನಿಯಿಂದ—"ಅಯ್ಯೋ! ಇಂಥಾದ್ದಕ್ಕೆಲ್ಲಾ ನನಗೆ ಭಯ, ಸುಂದರೀಬಾಯಿ! ಮದುವೆಯಾಗದೆ ಹೆಂಗುಸಿನೊಂದಿಗ ಮಲಗಬಾರದು. ತಪ್ಪು ತಪ್ಪು!"

"ಹೇಳಿ ವರದನ್! ನೀವು ನನ್ನನ್ನು ಮದುವೆ ಮಾಡಿಕೊಳ್ಳುತ್ತೀರಾ?"

"ಹುಂ."

"ಯಾವಾಗ?"

"ಫಕ್ಕನೆ ಹೇಗೆ? ಬಳ್ಳಾರಿಯ ಪ್ರೋಗ್ರಾಂ ಮುಗಿಯಲಿ ಆ ಮೇಲೆ ಯೋಚಿಸುವ."

"ಇದೆಲ್ಲಾ ಸುಳ್ಳು!"

"ಇಲ್ಲ–ಸತ್ಯ! ನಾನು ಮದುವೆ ಮಾಡಿಕೊಳ್ಳುವುದಾದರೆ ನಿನ್ನನ್ನೆ ಸರಿ! ಈ ವಿಷಯವನ್ನು ನನ್ನ ತಂದೆಯೊಡನೆ ಪ್ರಸ್ತಾವಿಸಿ, ಆಮೇಲೆ ನೋಡೋಣ."

"ನಿಮ್ಮ ತಂದೆ ಒಪ್ಪಿಯಾರೊ?"

"ಖಂಡಿತ ಒಪ್ಪಿಸುವೆನು."

"ಒಪ್ಪದಿದ್ದರೆ?"

"ಒಪ್ಪದಿದ್ದರೆ ಅವರನ್ನು ಧಿಕ್ಕರಿಸಿ, ನಿನ್ನನ್ನೆ ವರಿಸುತ್ತೇನೆ. ಹೇಗಿದ್ದರೂ ಬಳ್ಳಾರಿಯ ವಿಷ್ಣುಮಂದಿರದಲ್ಲಿ ನಿನಗೂ ನನಗೂ ವಿವಾಹವೆಂಬುದೇನೋ ಖಂಡಿತ. ಯಾರು ಒಪ್ಪಿದರೂ ಸರಿ, ಒಪ್ಪದಿದ್ದರೂ ಸರಿ!"

"ಖಂಡಿತವೋ ವರದನ್?"

"ಖಂಡಿತ!" ವರದನು ಅವಳ ಕೈಯ ಮೇಲೆ ಭಾಷೆಹಾಕಿದನು. ಆ ಮೇಲೆಯೂ ಅವಳು ಸುಲಭದಲ್ಲಿ ಹೋಗಲಾರದೆ ಹೋಗಲು, ಕಡೆಗೆ ಅವಳನ್ನು ನಾನಾ ರೀತಿಯಲ್ಲಿ ನಂಬಿಸಿ, ಒಮ್ಮೆ ಕೆಳಗೆ ಕಳುಹಿಸಬೇಕಾದರೆ ಅವನಿಗೆ ಸಾಕುಸಾಕಾಗಿ ಹೋಯಿತು.

"ಮದುವೆ ಮಾಡಿಕೊಳ್ಳುತ್ತೇನೆ"ಂದು ವರದನು ಹೇಳಿದ ಮಾತು ಸುಂದರಿಯ ಕಾಟಕ್ಕೊಂದು ಕಟ್ಟುಹಾಕಿದ ಹಾಗಾಯಿತು. ಮುಂದೆ ಎರಡು ದಿನಗಳ ಮೇಲೆ ವರದನು ಸುಂದರಿಯನ್ನೂ ಅವಳ ಮೇಳದ ಗೋಷ್ಠಿಯನ್ನೂ ಕರೆದುಕೊಂಡು, ಬಳ್ಳಾರಿಗೆ ಬಂದು, ಈ ಮೊದಲೇ ಗೊತ್ತುಮಾಡಿದ್ದ ಬೀಡಾರದಲ್ಲಿ ಸುಂದರಿಯನ್ನು ಇಳಿಸಿದನು. ಗೋಷ್ಠಿಯವರೆಲ್ಲಾ ಇನ್ನೊಂದು ಬಿಡಾರದಲ್ಲಿ ಇಳಿಸಲ್ಪಟ್ಟರು.

'ವಿಕೃತ ಪ್ರಕೃತಿ ಸುಂದರೀಬಾಯಿ, ಬಳ್ಳಾರಿಯ ರೈಲುವೇ ಸ್ಟೇಶನ್ನಿನಲ್ಲಿ ಇಳಿದು, ಟ್ಯಾಕ್ಸಿಯಲ್ಲಿ ಏರಲ್ಪಟ್ಟು ಊರಿನೊಳಗೆ ಬರುತ್ತಿದ್ದಾಳೆ' ಎಂಬ ವಾರ್ತೆ ಕರ್ಣೋಪಕರ್ಣವಾಗಿ ಊರೆಲ್ಲಾ ಹಬ್ಬಿತು. ಅವಳನ್ನು

ನೋಡುವ ಕುತೂಹಲದಿಂದ, ಜನರು ಅಲ್ಲಿ–ಇಲ್ಲಿ–ನಿಂತು ಕೂಡಿ ಇಣಿ ಕಾಡಿಕೊಂಡಿದ್ದರು. ಇದರಲ್ಲೇನೂ ಆಶ್ಚರ್ಯವಿಲ್ಲ. ಭಗವತ್ಸೃಷ್ಟಿಯಲ್ಲಿ ಸುಂದರ ಸೃಷ್ಟಿ ಹೇಗೆ ಆಕರ್ಷಣೀಯವಾಗಿರುವುದೋ ಪ್ರೇಕ್ಷಣೀಯವಾಗಿರುವುದೋ ಹಾಗೆಯೇ–ಬೇಕಾದರೆ ಅದಕ್ಕಿಂತಲೂ ಹೆಚ್ಚಾಗಿಯೇ–ಆಕರ್ಷಣೀಯ-ಪ್ರೇಕ್ಷಣೀಯ ಶಕ್ತಿಗಳು ವಿರೂಪ-ಕುರೂಪ-ವ್ಯಂಗ್ಯ-ಸೃಷ್ಟಿಗಳಲ್ಲಿರುವುದನ್ನು ನೋಡಬಹುದು. ಸರಳವಾದ ಸುರೂಪ ಸೃಷ್ಟಿಯ ಸೌಂದರ್ಯವೀಕ್ಷಣದಲ್ಲಿ, ಪ್ರೇಮಾದರಭಾವವೂ ಸ್ವಾಭಿಲಾಷಾಕಾಂಕ್ಷೆಯೂ ಇರುವುದಾದರೆ, ವಿರೂಪಸೃಷ್ಟಿಯ ವ್ಯಂಗ್ಯಸೌಂದರ್ಯವೀಕ್ಷಣದಲ್ಲಿ ವ್ಯಂಗ್ಯಹಾಸ್ಯ, ಆಶ್ಚರ್ಯ, ಕೌತುಕ ಮುಂತಾದ ವಿಶೇಷಣಗಳಿಂದ ಇನ್ನೂ ಇನ್ನೂ ನೋಡಬೇಕೆನ್ನಿಸುತ್ತದೆ. ಆದರೆ ಅದರ ಮೇಲೆ ಪ್ರೇಮ--ಆದರ--ಸ್ವಾಭಿಲಾಷಾಕಾಂಕ್ಷೆಗಳೇನೂ ಉಂಟಾಗುವುದಿಲ್ಲ. ಅಂತೆಯೇ ನಮ್ಮ ಸುಂದರೀಬಾಯಿ ಈ ಬಗೆಯ ವಿಕೃತ ಸೌಂದರ್ಯದ ಖನಿಯಾದುದರಿಂದ-ದೊಡ್ಡ ಸಿನಿಮಾ ನಕ್ಷತ್ರವಾಗಿ ಮಿನುಗುವ ಅವಳ ಪ್ರತ್ಯಕ್ಷ ಮೂರ್ತಿಯನ್ನು ನೋಡಲು ಜನರು ಕೌತುಕಾಶ್ಚರ್ಯಗಳಿಂದ ಮುಗಿಮುಗಿದು ಮುನ್ನುಗ್ಗುವುದರಲ್ಲಿ ಏನಾಶ್ಚರ್ಯ?

ವರದನು ಸುಂದರೀಬಾಯಿಗೆ ತಕ್ಕ ಅನುಕೂಲತೆಗಳನ್ನೊದಗಿಸುವ ಕಾರ್ಯಗಳಿಗೆಲ್ಲಾ ಘೋಂಡೂರಾಯನನ್ನು ಗೊತ್ತುಪಡಿಸಿ, ತನ್ನ ಮನೆಗೆ ತೆರಳಿದನು. ಆಗ ಸುಂದರಿ—"ವರದನ್! ಯಾವಾಗ ಕಾಣಿಸುತ್ತೀರಿ?" ಎಂದು ಕೇಳಲು, "ಯಾವಾಗಲೂ ಬರುತ್ತಾ ಹೋಗುತ್ತಾ ಇರುವುದೇ ನನ್ನ ಕೆಲಸವಲ್ಲವೆ? ಸಮೀಪವೇ ನನ್ನ ಮನೆ. ನಾಟ್ಯದಿನಕ್ಕೆ ಮಧ್ಯದಲ್ಲಿರುವುದು ಇನ್ನು ಎರಡೇ ದಿನ. ಅಷ್ಟರೊಳಗೆ ನನಗೆಷ್ಟೋ ಕೆಲಸವುಂಟು. ನಿನಗೇನು ಬೇಕಾದರೂ ನನ್ನ ಪ್ರಿಯ ಮಿತ್ರರಾದ ಈ ಘೋಂಡೂರಾಯರಿದ್ದಾರೆ." ಎಂದನು. ಕಡೆಗೆ ಸುಂದರಿ "ವರದನ್! ನನಗೆ ಕೊಟ್ಟ ಮಾತು ಮರೆಯಬೇಡಿ! ನಿಮ್ಮ ತಂದೆಯೊಡನೆ ಪ್ರಸ್ತಾವಿಸಿ ನಾಳೆಯೇ ನನಗೆ ಸಮಾಚಾರ ತಿಳಿಸುವಿರಾ?—" ಎಂದು ಎಚ್ಚರಿಸಿದಳು.

"ಓ! ಅದನ್ನು ಮರೆಯುವೆನೆ? ಸಮಯ ನೋಡಿ ಪ್ರಸ್ತಾವಿಸುತ್ತೇನೆ." ಎಂದಂದು ವರದನು ತನ್ನ ಮನೆಯ ದಾರೀ ಹಿಡಿದನು.

---

## ೨೯ ವರದನ ಘಾತುಕತನ!

ವರದನು ಸತ್ಯನಾರಾಯಣ ಪೇಟೆಯಲ್ಲಿರುವ ತನ್ನ ಮನೆಯನ್ನು ತಲುಪುವಾಗ ಸಾಯಂಕಾಲ ಆರುಗಂಟೆಯ ಸಮಯ. ವರದನು ದೂರದಲ್ಲಿ ಬರುತ್ತಿರುವಾಗಲೇ, ತಮ್ಮ ಮನೆಯ ಗೇಟನ್ನು ತೆರೆದುಕೊಂಡು ಕಮಲೆ ಹೊರಗೆ ಬಂದುದನ್ನು ನೋಡಿದನು. ಅವಳು ಸೆರಗಿನ ಮರೆಯಲ್ಲಿ ಏನನ್ನೊ ಬಚ್ಚಿಟ್ಟುಕೊಂಡು, ಅತ್ತಿತ್ತ ಕಳ್ಳನೋಟವನ್ನು ಬೀರಿ, ಆಚೆಗೆ ತಿರುಗಿ ಸಮೀಪದಲ್ಲಿ ಕಾಣುವ ಸತ್ಯನಾರಾಯಣ ಗುಡಿಯ ಕಡೆಗೆ ಹೋದಳು. ಅವಳ ಆ ನಡತೆಯನ್ನು ನೋಡಿ ವರದನಿಗೆ ಏನೋ ಸಂಶಯವಾಯಿತು. ದೂರದಲ್ಲಿರುವ ತನ್ನ ಗುರುತು ಅವಳಿಗೆ ಸಿಕ್ಕಲಿಲ್ಲವೆಂಬುದನ್ನು ಮನವರಿಕೆ ಮಾಡಿಕೊಂಡು ಅವಳು ಸ್ವಲ್ಪ ದೂರ ಹೋಗಿ, ಅಡ್ಡಕ್ಕೆ ತಿರುಗಿದ ಮೇಲೆ, ವರದನು ಮನೆಯೊಳಗೆ ಹೊಕ್ಕನು.

ಮನೆಯಲ್ಲಿ ಕೆಲಸದ ಸೇವಕರು ಅಂದರೆ ಅಡುಗೇ ಹೆಂಗುಸು, ಸಿದ್ದಪ್ಪ, ಪಕ್ಕೀರಮ್ಮ ಮಾತ್ರವೇ ಇದ್ದರು. ವರದನು ಸಿದ್ದಪ್ಪನನ್ನು ಕರೆದು—"ಅಪ್ಪನೂ ಕಮಲಮ್ಮನೂ ಎಲ್ಲಿಗೆ ಹೋಗಿದ್ದಾರೆ"ಂದು ಕೇಳಿದನು. "ರಾಯರು ಸಿನೇಮಕ್ಕೆ ಹೋಗಿದ್ದಾರ್ರಿ. ಅಮ್ಮನವರು ಗುಡಿಗೆ ಹೋಗಿಬರುತ್ತೇನೇಂತ ಹೇಳಿ ಈಗ ತಾನೇ ಹೋದರು." ಎಂದನು ಸಿದ್ದಪ್ಪ.

ವರದನು ಒಡನೆಯೇ ಮನೆಯಿಂದ ಹೊರಟು ಸತ್ಯನಾರಾಯಣ ಗುಡಿಯ ಕಡೆಗೆ ನಡೆದನು. ಅಲ್ಲಿ ಕಮಲೆಯನ್ನು ಕಾಣದೆ, ಆ ಗುಡಿಯ ಪಾರ್ಶ್ವದಲ್ಲಿರುವ ಮನೆಯ ಕಡೆಗೆ ತಿರುಗಿದನು. ಆ ಮನೆಯ ಹೊರಗೈಯಲ್ಲಿರುವ ಕೋಣೆಯಲ್ಲಿ ಶೀನು ವಾಸವಾಗಿರುವನೆಂದು ಅವನಿಗೆ ಗೊತ್ತಿತ್ತು. ಹಿಂದೊಮ್ಮೆ ಶೀನು ಮಂಗಲಕರರೊಡನೆ ಮಾತಾಡುವಾಗ, ತಾನೀಗ ಸತ್ಯನಾರಾಯಣ ಗುಡಿಯ ಬಳಿಯಲ್ಲಿರುವ, ರಾಮಯ್ಯನ ಮನೆಯ ಕೋಣೆಯನ್ನು ಬಾಡಿಗೆಗೆ ಹಿಡಿದಿರುವೆನೆಂದು ಹೇಳಿದುದು ಅವನು ಕೇಳಿದ್ದನು. ಅಲ್ಲದೆ ವರದನು ಬಳ್ಳಾರಿಗೆ ಬಂದಾಗೆಲ್ಲಾ, ಸಂಜೆಯ ವೇಳೆಯಲ್ಲಿ ಸತ್ಯನಾರಾಯಣ ಗುಡಿಗೆ ಬರುವ ಹೆಂಗಳೆಯರನ್ನು

ನೋಡಲಿಕ್ಕಾಗಿ ಆ ಗುಡಿಯ ಕಡೆಗೆ ಷಿಕಾರಿ ಹೋಗುವ ವಾಡಿಕೆಯಿತ್ತು. ಆಗ ಸಹಜವಾಗಿಯೇ ಶೀನು ತನ್ನ ಬಾಡಿಗೆಯ ಕೋಣೆಯೊಳಗೆ ಹೋಗುವ ಬರುವ ನೋಟಗಳನ್ನು ನೋಡಿದ್ದನು. ಕಮಲೆ ಗುಡಿಯಲ್ಲಿಲ್ಲದಾಗುತ್ತಲೇ, ಒಂದು ವಾರದ ಹಿಂದೆ ಮನೆಯ ಗೇಟಿನ ಬಳಿಯಲ್ಲಿ ಶೀನೂ-ಕಮಲೆಯರ ರಹಸ್ಯ ಭಾಷಣದ ದೃಶ್ಯವು ಅವನ ನೆನಪಿಗೆ ಬಂತು. ಆದುದರಿಂದ ಅವನು ಶೀನುವಿನ ಕೋಣೆಯ ಬಳಿಗೆ ತಿರುಗಿದನು.

ಕೋಣೆಯ ಬಾಗಿಲು ಸುಮ್ಮನೆ ಸರಿದಿತ್ತು ಒಳಗಣಿಂದ ಮೆಲ್ಲ ಮೆಲ್ಲನೆ ಮಾತಾಡುವ ಶಬ್ದವು ಕೇಳಿಬರುತಿತ್ತು. ಮುಚ್ಚಂಜೆ ಕಳೆದು, ಕತ್ತಲೆ ಆಗಳಾಗಲೇ ಕಾಲೂರಿಕೊಂಡು ಬರುತ್ತಿರುವ ಸಮಯ. ಒಬ್ಬರು ಇನ್ನೊಬ್ಬರಿಗೆ ಮಸಮಸಕಾಗಿ ಕಂಡರೂ ಗುರುತು ಸಿಕ್ಕಲಾಗದಂತಹ ಮಬ್ಬುಗತ್ತಲೆ ಎಲ್ಲಾ ಮನೆಗಳಲ್ಲಿಯೂ ಬೀದಿಗಳಲ್ಲಿಯೂ ದೀವಿಗೆಗಳು ಆಗ ತಾನೇ ಬೆಳಗಲಾರಂಭಿಸಿದ್ದುವು. ವರದನು ಒಳಗಿನ ವಿದ್ಯಮಾನಗಳನ್ನು ಏಕಾಗ್ರಚಿತ್ತದಿಂದ ಗಮನಿಸಿಕೊಂಡಿರುವಾಗಲೇ, ಶೀನು ಒಳಗೆ ಒಂದು ಚಿಕ್ಕ ಬೆಡ್‌ಲ್ಯಾಂಪನ್ನು ಹಚ್ಚಿದನು. ಆಗ ವರದನು ಕಿಟಕಿಯಿಂದ ಒಳಗೆ ಇಣಿಕಿ ನೋಡುತಿದ್ದನು. ಗೋಡೆಯ ಬದಿಯಲ್ಲಿ ಮ್ಲಾನವದನೆಯಾಗಿ ಕುಳಿತಿದ್ದ ಕಮಲೆಯ ಮುಖದ ಮೇಲೆ, ಆ ಸಣ್ಣ ದೀಪದ ಪ್ರಕಾಶವು ಲೇಪನಮಾಡಿತು. ಇನ್ನೊಬ್ಬನು ಶೀನುವೇ ಸರಿ. ಕಮಲೆಯ ಒಂದೆರಡು ಮಾತುಗಳೂ ವರದನ ಕಿವಿಯನ್ನು ಸೇರಿದುವು. "—ನನ್ನ ಪತಿಯನ್ನು ಮಾತ್ರ ನಂಬಬೇಡ. ಈ ಪುಸ್ತಕಗಳನ್ನು ಜಾಗ್ರತೆಯಾಗಿಟ್ಟಿರು.—" ಎಂದೇನೋ ಹೇಳುತಿದ್ದಳು

ವರದನು ಚಟಕ್ಕನೆ ಬಾಗಿಲಿನ ಬಳಿಗೆ ಬಂದು, ಮುಕ್ಕಾಲುಭಾಗ ಇಕ್ಕಿಕೊಂಡೇ ಇದ್ದ ಆ ಬಾಗಿಲನ್ನು, ಸದ್ದಾಗದಂತೆ ಎಳೆದು ಚಿಲಕವನ್ನು ಹಾಕಿದನು. ಚಿಲಕದ ಸಂದಿನಲ್ಲಿ ಬೀಗವೂ ಬೀಗದ ಕೈಯೂ ಸೇರಿಕೊಂಡೇ ಇತ್ತು ಇದು ಶೀನುವೇ ಮಾಡಿಟ್ಟ ಒಂದು ಸಹಜವಾದ ಸಣ್ಣ ತಪ್ಪು. ಅವನು ಬೀಗ ತೆಗೆದು ಕೋಣೆಗೆ ಬರುವಾಗ, ಮತ್ತೆ ಹೋಗಬೇಕಾಗಿದ್ದುದರಿಂದ, ಬೀಗವನ್ನು ಕೈಯೊಂದಿಗೆ ಚಿಲಕದ ಸಂಧಿಗೇ ಸಿಕ್ಕಿಸಿಟ್ಟು ಒಳಗೆ ಹೋಗಿದ್ದನು. ವರದನು ಆ ಬೀಗವನ್ನೆ

ಹಾಕಿ ಕೈಯನ್ನು ತೆಗೆದುಕೊಂಡು "ಭಲೆ! ಕಮಲೆ! ಮಹಾಪತಿವ್ರತೆಯ ಹಾಗೆ ನನ್ನನ್ನು ಮಾತ್ರ ನಿರಾಕರಿಸಿ, ಇಲ್ಲಿ ಹೀಗೆ ಅಡುಗೇ ಆಚಾರಿಯ ಸಂಗಡ ಸೂಳೆಗಾರಿಕೆ ಮಾಡುತ್ತೀಯಾ? ಆಗಲಿ—ನೋಡುವೆನು—ಮುಂದಿನ ತಮಾಷೆಯನ್ನು!" ಎಂದು ತನ್ನೊಳಗೆ ತಾನೇ ಹೇಳಿಕೊಂಡು, ನೆಟ್ಟಗೆ ಮನೆಗೆ ಬಂದು, ಸಿದ್ದಪ್ಪನನ್ನು ಕರೆದು,—"ಏನೊ? ಇನ್ನೂ ಕಮಲಮ್ಮನು ಗುಡಿಯಿಂದ ಬರಲಿಲ್ಲವೆ?'' ಎಂದು ಕೇಳಿದನು. "ಇಲ್ಲರೀ ಬುದ್ಧಿ'' ಎಂದು ಗಾಬರಿಯಿಂದಲೇ ಉತ್ತರವಿತ್ತನು ಸಿದ್ದಪ್ಪ.

"ಏನೋ ಇದು? ಗಂಟೆ ಎಂಟೂವರೆ ಆಯಿತು. ಕತ್ತಲೆಯ ದಿನ ಬೇರೆ! ಒಬ್ಬಳೇ ಗುಡಿಗೆ ಹೋಗೋದೆಂದರೇನು? ಇನ್ನೂ ಬರಲಿಲ್ಲಾ ಅಂದರೇನು? ಲೇ! ಫಕ್ಕೀರಮ್ಮ! ಸತ್ಯನಾರಾಯಣ ಗುಡೀಕಡೆಗೆ ಹೋಗಿ, ಅಮ್ಮನವರನ್ನು ಹುಡುಕಿಕೊಂಡು ಬಾ. ನಡಿ!" ಎಂದು ವರದನು ಫಕ್ಕೀರಮ್ಮನನ್ನು ಗುಡಿಯ ಕಡೆಗೆ ಕಳುಹಿಸಿ, ಒಂದು ಕಾಗದದಲ್ಲಿ ಪೆನ್ಸಿಲಿನಿಂದ—

"ಅಪ್ಪ, ನಾನು ಈ ದಿನ ಸಾಯಂಕಾಲ ಮನೆಗೆ ಬಂದೆ. ಬರುವಾಗ ಮನೆಯಲ್ಲಿ ಕಮಲಮ್ಮ ಇರಲಿಲ್ಲ. ಈವರೆಗೂ ಬರಲಿಲ್ಲ. ಹೆಚ್ಚಿಗೆ ಬರೆಯಲಿಕ್ಕಾಗದು. ಕೂಡಲೇ ಮನೆಗೆ ಬರಬೇಕು.— ನಿಮ್ಮ ಮಗ —

ವರದನ್"

ಎಂದು ಬರೆದು ಮಡಚಿ, ಸಿದ್ದಪ್ಪನ ಕೈಯಲ್ಲಿ ಕೊಟ್ಟು—"ಲೊ! ಈ ಪತ್ರವನ್ನು ಒಯ್ದು ವೆರ್‍ರೈಟೀ ಹಾಲಿಗೆ ಹೋಗಿ ಅಪ್ಪನ ಕೈಯಲ್ಲಿ ಕೊಟ್ಟು ಅವರನ್ನು ಕರಕೊಂಡು ಬಾ. ಹಿಂದಿನ ಸಾಲಿನ ಕುರ್ಚೀಲಿ ಕೂತಿದ್ದಾರು. ಬೇಗಹೋಗು.''

"ಯಾಕ್ರೀ ಬುದ್ಧೀ! ಬಂದಾರ್‍ರೀ!—"

"ನಿಂಗೇನು ಗೊತ್ತೊ-ಜರುಗಿದ ಕತೆ? ನಡೇ ನಡೇ!''

"ಅಯ್ಯೋ!—ಏನಾಯ್ತ್ರೊ?—ಅಯ್ಯಾ! ನನ್ನ ಸಿನಿಮಾದೊಳಗೆ ಬಿಟ್ಟಾರೇನ್ರೀ ಬುದ್ಧಿ?"

"ಅಪ್ಪನ ಹೆಸರಿನ ಈ ಕಾಗದ ತೋರಿಸೋ! ಬಿಡ್ತಾರೆ, ಜಲ್ದೀ ನಡೀ!"

ಗಾಬರಿಯಾಗಿ ಸಿದ್ದಪ್ಪನು ಧೃತಪದದಿಂದ ಹೊರಟುಹೋದನು

ಅಂದು ಹನ್ನೆರಡನೆಯ ತಾರೀಕು. 'ವೆರ್ರ್ಯಾಟೀ ಹಾಲಿನ'ಲ್ಲಿ "ವಿಧಿಯ ಬಲಿ" ಚಿತ್ರವು ಅಂದೇ ಪ್ರಾರಂಭ ಮೊನ್ನೆ ಮಂಗಲಕರರೊಡನೆ 'ವಿಧಿಯ ಬಲಿ' ಸಿನಿಮಕ್ಕೆ ಹೋಗಬೇಕೆಂಬ ಕುತೂಹಲವನ್ನು ವ್ಯಕ್ತ ಪಡಿಸಿದ ಅವರ ಮಿತ್ರ ರಾಮಚಂದ್ರರಾಯರು ಇಂದು ಫಸ್ಟ್‌ಶೋವಿಗೆ ಹೋಗಲೇಬೇಕೆಂದು ಒತ್ತಾಯಪಡಿಸಿದರು.

"ಪ್ರಾರಂಭ ದಿನ. ಬಹಳ ರಶ್ಶ್ ಇದ್ದೀತು. ಇವತ್ತು ಬೇಡ. ನಾಳೆಯೋ ನಾಡಿದೋ ಹೋಗೋಣ" ಎಂದು ಮಂಗಲಕರರು ತಡೆ ಹೇಳಿ ಹಿಂಜರಿಯಲು ನೋಡಿದರೂ, ರಾಮಚಂದ್ರರಾಯರು ಬಿಡಲೇ ಇಲ್ಲ. ''ನಿಮ್ಮ ಕಥೆ ಚಿತ್ರರೂಪದಲ್ಲಿ ಬಂದಿರುವಾಗ ತಾಮಸ ಮಾಡುವು ದುಂಟೆ? ಛೆ! ಇಂದೇ ಹೋಗಿತೀರಬೇಕು." ಎಂದು ಹಟವನ್ನೆ ಹಿಡಿದರು.

ಆಗ ಮಂಗಲಕರರು ಕಮಲೆಯನ್ನೂ-ಸಿನಿಮಕ್ಕೆ ಹೋಗೋಣ ಎಂದು ಕರೆದುದಕ್ಕೆ ಅವಳು ''ನನಗೆ ಸ್ವಲ್ಪ ತಲೆಶೂಲಿಯಾಗಿದೆ ಕಣ್ಣು ಉರಿ, ನಾನು ಬರುವುದಿಲ್ಲ" ಎಂದಳು. ಮಂಗಳಕರರು ಒಬ್ಬರೇ ಆಗಿರು ತ್ತಿದ್ದರೆ ಕಮಲೆಯನ್ನು ಬಿಟ್ಟು ಹೋಗುತ್ತಿರಲಿಲ್ಲ. ಆದರೆ ಸಂಗಡವೇ ರಾಮಚಂದ್ರರಾಯರೂ ಇದ್ದುದರಿಂದ, ಹೆಂಡತಿಗಾಗಿ ಹೋಗದೆ ನಿಂತರೆ, ಅವರಿಗೆ ತನ್ನ ಮೇಲೆ ಕ್ಷುದ್ರಭಾವನೆಯುಂಟಾದೀತೆಂದು ಭಾವಿಸಿ, ರಾಮಚಂದ್ರರಾಯರೊಂದಿಗೆ ಹೊರಟಿದ್ದರು.

ಮಂಗಲಕರರ ಮನಸ್ಸಿನಲ್ಲಾದರೋ-ಆ '' ವಿಧಿಯ ಬಲಿ " ಯ ವಿಷಯದಲ್ಲಿ ತುಂಬಾ ಗಲಿಬಿಲಿ ನಡೆದಿದ್ದಿತಲ್ಲವೆ? ಅಂದು ಮಧ್ಯಾಹ್ನ ಶೀನು ಆಫೀಸಿನಲ್ಲಿ ಆವರ ಭೇಟೀ ಮಾಡಿದ್ದನು ಈ ಮೊದಲೇ ಅವನು ಆವರ ಕೈಯಲ್ಲಿ ಕೊಟ್ಟಿದ್ದ '' ಅಮೃತ ಭೋಜ " ದ ಪ್ರಕಾಶನವು ಎಲ್ಲಿಯವರೆಗೆ ಬಂತು? '' ಕನ್ನಡ ಗೆಳೆಯ " ಎಂಬ ಗುರುತಿನಲ್ಲೇ ಪ್ರಕಟಪಡಿಸಲು ಪ್ರಕಾಶಕರು ಒಪ್ಪಿರುವರೆ?—ಎಂಬ ವಿಷಯಗಳನ್ನು ತಿಳಿದು ಕೊಳ್ಳಲಿಕ್ಕಾಗಿ ಅವನು ಬಂದಿದ್ದನು. '' ಅಮೃತ ಭೋಜ " ವು ಪ್ರಕಾಶ ವಾಗಿ ನಿನ್ನೆಯೇ ಕೆಲವು ಪ್ರತಿಗಳು ಕೂಡಾ ಮಂಗಲಕರರಿಗೆ ಬಂದಿದ್ದರೂ,

ಆ ಗುಟ್ಟನ್ನು ಹೊರಪಡಿಸದೆ,—“ನಿನ್ನ ಇಚ್ಛೆಯಂತೆಯೇ ಪ್ರಕಟಪಡಿಸಲು ಅವರು ಒಪ್ಪಿದ್ದಾರೆ. ಪ್ರತಿಗಳು ಅಚ್ಚಾಗಿ ಬರಲು ಇನ್ನೂ ಮೂರು ತಿಂಗಳು ಹಿಡಿದೀತು—” ಎಂದು ಹಸಿಹಸೀ ಸುಳ್ಳನ್ನೇ ಹೇಳಿ ಅವನನ್ನು ವಂಚಿಸಿಬಿಟ್ಟಿದ್ದರು. ಆ ಮೇಲೆ ಅವರು ಅವನನ್ನು ಕುರಿತು—“ ಶ್ರೀನಿವಾಸ! ಇವತ್ತೊಂದು ಹೊಸಾ ಸಿನಿಮಾ ‘ವೆರ್ರ್ಯಾಟೀ ಹಾಲಿ' ಗೆ ಬಂದಿದೆಯಲ್ಲ? “ವಿಧಿಯ ಬಲಿ” ಅಂತ! ಆ ಕತೆ ನೀನು ಬರೆದು ಕಳುಹಿಸಿರುತ್ತೀಯೇನು?” ಎಂದು ತಮ್ಮ ಹೊಟ್ಟೆಯೊಳಗಿನ ಹೊರಳಾಟವನ್ನು ಮೇಲೆಬ್ಬಿಸಿದರು.

“ಆ, ಹೌದು ಎಂದೋ ಒಂದು ಕಳುಹಿಸಿದ್ದೆ!”

“ಕಳ್ಳಾ! ಯಾವಾಗ ಕಳುಹಿಸಿದ್ದು?”

“ಈಗ್ಗೆ ಸುಮಾರು ಮುಕ್ಕಾಲು ವರುಷದ ಹಿಂದೆ. ಪತ್ರಿಕೆಯಲ್ಲಿ ಒಂದು ಪ್ರಕಟನವು ಬಂದಿತ್ತು. ಅದು ನನ್ನ ಸ್ವಂತ ಜೀವನದಲ್ಲಿ ನಡೆದ ಕತೆಯೇ ಆದುದರಿಂದ, ಅದನ್ನು ಇಟ್ಟುಕೊಳ್ಳುವುದೇ ಬಲು ಸಂಕಟವಾಗಿ, ಬಂದರೆ ಬರಲಿ, ಹೋದರೆ ಹೋಗಲಿ ಅಂತ ಕಳುಹಿಸಿ ಬಿಟ್ಟೆ!”

“ಓಹೊ! ಹೆಸರು ವಿಳಾಸ ಸರಿಯಾಗಿ ಕೊಟ್ಟಿದ್ದೀಯೋ ಇಲ್ಲವೊ?”

“ಕೊಡದಿದ್ದರೆ ಹೇಗೆ? ಮುನ್ನೂರು ರೂಪಾಯಿಯ ಇನಾಮೂ ಬಂತು ನನಗೆ!—ನೀವಿಟ್ಟ ‘ಕನ್ನಡ ಗೆಳೆಯ’ ಹೆಸರಿನ ಮಾಹಾತ್ಮ್ಯೆಯಿಂದಾಗಿ!”

“ಓಹೊ! ನಿನ್ನ ಮನಸ್ಸಿಗೆ ಕಷ್ಟವಾಗುವ ಹಾಗೆ ಅಂತಹ ಕತೆಯೋ ಅದು?”

“ಹೌದು ಸ್ವಾಮಿ.”

“ಅಂತಹ ಕತೆಯನ್ನು ಯಾಕಪ್ಪಾ ಬರೆದಿ?”

“ಏನೋ ಭಾವನಾವೇಗವನ್ನು ತಡೆಯಲಾರದೆ ಲೇಖನಿಯಲ್ಲಿ ಬಂದುಹೋಯಿತು. ಅದು ನಾನು ಸತ್ತಮೇಲೆಯೇ ಪ್ರಕಟವಾಗಬೇಕಿತ್ತು. ವಿಧಿಯ ವೈಚಿತ್ರ್ಯದಿಂದ ಈಗಲೇ ಹೀಗೊಂದು ರೀತಿಯಾಗಿ ಆಯಿತು.”

“ಅಂದರೆ? ಸಿನಿಮಾ ಚಿತ್ರವಾಗಿ ಬಂದದ್ದು ನಿನಗೆ ಇಷ್ಟವಿಲ್ಲವೋ?”

" ಇಷ್ಟವೋ ಅನಿಷ್ಟವೋ! ನಾನಂತೂ ಅದನ್ನು ಹೋಗಿ ನೋಡ ಲಾರೆನು ! "

"ಹಾಗಿರುತ್ತಿದ್ದರೆ ಆ ಕಥೆಯನ್ನು ಸುಟ್ಟು ಹಾಕಿಬಿಡಬಹುದಿತ್ತಲ್ಲ?"

" ಸುಟ್ಟುಹಾಕುವಂತಹುದೂ ಅಲ್ಲವದು; ಹೇಳಿದೆನಲ್ಲಾ ನಾನು ಸತ್ತಮೇಲೆಯೇ—''

"ಅದಕ್ಕೇ ಶ್ರೀನಿವಾಸ, ನಾವಿಬ್ಬರೂ ಗುರುಶಿಷ್ಯ ಭಾವದಿಂದ ಇಷ್ಟು ಅನ್ಯೋನ್ಯರಾಗುವಾಗ ಆ ಕಥೆಯನ್ನು ನನಗೊಮ್ಮೆ ತೋರಿಸಬಹು ದಿತ್ತಲ್ಲಾ ? ಬಹಳ ಗುಟ್ಟುಮಾಡಿಬಿಟ್ಟೆ, ಅದೇಕೆ ? ''

"ಏಕೆಂದು ನನಗೇ ಗೊತ್ತಿಲ್ಲ. ನನ್ನ ಸ್ವಂತ ಕಥೆಯೇ ಆದುದ ರಿಂದ ಅದನ್ನು ನಿಮಗೆ ತೋರಿಸಿ. ವಿಮರ್ಶನ ಮಾಡಿಸಿ, ಏನಾಗಬೇಕಾ ಗಿದೆ ಮಹಾ?"

"ಸರಿ, ಒಳ್ಳೇ ಕೆಲಸವೇ ಮಾಡಿದಿ ಬಿಡು ! ಬರುವುದಾದರೆ ಈ ದಿನ ಬಾ ಒಟ್ಟಿಗೇ ಹೋಗೋಣ ರಾಮಚಂದ್ರರಾಯರು ಈ ದಿನವೇ ಹೋಗಬೇಕೂಂತ ಹಟಹಿಡಿದಿದ್ದಾರೆ.''

" ನೀವು ಹೋಗಿ ಸ್ವಾಮಿ. ನಾನು ಬರಲಾರೆ. ಅದೂ ನಿಮ್ಮೊಂ ದಿಗೆ ಎಂದಿಗೂ ಬರಲಾರೆ. ಅದನ್ನು ನೋಡಿದರೆ ನಾನು ದುಃಖಿತನಾ ದೇನು! ಮೂರ್ಛಿತನಾದೇನು ! ಹುಚ್ಚನೂ ಆದೇನು ! "

'' ಅಬ್ಬ! ಅಷ್ಟರ ಭಾವೋದ್ರೇಕವಿದೆಯೇ ಆ ಕಥೆಯಲ್ಲಿ ? "

'' ಆ ಕಥೆಯಲ್ಲಿ ಅಲ್ಲಾ, ನನ್ನ ಸ್ವಂತ ಕಥೆಯಲ್ಲಿಯೇ ! "

'' ಇನ್ನೊಂದು ವಿಷಯ; ಊರು ಪೂರಾ ಇದೇ ಮಾತು; ಅದ ರಲ್ಲಿ ಸುಂದರೀಬಾಯಿ ಎಂಬೊಬ್ಬಳು ನಟಿ–ಬಹಳ ವಿಕಾಧವಾದ ನಟಿ ಯಂತೆ–ಭಾರೀ ಚಂದಾಗಿ ಆಕ್ಟ್ ಮಾಡಿದ್ದಾಳಂತೆ! ಅಂತಹ ಪಾತ್ರವೇ ನಾದರೂ ಇದೆಯೇನು ? ''

"ಹಾ! ಇದೆ! ಒಂದು ಹೆಣ್ಣು ಹಾಗಿರಬೇಕಾಗಿದೆ! ಏನಿದ್ದರೂ ನಾನು ಕಥೆಯಲ್ಲಿ ಬಣ್ಣಿಸಿದಂತಹ ಹೆಣ್ಣು ಪಾತ್ರವು ಎಲ್ಲಿಯೂ ಸಿಕ್ಕಲಿಕ್ಕಿಲ್ಲ ! "

'' ಯಾರೋ ಸುಂದರೀಬಾಯಿಯಂತಲ್ಲಾ ? ''

'' ಯಾರೋ !— ''

"ಯಾರೋ" ಎಂಬ ಈ ಕಡೇ ಮಾತುಗಳು ಇಬ್ಬರ ಮನಸ್ಸಿನಲ್ಲಿಯೂ ಯಾವುದೋ ಒಂದು ನೆನಪನ್ನು ಹುಟ್ಟಿಸಿದುವು. ಮಂಗಲಕರರ ಕಳ್ಳ ಮನಸ್ಸು "ಜುಂ" ಎಂದಿತು. ಶೀನುವಿನ ಮನಸ್ಸು—"ಯಾರಾದರೆ ನನಗೇನು?" ಎಂದು ಸಮಾಧಾನ ಮಾಡಿಕೊಂಡಿತು. ಈ ಬಗೆಯ ಸಮಾಧಾನ ಮಂಗಲಕರರಿಗೆ ಆಗಲಿಲ್ಲ

ಅಂತೂ ಚಲಚಿತ್ರ ಕಥೆಯ ಅಂದಾಜು ಸಿಕ್ಕಿದಂತಾಯಿತು ನಮ್ಮ ಮಂಗಲಕರರಿಗೆ ಆದುದರಿಂದ ಮಿತ್ರ ರಾಮಚಂದ್ರರಾಯರು ಆ ಸಂಬಂಧವಾಗಿ ಏನಾದರೂ ಪ್ರಶ್ನೆ ಮಾಡಿದರೆ, ತಾನು ಬರೆದ ಕಥೆಯೇ ಎಂಬಂತೆ, ಯುಕ್ತಿಯುಕ್ತವಾಗಿ ಉತ್ತರಕೊಟ್ಟು ಪಾರಾಗಬಹುದೆಂದು ಧೈರ್ಯಗೊಂಡರು. ಆದರೆ ಭವಿಷ್ಯತ್ತನ್ನು ಯೋಚಿಸುವಾಗ ಅಧೈರ್ಯವಾಗುತ್ತಿತ್ತು ಈ ಫಿಲಿಂ ಮಂಡಲಿಯವರಿಗೆ "ಕನ್ನಡ ಗೆಳೆಯ"ನೆಂದರೆ ಶ್ರೀನಿವಾಸನೆಂದು ಗೊತ್ತಾಗಿದೆ. ಈಗ ಪ್ರಕಟವಾದ "ಅಮೃತ ಭೂಜ"ದಲ್ಲಿ "ಕನ್ನಡ ಗೆಳೆಯ" ಮಂಗಲಕರರೆಂದು ಪ್ರಕಟವಾಗಿದೆ. ಇದರ ಪರಿಣಾಮ ಏನಾಗುವುದೋ? ಮನಸ್ಸಿಗೆ ಇದೊಂದು ಸ್ಪಂದನವೇ ಸರಿ. ಈ ಸ್ಪಂದನವನ್ನು ನಿಲ್ಲಿಸಲು ತಕ್ಕ ಪ್ರೋಷಕಾಲೋಚನೆಗಳು, ಅದರೆಡೆಯಲ್ಲಿ ಆ ಕೃಷ್ಣನ ತೀಕ್ಷ್ಣದೃಷ್ಟಿಪಾತದ ಭಯ, ಆ ಭೀತಿಗೆ ತಕ್ಕ ನಿವಾರಣೋಪಾಯದ ಆಲೋಚನೆ, ಈ ಗಲಿಬಿಲಿಯಲ್ಲಿ ಪ್ರಾಯದ ಹೆಂಡತಿಯೊಬ್ಬಳನ್ನೆ ಮನೆಯಲ್ಲಿ ಬಿಟ್ಟು, ಈ ಮಿತ್ರಪೀಡೆಯ ಆಕರ್ಷಣೆಯೊಂದಿಗೆ ಸೇರಿ ಸಿನೆಮಾಕ್ಕೆ ಹೋಗಬೇಕಾಗಿ ಬಂದ ಒತ್ತಾಯಿಕೆ! ಶೀನು ಹೇಳಿದ ಕಥೆಯ ಜ್ಞಾಪಕ! ಆದರಲ್ಲಿಯೂ ಅವರ ಮನಸ್ಸಿಗೂ ಚುಚ್ಚುವಂತಹ ಸಂದರ್ಭಗಳಿದ್ದೀತೇನೋ! ಇದೊಂದು ಪ್ರತ್ಯೇಕ ಭೀತಿ! ಸಿನೇಮಕ್ಕೆ ಹೋಗಬಾರದೆಂಬ ಆಲೋಚನೆಯಷ್ಟೇ ಹೋಗಿ ನೋಡಬೇಕೆಂಬ ಕುತೂಹಲವೂ ಸೇರಿದೆ! ಒಟ್ಟಾರೆ ಅವರು ಕೃತಕರ್ಮಸಂಜನಿತವಾದ ಬಗೆಬಗೆಯ ವಿಕಾರವಾದ ಭಾವನಾಪಿಶಾಚಗಳ ಎಳೆದಾಟಕ್ಕೆ ಸಿಕ್ಕಿ ತೊಳಲಾಡುವ ಮನಸ್ಸಿನಿಂದ, ಮೇಲೆ ಮೇಲೆ ರಾಮಚಂದ್ರರಾಯರೊಡನೆ ಮಾತನ್ನೂ ಆಡುತ್ತ 'ವೆರ್ಲ್ಯಾಟೀ ಹಾಲ'ನ್ನು ಸೇರಿದರು.

ಆ ದಿನ ವೆರ್ಲ್ಯಾಟೀ ಹಾಲು ಥಿಯೇಟರಿನ ಸುತ್ತು ಮುತ್ತಿಗೆಯ ಹಾಕಿ

ರುವ ಜನ ಸಮ್ಮರ್ದನದ ಸೆಳೆತಕ್ಕೆ ಅಳತೆಯಿರಲಿಲ್ಲ. ಟಿಕೇಟು ಖಿಂಡಿಯ ಬಳಿ ನೂರಾರು ಮಂದಿಯ ಕೊರಳಿಗೆ ಒಂದೇ ಯಮಪಾಶ ಹಾಕಿ ಎಳೆಯು ವಂತಹ-ಉಸಿರಾಡಿಸಲು ಎಡೆಯಿಲ್ಲದಂತಹ ಸೆಣಸಾಟವೇ ಸೆಣಸಾಟ! ಕೋಟೆಯನ್ನು ಲಗ್ಗೆ ಹತ್ತುವಂತಹ ವೀರಸಾಹಸ! ಕೆಲವು ಗಂಡುಗಲಿ ಗಳು ಅಂಗಿತೆಗೆದು ಗಂಡುಗಚ್ಚೆ ಬಿಗಿದು, ಹಿಂಡುಗಂಡುಗಳ ದಿಂಡು ದೋಳುಗಳ ಮೇಲೇರಿ, ಮುಂಡಗಳನ್ನೆ ಮೆಟ್ಟಿಕೊಂಡು ಕುಣಿಕುಣಿದೋಡಿ, ಪೈಚಾಚಿ ಖಿಂಡಿಯೊಳಗೆ ಕೈದೂರಿ ಟಿಕೇಟು ಕೊಂಡುಕೊಂಡು "ಜಯ ಸುಂದರೀಬಾಯಿ! ಭಾಪುರೇ ಜಯ್!" ಎಂದು ಕೂಗುತ್ತಾ, ಹಿಂಡಿನ ಮೇಲೆಯೇ ಧುಮುಕಿದರು. ಕೆಲವು ಪುಂಡ ಕಲಿಗಳು ರಭಸದಿಂದ ಗೂಳಿ ಎತ್ತಿನ ಹಾಗೆ ತಲೆತಿವಿದು ಗುಂಪಿನೊಳಗೆ ನುಗ್ಗುವರು. ಕೆಲವರು ನಜ್ಜು ಗುಜ್ಜಾಗಿ ಕೂಗುವರು. ಕೆಲವರು ಹಿಂದೆ ನಿಂತು ಮುಂದಿನವರ ಕೈಯಲ್ಲಿ ದುಡ್ಡು ಕೊಡುವರು. ದುಡ್ಡು ಕೆಳಗೆ ಚೆಲ್ಲಿ ಕೆಲವರು ಪೇಚಾಡುವರು. ಕೆಲವರು ಪ್ರಖರವಾದ ಸೀರ್ಸುಳಿಯಲ್ಲಿ ಸಿಕ್ಕಿದಂತೆ ಮಹಾಸಂಕಟದಿಂದ ಅರಚುವರು; ಕೆಲವರ ಅಂಗಿವಸ್ತ್ರಗಳು ಹರಿಯುವು; ಜೈರಾಸುಗಳು ಕಳೆ ದುವು! ಉಟ್ಟಪಂಚೆ ಬಿಚ್ಚೇಹೋಯಿತು ಕೆಲವರಿಗೆ! ಕೆಲವರ ಕಚ್ಚೆ ಬಿಚ್ಚಿ ಕಚ್ಚೆಯಕೊನೆ ಗುಂಪಿನೆಡೆಯಲ್ಲಿ ಸಿಕ್ಕಿಬಿದ್ದು ಅರಚಿಕೊಂಡರು! ಕೆಲವರು ಜಟಿಲವಾದ ಮುಳ್ಳುಬಲ್ಲೆಯೊಳಗಣಿಂದ ಸಿಡಿಸಿಡಿದು ಬರುವ ಹುಲಿಗಳಂತೆ, ಮುಷ್ಟಿಯೊಳಗೆ ಟಿಕೇಟನ್ನು ಭದ್ರವಾಗಿ ಮುಚ್ಚಿಟ್ಟು ಕೊಂಡು ಆ ಗುಂಪಿನೊಳಗಣಿಂದ ಸಿಡಿದುಬಿದ್ದರು. ಹಾಗೆ ಒಬ್ಬೊಬ್ಬರು ಎಡೆಯೆಡೆಯಿಂದ ಸಿಡಿಸಿಡಿದು ಬೀಳುತಿರುವಾಗ ಸಂಭವಿಸುವ ಜಿಸಿಜಿಸಿ ಯಾದ ತಿಕ್ಕಾಟದ ಯಾತನೆ ನರಕಯಾತನೆಗಿಂತಲೂ ಕಠಿನವಾಯಿತು! ಆ ಖಿಂಡಿಯ ಬಳಿಯ ಬೋಳುಮೈಗಳ ತಿಕ್ಕಾಟ ತೇದಾಟಗಳಿಂದ. ಅಸಹ್ಯವಾದ ಬೆವರೊಸರು ಹರಿದು, ಕಡುಕಸುಟಾದ ದುರ್ವಾಸನೆ ಹುಟ್ಟಿ, ಓಕರಿಕೆಯುಂಟಾಗುವಂತಾಯಿತು. ಸಾಧುಗಳು ಕೆಲವರು, "ಸಾಕಪಾ ಸಾಕು! ಪ್ರಾಣವುಳಿದರೆ ಸಾಕು!" ಎಂದು ವಾಪಾಸು ಹೊರ ಟರು. ಕೆಲವರು ತಮಾಶೆ ನೋಡುತ್ತಾ ನೆಗಾಡಿಕೊಂಡು ನಿಂತರು. ಆದರೆ ಹಲವು ಮಂದಿ ಹೇಗಾದರೂ ಈ ದಿನವೇ ಸಿನಿಮಾವನ್ನು

ನೋಡಿಯೇ ಸಾಯಬೇಕೆಂಬ ಮನೋಭಾವದವರೇ ಸರಿ ಸಿನೇಮಾ ಚಿತ್ರಕ್ಕಿರುವ ಆಕರ್ಷಣೆಯೆಂದರೆ ಅಂತಹುದು! ಒಂದೂವರೆ ಆಣೆಯ ಟಿಕೇಟಿಗೆ ಹೋಗಬೇಕೆಂದು ಬಂದ ಬಡವನು, ಅದು ಸಿಕ್ಕದಿದ್ದರೆ ಎರಡಾಣೆಗೆ, ಅದೂ ಸಿಕ್ಕದಿದ್ದರೆ ನಾಲ್ಕಾಣೆ, ಎಂಟಾಣೆ, ಕಡೆಗೆ ಒಂದು ರೂಪಾಯಿಯಾದರೂ ಕೊಟ್ಟು ಸಿನೆಮಾ ನೋಡದೆ ಹಿಂದಿರುಗುವುದಿಲ್ಲ! ಹಾಗೆ ಅನಿವೃತ್ತರಾಗಿ ಹಿಂದಿರುಗುವುದಾದರೂ, ಸ್ಮಶಾನದಲ್ಲಿ ತಮ್ಮ ಆಪ್ತರ ಹೆಣವನ್ನು ಸುಟ್ಟು, ಹಿಂದಿರುಗುವಂತಹ ಅಷ್ಟು ದುಃಖದಿಂದ ಹಿಂದಿರುಗುತ್ತಾರೆ! ಆಹಾ! ಏನಿದು ಸಿನಿಮಾ ಪ್ರಭಾವವೊ!

ಆದರೆ ನಮ್ಮ ಮಂಗಲಕರ–ರಾಮಚಂದ್ರರಾಯರಿಗೆ ಹಾಗೇನೂ ಕಷ್ಟವಾಗಲಿಲ್ಲ. ಅವರು ಸುಖವಾಗಿ ನಿಂತಲ್ಲೆ ನಿಂತು, ತಮ್ಮ ಜವಾನನನ್ನು ಸಿನಿಮಾ ಮ್ಯಾನೇಜರನ ಕಡೆಗೆ ಕಳುಹಿಸಿ, ಫಸ್ಟ್‌ಕ್ಲಾಸಿನ ಎರಡು ಚೀಟುಗಳನ್ನು ತರಿಸಿ, ಯಥಾಸ್ಥಾನದಲ್ಲಿ ಹೋಗಿ ಸುಖಾಸೀನರಾದರು. ಹಾಲಿನೊಳಗೆ ತುಂಬಾ ಮನುಷ್ಯಪ್ರಾಣಿ ಸಮೂಹವು ಗಿಜಗಿಜಿಸಿಕೊಂಡಿತ್ತು. ಎಳ್ಳುಬಿದ್ದರೆ ಕೆಳಗೆ ಬೀಳದು! ಇನ್ನೂ ಜನ ತುಂಬುತ್ತಲೇ ಇತ್ತು. ಈ ಸಿನಿಮಾಯಜ್ಞಕುಂಡದ ಸಮಿಧೆಗಳಂತೆ ಕೂಡಿ ತುಳುಕುತಿರುವ ಜನಸಮೂಹದಿಂದ ಬೀಡಿ-ಚುಟ್ಟಾ ಸಿಗರೇಟುಗಳ ಹೊಗೆ, ಹೋಮಧೂಮದಂತೆ ಏಳಲಾರಂಭಿಸಿತು ಸೋಡಾ ಬಾಟ್ಲಿಗಳ 'ಢಾಂ–ಢೂಂ' ಶಬ್ದಗಳೆದ್ದುವು. ಹಲವರು ಖಾಕರಿಸಿ ಅಲ್ಲಲ್ಲಿಯೇ ಉಗುಳಿದರು. ಹಲವರು ತಾಂಬೂಲವನ್ನು ಜಗಿಯುತ್ತ ಅಲ್ಲಲ್ಲಿಯೇ ಉಗುಳಿ–ಅದರ ಮೇಲೆಯೇ ಕುಳಿತರು! ಯಾರು ಯಾರ ತಾಂಬೂಲ ರಸಗಳು ಯಾರು ಯಾರ ಬಟ್ಟೆಗಳಿಗೆ ಬಣ್ಣಕೊಟ್ಟವು. ಅಲ್ಲಲ್ಲಿ ಸಣ್ಣ ಪುಟ್ಟ ಜಗಳಗಳೂ, ಮತ್ತಲ್ಲಲ್ಲಿ ಕಿಲಾಡಿ ಪೋಕರಿತನದ ನಗೆಗಳೂ–ಇನ್ನಲ್ಲಲ್ಲಿ ಆತುರಾವೇಶದ ತೀಕ್ಷ್ಣವಾದ ಭಾರೀ ಭಾರೀ ಸಿಳ್ಳುಗಳೂ–ಬೇರಲ್ಲಲ್ಲಿ ಚಪ್ಪಾಳೆಗಳೂ–ವ್ಯರ್ಥಾಲಾಪಗಳೂ ಹೀಗೆ ಒಟ್ಟು ಗಜಬಜಿಸಿಕೊಂಡು "ಸರ್ವಂಖಲ್ವಿದಂ ಬ್ರಹ್ಮತ್ವ"ವು ಅಲ್ಲಿ ಚೆಂದಾಗಿ ಒಪ್ಪುತಿತ್ತು! ಮೇಲಿನಿಂದ ಎಲೆಕ್ಟ್ರಿಕ್ ಫ್ಯಾನು ಪವನ ಚಕ್ರದಂತೆ ತಿರುಗುತಿದ್ದರೂ. ಜನಚಕ್ರದಿಂದ ಸುಳಿದೆದ್ದ ಉಷ್ಣಾವೇಗವು ಅದನ್ನು ಮೀರಿಸಿ, ಬೆಮರಿಡಿಸಿಕೊಂಡಿತ್ತು ಇಂತಹ

ಸಂಕಟಗಳೆಲ್ಲವೂ ಸಿನಿಮಾ ಪ್ರೇಕ್ಷಣದಿದಿರಿಗೆ ಕೇವಲ! ಕ್ಷುದ್ರ! ಕ್ಷುಲ್ಲಕ! ಆಹಾ! ಶಾಭಾಸು! ಸಿನಿಮಾಕೇ!

ಯಥಾಕಾಲದಲ್ಲಿ ಥರ್ಡ್‌ಬೆಲ್ ಖಿನಿಖಿನಿಸಿ, ಗಪ್ಪನೆ ದೀಪವಾರಿ, ರಜತ ಪರದೆಯ ಮೇಲೆ ಚಿತ್ರಾಕ್ಷರಗಳು ಬೀಳಲಾರಂಭಿಸಿದುವು.

"ಪ್ರಕೃತಿ ಕಳೋದ್ಧಾರಕ ಮಂಡಲಿ" ಯವರ "ವಿಧಿಯ ಬಲಿ" ಕತೆಗಾರ: "ಕನ್ನಡ ಗೆಳೆಯ." ಇದನ್ನು ಕಾಣುತ್ತಲೇ "ಕನ್ನಡ ಗೆಳೆಯ" ಬಳ್ಳಾರಿಯವರು!" "ಡಿ. ಇ. ಓ. ಮಂಗಲಕರರು!"—ಎಂಬ ಗುಜ ಗುಜಗಳು ಅಲ್ಲಲ್ಲಿ ಕೇಳಬಂದುವು. ಇದೇನು ವಿಚಿತ್ರ ಚಿತ್ರ! ಮಂಗಲ ಕರರ ಗಭೀರ ರಹಸ್ಯವಾದ ಜೀವನ ಚಿತ್ರವೇ ಅವರ ಮನೋಲಹರಿಯ ಹಾಗೆ ತರಂಗತರಂಗವಾಗಿ ಕಾಣಿಸಲಾರಂಭವಾಗಿದೆ. ಪ್ರಚಂಡ ಅನು ಭವಶಾಲಿಗಳಾದ ಮುಖರ್ಜಿಯವರ ಡೈರೆಕ್ಶನ್! ಅಂದ ಮೇಲೆ ಚಿತ್ರದ ಉತ್ತಮತೆಯನ್ನು ಕುರಿತು ಬೇರೆ ಹೇಳಲೇಬೇಡಾಗಿತ್ತು.

ಮುಕುಂದರಾಯನಂತೆಯೇ ಒಬ್ಬ ರಸಾತಳವಾಯಾವಿ!— ಹೆಸರು ಮುಕುಂದರಾಯನಲ್ಲ–ವೈಕುಂಠರಾಯ; ಅವನಿಗೆ ಹುಟ್ಟಿರುವ ಮಗಳೊಬ್ಬಳು ಅತ್ಯಂತ ಕುರೂಪಿಣಿ!—ಚಂದ್ರಲೇಖೆಯೆಂದು ಹೆಸರು. ಮುಕುಂದರಾಯನಂತೆಯೇ ವೈಕುಂಠರಾಯನೂ ಮರ್ಯಾದೆಯ ಭೀತಿ ಯಿಂದ, ಚಂದ್ರಲೇಖೆಯನ್ನು ಪುತ್ರಿಯಲ್ಲವೆಂದು ತ್ಯಜಿಸಿ ಧನಾಶಾ ಪಿಶಾಚಗ್ರಸ್ತರಾದ–ನಾರಾಯಣಯ್ಯ ರಾಮಾ ಜೋಯಿಸರಂತಹ, ನರ ವೀರಯ್ಯ–ಸುಬ್ಬಾಜೋಯಿಸರಿಂದ ಅವಳ ಮದುವೆ ಮಾಡಿಸುತ್ತಾನೆ. ಬಲು ಯುಕ್ತಿಯಿಂದ– ತಾನು ಮರೆಯಲ್ಲಿಯೇ ಇದ್ದು– ಪಾಪ! ಶೀನುವಿ ನಂತಹ ಗೋಪಾಲನೆಂಬ ಯಜ್ಞಪಶುವಿಗೆ! ಆ ಮೇಲೆ ಬಳೆದ ನಾನಾ ವಿಷಮಗಳು! ಚಂದ್ರಲೇಖೆಯ ವಿಲಕ್ಷಣ ಹಾವಭಾವ ವಿನ್ಯಾಸಗಳು! ಮದುವೆಯ ವೇಳೆಯ ಅಲ್ಲೋಲ ಕಲ್ಲೋಲಗಳು! ಕಲಾವಿದ ಗೋಪಾ ಲನ ಪರಿತಾಪ! ಅವನ ಹೃದಯಸ್ಥ ಪ್ರೇಮದರಗಿಣಿ ಕಮಲೆಯಂತಹ ಕಮಲೆ! ಅವಳನ್ನು ಗೋಪಾಲನು ಹೃದಯದಿಂದ ಕಿತ್ತುಹಾಕುವ ವಿಧಾನ–ಹೃದಯ ವಿದಾರಕವಾದ ವಿಧಾನ! ಗೋಪಾಲನ ತಾಯಿ– ಲಕ್ಷ್ಮಮ್ಮನಂತಹ ಜಲಜಮ್ಮನ ಕರುಣಾಜನಕವಾದ ಮರಣ! ಕೃಷ್ಣ

37

ನಂತಹ ಕಿಟ್ಟಪ್ಪನ ಕಲಹ! ಚಂದ್ರಲೇಖೆಯ ಯಜಮಾನಿಕೆ! ಗೋಪಾಲ ನಿಗೆ ಅವಳಿಂದಾದ ವಿಡಂಬನೆಗಳು! ಕಡೆಗೆ ಗೋಪಾಲನ ಪಲಾಯನ!– ಆಹಾ! ಅಭಿನಯಪಟುವಾದ ಮಾಸ್ಟರ್ ವರದನು ಹೃದಯವೇಧಕವಾಗಿ ಗೋಪಾಲನ ಪಾತ್ರವನ್ನು ನಿರ್ವಹಿಸಿರುತ್ತಾನೆ!—"

ಇಲ್ಲಿಯ ವರೆಗೆ ನೋಡುತಿರುವಾಗ ಆ ಚಿತ್ರಗಳು ನೂರಾರು ಕತ್ತಿ ಗಳಾಗಿ, ಬಾರಿಬಾರಿಗೂ ಮಂಗಲಕರರ ಹೃದಯವನ್ನು ತಿವಿಯುವಂತೆ ವೇದನೆಪಟ್ಟರು! ಎರಡು ಕೈಗಳಿಂದಲೂ ಹೃದಯವನ್ನು ಒತ್ತಿ ಹಿಡಿದು ಕೊಂಡು ನೋಡುತಿದ್ದರು. ಮಧ್ಯೆ "ಹಾ!" ಎಂದರು. ಇನ್ನೊಮ್ಮೆ "ಅಯ್ಯೋ!" ಎಂದರು. ಬಳಿಯಲ್ಲಿದ್ದ ರಾಮಚಂದ್ರರಾಯರು "ಇದೇನು ಮಂಗಲಕರರೆ! ನಿಮಗೇನೂ ಆಗಿಲ್ಲವಷ್ಟೆ?" ಎಂದು ಕೇಳಲು, ಮಂಗಲ ಕರರು ಚಟ್ಟನೆ ಎಚ್ಚೆತ್ತುಕೊಂಡು—"ಛೆ ಛೆ! ಏನಾಗಿದೆ? ಎಲ್ಲಾ ಚಿತ್ರದ ಪರಿಣಾಮ ಬಿಡಿ!—" ಎಂದೇನೋ ಸಮಾಧಾನ ಹೇಳಿದರು. ಚಿತ್ರಸ್ಥ ಕತೆಯ ಲೇಖಕರೇ ಆದುದರಿಂದ ಏಕಾಗ್ರ ಚಿತ್ತದಿಂದ ನೋಡುತಿರುವ ರಾಗಿರಬೇಕೆಂದು, ರಾಮಚಂದ್ರರಾಯರು ತಿಳಿದರು. ಸುಂದರೀ ಬಾಯಿಯ ಅತ್ಯದ್ಭುತ ಸೃಷ್ಟಿಯಾದ ಚಂದ್ರಲೇಖಾಪಾತ್ರದ ಅಭಿನಯ ಕೌಶಲವನ್ನು ನೋಡಿ, ಇಡೀ ಹಾಲೇ "ಭಲೆ! ಶಾಭಾಸ್!—" ಎಂದು ಅಡಿಗಡಿಗೆ ಕೂಗುತಿತ್ತು! ನಗುತಿತ್ತು!—

ಮುಂದಿನ ಕಥೆ ಹೇಗೆ ಕಲ್ಪಿಸಲ್ಪಟ್ಟಿರುವುದೆಂದು ನೋಡುವ ಭಾಗ್ಯವು ಮಂಗಲಕರರಿಗಿಲ್ಲದೆ ಹೋಯಿತು. ಅವರ ಸೇವಕ ಸಿದ್ದಪ್ಪನು "ರಾಯ್ರೇ! ಬುದ್ಧೀ ಮಂಗಲಕರ್ರಾಯರೇ!—" ಎಂದು ಕೂಗುತ ಹುಡುಕಿಕೊಂಡು ಗುಂಪಿನಲ್ಲಿ ಬಂದನು. ಅಷ್ಟರಲ್ಲಿ ಇಂಟರ್ವೆಲಿನ ದೀಪವೂ ಬೆಳಗಿತು. ಸಿದ್ದಪ್ಪನು ಕೊಟ್ಟ ವರದನ ಪತ್ರವನ್ನು ಓದಿ ನೋಡಿ, ಮಂಗಲಕರರು ಬೆಚ್ಚಿಬಿದ್ದೆದ್ದು, ಮನೆಯ ಕಡೆಗೆ ನಡೆದರು. ಪತ್ರಾಭಿಪ್ರಾಯವನ್ನು ತಿಳಿದ ಅವರ ಮಿತ್ರ ರಾಮಚಂದ್ರರಾಯರೂ ಮಂಗಲಕರರೊಂದಿಗೇ ಎದ್ದು ಹೊರಟರು.

# ೩೦. "ನೀನು ನನ್ನ ತಂಗಿ!"

ತನ್ನ ಹೊಟ್ಟೆಯೊಳಗೆ ತುಂಬಿಕೊಂಡಿದ್ದ ಪ್ರಶ್ನೆಗಳ ಸಮೂಹವನ್ನು ಶೀನುವಿನ ಮುಂದೆ ಬಿಚ್ಚಿಹಾಕಲು ತಕ್ಕ ಸಮಯವು ದೊರೆಯದೆ, ಕಮಲೆ ಒಳಗೊಳಗೇ ಮಿಡುಕಿಕೊಂಡಿದ್ದಳಲ್ಲವೆ? ಈ ದಿನ ಮಂಗಲಕರರು ಸಿನೇಮಕ್ಕೆ ಹೋಗೋಣವೆಂದು ಅವಳನ್ನು ಕರೆದುದಕ್ಕೆ ತನಗೆ ಸೌಖ್ಯವಿಲ್ಲವೆಂದು ಹೇಳಿ ತಪ್ಪಿಸಿಕೊಂಡುದು ಶೀನುವನ್ನು ಸಂಧಿಸಬೇಕೆಂದೇ ಸರಿ. ಮಂಗಲಕರರು ಸಿನೇಮಕ್ಕೆ ಹೋಗುವರೆಂದು ಅಂದು ಮಧ್ಯಾಹ್ನವೇ ಅವಳಿಗೆ ಗೊತ್ತಾಗಿತ್ತು. ಆದುದರಿಂದ ಅವಳು ಪಕ್ಕೀರಮ್ಮನ ಕೈಯಲ್ಲಿ ಒಂದು ಚೀಟಿಯನ್ನು ಬರೆದುಕೊಟ್ಟು, ಶೀನುವಿಗೆ ಕಳುಹಿಸಿದ್ದಳು. ಅದರಲ್ಲಿ—"ಶೀನು! ಈದಿನ ಸಂಜೆ ಆರುಗಂಟೆಗೆ ನಾನು ನಿನ್ನ ಬಿಡಾರಕ್ಕೆ ಬರುತ್ತೇನೆ. ಬಹಳ ಮುಖ್ಯವಾದ ವಿಷಯ ಮಾತಾಡಲಿಕ್ಕಿದೆ. ಕಾದಿರು. –ಕಮಲಾ" ಎಂದು ಬರೆದಿದ್ದಳು.

ಆ ಪ್ರಕಾರ ಮಂಗಲಕರರು ರಾಮಚಂದ್ರರಾಯರೊಡನೆ ಸಿನೇಮಕ್ಕೆ ಹೋದ ಮೇಲೆ, ಕಮಲೆ ಹಳೇ ವಸ್ತ್ರದ ಗಂಟಿನೊಳಗೆ ಅಡಗಿಸಿಟ್ಟಿದ್ದ ಆ ಪುಸ್ತಕಗಳನ್ನೂ ಪತ್ರಗಳನ್ನೂ ತೆಗೆದುಕೊಂಡು, ಮನೆಯಲ್ಲಿದ್ದ ಕೆಲಸದವರೊಡನೆ 'ಗುಡಿಗೆ ಹೋಗಿ ಬರುತ್ತೇನೆ'ಂದು ಹೇಳಿ, ಆ ಪುಸ್ತಕ ಪತ್ರಗಳನ್ನು ಅವರಾರಿಗೂ ಗೊತ್ತಾಗದ ಹಾಗೆ ಸೆರಗಿನ ಮರೆಯಲ್ಲಿ ಅಡಗಿಸಿಕೊಂಡು, ಹೊರಟು ಶೀನುವಿನ ಕೋಣೆಯ ಬಳಿಗೆ ಬಂದು—"ಶೀನು" ಎಂದು ಕರೆದಳು.

ಒಳಗೆ ಯಾವುದೋ ಒಂದು ಪುಸ್ತಕವನ್ನು ಓದುತಿದ್ದ ಶೀನು—"ಇದ್ದೇನೆ–ಬಾ, ಕಮಲಾ!'' ಎಂದನು.

ಕಮಲೆ ಒಳಹೊಕ್ಕು ಬಾಗಿಲನ್ನು ಸುಮ್ಮನೆ ಇಕ್ಕಿಕೊಂಡಳು. ಬಳಿಕ "ಶೀನು! ನಿನ್ನೊಡನೆ ಮುಖ್ಯವಾದೊಂದು ಸಂಗತಿಯನ್ನು ಹೇಳಿ, ನಿನ್ನನ್ನು ಎಚ್ಚರಗೊಳಿಸಬೇಕೆಂದು ಬಹಳ ದಿನಗಳಿಂದ ನೋಡುತಿದ್ದೆನು. ಈ ದಿನವೇ ಸಮಯವು ಸಿಕ್ಕಿತು, ನನ್ನ ಪತಿರಾಯರು ಸಿನೇಮಕ್ಕೆ ಹೋದರು. ಮನೆಯಲ್ಲಿ ಯಾರೂ ಇಲ್ಲ. ನಾನು ಹೀಗೆ ಬಂದು

ಬಿಟ್ಟೆ. ಮೊನ್ನೆ ಬಂದು ಹೋಗುವಂತೆ ಬರೆದುದಕ್ಕೆ ನೀನು ಏಕೆ ಬರಲಿಲ್ಲ ಶೀನು? ನನ್ನ–ನಿನ್ನ ಹಿಂದಿನ ಪ್ರೇಮಲೀಲೆಗಳನ್ನು ಮರೆತೇಬಿಟ್ಟಿರುವಿಯಾ?'' ಎನ್ನುತ್ತಾ ಪುಸ್ತಕಾದಿಗಳನ್ನು ಕೆಳಗಿಟ್ಟು, ಕುಳಿತಳು.

ಶೀನುವೂ ಕುಳಿತುಕೊಳ್ಳುತ್ತ—" ಇಲ್ಲ ಕಮಲಾ ! ಮರೆಯಲಿಲ್ಲ. ನಾನು ನಿನ್ನನ್ನು ಅಗಲಿದ ಮೇಲೆ, ನಿನ್ನ ಭಾವನಾಮೂರ್ತಿಯನ್ನು ನನ್ನ ಹೃದಯ ಕಮಲವು ಬಿಡದೆ ಹಿಡಿದುಕೊಂಡೇ ಇತ್ತು. ಆದರೆ ನೀನು ವಿವಾಹಿತಳಾಗಿ ಹೋದಿ ಎಂಬ ಸಮಾಚಾರವು ಗೊತ್ತಾದ ಮೇಲೆ, ಬಲವಾಗಿ ಹರಿಯುವ ಪ್ರಣಯ ಪ್ರವಾಹವನ್ನು ನನ್ನ ಹೃದಯದಲ್ಲಿಯೇ ಇಂಗಿಸಿಕೊಳ್ಳುತಿದ್ದೇನೆ.''

"ನನಗೆ ವಿವಾಹವಾದ ವಿಚಾರವು ನಿನಗೆ ಹೇಗೆ ಗೊತ್ತಾಯಿತು, ಶೀನು ?"

"ನಾನೇ ನಿನ್ನ ತಾಯಿಗೆ ಪತ್ರವನ್ನು ಬರೆಯಿಸಿ ತಿಳಿದುಕೊಂಡೆನು."

"ನಿಜವಾಗಿಯೂ ?"

"ಹೌದು. ಕಮಲಾ! ಆಗ ನೀನು ಕನ್ಯೆಯಾಗಿರಬಹುದೆಂದೇ ಭಾವಿಸಿ, ನಿನ್ನನ್ನೆ ವಿವಾಹ ಮಾಡಿಕೊಳ್ಳಬೇಕೆಂಬ ಉದ್ದೇಶದಿಂದ, ವಿಚಾರಿಸಿದಾಗ ಕಾರ್ಯವು ಮೀರಿಹೋಗಿತ್ತು.''

ಕಮಲೆ ಸ್ವಲ್ಪ ಹೊತ್ತು ಮೌನವಾಗಿದ್ದು,—"ಶೀನು! ಹಾಗಾಗಿರುತಿದ್ದರೆ–ಶೀನು! ನಮ್ಮ ಭಾಗ್ಯಕ್ಕೆ ಎಣೆಯಿರುತಿತ್ತೆ ?''

"ಅದೆಲ್ಲಾ ಆಕಾಶಮಂದಿರವಾಗಿ ಹೋಯಿತಲ್ಲ ಕಮಲಾ !"

"ಏನಾಗಿ ಹೋಯಿತು! ಶೀನು! ಆಗ ನಾನು ತಿಳಿಯದ ಹುಡುಗಿಯಾಗಿದ್ದೆ. ನನ್ನ ತಂದೆಯ ಕೈಬೊಂಬೆಯಾಗಿದ್ದೆ. ಈ ವೃದ್ಧಮಹಾಶಯರು ನನ್ನನ್ನು ಕ್ರಯಕ್ಕೆ ಕೊಂಡುಕೊಂಡು, ನನ್ನ ಇಹಜೀವನವನ್ನೆ ವಿರಸವನ್ನಾಗಿ ಮಾಡಿದರು ಶೀನು! ನನಗೆ ಆಗ ತಿಳಿಯದೆ ಹೋದರೂ ನಿನ್ನ ನೆನಪು ನನಗಿತ್ತು. ನಿನ್ನೊಡನೆ ಆಡಿದ ಆಟಸಾಟಗಳನ್ನು ಎಂದಾದರೂ ಮರೆಯಲು ಸಾಧ್ಯವೆ? ನಿನ್ನ ನಾಮದ ಜಪವನ್ನೆ ಮಾಡಿಕೊಂಡಿದ್ದೆನು. ಆದರೆ ನಿನ್ನ ಮೇಲೆ ಯಾವ ಬಗೆಯ ಭಾವನೆ– ಅದಕ್ಕೆ ಏನು ಹೆಸರು– ಎಂಬುದು ನನಗೆ ತಿಳಿದಿರಲಿಲ್ಲ. ನಿನ್ನನ್ನು ಕಂಡೇನು ಎಂಬ

ನಂಬುಗೆಯೂ ನನಗಿರಲಿಲ್ಲ. ಆದರೆ ಇತ್ತೀಚೆಗೆ, ಆ ದಿನ ರಾತ್ರಿ ನನ್ನ ಮಾನಸಂರಕ್ಷಣೆ ನಿನ್ನ ಮೂಲಕವಾಗಿ ಆಯಿತಲ್ಲಾ-ಆಗ, ನಿನ್ನನ್ನು ನೋಡಿ ನನಗೆ ಎಷ್ಟು ಆಶ್ಚರ್ಯವಾಯಿತೆಂದು ಮಾಡಿದೀ! ಆ ಮೇಲೆ ಶೀನು! ನನ್ನ ಹೃದಯದ ಭಾವನೆಗಳೆಲ್ಲಾ ಜಾಗೃತವಾದುವು! ನಿನ್ನ ಮೇಲೆ ಹರಿದಾಡುವ ನನ್ನ ಪ್ರೇಮದೊಳಗೆ ಪ್ರಣಯರಸವೇ ತುಂಬಿರುವುದೆಂದುಗೊತ್ತಾಯಿತು! ಶೀನು! ಇನ್ನು ನಾವು ನಮ್ಮ ಭಾವನೆಯಂತೆ ಹೊಂದಿಕೊಂಡಿರಲು ಯಾವ ಮಾರ್ಗವೂ ಇಲ್ಲವೇನು? ಹೀಗೆಯೇ ನಾವಿಬ್ಬರೂ ವಿರಹ ವೇದನೆಯನ್ನು ಅನುಭವಿಸಿಕೊಂಡೇ ಸಾಯುವವರೆಗೂ ಇರಬೇಕೇನು? ಹೇಳು! ಶೀನು! ಹೇಳಿ ನನ್ನ ಮನಸ್ಸನ್ನು ಸಮಾಧಾನಪಡಿಸು!"

"ಕಮಲ! ಇದೇ ನೋಡು ನಿನ್ನ ಅಪ್ರೌಢ ವಿಚಾರವೆಂದರೆ! ಇನ್ನು ನೀನು ಈ ಬಗೆಯ ವಿಚಾರವನ್ನು ಮಾಡಲೇಬಾರದು. ಕಮಲಾ ಪ್ರಣಯದ ಪ್ರವಾಹವನ್ನು ಇಷ್ಟ ಬಂದ ಹಾಗೆ ಹರಿಸದಿರು! ವಿವೇಕದಿಂದ ತಿಳಿದುನೋಡಿ ಕಟ್ಟುಹಾಕಿ ತಡೆದಿಟ್ಟುಕೊಳ್ಳಲು ಪ್ರಯತ್ನಿಸು; ಸಾಧಿಸುತ್ತದೆ, ನಿನಗೆ ಖಂಡಿತವಾಗಿಯೂ ಸಾಧಿಸುತ್ತದೆ. ನಾನಂತೂ ಹಾಗೆಯೇ ಸಾಧಿಸಲು ಯತ್ನಿಸಿದ್ದೇನೆ. ಇದಕ್ಕೆ ಹೆಚ್ಚಾಗಿ ಆಧ್ಯಾತ್ಮ ವಿಚಾರಗಳಿಗೆ ಮನಸ್ಸನ್ನು ಹರಿಬಿಡುವುದೇ ಮೊದಲನೆಯ ಉಪಾಯವಾಗಿದೆ ಮನಸ್ಸನ್ನು ಅಭ್ಯಾಸದಿಂದ ಸ್ವಾಧೀನದಲ್ಲಿಟ್ಟುಕೊಳ್ಳಲು ಯತ್ನಿಸಬೇಕು. ಆಗ ಅದು ಕ್ರಮೇಣ ಸಾಧಿಸುತ್ತದೆ. ನೋಡು ಕಮಲ! ನನ್ನ ಹೃದಯವು ಇನ್ನೂವರೆಗೆ ಅಂತಹ ಸಾಧ್ಯಸ್ಥಿತಿಗೆ ಬಂದಿರಲಿಲ್ಲ. ನಿನ್ನೊಡನೆ ಏಕಾಂತ ರಹಸ್ಯವನ್ನು ನಡೆಸಿದರೆ, ಎಂತಹ ಮನಶ್ಚಾಂಚಲ್ಯವುಂಟಾಗುವುದೋ ಎಂದು ಹೆದರಿಕೊಂಡೇ ಇದ್ದೆನು. ಅಂತೆಯೇ ನೀನು ಮೊನ್ನೆ ಚೀಟಿಬರೆದು ಕಳುಹಿಸಲು ಬರುವುದಿಲ್ಲವೆಂದು ಬರೆದೆನು. ಆದರೆ ಈಗ ಈ ಕ್ಷಣದಲ್ಲಿ ನನ್ನ ಮನಸ್ಸು ವಿರಕ್ತಿಯ ಪಾಕದಲ್ಲಿ ಗಡ್ಡೆಕಟ್ಟಿಹೋಯಿತು. ನನ್ನ ಹೃದಯದಲ್ಲಿ ನಿನ್ನ ಮೇಲಣ ಪ್ರೇಮದಲ್ಲಿ ತುಂಬಿದ್ದ ಪ್ರಣಯಕಣಗಳನ್ನು ಇಂಗಲೀಸಿ, ಅದನ್ನು ಸೋದರೀ ವಾತ್ಸಲ್ಯದ ಸುಮಧುರವಾದ ಕಣಗಳನ್ನಾಗಿ ಮಾರ್ಪಡಿಸಿಕೊಂಡಿರುವೆನು. ಈ ಕ್ಷಣದವರೆಗೆ ನಿನ್ನನ್ನು 'ತಂಗೀ' ಎಂದು ಕರೆಯುವಷ್ಟು ಪರಿಪಕ್ವವಾದ ಸ್ಥಿತಿಗೆ ಅದು ಬಂದಿರ

ಲಿಲ್ಲ;— ಈಗ ತಾನೇ ಬಂತು! ಕಮುಲಾ! ನೀನು ನನ್ನ ಇದಿರಿನಲ್ಲಿರುವುದ ರಿಂದಲೇ ಹಾಗೆ ಬಂತು! ನನ್ನ ಪ್ರಣಯಿನಿಯಾದ ಕಮುಲೆ ನನ್ನ ಹೃದಯ ಸಾಮ್ರಾಜ್ಯದಿಂದ ಹೊರಟುಹೋಗಿ ಆ ಸ್ಥಾನದಲ್ಲಿ ನನ್ನ ಪ್ರಿಯ ಭಗಿನಿ ಯಾದ ಕಮುಲೆ ಪ್ರಸ್ಥಾಪಿಸಿದ್ದಾಳೆ. ಕಮುಲಾ! ಇನ್ನು ನೀನು ನನ್ನ ತಂಗಿ! ಪ್ರಿಯಭಗಿನಿ! ತಂಗಿ! ನಿನ್ನ ಹೃದಯದಲ್ಲಿಯೂ ಈ ಬಗೆಯ ರಸಭಾವಗಳ ಪರಿವರ್ತನೆಯಾಗಲು ತಕ್ಕ ಶಕ್ತಿಸಾಧನೆ--ಸ್ಥೈರ್ಯಗಳು ಉಂಟಾಗುವಂತೆ ದೇವರು ಅನುಗ್ರಹಿಸಲಿ! ಅಲ್ಪವಾದ ಇಹಸೌಖ್ಯದ ಕಂಟಕಮಯವಾದ ದಾರಿಗೆ ಬೀಳದಂತೆ ಆ ಪರಮಾತ್ಮನು ಎತ್ತಿಹಿಡಿಯಲಿ ತಂಗೀ—ನಿನ್ನನ್ನು!—"

ಕೇಳುತಿದ್ದಂತೆ ಕಮುಲೆಯ ಕಣ್ಣಿನಲ್ಲಿ ನೀರು ತುಂಬಿ ತುಂಬಿ ಕೆಳಗೆ ಸೂಸಿತು! ಹಾಗೆಯೇ–ಮುಮ್ಮಗುಚಿ ಶೀನುವಿನ ಪಾದದ ಮೇಲೆ ಬಿದ್ದು ಸಗದ್ಗದ ಸ್ವರದಿಂದ—"ಆಹಾ! ನೀನು ಮನುಷ್ಯನಲ್ಲ, ದೇವರು! ಅಣ್ಣಾ!—ಅಣ್ಣಾ!'' ಎಂದು ಬಿಕ್ಕಿಬಿಕ್ಕಿ ಅಳಲಾರಂಭಿಸಿದಳು.

ಶೀನುವಿನ ಕಣ್ಣಲ್ಲಿಯೂ ನೀರು ತುಂಬಿತು.—"ಏಳು ತಂಗಿ! ಅಳ ಬೇಡ! ಭಾವನಾಪರಿವರ್ತನವಾಗುವಾಗ ಹೀಗಾಗುವುದು ಸಹಜವೇ!" ಎಂದು ಅವಳ ಕೈಹಿಡಿದೆತ್ತಿ ಕುಳ್ಳಿರಿಸಿ—"ಕಮುಲ! ಹೊತ್ತಾಯಿತಮ್ಮ! ಹೆಚ್ಚು ತಡಮಾಡುವುದರಿಂದ ನಮುಗಿಬ್ಬರಿಗೂ ಅಪಾಯವುಂಟು. ನಮ್ಮ ಪವಿತ್ರವಾದ ಹೃದಯಸ್ಥ ಭಾವನೆಗಳು ಜನರ ಕಣ್ಣಿಗೆ ಕಾಣಿಸುವುವೆ? ನೀನು ಬಂದ ಕಾರ್ಯವೇನೋ ಬೇಗನೇ ಹೇಳಿಬಿಡು–ತಂಗಿ" ಎಂದು, ಅವಳು ತಂದಿದ್ದ ಪುಸ್ತಕಗಳನ್ನು ನೋಡುತ್ತ—"ಇವೆಲ್ಲಾ ನನ್ನ ಪುಸ್ತಕ ಗಳೇ ಆಗಿವೆಯಲ್ಲ?—ಅರೆರೆ! 'ಅಮೃತ ಭೂಜ!' ಪ್ರಿಂಟಾಗಿದೆಯೆ? ಏನಿದು? ಇಂದೇ ನಾನು ಮಂಗಲಕರರೊಡನೆ ಕೇಳಿದ್ದಕ್ಕೆ ಇನ್ನೂ ಮೂರು ತಿಂಗಳು ಹಿಡಿಯುವುದು ಪ್ರಿಂಟಾಗಿ ಬರಲಿಕ್ಕೆ–ಎಂದರಲ್ಲಾ?–" ಎನ್ನುತ್ತಾ, ಸುಂದರವಾದ ಆ ಮುದ್ರಿತ ಹೊಸ "ಅಮೃತಭೂಜ'' ಪುಸ್ತಕವನ್ನು ಬಿಡಿಸಿ ನೋಡಲಾರಂಭಿಸಿದನು.

ಅವಿರಳವಾದ ಅಶ್ರುಪ್ರವಾಹವು ಒಂದೇ ಬಾರಿ ಸುರಿದು, ಭಾವೋ ದ್ರೇಕವು ತಗ್ಗಿಹೋಗಿ, ಗಂಟಲನ್ನು ಸರಿಮಾಡಿಕೊಂಡು ಕಮುಲೆ

ಯೆಂದಳು: "ಆ ಮುದುಕ ಜಂಬುಕರ ಮಾತನ್ನು ನಂಬಿನಂಬಿ ನೀನು ತುಂಬಾ ಮೋಸಹೋಗಿರುತ್ತೀ! ಅಣ್ಣಾ! ನೋಡುತ್ತಿರುವಿಯಲ್ಲ? 'ಅಮೃತಭೂಜ' ದಲ್ಲಿ 'ಕನ್ನಡ ಗೆಳೆಯ'ನ ಮೋಸವು ಚಂದಾಗಿ ತೋರುತ್ತಿದೆಯಲ್ಲವೆ?''

"ಅಮೃತ ಭೂಜ'' ವನ್ನು ಬಿಡಿಸಿ ನೋಡುತಿರುವ ಶೀನು ಚಕಿತನಾಗಹತ್ತಿದ್ದನು. ''ಗ್ರಂಥಕರ್ತರು:—''ಕನ್ನಡ ಗೆಳೆಯ'' ವಿದ್ವಾನ್ ಪಿ. ಎಂ ಮಂಗಲಕರ್, ಎಂ. ಎ ಎಲ್.ಟಿ. ಡಿ. ಇ. ಐ. ಬಳ್ಳಾರಿ'' ಎಂದು ಅದರಲ್ಲಿ ಸ್ಪಷ್ಟವಾಗಿತ್ತು. ಇನ್ನೊಂದು ಪುಟದಲ್ಲಿ ಅವರ ಭಾವಚಿತ್ರ, ಮತ್ತೊಂದು ಪುಟದಲ್ಲಿ, ಆ ಗ್ರಂಥವನ್ನು ಆಸ್ಥಾನ ವಿದ್ವಾನ್ ಮಹಾಬಲರಾಯರಿಗೆ ಸಮರ್ಪಣೆ ಮಾಡಿದ ಅರ್ಪಣ ಪತ್ರಿಕೆ! ಯಾರ ಗ್ರಂಥವನ್ನು ಯಾರು ಯಾರಿಗೆ ಸಮರ್ಪಣೆ ಮಾಡುವುದೋ! ಮತ್ತೊಂದು ಪುಟದಲ್ಲಿ ಕನ್ನಡ ಪಂಡಿತ ಶಿರೋಮಣಿಗಳೊಬ್ಬರ ಮುನ್ನುಡಿ. ಮಂಗಲಕರರ ಸ್ವಂತ ಪ್ರಸ್ತಾವನೆ ಬೇರೊಂದು ಪುಟದಲ್ಲಿ! ಇದೆಂತಹ ವಿಚಿತ್ರ!—ಇದೆಲ್ಲಾ ನೋಡಿದ ಶೀನುವಿನ ಬಾಯಿಯಿಂದ "ಓಹೊ! ಇದೋ ಅವರ ಗುಟ್ಟು?'' ಎಂದು ಉದ್ಗಾರವೆದ್ದಿತು.

''ಇನ್ನೂ ಸಂಶಯವೇ ಅಣ್ಣಾ? ನೋಡು! ಈ ನಿನ್ನ ಕೈಬರಹದ ಪುಸ್ತಕಗಳೆಲ್ಲವನ್ನೂ ಬಚ್ಚಲೊಲೆಗೆ ಹಾಕುವಂತೆ ನನಗೆ ಕೊಟ್ಟಿದ್ದರು. ಮೊದಲು ನಾನೂ ಅವರೇ ಬರೆಯಿಸಿದ ಗ್ರಂಥವಿರಬೇಕೆಂದು ತಿಳಿದಿದ್ದೆ. ಆದರೆ ಇಕೊ–ಈ ನಿನ್ನ ''ಕಾರುಣ್ಯ ಮೂರ್ತಿ'' ಪುಸ್ತಕದಲ್ಲಿ ನೀನು ಬಾಲ್ಯದಲ್ಲಿ ಕಟ್ಟಿದ ಶಾರದಾಸ್ತುತಿ ಪದ್ಯವಿರುವುದನ್ನು ನೋಡುತ್ತಲೇ ನನಗೆ ಅವರ ಕಪ್ಪು ಹೃದಯದೊಳಗಿನ ಗುಟ್ಟು ಗೊತ್ತಾಗಿಹೋಯಿತು." ಎಂದು ಕಮಲೆ ''ಕಾರುಣ್ಯ ಮೂರ್ತಿ'' ಪುಸ್ತಕವನ್ನು ತೆಗೆದುಕೊಟ್ಟಳು.

''ಅರರೆ! ಇದು ಹ್ಯಾಗೆ ಇಲ್ಲಿಗೆ ಬಂತು? ಇದು ನಾನು ಮೊತ್ತ ಮೊದಲು ಬರೆದಿದ್ದ ಹಳೇ ಪುಸ್ತಕ. ಊರಿನಲ್ಲಿಯೇ ಬಿಟ್ಟುಬಂದಿದ್ದೆನಲ್ಲ."

''ಅವರು ಇತ್ತೀಚೆಗೆ ಬೆಂಗಳೂರಿಗೆ ಹೋಗಿ ಬಂದರಲ್ಲಾ? ಆಗ ಈ ಪುಸ್ತಕವು ಅವರ ಕೈಯಲ್ಲಿತ್ತು.''

''ಓಹೊ! ಅತ್ಯಾಶ್ಚರ್ಯವಾಗಿದೆಯಲ್ಲಾ!''

ಕೋಣೆಯೊಳಗೆ ಕತ್ತಲೆ ಕವಿದುದನ್ನು ನೋಡಿ ಶೀನು ಒಂದು ಬೆಡ್‌ಲ್ಯಾಂಪನ್ನು ಹಚ್ಚಿದನು. ಆಗ ಕಮಲೆ ಹೇಳುತಿದ್ದಳು:—

"ಎಲ್ಲವನ್ನೂ ನಿಧಾನವಾಗಿ ಯೋಚಿಸಿ ನೋಡು ಶೀನಣ್ಣ. ನನ್ನ ಪತಿಯನ್ನು ಮಾತ್ರ ನಂಬಬೇಡ. ಈ ಪುಸ್ತಕಗಳನ್ನೆಲ್ಲ ಜಾಗ್ರತೆಯಾಗಿಟ್ಟಿರು."

"ಆದಿರಲಿ ತಂಗಿ! ಮಂಗಲಕರರಂತಹ ಘನವಿದ್ವಾಂಸರು ಇಂತಹ ಎಂಜಲು ತಿನ್ನುವ ಕೆಲಸ ಮಾಡಿಯಾರೆಂದು ನಾನು ಕನಸಿನಲ್ಲಿಯೂ ನೆನೆಸಿರಲಿಲ್ಲ. ಒಳ್ಳೆಯದಿರಲಿ. ಕಮಲಾ! ಕತ್ತಲಾಯಿತಲ್ಲ? ಇನ್ನು ನೀನು ಹೋಗುವುದು ಲೇಸು! ನಾನು ಒಬ್ಬನೇ ಸ್ವಲ್ಪ ಹೊತ್ತು ಯೋಚನೆ ಮಾಡಬೇಕಾಗಿದೆ."

"ಸ್ವಲ್ಪ ತಾಳಣ್ಣ. ಇನ್ನೊಂದು ಮುಖ್ಯ ವಿಷಯವುಂಟು. ಅಣ್ಣ! ನಿನಗೆ ಮದುವೆಯಾಗಿದೆಯಷ್ಟೆ?"

"ಅದೇಕೆ ಈಗ?"

"ನಿನ್ನ ಹೆಂಡತೀ ಹೆಸರು ಸಂದರೀ ಬಾಯಿ ತಾನೇ?"

"ಹಾ! ಇದು–ಇದು ನಿನಗೆ ಹೇಗೆ ಗೊತ್ತಾಯಿತು?" ಶೀನು ಕಬ್ಬಿಬ್ಬಾಗಿ ಕೇಳಿದನು.

"ಮುಕುಂದರಾಯರೆಂಬವರಲ್ಲವೇ ನಿನ್ನ ಮಾವ?"

"ಹಃ! ಮುಕುಂದರಾಯರು! ಯಾರು? ಎಲ್ಲಿದ್ದಾರೆ?"

"ಇಗೋ ನೋಡು! ಈ ಪತ್ರಗಳೂ ನನ್ನ ಪತಿರಾಯರ ಪೆಟ್ಟಿಗೆಯಲ್ಲಿದ್ದುವು." ಕಮಲೆ ಎರಡು ತುಂಡು ಮಾಡಲ್ಪಟ್ಟಿದ್ದ, ನಾರಾಯಣಯ್ಯ ಮುಕುಂದರಾಯರಿಗೆ ಬರೆದ ಆ ಕಾರ್ಡನ್ನೂ, ರಾಮಾ ಜೋಯಿಸನು ಬರೆಯಿಸಿ ಹಾಗು ಬರೆದು ಗುಂಡುಸೂಜಿಯಿಂದ ಜೋಡಿಸಿ ಕಳುಹಿಸಿದ ಆ ತಂತ್ರದ ಪತ್ರಗಳನ್ನೂ ತೆಗೆದು ಅವನ ಕೈಗೆ ಕೊಟ್ಟಳು.

ಶೀನು ಐದು ನಿಮಿಷದೊಳಗೆ ಅದನ್ನೆಲ್ಲಾ ಓದಿ ಮುಗಿಸಿ,–"ಆಹ! ಆಶ್ಚರ್ಯ! ಅತ್ಯಾಶ್ಚರ್ಯ!! ಇದೆಲ್ಲಾ ನಿನಗೆಲ್ಲಿ ಸಿಕ್ಕಿತು? ಮಂಗಲಕರರಿಗೂ ಮುಕುಂದರಾಯರಿಗೂ ಏನು ಸಂಬಂಧ?"

"ಅದೆಲ್ಲ ಅವರಿಗೇ ಗೊತ್ತು! ಇದನ್ನೂ ಬೆಂಕಿಗೆ ಹಾಕುವಂತೆ

ಕೊಟ್ಟಿದ್ದರು ಪಾಪ ನನ್ನನ್ನು ನಂಬಿ! ನಾನು ನಿನ್ನ ಹೆಸರಿರುವುದನ್ನು ನೋಡಿ, ಅಡಗಿಸಿಟ್ಟೆನು. ಇನ್ನೂ ಒಂದು ಮುಖ್ಯ ಸಂಗತಿ ನಿನಗೆ ಗೊತ್ತುಂಟೊ?''

''ಇನ್ನೇನು? ಬೇಗ ಹೇಳಮ್ಮ. ಇಂದು ನಿನ್ನಿಂದ ಹೊಚ್ಚಹೊಸ ರಹಸ್ಯಗಳೆಲ್ಲಾ ಹೊರಬಿದ್ದುವು.''

''ನಾನು ಇದನ್ನು ಮೊದಲೇ ನಿನಗೆ ಹೇಳಿಬಿಡಬೇಕಿತ್ತು; ಮರೆತೆನು. ನಿನ್ನ ತಮ್ಮನಾದ ಕೃಷ್ಣನು ನಿನ್ನನ್ನು ಹುಡುಕಿಕೊಂಡು ಈ ಊರಿಗೆ ಬಂದಿದ್ದಾನಂತೆ!''

ಶೀನು ಬೆಚ್ಚಿಬಿದ್ದು—"ಹಾ! ಅಂತೆ ಎಂದರೆ?"

''ಮೊನ್ನೆ–ಅಂದರೆ ಮೂರು ದಿನಗಳ ಕೆಳಗೆ–ನಮ್ಮ ಮನೆಗೆ ಬಂದಿದ್ದನಂತೆ. ನಾನು ನೋಡಲಿಲ್ಲ. ನನ್ನ ಯಜಮಾನರು ಏನೋ ಸುಳ್ಳು ಹೇಳಿ ಅವನನ್ನು ಕಳುಹಿಸಿರಬೇಕು. ಏಕೆಂದರೆ ಅವರು ನನ್ನನ್ನು ಕುರಿತು, 'ಕೃಷ್ಣನೆಂಬವನು ಶ್ರೀನಿವಾಸ ಎಂಬವನನ್ನು ಹುಡುಕಿಕೊಂಡು ಇಲ್ಲಿಗೆ ಬಂದಾನು; ಬಂದರೆ ಒಂದೂ ಗೊತ್ತಿಲ್ಲವೆಂದು ಹೇಳಿ ಕಳುಹಿಸಿಬಿಡು' ಎಂದು ಅಪ್ಪಣೆ ಕೊಟ್ಟಿದ್ದಾರೆ. ಆದರೆ ಅವನು ಹಾಗೆ ನನ್ನಿದಿರಿಗೆ ಬರಲಿಲ್ಲ. ಶೀನಣ್ಣ! ಇದರಲ್ಲಿ ಏನೋ ಒಂದು ಗುಟ್ಟು ಇರಲೇಬೇಕೆಂದು ನನಗೆ ತೋರುತ್ತೆ.''

''ಅಯ್ಯೋ! ಮೂರು ದಿನವಾಯಿತೆ? ನನ್ನನ್ನು ಹುಡುಕಿಕೊಂಡು ಬಂದನೆ? ಈಗೆಲ್ಲಿಗೆ ಹೋದನೊ! ಎಲ್ಲಿ ಸುತ್ತಾಡುತ್ತಿರುವನೊ! ಏನು ಮಾಡಲಿ? ಎಷ್ಟು ಮಿಡುಕುತ್ತಿರುವನೊ! ಪಾಪ! ಅವನಿಗೆ ಸ್ವಲ್ಪ ಇದಿರುಸಿಟ್ಟಾದರೂ ಮನಸ್ಸು ನಿಷ್ಕಲ್ಮಷವಾದುದು'' ಎಂದು ಶೀನು ಹಲುಬಿದನು.

"ಮಾಡುವುದೇನು ಶೀನಣ್ಣ? ನನಗೆ ನಿನ್ನ ಭೇಟಿಡೇ ಅವಕಾಶವಿಲ್ಲದೆ ಹೋಯಿತಲ್ಲ!''

''ಅದು ನನ್ನದೇ ತಪ್ಪು. ನನ್ನ ದುರ್ಬಲ ಹೃದಯದಿಂದಾದ ತಪ್ಪು. ಸರಿ. ಕಮಲಾ! ನೀನಿನ್ನು ಹೊರಡಮ್ಮ. ನಿಲ್ಲು ನಾನೂ ಬರುತ್ತೇನೆ. ನಾನು ಇನ್ನು ಇಲ್ಲಿ ನಿಲ್ಲುವ ಹಾಗಿಲ್ಲ, ಉಣ್ಣುವ ಹಾಗಿಲ್ಲ! ಇಷ್ಟು ದೂರ

ನನ್ನನ್ನು ಹುಡುಕಿಕೊಂಡು ಬಂದ ತಮ್ಮನ ವಿಚಾರ ಗೊತ್ತಾಗುವವರೆಗೆ ನನಗಿನ್ನು ನೆಮ್ಮದಿಯಾದೀತೆ? ನಾನೂ ನಿನ್ನ ಮನೆಯ ದಾರಿಯಲ್ಲೇ ಬರುತ್ತೇನೆ, ನಡೆ'' ಎಂದು ಶೀನು ಬಾಗಿಲು ತೆರೆಯಲಿಕ್ಕಾಗಿ ಕೈಹಾಕಿದನು.

ಅಯ್ಯೋ! ಇದೇನು ಕೇಡು! ಬಾಗಿಲು ಬಂದರೆ ತಾನೆ?

''ಏನಣ್ಣ?'' ಕಮಲೆ ಎದ್ದು ನಿಂತಳು.

''ಯಾರೋ ಪೋಕರಿಗಳು ನಾವಿಬ್ಬರೂ ಒಳಗಿರುವುದನ್ನು ನೋಡಿಯೋ ಏನೋ!—ಚಿಲಕ ಹಾಕಿಬಿಟ್ಟಿದ್ದಾರೆ!''

''ಅಯ್ಯೋ! ಇನ್ನೇನು ಗತಿ?''

''ಹೆದರಬೇಡ ತಂಗಿ! ಯಾರನ್ನಾದರೂ ಕರೆದು ತೆರೆಯಿಸಬೇಕಾಯಿತು.'' ಹೀಗೆಂದು ಶೀನು ''ವೆಂಕಮ್ಮ ವೆಂಕಮ್ಮ'' ಎಂದು ಆ ಮನೆಯಲ್ಲಿದ್ದ ಬೇರೆ ಬಿಡಾರದವಳನ್ನು ಕರೆದನು.

''ಯಾರಪ್ಪಾ!'' ಎಂದು ಕೂಗುತ್ತಾ ವೆಂಕಮ್ಮನು ಹೊರಗೆ ಬಂದಳು

''ನಾನು ಶೀನೂರೀ! ನಾನಿಲ್ಲಿ ತಂಗಿ ಕಮಲಮ್ಮನೊಂದಿಗೆ ಮಾತಾಡುತ್ತಿರುವಾಗ, ಯಾರೋ ದುಷ್ಟರು ಬಾಗಿಲು ಹಾಕಿ ಚಿಲುಕ ಸಿಕ್ಕಿಸಿಬಿಟ್ಟಿದ್ದಾರಂತ ಕಾಣುತ್ತೆ, ಕೊಂಚ ತರೆಯಿರಮ್ಮ'' ಎಂದು ಒಳಗೇ ಕೂಗಿದನು ಶೀನು

ವೆಂಕಮ್ಮನು ಬಂದು ನೋಡಿ-- ''ಅಯ್ಯೊ! ಕೇಡೇ! ಬೀಗಹಾಕಿದೆಯಲ್ಲಪ್ಪ ಶೀನೂ! ಬೀಗದ ಕೈ ಬೇಕಲ್ಲ!'' ಎಂದು ಕೂಗಿದಳು

ಈಗ ಮಾತ್ರ ಶೀನುವಿನ ಎದೆ ನಿಜವಾಗಿಯೂ ಕಂಪಿಸಿತು ಕಮಲೆಯ ಅವಸ್ಥೆಯನ್ನು ಹೇಳುವುದೇನು?

''ಅಯ್ಯಯ್ಯೊ! ಹೀಗೂ ಉಂಟೆ? ಒಳಗೆ ಮನುಷ್ಯರಿರುವಾಗ ಬೀಗ ಹಾಕುವುದೆಂದರೆ ಇದೇನು ಆಟ!'' ಎಂದು ವೆಂಕಮ್ಮನು ಕೂಗಿ ಹೇಳಿಕೊಂಡಳು.

''ವೆಂಕಮ್ಮ! ನಿಮ್ಮ ಪುಣ್ಯ! ಯಾರನ್ನಾದರೂ ಕರೆದು ಸ್ವಲ್ಪ

ವಿಚಾರಿಸಿರಮ್ಮ! ನಾನೇ ಬೀಗವನ್ನು ಕೈಯೊಂದಿಗೆ ಕೊಂಡಿಗೆ ಸಿಗಿಸಿಟ್ಟಿದ್ದೆ." ಎಂದು ಶೀನು ಹೇಳಿದನು.

ವೆಂಕಮ್ಮನು ಬೀದಿಯ ಬದಿಗೆ ಹೋಗಿ ಆಚೆ ಈಚೆ ಜನರನ್ನು ನೋಡಿ ವಿಚಾರಿಸಲು, ಕೆಲವು ಮಂದಿ ಒಂದಾಗಿ ಸೇರಿ 'ಏನು ಏನಾಯಿತೆ' ಂದು ಕೇಳಹತ್ತಿದರು

"ಒಳಗೆ ಯಾರು ಇದ್ದಾರೆ?" ಎಂದು ಒಬ್ಬನ ಪ್ರಶ್ನೆ.

ಕಿಟಕಿಯಿಂದ ಕೋಣೆಯೊಳಗೆ ನೋಡಿದ ಇನ್ನೊಬ್ಬನು–"ಓಹೊ! ಮಂಗಲಕರ್ರ್ಯಾಯರ ಮನೇ ಕಮಲಮ್ಮ! ಶೀನಾಚಾರಿಯೊಂದಿಗೆ ಸಿಕ್ಕಿ ಬಿದ್ದ ಹಾಗಿದೆ ಪಾಪ!" ಎಂದನು

"ಕಮಲಮ್ಮನು ಒಂದು ಮುಖ್ಯ ಕಾರ್ಯಕ್ಕಾಗಿ ಇಲ್ಲಿಗೆ ಬಂದದ್ದು. ಮಾತಾಡುತಿರುವಾಗ ಯಾರೋ ಬೀಗ ಹಾಕಿಬಿಟ್ಟಿದ್ದಾರೆ" ಎಂದನು ಶೀನು.

"ಹೋಗಲೀಂದ್ರೆ ಪಾಪ! ಏನಾದರೂ ಸುತ್ತಿಗೆಯೋ ಉಳಿಯೋ ತಂದು,ಬೀಗವೋ ಸಂಕಲೆಯೋ ಕಿತ್ತುಬಿಡಿರಪ್ಪಾ!" ಎಂದಳು ವೆಂಕಮ್ಮ

ಆಗೊಬ್ಬ ದೊಡ್ಡವನು—"ಬೀಗ ಹಾಕಿದವನು ತಮಾಷೆಗಾಗಿ ಹಾಕಿರಲಾರ ಅವನು ಯಾರೋ ಏನೊ! ಯಾಕ ಹಾಕಿದನೂಂತ ಗೊತ್ತಾಗದೆ ನಾವು ಒಡದ್ರೆ, ದೊಡ್ಡೋರ ಮಾತು ಹ್ಯಾಂಗ ಬರ್ತದೊ!"

ಆಗ ಇದಿರುಮನೆಯೊಳಗೆ ಕುಳಿತಿದ್ದ ಒಬ್ಬನು ಹೊರಗೆ ಬಂದು-"ಇಲ್ಲಿಗೆ ಆಗ ಕಮಲಮ್ಮ ಬಂದು ಸ್ವಲ್ಪ ಹೊತ್ತಿನ ಮ್ಯಾಗ, ಆ ವರದ ರಾಯರೂ ಕೂಡಾ ಹಿಂದೆಯೇ ಬಂದಿದ್ರಪ್ಪಾ! ಅವರು ಸ್ವಲ್ಪ ಹೊತ್ತು ಈ ಬಾಕಿಲದಾಗೇ ನಿಂತು–ಕಿಟಕೀಲಿ ಹಣಿಕಿನೋಡಿ–ಬೀಗ ಹಾಕಿ ಹೋದಹಾಂಗೆ ನಾ ನೋಡಿದೆ! ಅದರ ಉದ್ದೇಶಾ ಏನೋ ಎಂತೋ! ನಾವು ಬೀಗಾ ಒಡದ್ರೆ ದೊಡ್ಡೋರ ಇನ್ಸಾ–ಹ್ಯಾಂಗ ಬರ್ತ್ತೋ!" ಎಂಬ ಮಾತು ಕಿಟಕಿಯ ಮೂಲಕವಾಗಿ ಕಮಲೆಯ ಕಿವಿಗೆ ಕಾಸಿದ ಸೀಸದ ಹಾಗೆ ಸುರಿಯಿತು.

"ಓಹೊ! ವರದರಾಯರು ಬಂದಿದ್ದರೇನಪ್ಪಾ?" ಎಂದು ಕೂಗಿದಳು.

ಅಷ್ಟರಲ್ಲಿ, ಸತ್ಯನಾರಾಯಣ ಗುಡಿಯಲ್ಲಿ ಕಮಲೆಯನ್ನು ಹುಡುಕಿದ ಮೇಲೆ, ಪಕ್ಕೀರಮ್ಮನಿಗೂ ಗುಂಪುನೋಡಿ ಸುಳಿವು ಸಿಕ್ಕಿ ಅಲ್ಲಿಗೆ ಬಂದು, ವಿಚಾರಿಸಿ ಕೋಣೆಯೊಳಗೆ ಶೀನೂ ಕಮಲೆಯರು ಬಂದಿಗಳಾಗಿರುವುದನ್ನು ಅರಿತು ದಿಕ್ಕುದೋರದೆ ಹೋದಳು. ಅವಳು ಕಿಟಿಕಿಯಲ್ಲಿ ಇಣಿಕಿ ಕಮಲೆಯನ್ನು ಕುರಿತು—"ಏನವ್ವಾ! ಗುಡಿಗೇಂತ ಬಂದೋರು ಇಲ್ಲಿ ಹ್ಯಾಂಗ ಸಿಕ್ಕಿರಿ ತಾಯೇ?" ಎಂದು ಕೂಗಿದಳು.

ಕಮಲೆ ಧೈರ್ಯವನ್ನು ಅವಲಂಬಿಸಿ—"ಪಕ್ಕೀರಮ್ಮ! ಮನೆಯಲ್ಲಿ ವರದರಾಯರಿದ್ದಾರೇನೇ?"

"ಹೂನರೀ ಅಮ್ಮ, ಅವರೇ ನೀವು ಇಷ್ಟು ರಾತ್ರಿಯಾದರೂ ಮನೆಗೆ ಬರಲಿಲ್ಲಾಂತ, ಹುಡುಕಿಕೊಂಡು ಬಾಂತ ನನ್ನ ಕಳಿಸಿದ್ರು."

ಕಮಲೆ:— ಯಾವಾಗ ಮನೆಗೆ ಬಂದರು?

ಪಕ್ಕೀರಮ್ಮ:— ನೀವು ಗುಡಿಗೇಂತ ಹೊರಟಕೂಡಲೇ ಬಂದರು.

ಕಮಲೆ:— ನನ್ನನ್ನು ವಿಚಾರಿಸಿ ಆ ಕೂಡಲೇ ಮನೆಯಿಂದ ಹೊರಟರಷ್ಟೇ?

ಪಕ್ಕೀರಮ್ಮ:— ಹೂನರೀ ಅಮ್ಮ.

ಕಮಲೆ:— ಸರಿ, ಗೊತ್ತಾಯಿತು. ಅವನು ಕಳ್ಳನ ಹಾಗೆ ನನ್ನ ಹಿಂದೆಯೇ ಬಂದಿದ್ದಾನೆ. ನನಗೆ ಶೀನಾಚಾರಿಯ ಹತ್ತಿರ ಸ್ವಲ್ಪ ಮಾತಾಡುವ ಕೆಲಸವಿತ್ತೂಂತ ಇಲ್ಲಿಗೆ ಬಂದಾಗ ಹೀಗೆ ಸಿಕ್ಕಿಸಿ ಹಾಕಿ, ಹೋಗಿ ಈಗ ನಿನ್ನ ಹುಡುಕಲಿಕ್ಕೆ ಕಳುಹಿಸಿದ್ದಾನೋ, ಏನೂ ತಿಳಿಯದವನ ಹಾಗೆ? ಇರಲಿ. ಪಕ್ಕೀರಮ್ಮಾ! ಬೀಗವನ್ನು ಒಡೆಯಿಸಿಬಿಡು. ಯಾರಾದರೂ ಒಡೆಯಿರಪ್ಪಾ ಬೀಗವನ್ನು!

ಹೀಗೆನ್ನಲು ಒಬ್ಬನು ಕಬ್ಬಿಣದ ಸಲಾಕೆಯನ್ನು ತಂದು, ಬೀಗದ ಎಡೆಗೆ ಹಾಕಿ, ಇನ್ನೊಂದು ಸುತ್ತಿಗೆಯಿಂದ ಗುದ್ದಿ, ಬೀಗವನ್ನು ಒಡೆದು ಬಾಗಿಲು ತೆರೆದನು. ಕಮಲೆ ಹೊರಗೆ ಬಂದು,—"ಶೀನಣ್ಣ! ನಾನು ಹೋಗಿಬರುತ್ತೇನೆ. ಬೀಗ ಹಾಕಿದ ಆ ದುರಾತ್ಮನ ಮನಸ್ಸಿನಲ್ಲಿ ಏನಿದೆಯೋ! ಏನಾದರೂ ಆಗಲಿ! ಸತ್ಯದ ಮೇಲೆ ನಿಂತಿದ್ದೇವೆ. ಪುಸ್ತಕಗಳನ್ನು ಮಾತ್ರ ಜಾಗ್ರತೆಯಾಗಿಟ್ಟುಕೋ ಶೀನಣ್ಣ!" ಎಂದಳು.

"ಆಗಲಿ ತಂಗಿ! ನೀನು ಒಬ್ಬಳೇ ಹೋಗುವಿಯಾ? ನಾನೂ ಬರಲಿ?"

"ಬೇಡಣ್ಣ, ಪಕ್ಕೀರಮ್ಮ ಇದ್ದಾಳಲ್ಲ—ನಡೆ ಪಕ್ಕೀರಮ್ಮ!"

ಕಮಲೆ ಪಕ್ಕೀರಮ್ಮನೊಂದಿಗೆ ಹೊರಟಳು.

ಅವರ ಹಿಂದೆಯೇ ಕೆಲವು ಮಂದಿಯೂ ಸಾಗ ಹತ್ತಲು, ದೊಡ್ಡ ಮನುಷ್ಯನೊಬ್ಬನು—"ನಿಮಗೇನಿರಾ ಕೆಲಸವಿಲ್ಲವೇ? ನಡೆಯಿರಿ, ನಿಮ್ಮ ನಿಮ್ಮ ಪಾಡಿಗೆ!" ಎಂದು ಗಟ್ಟಿಯಾಗಿ ಗದರಿಸಲು, ಎಲ್ಲರೂ ಅವರವರ ಪಾಡಿಗೆ ಹೊರಟುಹೋದರು.

"ಆ ಕಮಲಮ್ಮ ಇಲ್ಲಿಗೆ ಯಾಕ ಬಂದಳು ಶೀನಪ್ಪಾ?" ಎಂದು ವೆಂಕಮ್ಮನು ಕೇಳಲು, ಶೀನು ಕೋಣೆಯೊಳಗಿರುವ ಪುಸ್ತಕವನ್ನು ಅವಳಿಗೆ ತೋರಿಸಿ—"ಈ ಪುಸ್ತಕಗಳನ್ನು ತಂದುಕೊಟ್ಟಳಮ್ಮ. ಇದರಲ್ಲಿ ಬಹಳ ರಹಸ್ಯವುಂಟು. ಕಮಲೆಯೂ ನಾನೂ ಚಿಕ್ಕಂದಿನಿಂದಲೂ ಒಟ್ಟಿಗೇ ಆಡಿಯೋಡಿ ಬಳೆದ ಅಣ್ಣ ತಂಗಿಯರು" ಎಂದು ಉತ್ತರವಿತ್ತು- "ಅದಿರಲಿ ಅಮ್ಮ-ನಿಮ್ಮ ಹತ್ತಿರ ಒಂದು ಬೀಗವಿದ್ದರೆ ಕೊಡುವಿರಾ? ನಾನು ಊಟಕ್ಕೆ ಹೋಗಬೇಕಲ್ಲಾ?" ಎಂದು ಕೇಳಿದನು.

"ಇವತ್ತು ನೀನು ಅಡುಗೇ ಕೆಲಸಕ್ಕೆ ಹೋಗಿಲ್ಲವೇನಪ್ಪಾ?"

"ಮತ್ತೆ ಹೋಗದೆ? ಇವತ್ತು ನಮ್ಮ ರಾಯರ ಮನೆಯವರೆಲ್ಲಾ ಬೇಗ ಐದೂವರೆ ಗಂಟೆಯೊಳಗೆ ಅಡುಗೆ ಮಾಡಿಸಿ ಊಟ ಮುಗಿಸಿ, ಸಿನೆಮಕ್ಕೆ ಹೋಗಿದ್ದಾರೆ. ನಾನು ಇನ್ನು ಮೇಲೆ ಹೋಗ ಊಟ ಮಾಡಬೇಕಷ್ಟೇ!"

"ಪಾಪ! ನಿನಗೊಂದು ವಿಪತ್ತೇ ಬಂದ ಹಾಗಾಯಿತಲ್ಲಾ ಇಲ್ಲಿ! ಇನ್ನೇನಾದರೂ ಕೇಡು ಸಂಭವಿಸಲಿಕ್ಕೂ ಸಾಕಪ್ಪಾ! ಜಾಗ್ರತೆಯಾಗಿರು ಶೀನು!"

"ನನಗೇನೂ ಭಯವಿಲ್ಲವಮ್ಮ! ಪಾಪ, ಆ ಕಮಲಮ್ಮನಿಗೆ ಏನೂ ಆಗದಿದ್ದರೆ ಸಾಕಾಗಿದೆ!"

"ಸತ್ಯವಿದ್ದಲ್ಲಿ ಸತ್ಯನಾರಾಯಣ ಇದ್ದಾನೆ!" ಎಂದು ವೆಂಕಮ್ಮ

ಒಂದು ಬೀಗವನ್ನು ತಂದುಕೊಟ್ಟಳು. ಶೀನು ಕಮಲೆ ತಂದುಕೊಟ್ಟ ಪುಸ್ತಕ ಪತ್ರಗಳನ್ನು ಪೆಟ್ಟಿಗೆಯೊಳಗೆ ಭದ್ರಪಡಿಸಿಟ್ಟು, ಕೋಣೆಗೆ ಬೀಗ ವನ್ನು ಹಾಕಿ, ಮಂಗಲಕರರ ಮನೆಯ ಕಡೆಗೇ ನಡೆದನು

---

## ೩೧. ಪೋಲೀಸ್ ಕಂಪ್ಲೇಂಟು

"ಓಃ! ಅಮ್ಮನವರ ಸವಾರಿ ಎತ್ತ ಹೋಗಿತ್ತೊ!"

ಕಮಲೆ ಪಕ್ಕೀರಮ್ಮನ ಜತೆಯಲ್ಲಿ ಮನೆಯನ್ನು ಪ್ರವೇಶಿಸುವಾಗ, ಜಗಲಿಯಲ್ಲಿ ಕುರ್ಚಿಯಲ್ಲಿ ಆಸೀನನಾಗಿ ಸಿಗರೇಟನ್ನು ಸೇದುತ್ತ ವ್ಯಂಗ್ಯ ಭಾವದಿಂದ ವರದನು ಮಾಡಿದ ಪ್ರಶ್ನೆಯದು.

"ಗೊತ್ತುಂಟು ನನಗೆ ನಿನ್ನ ರಕ್ಷಾರಿತನ ವರದಾ!" ಹೀಗೆಂದು ಕಮಲೆ ನೇರಾಗಿ ಮನೆಯೊಳಗೆ ಹೋದಳು.

"ಪಕ್ಕೀರಮ್ಮಾ! ಇಲ್ಲಿ ಬಾ—" ಎಂದು ವರದನು ಕೂಗಿದನು.

ಪಕ್ಕೀರಮ್ಮನು ಇದಿರು ಬಂದು ನಿಂತಳು. ಅಷ್ಟರಲ್ಲಿ ಗೇಟಿನ ಬಾಗಿಲಿನಿಂದ ಮಂಗಲಕರರೂ ರಾಮಚಂದ್ರರಾಯರೂ ಹೊಕ್ಕು ಮನೆಗೆ ಬಂದರು ಸಿದ್ದಪ್ಪನು ಅವರೊಂದಿಗಿರಲಿಲ್ಲ ವರದನು ಅರ್ಧಸುಟ್ಟ ಸಿಗರೇಟನ್ನು ದೂರ ಬಿಸುಟು ಎದ್ದುನಿಂತನು.

"ಏನೋ ವರದ! ಯಾವಾಗ ಬಂದಿ? ಏನು ಸಮಾಚಾರ?" ಎಂದು ನಡುಗುವ ದನಿಯಿಂದ ಕೇಳುತ್ತಾ, ಜಗುಲಿಯನ್ನೇರಿದರು ಮಂಗಲಕರರು. ರಾಮಚಂದ್ರರಾಯರೂ ಕುತೂಹಲ ಮುದ್ರೆಯಿಂದ "ಕಮಲಮ್ಮ ಕ್ಷೇಮವಾಗಿ ಬಂದಿದ್ದಾರೊ?" ಎಂದು ಪ್ರಶ್ನಿಸಿದರು

"ಹಂ, ಒಳಗಿದ್ದಾಳೆ. ಈಗ ತಾನೇ ಪಕ್ಕೀರಮ್ಮನು ಎಲ್ಲಿಂದಲೋ ಹುಡುಕಿಕೊಂಡು ಬಂದಿದ್ದಾಳೆ." ವರದನೆಂದನು

"ಏನು ಸಮಾಚಾರ ಪಕ್ಕೀರಮ್ಮಾ?" ರಾಮಚಂದ್ರರಾಯರು ಕೇಳಿದರು

ಪಕ್ಕೀರಮ್ಮನು ಏನು ಹೇಳಬೇಕೆಂದು ತೋರದೆ ತಬ್ಬಿಬ್ಬಾಗಿ— "ಬುದ್ಧಿ! ನಾನು ಹುಡುಕ್ಕೊಂಡು ಗುಡಿಯೆಲ್ಲಾ ತಿರುಗಿದ ವ್ಯಾಕ— ಮತ್ತೆ ಅಮ್ಮನವರು—ಆವ್ಯಾಕ—ಹಾಂಗ—ಅಮ್ಮನವರು—"

"ಏನೇ ಅದು? ನೀನು ಏನು ಹೇಳೋದು? ಏನಾಯಿತು ಅಮ್ಮಾವರಿಗೆ?" ಎಂದು ರಾಮಚಂದ್ರರಾಯರು ಕೇಳುತ್ತಿರಲು, ಮಂಗಲಕರರು ಗಡಿಬಿಡಿಯಿಂದ ಒಳಗೆ ಹೋದರು.

"ನನಗೆ ಅದು ಒಂದೂ ಗೊತ್ತಿಲ್ಲರೀ" ಎಂದು ಪಕ್ಕೀರಮ್ಮ ಹೊರಟು ಆಚೆಗೆ ಹೋದಳು.

ಕಮಲೆ ಶಯ್ಯಾಮಂದಿರದ ಒಂದು ಮೂಲೆಯಲ್ಲಿ ಕುಳಿತುಬಿಟ್ಟಿದ್ದಳು. ಹೃದಯದಲ್ಲಿ ಭಯ-ಧೈರ್ಯಗಳೆರಡೂ ಸಮಾನವಾಗಿ ಹೋರಾಡಿಕೊಂಡಿದ್ದುವು. ಕೋಣೆಯಲ್ಲಿ ದೀಪವೇ ಇರಲಿಲ್ಲ. ಮಂಗಲಕರರ "ಕಮಲೂ" ಎಂಬ ನಡುಕದ ಮೆಲ್ದನಿಯನ್ನು ಕೇಳಿ, ಕಮಲೆ "ಹೂಂ" ಎಂದು ಮಾರ್ದನಿಗೊಟ್ಟಳು. ಕೂಡಲೇ ಮಂಗಲಕರರು ದೀಪಕ್ಕೆ ಸ್ವಿಚ್ಚು ಹಾಕಿ, ಕಮಲೆಯನ್ನೊಮ್ಮೆ ಆಪಾದ ಮಸ್ತಕಪರ್ಯಂತವಾಗಿ ನೋಡಿ, ಹೊರಗೆ ಕೇಳಿಸದಂತೆ ಮೆಲ್ದನಿಯಿಂದ— "ಏನೆ? ಎಲ್ಲಿಗೆ ಹೋಗಿದ್ದಿ? ಏನಾಯಿತು? ತಲೆನೋವು ಅಂತ ಹೇಳಿ ಗುಡಿಗೆ ಯಾಕೆ ಹೋದಿ?"

ಕಮಲೆ ನಡುಗುವ ತುಟಿಗಳಿಂದ ಏನೋ ಹೇಳಬೇಕೆಂದು ಮಂಗಲಕರರ ಮುಖವನ್ನು ನೋಡುವಾಗ, ಬಾಗಿಲ ಒಳ ಬಂದು ನಿಂತ ಪರದನನ್ನು ನೋಡಿ—"ನನ್ನ ಏನು ಕೇಳುತ್ತೀರಿ? ಎಲ್ಲಾ ವಿಷಯವು ನಿಮ್ಮ ಮಗನಿಗೆ ಗೊತ್ತಿರಬಹುದು ಕೇಳಿರಿ ಅವನನ್ನೆ!" ಎಂದಳು.

"ನನಗೇನು ಗೊತ್ತಮ್ಮ ನಿನ್ನ ರಹಸ್ಯಗಳೆಲ್ಲಾ? ನಿನ್ನ ಪವಿತ್ರವಾದ ನಾಲಗೆಯಿಂದಲೇ ಹೇಳಿಬಿಡು!" ಪರದನೆಂದನು.

ಮಂಗಲಕರರು ಮಗನ ಮುಖವನ್ನು ಮಿಕಮಿಕನೆ ನೋಡಿದರು.

ಪರದನೆಂದ. "ಅಪ್ಪಾ! ಇದೆಲ್ಲಾ ನಾಲ್ಕು ಜನರಿಗೆ ತಿಳಿದರೆ ಮರ್ಯಾದೆ ಹೋಗುವ ವ್ಯಾಪಾರ. ಯಾಕೆ?- ನಾನು ಬಹಳ ನೀಚ! ಅಧಮ! ನನ್ನ ಮಾತು ನೀನು ನಂಬುತ್ತಿಯೇನು? ಪಕ್ಕೀರಮ್ಮನನ್ನೆ ಕೇಳು."

ಹೀಗೆಂದು ಪರದನು ಹಿಂದಿನ ಬಾಗಿಲಿನ ಬಳಿಗೆ ಹೋಗಿ ನಿಂತು, ಪಕ್ಕೀರಮ್ಮನನ್ನು ಕರೆದು, ಅವಳೊಂದಿಗೆ ಬಂದು ನಿಂತನು. ಮಂಗಲಕರರು ನಡೆದ ಸಂಗತಿ ಏನೆಂದು ಅವಳನ್ನು ಕೇಳಿದರು ಮೆಲ್ಲನೆ ಹೇಳು

ವಂತೆಯೂ ಸೂಚಿಸಿದರು. ಪಕ್ಕೀರಮ್ಮನು ಹೆದರುತ್ತ ಹೆದರುತ್ತ, ಶೀನಾ ಚಾರಿಯ ಕೋಣೆಯಲ್ಲಿ ಕಮಲೆ ಸಿಕ್ಕಿಬಿದ್ದುದನ್ನೂ, ಬೀಗ ಒಡೆಯಿಸಿ ಬಾಗಿಲು ತೆರೆಯಿಸಿದುದನ್ನೂ, ಮುಂತಾಗಿ ಎಲ್ಲವನ್ನೂ ಹೇಳಿದಳು. ಅನೇಕರು ಗುಂಪುಗೂಡಿ ಎಲ್ಲರಿಗೂ ಗೊತ್ತಾಯಿತೆಂದು ತಿಳಿದಾಗ ಪಾಪ, ಮರ್ಯಾದೆಗೆ ಅಂಜುತಿರುವ ಮಂಗಲಕರರ ತಲೆಯ ಮೇಲೆ ಆಕಾಶವೇ ಮುಗಿದು ಬಿದ್ದಹಾಗಾಯಿತು!

"ಅಪ್ಪ! ಈಗಾದರೂ ನಂಬುಗೆಯಾಯಿತೇ ಆವೊತ್ತು ನಾನು ಹೇಳಿದ ಮಾತು?" ಎಂದು ವರದನೂ ಅವರ ಹೃದಯವನ್ನು ಚುಚ್ಚಿ ಕೇಳಿದನು.

ಮಂಗಲಕರರು ಎರಡು ಕೈಗಳಿಂದಲೂ ತಲೆಯನ್ನು ಹಿಡಿದು ಕೊಂಡು "ಅಯ್ಯೋ! ಪಾಪೀಯಸಿ! ಜಾರಿಣಿ!" ಎಂದು ರುದ್ಧಸ್ವರ ದಿಂದ ಚೀರಿ, ನೀರವಳಾಗಿ ನೀರಸಳಾಗಿ ನಿಸ್ತೇಜಳಾಗಿ ಕುಳಿತಿದ್ದ ಕಮಲೆ ಯನ್ನು ಸುಡುನೋಟದಿಂದ ನೋಡುತ್ತ, ಕೈಕಾಲು ನಡುಗಿದಂತಾಗಿ, ನಿಲ್ಲಲಾರದೆ ಮಂಚದ ಮೇಲೆ ಕುಸಿಕುಳಿತರು

ಅಷ್ಟರಲ್ಲಿ ಹೊರಗೆ ಯಾರೋ ಬಂದಂತೆ ಬೂಟ್ಸಿನ ಶಬ್ದವು ಕೇಳಿ ಬಂತು "ಹಲೊ! ಗುಡ್‌ನಾಯಿಟ್ ಮಿಸ್ಟರ್ ರಾಮಚಂದ್ರರಾವ್!" ಎಂಬೊಂದು ಹೊಸ ಕೊರಳಿನ ಶಬ್ದವೂ, ಅದಕ್ಕೆ ಉತ್ತರವಾಗಿ ರಾಮ ಚಂದ್ರರಾಯರು—"ಗುಡ್‌ನಾಯಿಟ್! ಬನ್ನಿ ಮಿಸ್ಟರ್ ಪ್ರಸಾದರಾವ್! ಕುಳಿತುಕೊಳ್ಳಿ!" ಎಂದು ಹೇಳಿದುದೂ ಕೇಳಿಸಿತು

ಕೂಡಲೇ ವರದನು ಹೊರಗೆ ಬಂದು, ಕುರ್ಚಿಯಲ್ಲಿ ತುಂಬಿಸಿ ಕೊಂಡು ಕುಳಿತಿದ್ದ ಘನಶರೀರಿಗಳಾದ ಪೋಲೀಸ್ ಇನ್ಸ್‌ಪೆಕ್ಟರ್ ಪ್ರಸಾದರಾಯರನ್ನು ಕಂಡು—"ಗುಡ್‌ನಾಯಿಟ್ ಸಾರ್" ಎಂದು ಅಭಿವಂದಿಸಿದನು.

ಪ್ರಸಾದ:— ಗುಡ್‌ನೈಟ್! ತಂದೆಯವರೆಲ್ಲಿ?

"ಇದ್ದಾರೆ." ಎಂದು ವರದನು ಒಳಗೆ ಹೋಗಿ ಮೆಲ್ಲನೆ "ಅಪ್ಪ! ಪೋಲೀಸ್ ಇನ್ಸ್‌ಪೆಕ್ಟರ್ ಪ್ರಸಾದರಾಯರು ಬಂದಿದ್ದಾರಲ್ಲ? ನೀನು ಬರಹೇಳಿರುವಿಯೇನು?" ಎಂದನು.

"ನನ್ನ ಕರ್ಮ!" ಎಂದು ಮಂಗಲಕರರು ಹಣೆಯನ್ನು ಬಡಿದುಕೊಂಡು "ಹೌದು. ನಾನೇ ಬರಹೇಳಿದ್ದೆ. ಅಯ್ಯೋ! ಏನು ಹೇಳಲೀ ಅವರ ಹತ್ತಿರ?" ಎಂದು ಕಸಿವಿಸಿಪಡಲಾರಂಭಿಸಿದರ

"ಒಳ್ಳೇದಾಯಿತಪ್ಪ! ನಾನೆಲ್ಲಾ ಸರಿಮಾಡಿಬಿಡುತ್ತೇನೆ ನೀನೇನೂ ಗಾಬರಿಯಾಗಬೇಡ ಅಪ್ಪ!"

"ನೀನೇನು ಸರಿಮಾಡುತ್ತೀಯೋ ನನ್ನ ಕರ್ಮ! ನನ್ನ ಮಾನದ ಪೆಟ್ಟನ್ನು ನಾನೇ ಬಾಯಿಬಿಟ್ಟು ಹೇಗೋ ಹೇಳೋದು? ಅಯ್ಯೋ!—" ಎಂದು ಮಂಗಲಕರರು ಕಮಲೆಯನ್ನು ನೋಡಿ—"ಛೀ! ಪಿಶಾಚಿ! ಮಾರಿ! ನಿನ್ನನ್ನು ಏನು ತಾನೇ ಮಾಡಲಿ? ಕೊಚ್ಚಲಿ? ಕೊಲ್ಲಲಿ? ಹುಗಿಯಲಿ?—" ಎನ್ನುತ್ತಾ ಕ್ರೋಧದಿಂದ ಕಮಲೆಯನ್ನು ಹೊಡೆಯಲಿಕ್ಕಾಗಿ ಕೈಬೀರಿಕೊಂಡು ಏಳಲು, ವರದನು ಅವರ ಕೈಯನ್ನು ಹಿಡಿದು ತಡೆದು—"ದುಡುಕಬೇಡಪ್ಪಾ! ಹೀಗೆ ಮಾಡಿದರೇನೇ ನಮ್ಮ ಮುಖಕ್ಕೆ ಮಸಿಯಾಗೋದು! ಹೊರಗೆ ಬಾ ಅಪ್ಪ. ಇನ್ಸ್ಪೆಕ್ಟರೊಡನೆ ಜಾಣ್ಮೆಯಿಂದ ಮಾತಾಡಿ ಸರಿ ಮಾಡೋಣ" ಎಂದು ತಂದೆಯನ್ನು ಹಿಡಿದುಕೊಂಡು ಹೊರಗೆ ಬಂದನು.

ಮಂಗಲಕರರೂ ನಿಸ್ತೇಜವಾದ ಮುಸುಕು ಮೊಗದಿಂದ ಹೊರಗೆ ಬಂದರು. ಪ್ರಸಾದರಾಯರ ವಂದನೆಗೆ ಪ್ರತಿವಂದನೆಯನ್ನು ಸಲ್ಲಿಸಿ ಕುರ್ಚಿಯೊಂದರಲ್ಲಿ ಕುಳಿತರು. ಹೊಟ್ಟೆಯೊಳಗಣ ತಳಮಳವು ಅವರ ಮುಖದಲ್ಲಿ ಎದ್ದು ಕಾಣುತ್ತಿತ್ತು.

"ಕಮಲೆ ಮನೆಯಲ್ಲಿಲ್ಲ—" ಎಂದು ಸಿದ್ದಪ್ಪನು, ಪೆರ್ಗ್ಯಾಟೀ ಹಾಲಿನೊಳಗೆ ತಂದುಕೊಟ್ಟ ವರದನ ಲಘುಪತ್ರವನ್ನು ನೋಡುತ್ತಲೇ ಗಾಬರಿಯಾಗಿ ಮಂಗಲಕರರು ಸಿನೇಮಾ ಮಂದಿರದಿಂದ ಮನೆಗೆ ಬರುವಾಗ, ಕಮಲಾ ಸುಂದರಿಗೆ ಯಾರೋ ದುಷ್ಟರಿಂದ ಏನೋ ಅಪಾಯವಾಗಿರಬೇಕೆಂಬ ಶಂಕೆಯೇ ಅವರ ಮನಸ್ಸಿಗೆ ಹೊಡೆದಂತಾಯಿತು. ಆಗ ದಾರಿಯಲ್ಲಿ ಅವರ ಸುಪರಿಚಿತರೇ ಆದ ಪೋಲೀಸ್ ಇನ್ಸ್ಪೆಕ್ಟರ್ ಪ್ರಸಾದರಾಯರ ಮನೆಯ ತುಂಡು ಬೀದಿಯೂ ಹತ್ತಲು, ಅವರ ಜ್ಞಾಪಕ ಬಂದು, "ರಾಯರು ಹೇಳಿದ್ದಾರೆ, ಈಗಲೇ ಸ್ವಲ್ಪ ಮನೆಯ

ವರೆಗೆ ಬಂದು ಹೋಗಬೇಕಂತೆ" ಎಂದು ಹೇಳಿ ಅವರನ್ನು ಕರಕೊಂಡು ಬರುವಂತೆ ನಿಯಮಿಸಿ ಸಿದ್ದಪ್ಪನನ್ನು ಅವರ ಮನೆಗೆ ಕಳುಹಿಸಿದ್ದರು. ಅಂತೆಯೇ ಈಗ ಪ್ರಸಾದರಾಯರು ಸಿದ್ದಪ್ಪನೊಡನೆಯೇ ಹೊರಟು ಬಂದಿದ್ದರು.

ಪ್ರಸಾದ:— ಏನು ವಿಶೇಷ? ಮಿಸ್ಟರ್ ಮಂಗಲಕರರಿಗೆ ದೇಹದಲ್ಲಿ ಸೌಖ್ಯವಿಲ್ಲವೆಂದು ತೋರುತ್ತದಲ್ಲ?

ಮಂಗಲ:— ದೇಹವೇನೋ ಸರಿಯಾಗೇ ಇದೆ. ಒಂದು ಸಣ್ಣ ಸಂಗತಿ ಸಂಭವಿಸಿತು. ಆದರೆ ಊಹಿಸಿದಷ್ಟು ಅನರ್ಥವುಂಟಾಗುವುದರೊಳಗೆ ದೇವರು ಕಾಪಾಡಿದ ಹಾಗಾಯಿತು.

ಪ್ರಸಾದ.— ಏನಾಯಿತು?

ಮಂಗಲಕರರು ಏನು ಹೇಳಬೇಕೋ-ಏನು ಹೇಳಬಾರದೋ ಎಂಬ ವಿಚಾರದಿಂದ ವರದನ ಮುಖವನ್ನು ನೋಡಿದರು. ಆಗ ವರದನು ಹೀಗೆಂದನು:—

"ತಂದೆಯವರು ತುಂಬಾ ಅಧೀರರಾಗಿದ್ದಾರೆ, ನಾನು ಹೇಳುತ್ತೇನೆ. ನನ್ನ ತಂದೆ ಬಹಳ ಸರಳ ರೀತಿಯವರೆಂಬುದನ್ನು ತಾವು ಬಲ್ಲಿರಿ. ಇವರು ಮನುಷ್ಯರನ್ನು ಪರೀಕ್ಷೆ ಮಾಡದೆ ಒಮ್ಮೆಲೇ ನಂಬಿಬಿಡುತ್ತಾರೆ. ಶೀನಾಚಾರಿ ಎಂಬೊಬ್ಬ ಅಡುಗೆಯವನನ್ನು ಆ ರೀತಿಯಾಗಿ ಇವರು ನಂಬಿದ್ದರು. ಆವನೊಬ್ಬ ಕವೀ-ಕವೀ ಅಂತ ನನ್ನ ತಂದೆ ಆವನಿಗೆ ತುಂಬಾ ಸಹಾಯ ಮಾಡುತ್ತಾ ಇದ್ದರು. ಇತ್ತೀಚೆಗೆ, ಹತ್ತು ದಿನಗಳ ಕೆಳಗೆ, ತಂದೆಯವರು ಬೆಂಗಳೂರಿಗೆ ಹೋಗಿದ್ದಾಗ—"

ಎನ್ನುತಿರಲು ಮಂಗಲಕರರು ನಡುವೆ ಬಾಯಿತೆಗೆದು—"ಅದೆಲ್ಲ ಪುರಾಣ ಯಾಕೋ ಹೇಳುತ್ತಿ? ಮುಖ್ಯ ಸಂಗತಿ ಹೇಳೋದು ಬಿಟ್ಟು?"

ವರದ:— ಅದಕ್ಕೂ ಇದಕ್ಕೂ ಎಷ್ಟು ಸಂಬಂಧವುಂಟೊಂತ ಇವರಿಗೆ ಗೊತ್ತಾಗಲೀ ಅಪ್ಪಾ!—ಕೇಳಿ ಸಾರ್! ಅಂದು ಈ ಶೀನಾಚಾರಿ ಗೋಡೆ ಹಾರಿ ಕಮಲಮ್ಮನ ಕೋಣೆಯೊಳಗೆ ಹೊಕ್ಕಿದ್ದ. ಆಗ ಕಮಲಮ್ಮ ಹೆದರಿ ಕೂಗಿದ್ದು ಕೇಳಿ, ನಾನು ಹೋಗಿ, ತಂದೆಯೊಡನೆ ಹೇಳಿದರೂ, ಇವರು ನಂಬದೆ, ಆ ದುಷ್ಟನಿಗೆ ಇಂಬುಕೊಟ್ಟೇ ಬಂದರು.

ಇವತ್ತು ನನ್ನ ತಂದೆ ಸಿನೇಮಕ್ಕೆ ಹೋದಮೇಲೆ ಕಮಲಮ್ಮನು ಸತ್ಯ ನಾರಾಯಣ ಗುಡಿಗೆ ಹೋಗಿದ್ದಳಂತೆ. ಅಲ್ಲಿ ಆ ಶೀನಾಚಾರಿ ಮೆಲ್ಲನೆ ಹಿಂದಿನಿಂದ ಬಂದು, ಅವಳ ಕೈಯಲ್ಲಿದ್ದ ಯಾವುದೋ ಪುಸ್ತಕವನ್ನು ಎಳೆದೋಡಿ ಹೋಗಿ, ಸಮೀಪದಲ್ಲಿದ್ದ ತನ್ನ ಕೋಣೆಯನ್ನು ಹೊಕ್ಕ ನಂತೆ. ಅದಕ್ಕಾಗಿ ಅವನ ಹಿಂದೆಯೇ ಕಮಲಮ್ಮನೂ ಅವನ ಕೋಣೆಗೆ ಹೊಕ್ಕಳಂತೆ. ಕೂಡಲೇ ಅವನು ಬಾಗಿಲು ಹಾಕಿಕೊಂಡನಂತೆ! ಅವ ನೇನೋ ಅತ್ಯಾಚಾರಕ್ಕೆ ಪ್ರಯತ್ನ ಮಾಡುವಾಗ ಯಾರೋ ಕಿಲಾಡಿಗಳು ಕಿಟಕಿಯಲ್ಲಿ ನೋಡಿ, ಬಾಗಿಲಿಗೆ ಬೀಗಹಾಕಿಬಿಟ್ಟರಂತೆ! ಆ ಮೇಲೆ ಕಮಲಮ್ಮನ ಕೂಗನ್ನು ಕೇಳಿ, ಜನರು ಗುಂಪುಗೂಡಿದರಂತೆ ಅಷ್ಟ ರಲ್ಲಿ ಮದರಾಸಿನಿಂದ ಆಗ ತಾನೇ ಮನೆಗೆ ಬಂದಿದ್ದ ನಾನೂ ಸಂಶಯ ಪಟ್ಟು, ನಮ್ಮ ಮನೆಯ ಸೇವಕಿ ಪಕ್ಕೀರಮ್ಮನನ್ನು ಕಳುಹಿಸಿಕೊಟ್ಟುದ ರಿಂದ, ಅವಳು ಹೋಗಿ ಯಾರಿಂದಲೋ ಬೀಗವನ್ನು ಒಡೆಯಿಸಿ, ಕಮ ಲಮ್ಮನನ್ನು ಸುರಕ್ಷಿತವಾಗಿ ಕರಕೊಂಡು ಬಂದಿದ್ದಾಳೆ. ಪುಣ್ಯದಿಂದ ಏನೂ ಪ್ರಮಾದವು ಜರುಗಲಿಲ್ಲ. ತಾವು ಆ ಶೀನಾಚಾರಿಯನ್ನು ಹಿಡಿದು ನ್ಯಾಯದಂಡನೆಗೆ ಗುರಿಪಡಿಸಬೇಕೆಂದು ನಮ್ಮ ಕೋರಿಕೆ,—ಅಲ್ಲವೇ ಅಪ್ಪ ?''

ಮಂಗಲಕರರು ತಲೆಯಾಡಿಸಿ 'ಹೌದೆ'ಂಬ ಭಾವವನ್ನು ತೋರಿಸಿ ದರು.

ಪ್ರಸಾದ.—ಓಹೊ! ಅವನೊಬ್ಬ ಪಕ್ಕಾ ಆಸಾಮಿಯಾಗಿರಬೇಕು! ಇಷ್ಟೆಲ್ಲಾ ಮಾಡಿದ ಆತನು ಇಷ್ಟರೊಳಗೆ ಊರುಬಿಟ್ಟು ಪಲಾಯನ ಮಾಡಿರಲಿಕ್ಕಿಲ್ಲವಷ್ಟೆ ?''

ಮಂಗಲ:— ಅದೇನೂ ಮಾಡಲಾರ. ಮಾಡಿದರೂ ಎಲ್ಲಿಗೆ ಮಾಡಿಯಾನು ? ನೋಡಿದರೆ ಮಾತ್ರ ಬಹಳ ಸಾಧುವಿನ ಹಾಗೆ ಇರು ತ್ತಾನೆ

ಪ್ರಸಾದ:— ಅವನು ಇರುವುದೆಲ್ಲಿ ?

ಮಂಗಲ:— ಗಾಂಧೀನಗರದಲ್ಲಿ ವಕೀಲ ವೆಂಕೋಬರಾಯರಲ್ಲಿ ಅಡುಗೇ ಮಾಡುತ್ತಾನೆ. ಸತ್ಯನಾರಾಯಣ ಗುಡಿಯ ಬಳಿಯಲ್ಲಿ

ರಾಮಯ್ಯನ ಮನೆಯ ಒಂದು ಕೋಣೆಯಲ್ಲಿ ಬಾಡಿಗೆಯ ವಾಸದಲ್ಲಿ ದಿನ ಕಳೆಯುತ್ತಾನೆ.

ಪ್ರಸಾದ:— ಒಳ್ಳೆಯದು. ನಾನು ಅವನನ್ನು ವಿಚಾರಿಸಿ ಕೇಳುತ್ತೇನೆ.

ವರದ:— ಅವನು ನೆರೆದ ಗುಂಪಿನವರೊಡನೆ—' ಕಮಲಮ್ಮನು ನನಗೆ ಪುಸ್ತಕಗಳನ್ನು ಕೊಡಲಿಕ್ಕಾಗಿ ಬಂದಳು. ಯಾರೋ ಪೋಕರಿಗಳು ಬೇಕಂತ ಬೀಗಹಾಕಿಬಿಟ್ಟರು ' ಎಂದು ಹೇಳುತ್ತಾನಂತೆ !

ಪ್ರಸಾದ:— ಅವನು ಬೇಕಾದ್ದು ಹೇಳುತ್ತಾನೆ! ಕೇಳುತ್ತಾರೆ ಯಾರು ? ಅದಿರಲಿ, ಪುಸ್ತಕವೆಂದರೆ ಅದಾವ ಪುಸ್ತಕ? ಕಮಲಮ್ಮ ಗುಡಿಗೆ ಹೋಗುವಾಗ ಪುಸ್ತಕವೇಕೆ ಕೊಂಡೊಯ್ಯಬೇಕು ?

ವರದನು ಫಕ್ಕನೆ ಏನು ಹೇಳಬೇಕೆಂದು ತೋರದೆ—" ಅದೇನೋ ಸರಿಯಾಗಿ ವಿಚಾರಿಸಲಿಲ್ಲ. ಪಾಪ, ಅವಳು ಈಗ ಸರಿಯಾಗಿ ಮಾತಾಡುವ ಸ್ಥಿತಿಯಲ್ಲಿಲ್ಲ. ಮುಖ್ಯ ಅವನ ಕೋಣೆಯನ್ನು ಶೋಧಿಸಿದರೆ, ನಮ್ಮ ಪುಸ್ತಕ ಹೊರಟೇ ಹೊರಡುತ್ತೆ.'' ಎಂದು ಹೇಳಿದನು. ಕಮಲೆ ಯಾವುದೋ ಪುಸ್ತಕಗಳನ್ನು ಶೀನುವಿಗೆ ಕೊಟ್ಟಿರುವುದನ್ನು ಅವನು ನೋಡಿದ್ದ ನಂಬುಗೆಯಿಂದ ಹಾಗೆಂದದ್ದು.

ಆದರೆ ಈ ಪುಸ್ತಕದ ಮಾತಿನಲ್ಲಿ ಅಷ್ಟೊಂದು ದೃಢತ್ವವಿರುವಂತೆ ಪ್ರಸಾದರಾಯರಿಗೆ ಕಂಡುಬರಲಿಲ್ಲ. ಬೇಕೆಂದು ಏನೋ ಹೇಳಿದ ಹಾಗೆ ಸಡಿಲುತನವಾಗಿ, ಅವರ ತೀಕ್ಷ್ಣವಾದ ವಿಮರ್ಶಕ ಬುದ್ಧಿಗೆ ಗೋಚರಿಸಿತು. " ಇರಲಿ ನೋಡೋಣವೆ " ೦ದುಕೊಂಡು,—" ಹಾಗಾದರೆ ಕಮಲಮ್ಮನೊಡನೆ ನಾಲ್ಕು ಮಾತುಗಳನ್ನು ಕೇಳಲು ಸಾಧ್ಯವಿಲ್ಲವೇ ಈಗ ? " ಎಂದು ಕೇಳಿದರು.

" ಈಗ ಅವಳು ತುಂಬಾ ಅಧೀರಳಾಗಿದ್ದಾಳೆ. ನಮಗೇ ಇಷ್ಟು ಸಂಗತಿಯನ್ನು ಕೇಳಿ ತಿಳಿದುಕೊಳ್ಳಬೇಕಾದರೆ ಬಹಳ ಕಷ್ಟವಾಯಿತು." ಎಂದು ಮಂಗಲಕರರಂದರು. ಅವರ ಸ್ವರದಲ್ಲಿ ಕಂಪನವು ಕೂಡಿಕೊಂಡಿತ್ತು.

ಕೂಡಲೇ ರಾಮಚಂದ್ರರಾಯರು—" ಈಗ ಅವರನ್ನು ಕೇಳುವ

ಆವಶ್ಯಕವೇನಿದೆ? ಈ ಸಮಯದಲ್ಲಿ ಅವರನ್ನು ಪ್ರಶ್ನೆಗಳಿಂದ ಘಾತಿಸುವುದು ಒಳ್ಳೆಯದಲ್ಲವೆಂದು ತೋರುತ್ತೆ.'' ಎಂದು ಮಂಗಲಕರರ ಪರವಾಗಿ ಹೇಳಿದರು.

"ಮುಖ್ಯ ಪ್ಯಾಂಟ್ ಗೊತ್ತಾಯಿತಷ್ಟೆ? ಇನ್ನು ಆ ಘಾತುಕ ಶೀನಾಚಾರಿಯನ್ನು ಅರೆಸ್ಟ್ ಮಾಡಲು ಅಡ್ಡಿಯೇನಿದೆ?'' ಎಂದು ಸವಾಲು ಹಾಕಿದನು ವರದ.

"ಒಳ್ಳೆಯದು ನೀವು ಹೇಳಿದ ಕಂಪ್ಲೇಂಟುಗಳಿಗೆ ಸರಿಯಾಗಿ, ನಾಳೆ ಕಮಲಮ್ಮನೂ ಹೇಳಬೇಕಾದೀತಲ್ಲವೆ? ಅದಕ್ಕಾಗಿ ಕೇಳಿದೆನು'' ಹೀಗೆಂದು ಪ್ರಸಾದರಾಯರು ಜೇಬಿನಿಂದೊಂದು ಕಾಗದವನ್ನು ತೆಗೆದು ಮಂಗಲಕರರ ಕೈಗೆ ಕೊಡುತ್ತ—'' ಇದರಲ್ಲಿ ಕಂಪ್ಲೇಂಟು ಬರೆದು ಕೊಡಿರಿ'' ಎಂದರು.

ಮಂಗಲಕರರು ನಡುಗುವ ಕೈಗಳಿಂದ—ನಡುಕವನ್ನು ನಿಲ್ಲಿಸಬೇಕೆಂದು ಅವರು ಎಷ್ಟು ಪ್ರಯತ್ನಪಟ್ಟರೂ ಸಾಧ್ಯವಾಗಲಿಲ್ಲವೆಂದು ತೋರುತ್ತೆ—ಆ ಪತ್ರವನ್ನು ಪಡೆದು—'' ಕಂಪ್ಲೇಂಟು—ಬರೆಯಬೇಕೆ? ಪಾಪ! ಸ್ವಲ್ಪ ಸಿಧಾನಿಸಿ ಯೋಚನೆ ಮಾಡಿ—''

ಪ್ರಸಾದ:— ಏಕೆ ಹಿಂಜರಿಯುತ್ತೀರಿ ಮಿಸ್ಟರ್ ಮಂಗಲಕರ್? ಕಾನೂನು ನಿಮಗೆ ತಿಳಿಯದೆ? ಅಪರಾಧಿಗೆ—ಅದೂ ಇಂತಹ ದುರಾಚಾರಿಗೆ ತಕ್ಕ ಶಿಕ್ಷೆಯಾಗಬೇಕೆಂದು ನೀವು ಬಯಸುವುದಿಲ್ಲವೆ?

ಕೂಡಲೇ ವರದನೆಂದನು:— ನನ್ನ ತಂದೆಯದು ಬಹಳ ಮೃದುಮನಸ್ಸು. ಇನ್ನೂ ಆ ನೀಚನಿಗೆ ದಯೆಯನ್ನು ತೋರಿಸಬೇಕೆಂದಿದ್ದಾರೋ ಏನೊ?

'' ಮಂಗಲಕರ ಮಹಾಶಯರು ಸ್ವಯಂ ಗ್ರಂಥಕರ್ತರಲ್ಲವೆ? ಆದುದರಿಂದ ಗುಣಗಳಲ್ಲಿ ಶ್ರೇಷ್ಠವಾದ ಕ್ಷಮಾಗುಣವನ್ನು ಸ್ವಯಂ ಆಚರಣೆಯಲ್ಲಿ ತೋರಿಸಬೇಕೆಂದಿರುವರು" ರಾಮಚಂದ್ರರಾಯರಂದರು.

ಪ್ರಸಾದ:— ನಿಮಗೆ ಆ ಬಗೆಯ ಉತ್ತಮ ಮನಸ್ಸಿರಬಹುದು. ಆದರೆ ಪೋಲೀಸ್ ಇನ್ಸ್‌ಪೆಕ್ಟರರ ಕಿವಿಗೆ ಬಿದ್ದ ಮೇಲೆ ಅಪರಾಧಿಯನ್ನು ಸುಮ್ಮನೆ ಬಿಡುವರೇನು? ನ್ಯಾಯಸೀರದ ಮುಂದೆ ನಿಲ್ಲಿಸಿಯೇ·

ತೀರುವರು. ಮಿಸ್ಟರ್ ಮಂಗಲಕರ್! ದುರಾತ್ಮನಿಗೆ ತಕ್ಕ ದಂಡನೆಯನ್ನು ಕೊಡಿಸಲು ಜಂಕಬಾರದು. ಬರೆಯಿರಿ ನೋಡುವಾ ಕಂಪ್ಲೇಂಟು!

ಮಂಗಲಕರರು ಪ್ರಯತ್ನಪೂರ್ವಕವಾಗಿ ಮುಗುಳ್ನಗೆಯನ್ನು ತಂದುಕೊಂಡು—"ಏನೋ ಪಾಪ ಹೋಗಲೀಂತ ಆಲೋಚನೆ ಮಾಡು ತ್ತೇನೆ. ಅಂತಹ ಪ್ರಮಾದವೇನೂ ಆಗಿಲ್ಲವಷ್ಟೇ ದೇವರ ಕೃಪೆಯಿಂದ? ನಾನೇ ಅವನನ್ನು ಇಲ್ಲಿಗೆ ಕರೆಯಿಸಿ, ಬೈದು ನಾಲ್ಕೇಟು ಕೊಟ್ಟರೆ ಸರಿಯಾಗಿ ಹೋದಾನು ಪಾಪ! ದಿಕ್ಕಿಲ್ಲದ ಪರದೇಶಿ ಹುಡುಗ!"

ಪ್ರಸಾದ:— ಭೇಷ್! ಸರಿಯಾಗಿ ಹೇಳಿದಿರಿ! ನೀವು ಬರೆದು ಕೊಡದೆ ಬಿಟ್ಟರೆ, ನಾವಾಗಿಯೇ ಈ ಕೇಸನ್ನು ಸ್ಥಿರಪಡಿಸುವ ಕ್ರಮವೂ ನಮಗೆ ಗೊತ್ತಿದೆ. ಈ ಬಗೆಯ ಸಂನ್ಯಾಸವೃತ್ತಿ, ಅಬಲೆಯ ಮೇಲಣ ಬಲಾತ್ಕಾರದಂತಹ ಈ ದುರಾತ್ಮಿಕೆಯ ಪ್ರಕರಣದಲ್ಲಿ ಅಲ್ಲ!"

ಮಂಗಲಕರರು ವರದನ ಮುಖವನ್ನು ನೋಡಿದರು ಒಡನೆಯೆ ಆ ಸುಪುತ್ರನು—"ಇಲ್ಲಿ ತಾರಪ್ಪ, ನಾನೇ ಬರೆಯುತ್ತೇನೆ." ಎಂದು ಆ ಕಾಗದವನ್ನು ಇಸುಗೊಂಡು, ಬರೆಯಲಾರಂಭಿಸಿದನು ಈ ಮೊದಲು ಆವನು ಶೀನೂ ಕಮಲೆಯರ ಸಂಬಂಧದಲ್ಲಿ ಯಾವ ರೀತಿಯಾಗಿ ಪ್ರಸಾದರಾಯರೊಡನೆ ಹೇಳಿದ್ದನೋ, ಅದೇ ಅಭಿಪ್ರಾಯಕ್ಕೆ ಅನುಸಾರವಾದ ಕ್ರಮದಲ್ಲಿ ಬರೆದನು. ಮಂಗಲಕರರು ನಡುಗುವ ಕೈಯಿಂದ ಅದಕ್ಕೆ ರುಜುಹಾಕಿದರು. ಪ್ರಸಾದರಾಯರು ಅದನ್ನು ತೆಗೆದುಕೊಂಡು ಮೌನಮುದ್ರೆಯಿಂದ ಓದಿನೋಡಿ ತಲೆದೂಗಿ—"ಸರಿ, ಆದರೆ ಕಮಲಮ್ಮನು ಯಾವ ಪುಸ್ತಕವನ್ನು ಗುಡಿಗೆ ಒಯ್ದಳೆಂದು ಗೊತ್ತಿಲ್ಲ ಹಾಗಾದರೆ? ನಿಮಗೆ ಸಂಬಂಧಿಸಿದ ಪುಸ್ತಕಗಳೇನಾದರೂ ಅಲ್ಲಿ ಸಿಕ್ಕಿದರೆ ಅವೇ ಎಂದು ತಿಳಿದುಕೊಳ್ಳಬೇಕಾಗುವುದು."

ಮಂಗಲ:— ಅದು ಹೇಗಿದ್ದರೂ ನಿಧಾನವಾಗಿ ಗೊತ್ತಾಗದೆ ಹೋಗುವುದಿಲ್ಲ

ರಾಮಚಂದ್ರ:— ಆ ಪುಸ್ತಕದಿಂದ ಅಷ್ಟೇನೂ ಉಪಯೋಗವಿಲ್ಲವೆಂದು ನನಗೆ ತೋರುತ್ತೆ. ಏಕೆಂದರೆ 'ಪುಸ್ತಕವನ್ನು ನೋಡಲಿಕ್ಕಾಗಿ ಕಮಲಮ್ಮ ಇಲ್ಲಿಗೆ ಬಂದಳೆ'ಂದು ಅವನೇ ಹೇಳುತ್ತಾನಲ್ಲಾ?

ಇದರಿಂದ ಆ ಪುಸ್ತಕವನ್ನು ಅವನೇ ತೋರಿಸುವನೆಂದೂ ಅರ್ಥ ವಾಗುವುದಷ್ಟೆ?

ಪ್ರಸಾದ:— ಪ್ರಕೃತ ಹಾಗೆ ಅರ್ಥವಾದರೂ ಈಗ ಅವನು ಈ ಊರಿನಲ್ಲಾದರೂ ಇದ್ದಾನೋ ಅಥವಾ ಫರಾರಿಯೇ ಆದನೋ! ಈಗ ಎಲ್ಲಿಗೆ ಹೋದರೆ ಅವನು ಸಿಕ್ಕಬಹುದೆಂದು ನಿಮ್ಮ ಊಹೆ?

ಮಂಗಲಕರ್:— ಈಗ ವಕೀಲ ವೆಂಕೋಬರಾಯರ ಮನೆಯಲ್ಲಿಯೇ ಇರಬಹುದು.

ಪ್ರಸಾದ:— ಇರಲಿ, ನಾನು ಈಗಲೇ ಸ್ಟೇಶನ್ನಿಗೆ ಹೋಗಿ ಅವನ ಶೋಧಕ್ಕೆ ಇಬ್ಬರು ಜವಾನರನ್ನು ಕಳುಹಿಸುತ್ತೇನೆ ಬರುತ್ತೇನೆ ನಾನು, ಗುಡ್‌ನಾಯಿಟ್!

ಪ್ರಸಾದರಾಯರು ಎದ್ದು ಹೊರಡಲನುವಾದರು.

ಎಲ್ಲರೂ ಎದ್ದು ಒಂದೇ ಬಾಯಿಗೆ "ಗುಡ್‌ನೈಟ್" ಎಂದು ಪ್ರತಿ ಸಾರವನ್ನು ಒಪ್ಪಿಸಿದರು.

"ನಾನೂ ಹೊರಡುತ್ತೇನೆ, ಮಿಸ್ಟರ್ ಮಂಗಲಕರ್ರಾಯರೆ! ಏನೂ ಆತಂಕಪಡಬೇಡಿ!" ರಾಮಚಂದ್ರರಾಯರಂದರು.

ಮಂಗಲಕರರು ಕಡತಂದ ನಗುವಿನಿಂದ—"ಛೆ! ಛೆ! ಆತಂಕಕ್ಕೇನಿದೆ? ಒಳ್ಳೇದು ಗುಡ್‌ನಾಯಿಟ್!"

"ಗುಡ್‌ನಾಯಿಟ್!" ಎಂದು ರಾಮಚಂದ್ರರಾಯರೂ ಪ್ರಸಾದರಾಯರ ಹಿಂದೆಯೇ ಹೊರಟರು.

---

## ೩೨ "ಅಯ್ಯೋ! ಮೋಸವಾಯಿತು!"

ಅವರು ಹೊರಟುಹೋದ ಮೇಲೆ ಮಂಗಲಕರರು ತಲೆಯ ಮೇಲೆ ಕೈಯಿಟ್ಟುಕೊಂಡು ಯೋಚನೆ ಮಾಡಲಾರಂಭಿಸಿದರು. ಈಗ ಅವರಿಗೆ ಕಮಲೆಯ ಮೇಲೆ ಅಪನಂಬುಗೆಯೂ, ವರದನ ಮೇಲೆ ನಂಬುಗೆಯೂ ಉಂಟಾಗಿತ್ತು. "ಸಿನಿಮಕ್ಕೆ ಬರುವಿಯಾ?" ಎಂದು ಕೇಳಿದುದಕ್ಕೆ ಕಮಲೆ ತನಗೆ ಮೈಯಲ್ಲಿ ಚೆನ್ನಾಗಿಲ್ಲವೆಂದು ಸುಳ್ಳು ಹೇಳಿದುದು, ಆ ಶೀನುವಿನ ಕೂಡ ವ್ಯಭಿಚಾರ ಮಾಡಲಿಕ್ಕಾಗಿಯೇ ಎಂದು ಅವರ ಖಾತ್ರಿ. ಅಂದು

ಬೆಂಗಳೂರಿನಿಂದ ಬಂದ ದಿನ ರಾತ್ರಿ ವರದನು ಹೇಳಿದುದನ್ನು ಅವರು ನಂಬಿರಲಿಲ್ಲ. ಈಗ ಗೊತ್ತಾಯಿತು—ವರದನದೇನೂ ಕೆಡುಕುತನವಿಲ್ಲವೆಂದು! ಹಾಗೆಂದು ಬಾಯಿಬಿಟ್ಟು ಚೀರಾಡಿದರೆ, ತನ್ನ ಮಹಾಮರ್ಯಾದೆ ಬೀದಿಗೀಡಾಗುತ್ತದಲ್ಲಾ ಏನು ಮಾಡುವುದೆಂದು ಮಿಡುಕುತ್ತಿರುವಾಗ, ಕಡುಜಾಣನಾದ ವರದನು ಮರ್ಯಾದೆ ಉಳಿಸಿಕೊಳ್ಳುವ ವಿಧಾನವಾಗಿ, ಇನ್ಸ್ಪೆಕ್ಟರ್ ಪ್ರಸಾದರಾಯರೊಡನೆ ಹೇಳುವಾಗ ಅವರಿಗೆ ಸ್ವಲ್ಪ ಸಮಾಧಾನವಾದರೂ, ವರದನ ಆ ಉಪಾಯದ ಹೂಟದಲ್ಲಿ. ಪುಸ್ತಕದ ಸಮಾಚಾರವನ್ನು ಹೇಳುತ್ತಲೇ, "ಕಳ್ಳನ ಜೀವವು ಹುಳ್ಳಹುಳ್ಳಗೆ" ಎಂಬಂತೆ, ಅವರಿಗೆ ಹೇಗೆಹೇಗೋ ಆಯಿತು. ಕರುಳು ಚುಚುಕಿದಂತಾಯಿತು. ಮನಸ್ಸು ಎಲ್ಲೆಲ್ಲೋ ಹೊಂಚಿತು. ಇಲ್ಲದುದನ್ನೆಣಿಸಿತು. ವರದನ ಬಾಯಿಯಿಂದ ಆ ಪುಸ್ತಕದ ಮಾತು ಹೊರಬೀಳುತ್ತಲೇ, ಸರಿಯಾದ ದಾರಿಯಲ್ಲಿ ನಡೆಯುವೆನೆಂಬ ನಂಬುಗೆಯಿಂದ ಕತ್ತಲೆಯಲ್ಲಿ ನಡೆಯುವಾಗ, ಎರಡೂ ಕಾಲು ಒಡಕ್ಕನೆ ಮುಳ್ಳುಹೊದರ ಮೇಲೆ ಬಿದ್ದ ಹಾಗಾಯಿತು! ಪ್ರಸಾದರಾಯರು ತನ್ನನ್ನೆ ತಿರುತಿರುಗಿ ಪ್ರಶ್ನಿಸುವಾಗ ಕರುಳಿನವರೆಗೆ ಒಂದೊಂದು ಮುಳ್ಳು ಹತ್ತುವಹಾಗಾಯಿತು. ಆದರೆ ಕಡೆಯಲ್ಲಿ ಪ್ರಸಾದರಾಯರು ಎಲ್ಲಿ ಕಮಲೆಯನ್ನು ಕರೆದೇ ಮಾತಾಡಿಸುವರೇನೋ ಎಂಬ ಭಯ! ಏಕೆಂದರೆ ಇವರು ಹೇಳಿದುದೆಲ್ಲಾ ಸುಳ್ಳಲ್ಲವೆ? ಕಮಲೆಯನ್ನು ಆಗಲೇ ಕರೆದು ವಿಚಾರಿಸುತ್ತಿದ್ದರೆ, ಏನು ಹೇಳುತ್ತಿದ್ದಳೋ ಯಾರಿಗೆ ಗೊತ್ತು? ತಾನು ವಿಟಗಾರ ಶೀನುವಿನೊಂದಿಗೇ ಹೋಗುತ್ತೇನೆಂದರೂ ಎಂದಾಳು; ಅಥವಾ ಶೀನುವಿಗೂ ತನಗೂ ಏನೂ ಪಾಪ ಸಂಬಂಧವಿಲ್ಲವೆಂದು ಸಾಧಿಸಿದರೂ ಸಾಧಿಸಿಯಾಳು. ಇವರು ಕಲ್ಪಿಸಿದ ವಿಧಾನಕ್ಕೆ ಸರಿಯಾಗಿ ಇನ್ನು ಮೇಲೆ ತಾನೇ ಅವಳನ್ನು ತರಬೇತು ಮಾಡಬೇಕಷ್ಟೇ! ಅವಳು ಜಾರಿಣಿಯೆಂದು ಅವರಿಗೆ ತಿಳಿದುಹೋದರೂ, ಮರ್ಯಾದೆಗಾಗಿ ಸತೀಮಣಿಯ ವೇಷವನ್ನು ಇನ್ನು ಮೇಲೆ ತಾನೇ ಅವಳಿಗೆ ತೊಡಿಸಬೇಕಾಗಿತ್ತು. ವೇಷಕ್ಕೆ ತಕ್ಕಹಾಗೆ ನಟಿಸಲು ಇನ್ನು ಮೇಲೆ ತಾನೇ ಅವಳಿಗೆ ಕಲಿಸಿಕೊಡಬೇಕಾಗಿತ್ತು. ಆದುದರಿಂದ ಇನ್ಸ್ಪೆಕ್ಟರ್ ಸಾಹೇಬರನ್ನು ತಾನೇಕೆ ಅವಸರವಾಗಿ ಬರಮಾಡಿಕೊಂಡೆನೋ ಎಂದು

ಹಳಹಳಿಸಿಕೊಂಡರು ಆದರೆ ಆಗ ಒಂದೇ ಒಂದು ಯೋಚನೆ ಮಾತ್ರವೇ ಬಂದಿತ್ತು. ತರುಣಿಯಾದ ಹೆಂಡತಿ–ಸುಂದರಿಯಾದ ತರುಣಿ, ಅಪರೂಪವಾಗಿ ರಾತ್ರಿಯ ಹೊತ್ತಿನಲ್ಲಿ ಮನೆಯಲ್ಲಿಲ್ಲವೆಂದರೆ–ಬಹಳ ಸಾಧ್ವಿಯಾಗಿದ್ದವಳಿಗೆ, ಯಾರೋ ದುಷ್ಟರಿಂದಲೇ ಏನೋ ಅಪಾಯವಾಗಿರಬೇಕೆಂದೂ, ಪೋಲೀಸ್ ಇನ್ಸ್ಪೆಕ್ಟರಿದ್ದರೆ ತುಂಬಾ ಧೈರ್ಯವೂ ಸಾಹಸವೂ ಉಪಕಾರವೂ ಆದೀತೆಂದೂ ಆಗ ತೋರಿತ್ತು. ಈಗ ನೋಡಿದರೆ ಇದು ಅವರ ಕಲ್ಪನೆಗೇ ವಿರುದ್ಧವಾಗಿ. ಕಮಲೆಯ ಒಪ್ಪಿಗೆಯಿಂದಲೇ ನಡೆದ ವ್ಯಭಿಚಾರ! ರಹಸ್ಯದಲ್ಲಿ ಸರಿಗೊಳಿಸಬೇಕಾದ ವಿಚಾರ. ಆದಾದರೂ ಅನ್ಯಸಂಬಂಧವೇನಾದರೂ ಆಗಿರುತ್ತಿದ್ದರೆ, ಒಂದೋ ಅಂತರಂಗದಲ್ಲಾಗಲೀ–ಇಲ್ಲವೇ ಬಹಿರಂಗವಾಗಿಯಾಗಲೀ ಏನಾದರೊಂದು ವ್ಯವಸ್ಥೆ ಮಾಡಿಬಿಡಬಹುದಿತ್ತು. ಹೀಗೆ ಯೋಚನೆಗಳ ಸಿಕ್ಕಾಟದಲ್ಲಿ ಸಿಕ್ಕಿ ಬೀಳಬೇಕಾಗಿರಲಿಲ್ಲ ಇದಾದರೋ ಆ ಶೀನುವಿನೊಡನೆ–ಯಾರ ಅಕ್ಷರಗಳನ್ನೆಲ್ಲಾ ಇವರು ತನ್ನದನ್ನಾಗಿ ಸಾಧಿಸಲು ಯತ್ನಿಸಿದ್ದರೋ ಆ ಶೀನುವಿನೊಡನೆಯೇ ಪ್ರಸಂಗ! ತಾನು ಅವನಿಗೆ ಅಕ್ಷರ ದ್ರೋಹಿಯಾದುದಕ್ಕೆ ಪ್ರತಿಯಾಗಿ ಅವನು ತನ್ನ ಪತ್ನಿಯನ್ನೆ ಸ್ವಾಧೀನಪಡಿಸಿಕೊಂಡಿದ್ದಾನೆ. ಇನ್ನು ಅವನಿಗೆ ನ್ಯಾಯಶಿಕ್ಷೆಯನ್ನು ಕೊಡಿಸಹೋದುದಾದರೆ, ಮುಂದೆ ಅವನಿಂದ ಅಕ್ಷರ ಸಾಹಾಯ್ಯವಾಗದೆ ಹೋಗುವುದಂತೂ ಹೋಗಲಿ; ಈವರೆಗೆ ಆದುದಕ್ಕೇ ಅವನು ತಿರುಗಿ ನಿಲ್ಲಬಹುದು, ಮೂಲ ಪ್ರತಿಗಳನ್ನು ಕೇಳಬಹುದು ಅವನದೇನೂ ಇಲ್ಲ, ಅವನು ತನ್ನ ಲೇಖಕನಾಗಿದ್ದನೆಂಬುದನ್ನು ತಾನು ಸರಿಯಾಗಿ ಸಪ್ರಮಾಣವಾಗಿ ಸಾಧಿಸಬೇಕಾಗಬಹುದು ಇದರೆಡೆಯಲ್ಲಿ "ವಿಧಿಯ ಬಲೆ"ಯ ಪ್ರಶ್ನೆಯೂ ಎದ್ದುಬರಬಹುದು. ಇದೆಲ್ಲಾ ಧನಬಲ–ಜನಬಲ ಸಹಾಯಗಳಿಂದ ಸಾಧಿಸಿ ಗೆಲ್ಲಬಹುದೆಂಬ ಧೈರ್ಯವಿದ್ದರೂ "ಅಕ್ಷರಾಣಾಂ ಅಕಾರೋಽಸ್ಮಿ" ಎಂಬ ಶ್ರೀಕೃಷ್ಣವಾಕ್ಯದಂತೆ, ಪರಮಾತ್ಮ ಸ್ವರೂಪವಾದ ಪ್ರತ್ಯಕ್ಷ ಅಕ್ಷರಗಳ ವಿಷಯದಲ್ಲಿ ಅವರು ದ್ರೋಹಮಾಡಿದ್ದ ಕಾರಣ, ನಿಜವಾಗಿ ಕಾರ್ಯರಂಗಕ್ಕೆ ಇಳಿದ ಮೇಲೆ, ನಡೆಯುವ ವಿಧಾನವೆಲ್ಲಾ ಒಮ್ಮೆಲೇ ಅವರ ಕಣ್ಣಮುಂದೆ ಕಟ್ಟಿ, ಗಡಗಡನೆ ನಡುಗಲಾರಂಭಿಸಿದರು. ಅಂತೆಯೇ

ಆ ವಿಷಯದಲ್ಲಿ ಪೋಲೀಸು—ಕೋರ್ಟು—ವಿಚಾರಣೆ ಮುಂತಾದವುಗಳ ಹೆಸರು ಬರುತ್ತಲೇ ಹೆದರುತಿದ್ದರು. ಇಷ್ಟೇ ಅಲ್ಲದೆ, ಮಹಾಪ್ರಚಂಡವಾದ ಜಡಿಮಳೆ—ಬಿರುಮಳೆಯಿಂದೊಡಗೂಡಿದ ತುಫಾನಿನ ಭೀತಿಯನ್ನು ಸೂಚಿಸುವ, ಕರಾಳವಾದ ಮೇಘದ ಭಾಗವೊಂದು, ಭಯಂಕರ ರೇಖೆಯಿಂದ ದಿಗಂತದ ಅಂಚಿನಲ್ಲಿ ಹೊಂಚುಹಾಕುವಂತೆ, ಅವರ ಮನಸ್ಸಿನ ಪದರುಗಳೆಡೆಯಲ್ಲಿ, ಒಂದು ಭಯಂಕರವಾದ ಸಂದೇಹವು ಹೊಂಚು ಹಾಕಲಾರಂಭಿಸಿತು! ಶೀನುವಿಗೂ ಕಮಲೆಗೂ ಬಹುದಿನಗಳಿಂದ ಈ ಬಗೆಯ ಪಾಪ ಸಂಬಂಧವಿದ್ದೀತೆ? ಹಾಗಿದ್ದರೆ ಅವರ ಅಕ್ಷರದ್ರೋಹದ ರಹಸ್ಯವು ಕಮಲೆಗೆ ಗೊತ್ತಿದ್ದು—ಅವಳ ಮೂಲಕ ಶೀನುವಿಗೂ ಗೊತ್ತಿದ್ದೀತು! ಆದರೆ ಶೀನುವಿನ ವರ್ತನೆಗಳಿಂದ ಹಾಗಿಲ್ಲದಂತೆಯೇ ಇತ್ತು. ಇತ್ತೀಚೆಗಿನವರೆಗೂ ಅವನು ಪುಸ್ತಕಗಳನ್ನು ಬರೆದುಕೊಡುತ್ತಲೇ ಇದ್ದನಲ್ಲ! ಮೊನ್ನೆ ಕೂಡಾ "ತ್ಯಾಗಿ" ಯನ್ನು ತಂದುಕೊಟ್ಟಿದ್ದಾನೆ! ಆದರೆ ಅವನ ಮೂಲಪುಸ್ತಕಗಳನ್ನೆಲ್ಲಾ ಸುಟ್ಟುಹಾಕುವಂತೆ ಕಮಲೆಯ ಕೈಗೆ ಕೊಟ್ಟಿರುವರಲ್ಲವೆ? ಅವಳು ಅವುಗಳನ್ನು ಸುಟ್ಟುಹಾಕಿದ್ದಾಳೋ—ಅಥವಾ ಆ ವಿಟಗಾರನಿಗೆ ಕೊಟ್ಟು ಸುಳ್ಳೇ ಹೇಳಿದ್ದಾಳೋ! ಅಯ್ಯೊ! ಇದನ್ನು ನೆನೆದರೇ ಮೂರ್ಛೆ ಬರುವಹಾಗಿತ್ತು! ಆದುದರಿಂದ ಆ ವಿಷಯವನ್ನು ಹೆಚ್ಚಿಗೆ ಯೋಚನೆ ಮಾಡಲು ಹೆದರಿ—"ಛೇ! ಅವೆಲ್ಲ ಸುಟ್ಟು ಬೂದಿಯೇ ಆದುವು! ಇನ್ನು ಅವನು ತಿರುಗಿಸಿಂತರೂ, ಉಳಿದ ಪ್ರತಿಗಳೆಲ್ಲಾ ಬೇರೆ ಜನರ ಬರೆಹವಾದುದರಿಂದ ಅವನ ಬೇಳೆ ಬೇಯದು!—" ಎಂದು ಏನೇನೋ ಸಮಾಧಾನವನ್ನು ಎಳೆದೆಳೆದು ತಂದುಕೊಳ್ಳುತಿದ್ದರು.

ಇಂತಹ ಭೀತಿ ಶಂಕಾತಂಕಗಳ ಎಡೆಯಲ್ಲಿ ಸಿಕ್ಕಿ ಮೌನವಾಗಿದ್ದ ತಂದೆಯನ್ನು ನೋಡಿ ವರದನು "ಅಪ್ಪ!" ಎಂದು ಕರೆದನು.

ಮಂಗಲಕರರು ತಲೆಯೆತ್ತಿ "ಏನಪ್ಪ?" ಎಂದರು.

ವರದ:— ಯೋಚನೆ ಏಕೆ ಅಪ್ಪ? ಉಪಾಯವು ಸರಿಯಾಗಿಲ್ಲವೇನು?

ಮಂಗಲ:— ಸರಿಯೋ ಗಿರಿಯೊ! ಆದರೆ ನೀನು ಹೇಳಿದಂತೆ ಕೊಟ್ಟ ಕಂಪ್ಲೇಂಟಿನಲ್ಲಿ ಒಂದು ತೊಂದರೆಯುಂಟಲ್ಲಪ್ಪಾ?

ವರದ:— ಅದೇನು ?

ಮಂಗಲ:— ಕಮಲೆಯು ಕೈಯಲ್ಲಿ ಪುಸ್ತಕವಿತ್ತೆಂದು ಯಾಕೆ ಹೇಳಿದಿ ?

ವರದ:— ಶೀನುವಿನ ಕೋಣೆಗೆ ಕಮಲಮ್ಮ ಹೋಗಬೇಕಾಯಿತು, ಎನ್ನುವುದಕ್ಕಾಗಿ

ಮಂಗಲ.— ಬೇರೆ ಏನಾದರೂ ಹೇಳಬಹುದಿತ್ತಲ್ಲ ?

ವರದ:— ಅದರಿಂದೇನಾಯಿತಪ್ಪಾ? ಶೀನಾಚಾರಿ ಯಾವಾಗಲೂ ನಿನ್ನ ಬಳಿಗೆ ಬಂದು ಏನಾದರೂ ಪುಸ್ತಕಗಳನ್ನು ಒಯ್ಯುವುದಿಲ್ಲವೆ? ಅವನ ಬಳಿಯಲ್ಲಿ ನಿನ್ನ ಯಾವುದಾದರೂ ಪುಸ್ತಕವಿಲ್ಲದೆ ಹೋದೀತೆ? ಅಲ್ಲದೆ ಕಮಲಮ್ಮ ಪುಸ್ತಕವನ್ನು ಕೊಡಲಿಕ್ಕಾಗಿ ತನ್ನ ಬಳಿಗೆ ಬಂದಳೆಂದು ಶೀನುವೇ ಹೇಳುತ್ತಾನಲ್ಲಾ ?

ಮಂಗಲ:— ಹೌದಪ್ಪಾ! ಗುಡಿಗೆ ಹೋದವಳು ಪುಸ್ತಕವೇಕೆ ಒಯ್ಯುತ್ತಾಳೋ? ಇದಕ್ಕೇನು ಉತ್ತರ ?

ವರದ:— ಇದಕ್ಕೆ ಹೀಗೊಂದು ಕಲ್ಪಿಸಿದರಾಯಿತು. ನಾನು ಗುಡಿಗೆ ಹೊರಟು ಬೀದಿಗೆ ಬರುವಾಗ, ಆಫೀಸು ಜವಾನನು ಯಾವುದೋ ಪುಸ್ತಕವನ್ನು ತಂದುಕೊಟ್ಟನೆಂದೂ, ಹಿಂದಿರುಗಿ ಅದನ್ನು ಮನೆಯಲ್ಲಿ ಡದೆ, ಅದನ್ನು ಕೈಯಲ್ಲೇ ಹಿಡಿದುಕೊಂಡು ನೇರಾಗಿ ಗುಡಿಗೆ ಹೋದೆನೆಂದೂ ಕಮಲೆ ಹೇಳಲಿ ಪುಸ್ತಕ ಯಾವುದೆಂದು ಬಿಡಿಸಿ ನೋಡಿಲ್ಲವೆಂದೂ ಹೇಳಲಿ.

ಮಂಗಲ:— ಆಯಿತು ಆ ಪಾಪಿಷ್ಠ ಜಾರಿಣಿಯನ್ನು ಹೀಗೆ ಹೇಳಲು ನಾನು ಒತ್ತಾಯಿಸಬೇಕಾಯಿತು! ಅವಳ ಗಂಡನೇ ಆದ ನಾನು! ಅಯ್ಯೋ! ನನ್ನ ಕರ್ಮವೆ !

ವರದ:— ಮತ್ತೆ ಮಾಡುವುದೇನು ? ನಮ್ಮ ಕಚ್ಚೆಯ ಕೊಳಕನ್ನು ಹೊರಗೆ ತೋರಿಸದೆ ಹೇಗಾದರೂ ಮುಚ್ಚಿಕೊಳ್ಳಬೇಕಲ್ಲ ಮತ್ತೆ ?

ಮಂಗಲ:— ಅವಳು ಹೀಗೆ ಹೇಳಲು ಒಪ್ಪಬೇಕಲ್ಲ? ತಾನು ಆ ಜಾರನೊಂದಿಗೇ ಹೋಗುತ್ತೇನೆಂದು ಪಟ್ಟುಹಿಡಿದರೆ ಏನು ಮಾಡಲಾದೀತು?

ವರದ:— ಹಾಗೆಂದಾಳೆ? ಅವನೊಂದಿಗೆ ಹೋದರೆ ಏನು ಸುಖ ಪಟ್ಟಾಳೂಂತ ಹಟಹಿಡಿಯಲಿಕ್ಕೆ? ನೀನೇನೂ ಜಂಕಬೇಡಪ್ಪಾ. ಹಾಗೆಯೇ ಹಟಹಿಡಿದರೆ ಆ ಮೇಲೆ ನೋಡಿಕೊಳ್ಳೋಣ.

ಮಂಗಲ:— ಹಾಯ್! ಹಾಯ್! ಸ್ತ್ರೀಬುದ್ಧಿಃ ಪ್ರಳಯಂಗತಾ!

ವರದನು ತಂದೆಗೆ ಆದಷ್ಟು ಧೈರ್ಯವನ್ನು ಹೇಳಿ ಸಮಾಧಾನ ಪಡಿಸಿದನು. ಮಂಗಲಕರರು ಉಕ್ಕುಕ್ಕಿ ಬರುತ್ತಿರುವ ಕೋಪ-ಸಂತಾಪ-ಅಸಹನೀಯತೆಗಳನ್ನು ಅಡಗಿಸಿಕೊಂಡು, ಕಮಲೆ ಕುಳಿತಿದ್ದ ಕೋಣೆಗೆ ಹೋದರು.

ಮೂಲೆಯಲ್ಲಿ ಕುಳಿತಿದ್ದ ಕಮಲೆ ಇನ್ನೂ ಹಾಗೆಯೇ ಕುಳಿತಿದ್ದಳು. ಹೊರಗೆ ಇನ್ಸ್ಪೆಕ್ಟರ್ ಪ್ರಸಾದರಾಯರು ಮುಂತಾದವರು ಮಾತಾಡುತ್ತಿದ್ದುದು ಆವಳ ಕಿವಿಗೆ ಬಿದ್ದಿತ್ತು. ಆದನ್ನು ಕೇಳಿ, ಇನ್ನು ಸ್ವಲ್ಪ ಹೊತ್ತಿನಲ್ಲಿ ತನ್ನ ಮೇಲೊಂದು ಬಲಾತ್ಕಾರವು ನಡೆಯುವುದೆಂದು ಅವಳಿಗೆ ಗೊತ್ತಿತ್ತು. ಆಗ ತಾನು ಅವರು ಹೇಳಿದಂತೆ ಹೇಳಲು ಒಪ್ಪಬೇಕೇ ಬೇಡವೆ?... ಎಂಬುದನ್ನು ತನ್ನೊಳಗೇ ತರ್ಕಿಸಿಕೊಳ್ಳತೊಡಗಿದ್ದಳು. ತನ್ನ ಮೇಲೆ ಪತಿಯ ನಂಬುಗೆಯೂ ಕೆಟ್ಟುಹೋಗಿರುವುದೆಂದು, ಪತಿಯ ಬಾಯಿಯಿಂದ ಹೊರಟ "ಜಾರಿಣಿ—" ಮುಂತಾದ ಶಬ್ದಗಳಿಂದ ಅವಳಿಗೆ ಗೊತ್ತಾಗಿತ್ತು. ಅವರು ತಮ್ಮ ಮರ್ಯಾದೆಯನ್ನು ಮುಚ್ಚಿಕೊಳ್ಳಲಿಕ್ಕಾಗಿ, ತನ್ನಿಂದ ಹಾಗೆ ಹೇಳಿಸಿದರೂ, ತಮ್ಮ ಕಾರ್ಯವಾದ ಮೇಲೆ ತನಗೆ ತಕ್ಕ ಶಾಸನ ಮಾಡದೆ ಬಿಟ್ಟಾರೆ? ಜಾರಿಣಿಯಾದ ಪತ್ನಿಯನ್ನು ಮನೆಯಲ್ಲಿಟ್ಟುಕೊಂಡು ಯಾರಾದರೂ ಪ್ರೀತಿಯಿಂದ ಬಾಳಗೊಡಿಸಿಯಾರೆ? ಆದುದರಿಂದ ಪತಿಗೆ ತನ್ನ ಪಾವಿತ್ರ್ಯವನ್ನು ತೋರಿಸುವಂತೆ ಮಾಡುವ ಸಾಧನವು ಯಾವುದಿದೆ? ಯಾವುದೂ ತೋರುವುದಿಲ್ಲ. ನೋಡಿದವರು ಶೀನಣ್ಣನಿಗೂ ತನಗೂ ಪಾಪಸಂಬಂಧವಿರುವ ಹಾಗೆ ತಿಳಿದುಕೊಳ್ಳುವ ಹಾಗೇ ಆಗಿದೆ. ಇಷ್ಟೂ ನಡೆದುದು ವಿಷಹೃದಯನಾದ ವರದನಿಂದ. ಮಾಡುವುದೇನು? ಯೋಚನಾಂತದಲ್ಲಿ ಸತ್ಯವನ್ನು ಹೇಳಿಬಿಡುವುದೇ ಶ್ರೇಯಸ್ಕರವೆಂದು ಅವಳಿಗೆ ತೋರಿತು. "ಸತ್ಯಕ್ಕೆ ಸಾವಿಲ್ಲ." ಆದರೆ ಆಗ ತನ್ನ ಪತಿ ಶೀನಣ್ಣನಿಗೆ ಮಾಡಿದ ಅಕ್ಷರದ್ರೋಹ ಸಮಾ

ಚಾರವೂ ಬಯಲಾದೀತು. ಆಗ ಪತಿಗೆ ದೊಡ್ಡ ಅಪಮಾನವಾದೀತು. ಆದರೆ ಈ ಅವಮಾನವು ಈಗಲ್ಲದಿದ್ದರೆ, ಎಂದಾದರೂ ಆಗತಕ್ಕುದೇ. ಈಗ ಮಾತ್ರ ತನ್ನಿಂದಾಗಿ ಆಗುವುದರಿಂದ, ಅವರು ತನ್ನ ಮೇಲೆ ಸಿಟ್ಟಿನ ಬೆಂಕೆಯನ್ನೆ ಕಾರಿ ಏನಾದರೂ ಮಾಡಿಬಿಟ್ಟಾರು. ಮಾಡಿದರೆ ಮಾಡಲಿ! ಸತ್ಯಪ್ರಕಾಶನದಿಂದ ತನಗೇ ಕೇಡುಂಟಾಗುವುದಾದರೆ ಆಗಲಿ! ಅದು ತನ್ನ ಪೂರ್ವಕರ್ಮಫಲವೆಂದು, ಸಂತೋಷದಿಂದ ಅನುಭವಿಸುವೆನು. ಆದರೆ ಸುಳ್ಳನ್ನು ಹೇಳಿ ಸತ್ಯಸತ್ವಶಾಲಿಯಾದ ತನ್ನ ಹೊಸ ಅಣ್ಣನನ್ನು–ಆ ದೇವಸಮಾನನನ್ನು ಎಂದಿಗೂ ಸಂಕಟದಲ್ಲಿ ಸಿಕ್ಕಿಸಲಾರೆನು. ಈ ಬಗೆಯಾಗಿ ತೀರ್ಮಾನಿಸಿಕೊಂಡು, ಧೈರ್ಯವಾಗಿದ್ದಳು.

"ಎಲೆಯೇ ಕಲಂಕಿನಿ!'' ಎಂದು ಮಂಗಲಕರರು ಕಂಪಿತ ಕಂಠದಿಂದ ಕರೆದರು.

ಕಮಲೆ ತಲೆಯೆತ್ತಿ ನೋಡಿ—"ಯಾರನ್ನು ಕರೆಯುತ್ತೀರಿ ?"

"ನಿನ್ನನ್ನೇ—ಚಾಂಡಾಲಿನಿ!''

"ನಾನು ಕಲಂಕಿನಿಯಲ್ಲ! ಚಾಂಡಾಲಿನಿಯೂ ಅಲ್ಲ!"

"ಅಲ್ಲವೇ—ನಾಯಿಯೆ!"

"ಅಲ್ಲ! ಸತ್ಯನಾರಾಯಣ ದೇವರನ್ನು ಸ್ಮರಿಸಿ ಹೇಳುತ್ತೇನೆ. ನಾನು ಕಲಂಕಿನಿಯಲ್ಲ! ಆ ಶ್ರೀನಿವಾಸನು ನನ್ನ ಅಣ್ಣ. ತಿರ್ಥರೂಪ ಸಮಾನನಾದ ಅಣ್ಣ! ಅಣ್ಣ!"

"ಅಣ್ಣನಂತೆ! ಅಣ್ಣ!—" ಮಂಗಲಕರರು ಒತ್ತಿಹೇಳಿ "ಆಯಿತು! ಅವನೊಬ್ಬ ದೊಡ್ಡಣ್ಣನೇ ಆಗಿರಲಿ! ನೀನು ಮಹಾಪತಿವ್ರತಾ ಶಿರೋಮಣಿಯೇ ಆಗಿರು! ಇದಕ್ಕೆ ತಕ್ಕಹಾಗೆಯೇ ಕಂಪ್ಲೇಂಟು ಕೊಟ್ಟಿದ್ದೇನೆ. ನಾನು ಕೊಟ್ಟಿರುವ ಕಂಪ್ಲೇಂಟಿಗೆ ಸರಿಯಾಗಿಯೇ ನೀನೂ ಹೇಳಬೇಕು. ಹಾಗೆ ಹೇಳಿದರೆ ನಿನ್ನ ಮೇಲೆ ಯಾವ ಅಪವಾದಕ್ಕೂ ಎಡೆಯಿಲ್ಲ. ಸತ್ಯವನ್ನು ದೇವರು ನೋಡಿಕೊಳ್ಳಲಿ!"

"ನೀವು ಏನೋ ನನಗೆ ಹೇಳಿಕೊಡುವ ಹಾಗೆ ಕಾಣುತ್ತದೆ! ಅದು ನಿಮ್ಮ ಆತ್ಮಸಾಕ್ಷಿಗೆ ವಿರೋಧವಾಗಿದ್ದೀತು!"

"ನನ್ನ ಆತ್ಮಸಾಕ್ಷಿಗೆ ವಿರೋಧವಾಗಿದ್ದರೆ ನಿನಗೇನು? ನೀನಂತೂ

ಪತಿವ್ರತೆಯಾಗಿ ಸುಖವಾಗಿರುವಿಯಲ್ಲ? ನಿನ್ನನ್ನು ಸುಖವಾಗಿರಗೊಡಿಸಿ, ಈ ಮೋಸಗಾರ ಘಾತುಕ ಶೀನುವನ್ನು ಶಿಕ್ಷೆಗೆ ಗುರಿಪಡಿಸುವುದು ನನ್ನ ಉದ್ದೇಶವಾಗಿದೆ!''

"ಪೈಶಾಚಿಕ ಉದ್ದೇಶವಿದು!—ನೀವು ಏನು ಬೇಕಾದರೂ ಹೇಳಿರಿ! ನನ್ನ ನಾಲಗೆಯಿಂದ ಸುಳ್ಳುಮಾತ್ರ ಹೊರಡಲಾರದು! ನಾನು ಸತ್ಯವನ್ನು ಹೇಳಿಯೂ ನೀವು ನನ್ನ ಮೇಲೆ ಖಂಡಿತವಾದ ಸಂಶಯವನ್ನೆ ಪಡುವು ದಾದರೆ, ನನ್ನನ್ನು ಬೇಕಾದ ಹಾಗೆ ಶಿಕ್ಷಿಸಿರಿ, ಕೊಲೆಮಾಡಿರಿ! ಸುಳ್ಳು ವಿಧಾನವನ್ನು ಮಾತ್ರ ನನಗೆ ಕಲಿಸಿಕೊಡಬೇಡಿರಿ!"

"ಎಲ್ಲಾ ಗೊತ್ತಿದೆ! ಇಷ್ಟು ಸಣ್ಣ ಪೋರಿ–ನನಗೆ ಕಲಿಸಿಕೊಡು ವಿಯಾ? ಯಾರು ಕೇಳಿದರೂ ನೀನು ಹೇಳಬೇಕಾದುದು ಹೀಗೆಯೇ ಇರಿ!—" ಎಂದು ವರದನು ನಿರ್ಮಾಣ ಮಾಡಿದ–ಪ್ರಸಾದರಾಯರೊಡನೆ ಹೇಳಲ್ಪಟ್ಟ–ಕಂಪ್ಲೇಂಟು ಬರೆದು ಕೊಟ್ಟಿರುವ–ಆ ವಿಧಾನವನ್ನು ವಿವರಿಸಿ ಹೇಳಿ—"ಹೀಗೆಯೇ ಹೇಳಬೇಕು! ಇದರಿಂದ ನಿನಗೂ ನನಗೂ ಕ್ಷೇಮ ವುಂಟು!'' ಎಂದು ಮತ್ತೆ ಮತ್ತೆ ಒತ್ತಿಯೊತ್ತಿ ಅಂದರು.

"ಕ್ಷೇಮವುಂಟು! ಹೀಗೆ ನನ್ನ ಬಾಯಿಯಿಂದ ಹೇಳಿಸಿ, ನಿರಪ ರಾಧಿಯಾದ ಶೀನಣ್ಣನ ಕುತ್ತಿಗೆಗೆ ಉರುಲು ಬಿಗಿದರೆ ನಿಮಗೆ ಕ್ಷೇಮವುಂ ಟಲ್ಲವೇ? ಆಹಾ! ಇದು ನಿಮ್ಮ ದ್ರೋಹತನದ ಪರಮಾವಧಿಯೆಂದು ನಿಮಗೆ ತಿಳಿಯುವುದಿಲ್ಲವಲ್ಲ! ಹಾಯ್! ಹಾಯ್!"

"ಏನೇನಂದಿ?—'' ಕಮಲೆಯ ಕಡೇ ಮಾತಿನ ಕೊನೆ, ಬಿಸಿಬಿಸಿ ಯಾಗಿ ಮಂಗಲಕರರ ಹೃದಯಕ್ಕೆ ತಟ್ಟಿ, ಅವರ ಬಾಯಿಯಿಂದ ಹೊರಟ ಉದ್ಗಾರವಿದು!

"ನನ್ನ ಪ್ರಾಣವು ಹೋದರೂ ಸುಳ್ಳು ಹೇಳಿ ನಾನು ಶೀನಣ್ಣನನ್ನು ಶಿಕ್ಷಿಸಿ ಹಾಕಲಾರೆನು! ಶೀನಣ್ಣನು ನಿರಪರಾಧಿ! ಸತ್ಯದ ಆಧಾರದ ಮೇಲೆ ದೃಢವಾಗಿ ನಿಂತಿರುವ, ಶೀನಣ್ಣನಿಗೆ ಎಂದಿಗೂ ದಂಡನೆಯಾಗ ಲಾರದು! ಇದನ್ನು ಇಷ್ಟು ಮಟ್ಟಿಗೆ ದೊಡ್ಡದು ಮಾಡಿದವನು, ನಿಮ್ಮ ಏಕುಮಾರನಾದ ವರದ! ನನ್ನ ಮೇಲೆಯೂ ನಿರಪರಾಧಿ ಶೀನಣ್ಣನ

ಮೇಲೆಯೂ ಸೇಡುತೀರಿಸಿ ತೃಪ್ತನಾಗಬೇಕೆಂದು ಅವನೇ ಹೂಡಿದ ಹೂಟವಿದು!"

"ಏನೇನು?" ವರದನು ಬಾಗಿಲ ಬದಿಯಲ್ಲಿ ನಿಂತು, ಬೆದರಿಸುವ ಕಣ್ಣುಗಳಿಂದ ಕಮಲೆಯನ್ನು ನೋಡಿದನು.

ಕಮಲೆ ಕ್ರೋಧಸಂತಪ್ತಳಾಗಿ—"ಹೌದು! ನೀನೆ! ವರದಾ! ಘಾತುಕ! ನೀನೆ! ನೀನೇ ಈ ಸಣ್ಣ ವಿಷಯವನ್ನು ಬೇಕಂತ ದೊಡ್ಡದು ಮಾಡಿ ಅನರ್ಥಕ್ಕೆ ಮೂಲಕಾರಣನಾಗಿರುತ್ತೀ! ಪೋಲೀಸು ಕೇಸಾಗಿ ಕೋರ್ಟು ವಿಚಾರಣೆಗೆ ಬರುವಾಗ ಪರಿಣಾಮದ ಪೆಟ್ಟು ಯಾರಿಗೆ ಹೊಡೆದೀತೆಂದು ನೀನೇನು ಕಂಡಿರುವಿಯೋ ಮೂರ್ಖ!"

ವರದ:—"ಓಹ್ಹೋ! ಮಾಡಿದ ಪಾಪದ ಮೇಲೆ ಆಡುವ ಬಾಯಿ ನೋಡು! ಆಹಾಹಾ! ಮಹಾ ಕೋರ್ಟು ಕಾನೂನುಗಳನ್ನು ಬಲ್ಲವಳು! ಮನೆಗೆ ಬಂದ ಮಾರಿ!—"

"ಅಯ್ಯೋ! ಕೂಗದಿರೊ ವರದ!—" ಮಂಗಲಕರರು ಚಡಪಡಿಸುವ ಹೃದಯದಿಂದ—"ಕಮಲಾ! ಬೊಗಳುವುದೆಲ್ಲಾ ಸರಿಯಾಗಿ ಬೊಗಳಿಬಿಡು! ವರದನು ದೊಡ್ಡದು ಮಾಡಿದ್ದೂ ಅಂದರೆ ಏನು ಅರ್ಥ?"

ಕಮಲೆ:— ಅನರ್ಥ! ಕೇಳಿರಿ ಹಾಗೆ! ಈಗ ಗುಟ್ಟು ಹೇಳಬೇಕಾಗಿ ಬಂದುದರಿಂದ ನಾನೇ ಹೇಳುತ್ತೇನೆ. ಶೀನಣ್ಣನೆಂದರೆ ನನಗೆ ಪರಕೀಯನಲ್ಲ. ಅವನೂ ನಾನೂ ಕುಂಜಾಂಛೇರಿಯಲ್ಲಿ ಒಟ್ಟಿಗೇ ಬೆಳೆದು ದೊಡ್ಡವರಾದವರು! ಅವನ ಮನೆ ನಮ್ಮ ನೆರೆಮನೆಯಾಗಿತ್ತು.—

ವರದ:— ಓ! ಭಲೆಭಲೆ! ಜೊತೆ ಬಹಳ ಸರಿಯೇ ಸರಿ!

ಮಂಗಲ:— ತಾಳೋ ವರದ!—ಹುಂ ಆ ಮೇಲೆ?—

ಕಮಲೆ:— ಆ ಮೇಲೆ ಶೀನಣ್ಣನನ್ನು ನಾನು ನೋಡಿದ್ದು ಮೊನ್ನೆ ರಾತ್ರಿ. ಅವನು ನನ್ನ ಮರ್ಯಾದೆ ಕಾಪಾಡಿದನಲ್ಲಾ, ಆಗಲೇ!

ವರದ:— ಆಹಾ! ಆಹಾ!

ಕಮಲೆ:— ಅನೇಕ ವರ್ಷದಿಂದ ಅಗಲಿದ ಬಾಲ್ಯದ ಗೆಳೆಯ ನೊಡನೆ ಎಷ್ಟೋ ಮಾತಾಡಬೇಕೆಂಬ ಆತುರವುಂಟಾಯಿತು ನನಗೆ! ಈ

ವರದನು ನಿಮಗೆ ನನ್ನ ಮೇಲೆ ಸಂಶಯವುಂಟಾಗುವಂತೆ ಮಾಡಿಬಿಟ್ಟದ್ದರಿಂದ, ನಿಮ್ಮೊಡನೆ ಗುಟ್ಟುಮಾಡಬೇಕಾಯಿತು. ಬಹಿರಂಗವಾಗಿ ಅವನೊಡನೆ ಮಾತಾಡಲು ನನಗೆ ಅಂಜಿಕೆಯಾಯಿತು. ಮೊನ್ನೆಯೊಮ್ಮೆ ಗೇಟಿನ ಬಳಿ ಮಾತಾಡಿದಾಗಲೂ, ಈ ವರದನ ಅಡ್ಡಕಣ್ಣು ನೋಡಿ, ಏನೇನೋ ಮಾಡಿದನು! ನಿಮಗೂ ಗೊತ್ತಿದೆ. ಅವನೊಡನೆ ಸರಿಯಾಗಿ ಮಾತಾಡಬೇಕೆಂತಲೇ, ಈ ದಿನ ನಿಮ್ಮೊಂದಿಗೆ ಸಿನೆಮಕ್ಕೆ ಬರುವುದಿಲ್ಲವೆಂದು ಹೇಳಿದೆನು. ಹಾಗೆಯೇ ನೀವು ಹೊರಟುಹೋದ ಮೇಲೆ, ನಾನು ಶೀನಣ್ಣನೊಡನೆ ಮಾತಾಡಲಿಕ್ಕೆ ಹೋದೆನು. ಅದು ನನ್ನ ದುರ್ದೈವದಿಂದಲೋ—ನಿಮ್ಮ ದುರ್ದೈವದಿಂದಲೋ—ಈ ಘಾತುಕ ವರದನ ವಕ್ರದೃಷ್ಟಿಗೆ ಬಿದ್ದಿತೆಂದು ಆಮೇಲೆ ನನಗೆ ಗೊತ್ತಾಯಿತು. ಈ ವಂಚಕನು ನನ್ನ ಹಿಂದೆಯೇ ಬಂದು ಬಾಗಿಲಿಗೆ ಬೀಗವನ್ನು ಹಾಕಿ, ನಾಲ್ಕುಮಂದಿ ಗುಂಪುಸೇರುವ ಹಾಗೆ ಮಾಡಿ, ಈ ಪರಿಸ್ಥಿತಿಗೆ ತಂದು—ಏನೂ ಗೊತ್ತಿಲ್ಲದವನಂತೆ ಏನೇನು ಮಾಡಿದನು ನೋಡಿದಿರಾ? ಇವನು ಬೀಗ ಹಾಕಿದ್ದನ್ನು ಇದಿರುಮನೆಯ ಒಬ್ಬ ಮನುಷ್ಯನು ನೋಡಿದ್ದಾನೆ!

ಮಂಗಲ:— ಹೌದೇನೋ ವರದ?

ವರದನು ಪ್ರಸಂಗಾವಧಾನತೆಯನ್ನು ತಂದುಕೊಂಡು—"ಹೌದು ಮತ್ತೆ! ನಾನು ಮನೆಗೆ ಬರುವಾಗ, ಇವಳು ಮನೆಯಿಂದ ಕಳ್ಳಿಯ ಹಾಗೆ ಹೋಗುತಿದ್ದಳು—ಶೀನುವಿನ ಕೋಣೆಯ ದಿಕ್ಕಿಗೇ! ಮನೆಯಲ್ಲಿ ಕೇಳಲು, ನೀವು ಸಿನೆಮಕ್ಕೆ ಹೋಗಿದ್ದೀರೆಂದೂ, ಕಮಲಮ್ಮ ಗುಡಿಗೆ ಹೋಗಿದ್ದಾಳೆಂದೂ ಗೊತ್ತಾಯಿತು. ನಾನು ಮೊದಲೇ ಕಣ್ಣಾರೆ—ಇವಳ ಮತ್ತು ಶೀನುವಿನ ಸಂಬಂಧವನ್ನು ನೋಡಿರುವೆನಾದ್ದರಿಂದ, ನನಗೆ ಸಂಶಯ ಬಂದು ಶೀನಾಚಾರಿಯ ಕೋಣೆಯ ಬದಿಗೆ ಹೋಗಿ ನೋಡಿದೆ. ಸಂಶಯವು ಸತ್ಯವಾಯಿತು! ಇಬ್ಬರೂ ಒಳಗೆ ಗುಸುಗುಸು—ಪಿಸುಪಿಸೂ ಅಂತ ಒಳ್ಳೇ ಚಕ್ಕಂದದಲ್ಲಿದ್ದರು!"

ಕಮಲೆ:— ಎಲೋ ಪಾಪಿ! ನಿನ್ನ ನಾಲಿಗೆ ಕಿತ್ತು ಬೀಳುವುದಿಲ್ಲವಲ್ಲ!

ವರದ:— ಯಾಕೆ ಬಿದ್ದೀತು? ಅಪ್ಪಾ! ಅಂದು ನಾನು ಹೇಳಿದು

ದನ್ನು ನೀನು ನಂಬದೆ ನನ್ನ ಮೇಲೆ ಸಂಶಯಪಟ್ಟಿದ್ದಿ! ಆದುದರಿಂದ ನಿನಗೆ ಪ್ರತ್ಯಕ್ಷ ಪ್ರಮಾಣವನ್ನು ತೋರಿಸಬೇಕೆಂತಲೇ ನಾನು ಹಾಗೆ ಮಾಡಿದ್ದು!

ಮಂಗಲ:— ಅಯ್ಯಯ್ಯೋ! ಮರ್ಯಾದೆ ಹೋಯಿತಲ್ಲೋ!

ವರದ:— ಮರ್ಯಾದೆ ಎಲ್ಲಿಗೆ ಹೋಗುತ್ತೇ! ನೀನೇಕೆ ಅಪ್ಪಾ! ಹೀಗೆ ತಲೆ ಚಚ್ಚಿಕೊಳ್ಳುತ್ತೀ? ದಾರಿಗೆ ಬರುವಂತೆ ಹೇಳದಿದ್ದರೆ ಹೋಗುತ್ತಾಳೆ ಹಾಳಾಗಿ ಮಣ್ಣುತಿಂದು! ಕೆಟ್ಟವಳು ಕೆಟ್ಟವಳೇ ಸರಿ!

ಕಮಲೆ ರೋಷಕಷಾಯಿತೆಯಾಗಿ—"ಮುಚ್ಚು ಬಾಯಿ! ನೀಚ!"

ವರದ:— ಸಾಕುಬಿಡು! ನೀನು ಆವನಿಗೆ ಏನೋ ಕದ್ದುಕೊಂಡು ಹೋಗಿ ಬೇರೆ ಕೊಟ್ಟಿರುತ್ತೀ! ಅಪ್ಪಾ! ಏನೋ ಪುಸ್ತಕಗಳ ಹಾಗಿತ್ತು! ಕಂಕುಳಲ್ಲಿ ಮರೆಸಿಟ್ಟುಕೊಂಡು ಹೋಗಿ ಕೊಟ್ಟಿದ್ದಾಳೆ. ಗಯ್ಯಾಳಿ! ಅಪ್ಪಾ! ಆ ಘಾತುಕನು ನಿನ್ನೊಡನೆ, ಬಹಿರಂಗದಲ್ಲಿ ಪುಸ್ತಕ ವ್ಯಾಪಾರ ವನ್ನು ಇಟ್ಟುಕೊಂಡುದಲ್ಲದೆ, ಅಂತರಂಗದಲ್ಲಿ ಹೀಗೊಂದು ವ್ಯಾಪಾರ ಮಾಡುತ್ತಾನೆ ಆದಕ್ಕೇ ನಾನು ಪ್ರಸಾದರಾಯರೊಂದಿಗೆ ಪುಸ್ತಕವೆಂದು ಹೇಳಿದೆನು. ಹೀಗೆ ಎಷ್ಟು ದಿನಗಳಿಂದ ನಡೆಯುತ್ತಿಯೋ! ಬರಿಯ ಪುಸ್ತಕ ಗಳು ಮಾತ್ರವೋ ಮತ್ತೆ—

ಎನ್ನುತಿರಲು, ಕೇಳುತಿದ್ದ ಮಂಗಲಕರರು—"ಅಯ್ಯೋ! ಸರ್ವ ನಾಶ! ಸರ್ವನಾಶ!—" ಎಂದು ವಿಕಾರ ಸ್ವರದಿಂದ ಕೂಗುತ್ತ ಮಂಚ ದಲ್ಲಿ ಬಿದ್ದರು! ಮುಸಮುಸಕಾಗಿ ಕಂಡೂಕಾಣದಂತಿದ್ದ ದುಃಸಂಭವ ಗಳೆಲ್ಲಾ, ಒಮ್ಮೆಗೇ ಸಂಭವರೂಪವನ್ನು ಹೊಂದಿದಂತಾಗಿ ಅವರನ್ನು ಬೆದರಿಸಿ ಬೀಳಿಸಿಬಿಟ್ಟಿತು.

"ಅಪ್ಪ! ಅಪ್ಪ! ಏನಾಯಿತೇನಾಯಿತು" ಎಂದು ಗಾಬರಿಯಿಂದ ಕೇಳುತ್ತ, ವರದನು ಮುಂಬಾಯ್ದು, ತಂದೆಯನ್ನು ಆದರಿಸಿ ತಡವ ಲಾರಂಭಿಸಿದನು. ಕಮಲೆಯೂ ಭಯಚಕಿತೆಯಾಗಿ ಎದ್ದುನಿಂತಳು.

ಮಂಗಲಕರರು ಮಲಗಿದಲ್ಲೇ ಕೂಗಲಾರಂಭಿಸಿದರು:—"ಕೇಳೋ! ಕೇಳೋ ವರದಾ ಅವಳನ್ನು! ಯಾವ ಪುಸ್ತಕವನ್ನು ಒಯ್ದು ಕೊಟ್ಟ

ದ್ದಾಳೋ ಕೇಳು. ನಾನು ಸುಟ್ಟುಹಾಕಬೇಕೆಂದು ಅವಳ ಕೈಯಲ್ಲಿ ಕೊಟ್ಟ ಪುಸ್ತಕವನ್ನೆಲ್ಲಾ ಅವನಿಗೆ ಕೊಟ್ಟಳೊ! ಕೇಳೋ! ಕೇಳೊ!"

"ಏನು ಮಾಡಿಟ್ಟಿದ್ದಿ ರಾಕ್ಷಸೀ ಬೇಗ ಹೇಳಿ ಸಾಯಿ!" ವರದನು ಗರ್ಜಿಸುತ್ತ ಕಣ್ಣುಕೆಕ್ಕರಿಸಿ ಕಮಲೆಯನ್ನು ನೋಡಿದನು.

ಈಗ ಹೇಳಿದರೆ ಅವರು ಇನ್ನಷ್ಟು ಗಾಬರಿಬಿದ್ದು, ಅನರ್ಥವಾದೀ ತೆಂದು ಭಾವಿಸಿ ಕಮಲೆ ಮಾತಾಡದೆ ಮೌನವನ್ನು ವಹಿಸಿದಳು. ಆದರೆ ತಂದೆ ಮಗ ಇಬ್ಬರೂ ಸೇರಿ ಯಾವ ಪುಸ್ತಕವೆಂದು ಹೇಳುವಂತೆ ಜಬರಿಸಿಕೊಂಡು ಕೂಗಲು, ಹೇಳದೆ ನಿರ್ವಾಹವಿಲ್ಲದೆ— "ಹೌದು! ನೀವು ಸುಟ್ಟುಹಾಕಬೇಕೆಂದು ಕೊಟ್ಟಿದ್ದ ಅವನ ಪುಸ್ತಕಗಳನ್ನೆ ಅವನಿಗೆ ಕೊಟ್ಟಿದ್ದೇನೆ!" ಎಂದುಬಿಟ್ಟಳು!

"ಅಯ್ಯೋ! ಮೋಸವಾಯಿತು, ಮೋಸವಾಯಿತು! ವರದಾ! ಆ ಪುಸ್ತಕಗಳು ಬಯಲಿಗೆ ಬಂದರೆ ನನ್ನ ಮಾನಮರ್ಯಾದೆ ಕೀರ್ತಿ ಯಶಸ್ಸು ಎಲ್ಲಾ ಕಾಸಿಗೆ ಕಡೆಯಾಗಿ ನನ್ನ ಸರ್ವನಾಶವೇ ಆದೀತು!" ಎಂದು ಮಂಗಲಕರರು ಅರಚುತಿರಲು, ಕಮಲೆ, "ಏನೂ ಆಗದು! ಶೀನಣ್ಣ ನಿಮ್ಮನ್ನು ಮರ್ಯಾದೆಗೇಡು ಮಾಡುವಂತಹ ಮನುಷ್ಯನೇ ಅಲ್ಲ! ಆ ವಿಷಯದಲ್ಲಿ ನಿಮಗೂ ಅವನಿಗೂ ಏನಾದರೊಂದು ಸಂಧಿಯನ್ನು ಮಾಡಿಕೊಂಡು ಮುಚ್ಚಿಬಿಡಬಹುದು. ನೀವೀಗ ಆ ಪುಸ್ತಕಗಳ ಗೋಜಿಗೆ ಹೋಗದೆ, ಪೋಲೀಸಿಗೆ ಕೊಟ್ಟ ಕಂಪ್ಲೇಂಟು ಮುಂದುವರಿಯದಂತೆ ನೋಡಿಕೊಳ್ಳಿರಿ!" ಎಂದು ಎಚ್ಚರಿಸಿದಳು.

ವರದನು ಕೋಪೋದ್ದೀಪಿತನಾಗಿ—"ಸಾಕು ನಿಲ್ಲಿಸೇ ನಿನ್ನ ಕಾನೂನು! ಮಾಡುವುದೆಲ್ಲಾ ಮಾಡಿ ಸಂಧಿಮಾಡಿಸುತ್ತಾಳಂತೆ ಮಹಾರಾಯತ್ತಿ! ಅಪ್ಪ! ನೀನು ಧೈರ್ಯಮಾಡಿಕೊಂಡಿರು. ನಾನು ಈಗಲೇ ಆ ಘಾತುಕ ಶೀನಾಚಾರಿಯ ಕೋಣೆಗೆ ಹೋಗಿ, ಆ ಪುಸ್ತಕಗಳನ್ನೆಲ್ಲಾ ಕಸಿದುಕೊಂಡು ಬಂದುಬಿಡುತ್ತೇನೆ ನೋಡು!"

ಮಂಗಲಕರ್:— ಅಯ್ಯಯ್ಯೋ! ಹಾಗೆಲ್ಲಾ ಮಾಡಹೋಗಿ ಇನ್ನೊಂದು ಕೇಸು ಹುಟ್ಟಿಸಬೇಡಪ್ಪಾ! ಏನಾದರೂ ಉಪಾಯದಿಂದ—

ವರದ:— ಚತುರೋಪಾಯಗಳಿಂದ ಸಾಧಿಸಿಕೊಂಡು ಬರುತ್ತೇನಪ್ಪ !

ಮಂಗಲಕರ್:— ಯಾವ ಯಾವ ಪುಸ್ತಕಗಳೆಂದು ಗೊತ್ತಿದೆಯೇನೊ ?

ವರದ:— ಅವನ ಕೋಣೆಯೊಳಗಿದ್ದ ಎಲ್ಲಾ ಪುಸ್ತಕಗಳನ್ನೂ ತಂದರಾಯಿತಷ್ಟೆ ?

ಮಂಗಲಕರರು "ಕಾರುಣ್ಯ ಮೂರ್ತಿ—" ಮುಂತಾದ ಕೆಲವು ಹೆಸರು ವಿವರಗಳನ್ನು ತಿಳಿಸಿದರು ವರದನು ಅವನ್ನು ಕೇಳಿಕೊಂಡು, ಸಿದ್ದಪ್ಪನನ್ನು ಸಿದ್ಧನಾಗಿ ಬರುವಂತೆ ಆಜ್ಞಾಪಿಸಿ. ಅಡುಗೇ ಮನೆಗೆ ಹೋಗಿ, ಅವಸರವಸರದಿಂದ ಉಂಡ ಶಾಸ್ತ್ರವನ್ನು ತೀರಿಸಿ ಸಿದ್ದಪ್ಪನನ್ನು ಕರೆದುಕೊಂಡು ಶೀನುವಿನ ಬಾಡಿಗೆಯ ಕೋಣೆಯ ಕಡೆಗೆ ಹೊರಟನು.

ಆಗ ರಾತ್ರಿ ಹನ್ನೆರಡುಗಂಟೆಯಾಗಿತ್ತು, ಊರವರಿಗೆಲ್ಲ ಗಾಢವಾದ ನಿದ್ರೆ ಹತ್ತಿತ್ತು. ಎಲ್ಲೆಲ್ಲಿಯೂ ನಿಃಶಬ್ದವಾಗಿತ್ತು. ಬೀದಿಯ ದೀವಿಗೆಗಳೂ ಆರಿ ಕತ್ತಲೆಕವಿದಿತ್ತು. ಮುಸಮುಸಕಾಗಿ ತಾರಿಕಾ ಪ್ರಕಾಶವು ಮಾತ್ರ ಸರ್ವತೋಮುಖವಾಗಿತ್ತು ... ....... ... . . ..

---

## ೩೩. ಬಂಧು ಸಂದರ್ಶನ

"ವಿಧಿಯ ಬಲೆ" ಚಲನ ಚಿತ್ರವನ್ನು ನೋಡಲು ಶೀನಣ್ಣನು ಖಂಡಿತವಾಗಿ ಬಾರದೆ ಹೋಗಲಿಕ್ಕಿಲ್ಲವೆಂದು ಭಾವಿಸಿ. ನಮ್ಮ ಕೃಷ್ಣನು, ವೆರ್‍ರ್ಯಾಟೀ ಹಾಲಿನ ಒಂದನೆಯ ಪ್ರವೇಶದ್ವಾರದ ಬದಿಯಲ್ಲಿ ಪ್ರಾರಂಭದಿಂದ ಕಡೆಯತನಕವೂ ಕಾದಿದ್ದು, ಒಳಗೆ ನುಗ್ಗುತಿರುವ ಪ್ರತಿಯೊಬ್ಬನನ್ನೂ ಗಮನವಿಟ್ಟು ನೋಡುತಿದ್ದನು. ಒಳಗೂ ಹೊರಗೂ ಎಷ್ಟು ಗುಂಪೇ ತುಂಬಿದ್ದರೂ ಆ ದ್ವಾರಪ್ರದೇಶದಲ್ಲಿ ಟಿಕೇಟನ್ನು ತೋರಿಸುತ್ತ ಒಬ್ಬೊಬ್ಬರೇ ಒಳಗೆ ನುಗ್ಗಬೇಕಾಗಿತ್ತು. ಆದುದರಿಂದ ಕಣ್ಣಿಟ್ಟು ನೋಡುತಿರುವ ಕೃಷ್ಣನಿಗೆ ಅಲ್ಲಿ ಪ್ರವೇಶಮಾಡುವ ಪ್ರತಿಯೊಂದು ವ್ಯಕ್ತಿಯ ಮುಖವೂ, ಮೂಗಡೆಗಳಲ್ಲಿ ಶುಭ್ರಕಾಂತಿಯನ್ನು ಉಗಿಯುತಿರುವ

ವಿದ್ಯುದ್ದೀಪಗಳ ಪ್ರಕಾಶದಲ್ಲಿ ಸ್ಪಷ್ಟವಾಗಿ ಕಂಡೇಹೋಗುತಿತ್ತು. ಆದರೆ ಕೃಷ್ಣನ ಪರಿಚಿತರಾದ ಮಂಗಲಕರರ ಆಕಾರವು ಟಿಕೇಟನ್ನು ತೋರಿಸಿ ಒಳಗೆ ಪ್ರವೇಶಿಸಿದುದನ್ನು ಕೃಷ್ಣನು ನೋಡಿದನು. ಹಾಗೆಯೆ ಅವರು ಫಸ್ಟ್‌ಕ್ಲಾಸಿನ ಭಾಗವನ್ನು ಹೊಕ್ಕುದನ್ನೂ ಕೃಷ್ಣನು ನಿಂತಲ್ಲೆ ನೋಡಿಕೊಂಡನು.

ಮೊದಲನೆಯ ಪ್ರದರ್ಶನಕ್ಕೆ ಶೀನಣ್ಣನು ಬರಲಿಲ್ಲವೆಂದು ನಿಶ್ಚಯ ಮಾಡಿಕೊಂಡ ಮೇಲೆ ಎರಡನೆಯ ಆಟಕ್ಕೆ ಬರುತ್ತಾನೋ—ಅಲ್ಲ ನಾಳೆ ಬಂದಾನೋ--ಅಥವಾ ಬರಲಿಕ್ಕೇ ಇಲ್ಲವೋ ಎಂದು ಸಂದೇಹಿಸುತ್ತ, ಚಲಚಿತ್ರವನ್ನು ನೋಡುವ ಉತ್ಸಾಹವೂ ಇಲ್ಲದೆ, ಕೃಷ್ಣನು ಥಿಯೇಟರಿನ ಹೊರಗೇ ಸುಳಿದಾಡಿಕೊಂಡಿದ್ದನು. ಮನಸ್ಸಿಗೆ ಬಹಳ ಬೇಸರವಾದುದರಿಂದ ಅಂಗಡಿಯಿಂದ ಎರಡು ಬೀಡಿಗಳನ್ನು ಕೊಂಡುಕೊಂಡು ಸೇದುತ್ತಾ ತಿರುಗಾಡುತಿದ್ದನು.

ಹಾಗಿರಲು ಒಬ್ಬ ಆಳು ಬಿರಬಿರನೆ ಅಲ್ಲಿಗೆ ಬಂದು, ಪ್ರವೇಶದ್ವಾರ ಪಾಲಕನನ್ನು ಕುರಿತು—"ಅಯ್ಯಾ! ಮಂಗಲಕರರಾಯರು ಆಟಕ್ಕೆ ಬಂದಿದ್ದಾರೆ; ಅವರ ಮಗ ಅವರಿಗೆ ಈ ಚೀಟುಕೊಟ್ಟು ಬೇಗನೆ ಕರಕೊಂಡು ಬಾಂತ ಹೇಳಿದ್ದಾರೆ; ಬಹಳ ಜರೂರಿ! ಒಳಗೆ ಹೋಗಲು?" ಎಂದು ಅವಸರಪಡಿಸಿದನು. ಆ ಆಳು ಸಿದ್ದಪ್ಪನೆಂದು ಓದುಗರಿಗೆ ಗೊತ್ತಿರುವುದಾದರೂ ಕೃಷ್ಣನಿಗೆ ಗೊತ್ತಿಲ್ಲ ಆತನ ಬಾಯಿಯಿಂದ ಮಂಗಲಕರರ ಹೆಸರು ಹೊರಟುದನ್ನು ಕೇಳಿ, ಕಿವಿಗಳೊಂದಿಗೆ ಕಣ್ಣಿನ ಗಮನವನ್ನೂ ಸೇರಿಸಿಕೊಂಡು ಕೃಷ್ಣನು ನಿಂತಿದ್ದನು.

"ಸರಿ, ಹೋಗು" ಎಂದು ದ್ವಾರರಕ್ಷಕನು ಸಿದ್ದಪ್ಪನನ್ನು ಒಳಗೆ ಬಿಟ್ಟನು. ಸಿದ್ದಪ್ಪನು ಲಗುಬಗೆಯಿಂದ ಒಳಗೆ ಹೋಗಿ, ಫಸ್ಟ್‌ಕ್ಲಾಸಿನ ಬಾಗಿಲ ಬಳಿಯಲ್ಲಿ ನಿಂತು,—"ಮಂಗಲಕರ್‍ರಾಯರೆ—" ಎಂದು ಕೂಗಿ ಕರೆದು, ಅವರನ್ನು ಹೇಗೆ ಕರಕೊಂಡು ಹೊರಟನೆಂಬುದನ್ನು ಹಿಂದೆ ಹೇಳಿದ್ದೇವೆ. ಹಾಗೆ ಮಂಗಲಕರರು ರಾಮಚಂದ್ರರಾಯ–ಸಿದ್ದಪ್ಪರೊಂದಿಗೆ ಅಲ್ಲಿಂದ ಹೊರಟುದನ್ನು ಕೃಷ್ಣನು ಕುತೂಹಲದಿಂದ ನೋಡಿ— "ಇವರ ಮನೆಯಲ್ಲಿ ಏನು ವಿಶೇಷವೋ ಅದನ್ನಾದರೂ ನೋಡಿಬಿಡೋಣ.

ಇನ್ನು ಒಂದೂವರೆ ಗಂಟೆಯ ಮೇಲೆ ಈ ಥಿಯೇಟರಿನ ಬಳಿಗೆ ಬಂದರೆ ಸಾಕಾಗಿದೆ. ಅಷ್ಟರವರೆಗೆ ಫಸ್ಟ್‌ಶೋ ಒಡಲಿಕ್ಕಿಲ್ಲ." ಎಂದು ಭಾವಿಸಿಕೊಂಡು ಕೃಷ್ಣನೂ ಮಂಗಲಕರಾದಿಗಳನ್ನು ಅನುಸರಿಸಲಾರಂಭಿಸಿದ ಸಂದು ನಾವು ಈಗ ಹೇಳಲು ಪ್ರಾರಂಭಿಸಿದ್ದೇವೆ

ಕೃಷ್ಣನು ಅವರ ಹಿಂದಿನಲ್ಲಿ ಸಮೀಪಿಸಿಕೊಂಡೇ ಯಾರೋ ದಾರೀ ಹೋಕನ ಹಾಗೆ ನಡೆಯುತ್ತಿದ್ದನ. ಕೃಷ್ಣಪಕ್ಷದ ದಿನಗಳ ಕತ್ತಲೆಯ ಪ್ರಕೃತಿ ಬೀದಿಯಲ್ಲಿ ಅಲ್ಲಲ್ಲಿ ಬೆಳಗುವ ವಿದ್ಯುದ್ದೀಪಗಳು ದಾರೀಹೋಕರಿಗೆ ಉಪಕಾರವನ್ನು ಮಾಡುತಿದ್ದುವು. ಹಲವಾರು ಮಂದಿ ಹಾದೀಹೋಕರು ಅತ್ತಿತ್ತ ಹೋಗುತ್ತ ಬರುತ್ತಲೇ ಇದ್ದರು. ಸ್ಯಾಕಲ್-ಜಟಕಾ-ಕಾರು-ಮುಂತಾದ ವಾಹನಗಳೂ ಅಡಿಗಡಿಗೆ ಸಂಚರಿಸಿಕೊಂಡೇ ಇದ್ದುವು. ಮನೆಗಳೂ ಅಂಗಡಿಗಳೂ ತೆರೆದು ಬೆಳಗುತ್ತಲೇ ಇದ್ದುವು. ರಾತ್ರಿ ಎಂಟೂವರೆಗಂಟೆ ಮಾತ್ರವೇ ಆಗಿತ್ತು. ಕೃಷ್ಣನು ಅನುಸರಿಸಲ್ಪಡುವವರು ಹೆಚ್ಚಾಗೆ ಮಾತಾಡುತ್ತಿರಲಿಲ್ಲ. ಕೆಲವು ಮಾತುಗಳೆಂದರೆ ಸಿದ್ದಪ್ಪನೊಡನೆ ಮಂಗಲಕರರು ಕೇಳಿದ ಒಂದೆರಡು ಪ್ರಶ್ನೆಗಳು, ಸಿದ್ದಪ್ಪನ ಉತ್ತರ, ರಾಮಚಂದ್ರರಾಯರ ಸಮಾಧಾನ ವಾಕ್ಯ, ಇತ್ಯಾದಿ ತುಂಡು ತುಂಡಾಗಿ ಕೃಷ್ಣನ ಕಿವಿಯೊಳಗೆ ಹೊಕ್ಕುವು ಮಂಗಲಕರರ ಮನೆಯಲ್ಲಿ ಕಮಲಮ್ಮ ಎಂಬವಳು ಕಾಣೆಯಾಗಿರುವಳೆಂದೂ, ಮಂಗಲಕರರು ಗಾಬರಿಯಾಗಿರುವರೆಂದೂ ಕೃಷ್ಣನಿಗೆ ಗೊತ್ತಾಯಿತು. ಸ್ವಲ್ಪ ಮುಂದೆ ಹೋಗುತ್ತಲೇ ಮಂಗಲಕರರು ನಿಂತು,—"ಏನಯ್ಯಾ ರಾಮಚಂದ್ರರಾವ್! ಪೋಕರಿಗಳ ಕಾಟದ ದಿನವಿದು. ಪೋಲೀಸ್ ಇನ್ಸ್‌ಪೆಕ್ಟರ್ ಪ್ರಸಾದರಾಯರ ಮನೆ ಸಮೀಪದಲ್ಲಿದೆಯಲ್ಲ? ಮುಂಜಾಗ್ರತೆಯ ನ್ಯಾಯದಂತೆ ಅವರಿಗೂ ಒಂದು ಸೂಚನೆ ಕೊಟ್ಟುಬಿಡುವುದು ಲೇಸಲ್ಲವೆ?" ಎಂದರು. "ಅಂತಾದ್ದೇನೂ ಆಗಲಿಕ್ಕಿಲ್ಲ. ಆದರೂ ಸಮಯಕ್ಕೆ ಉಪಯೋಗವೇ ಹೊರತು ದೋಷವಲ್ಲ." ಎಂದು ರಾಮಚಂದ್ರರಾಯರು ಅನುಮೋದಿಸಿದರು ಮಂಗಲಕರರು ಪ್ರಸಾದರಾಯರನ್ನು ಕರೆಕೊಂಡು ಬರುವಂತೆ ಹೇಳಿ ಸಿದ್ದಪ್ಪನನ್ನು ಕಳುಹಿಸಿ ಮುಂದೆ ನಡೆದರು.

ಮಂಗಲಕರಾದಿಗಳು ಗೇಟುಬಾಗಿಲು ತೆರೆದುಕೊಂಡು ಮನೆಗೆ

ಪ್ರವೇಶ ಮಾಡಿದ ಮೇಲೆ, ಕೃಷ್ಣನು ಗೇಟಿನ ಹೊರಗೆ ಬೀದಿಯಲ್ಲಿ ಎಡ ತಾಕುತ್ತ ಆ ಮನೆಯನ್ನೆ ಗಮನಿಸಿಕೊಂಡಿದ್ದನು. ಮನೆಯಲ್ಲಿ ಎಲೆಕ್ಟ್ರಿಕ್ ದೀಪವು ಬೆಳಗುತಿತ್ತು ರಾಚಂದ್ರರಾಯರು ಜಗುಲಿಯಲ್ಲಿ ಕುರ್ಚಿಯಲ್ಲಿ ಕುಳಿತಿದ್ದುದೂ, ಮಂಗಲಕರರೂ ವರದನೂ ಒಳಗೆ ಹೋದುದೂ, ಕೃಷ್ಣನು ನೋಡಿದ್ದನು. "ಹಾಳಾಗಿ ಹೋಗ! ಇವರನ್ನು ಬೆನ್ನಟ್ಟಿ ಕೊಂಡು ನಾನೇಕೆ ಬಂದೆನು? ನನಗೇಕೆ ಬೇಕಿತ್ತು ಇವರ ಮನೆಯ ಹಾಳುಹರಟೆಯ ಉಸಾಬರಿ? ನನಗೇನು ಬುದ್ಧಿಗಿದ್ಧಿ ಕೆಟ್ಟಿತೇ?—" ಎಂದು ಯೋಚಿಸಿಕೊಳ್ಳುತ್ತಾ, ಕೃಷ್ಣನು ಇನ್ನು ವ್ಯರ್ಥವಾಗಿ ಅಲ್ಲಿ ನಿಲ್ಲದೆ, ಸಿನಿಮಾ ಥಿಯೇಟರಿನ ಬಳಿಗೆ ಹೋಗಿ ಅಣ್ಣನನ್ನಾದರೂ ನಿರೀಕ್ಷಿಸೋಣ ವೆಂದು, ಎಣಿಸಿದನು.

ಆ ಸ್ಥಳದಲ್ಲಿ ದೀಪದ ಕಂಬವಿರಲಿಲ್ಲ ದೂರದಲ್ಲಿದ್ದ ಕಂಬದೀಪದ ಅಂತರ ಛಾಯಾಪ್ರಕಾಶವು ಮಾತ್ರ ಸಮೀಪದ ವಸ್ತುಗಳನ್ನು ಮಸಮಸ ಕಾದ ಆಕಾರ ರೂಪವಾಗಿ ತೋರಿಸುತಿತ್ತು. ಅಲ್ಲಿ ವಿಶೇಷ ಜನಸಂಚಾ ರವೂ ಇರಲಿಲ್ಲ. ಆಗೊಬ್ಬ ಈಗೊಬ್ಬ ದಾರೀಹೋಕರು ತಮ್ಮ ಪಾಡಿಗೆ ಪರಪರನೆ ಹೋಗುತ್ತಿದ್ದರು. ಒಂದೆರಡು ಸ್ಕ್ಯಾಕಲುಗಳೂ ಓಡಿಹೋದುವು ಆಗ ಒಂದು ಬೈರಾಸನ್ನು ಮಾತ್ರ ಮೈಮೇಲೆ ಹಾಕಿಕೊಂಡು, ಉಟ್ಟಿದ್ದ ಆಡ್ಡಪಂಚೆಯನ್ನು ಅರ್ಧ ಮೇಲ್ಕಟ್ಟಿದಂತೆ ತೋರುವ ಅಂಗಿಯಿಲ್ಲದ ವ್ಯಕ್ತಿಯೊಂದು ಆ ಕಡೆಯಿಂದ ಮೆಲ್ಲನೆ ದಾರೀಹೋಕನ ಹಾಗೆ ಅಲ್ಲಿಗೆ ಬಂದು, ಕೃಷ್ಣನು ಅಲ್ಲಿಯೆ ನಿಂತು ನಿಂತು ಎಡತಾಕುವುದನ್ನು ನೋಡಿ, ಏನು ಸಂಶಯಫಟ್ಟೋ ಏನೋ—ಕೃಷ್ಣನ ಬಳಿಗೆ ಬಂದು ಮುಖ ಚಾಚಿ ನೋಡುತ್ತ—"ಯಾರು?" ಎಂದು ಮೆಲ್ಲನೆ ಕೇಳಿತು.

"ನಾನು, ಪರಸ್ಥಳೀಕ" ಎಂದನು ಅಷ್ಟೇ ಮೆಲ್ಲನೆ ಕೃಷ್ಣ.

"ಇಲ್ಲಿ ಏನು ಮಾಡುವಿರಿ?"

"ಏನಿಲ್ಲ. ನಮ್ಮವರೊಬ್ಬರ ಮನೆ ಇಲ್ಲಿ ಎಲ್ಲಿಯೋ ಇರಬೇಕು. ಈ ಬೀದಿಯೋ ಬೇರೆ ಬೀದಿಯೋ ಎಂದು—"

"ಯಾರು—ಕೃಷ್ಣ!"

"ಅಣ್ಣ! ಅಣ್ಣ!"

"ತಮ್ಮ! ಕೃಷ್ಣ!—"

"ಅಣ್ಣ-ಶೀನಣ್ಣಾ!—"

ಸೂಜಿಯನ್ನು ಸೂಜಿಕಲ್ಲು ಆಕರ್ಷಿಸಿಕೊಳ್ಳುವಂತೆ, ಆ ಸುಹೃದ್ಬಂಧುಗಳ ಎರಡು ದೇಹಗಳೂ, ಒಂದನ್ನೊಂದು ಬಿಗಿದಪ್ಪಿಕೊಂಡು, ಏಕಹೃದಯವಾದಂತಾದುವು.

ಈ ಸುಹೃತ್ಪ್ರಸದ ಮೊದಲ ಭರವು ಈ ಅವಸ್ಥೆಯಿಂದ ಸ್ಥಿಮಿತಕ್ಕೆ ಬರಲು, ಕೃಷ್ಣನು ಅಣ್ಣನ ಪಾದವನ್ನು ಗಟ್ಟಿಯಾಗಿ ಹಿಡಿದು—"ಅಣ್ಣ! ನನ್ನ ಅಪರಾಧವನ್ನು ಕ್ಷಮಿಸು! ಕ್ಷಮಿಸು—" ಎಂದು ಬೇಡಿಕೊಂಡನು ಗದ್ಗದ ಕಂಠದಿಂದ. ಅವನ ಕಣ್ಣಿನಿಂದ ಉಕ್ಕಿಸೂಸಿದ ಆನಂದ ಬಾಷ್ಪ ಬಿಂದುಗಳು ಶೀನುವಿನ ಪಾದಗಳ ಮೇಲೆ ಬಿದ್ದುವು. ಶೀನುವಿನ ಕಣ್ಣಿನಿಂದಲೂ ನೀರು ಹರಿಯಿತು. ಆವನು ತುಂಬಿದ ಅಕ್ಕರತೆಯಿಂದ—''ಏಳೇಳು ಕೃಷ್ಣ! ಕ್ಷಮಿಸಲಿಕ್ಕೆ ನೀನು ಏನು ಮಾಡಿರುತ್ತೀ?" ಎಂದು ತಮ್ಮನನ್ನು ಹಿಡಿದೆಬ್ಬಿಸಿ, ''ಕೃಷ್ಣ! ತಂಗಿ ಗೌರಿ ಕ್ಷೇಮವಾಗಿರುವಳೆ? ನೀನು ನನ್ನನ್ನು ಹುಡುಕಿಕೊಂಡು ಈ ಊರಿಗೆ ಬಂದಿರುತ್ತೀ ಎಂದು, ನನಗೆ ಈ ದಿನವೇ ಈಗಲೇ ಸ್ವಲ್ಪ ಹೊತ್ತಿಗೆ ಮುಂಚೆಯೇ ಗೊತ್ತಾಗಿತ್ತು. ಬಾ, ಅತ್ತ ಹೋಗೋಣ-ಇದು ತಕ್ಕ ಸ್ಥಳವಲ್ಲ.—" ಎಂದು ಕೃಷ್ಣನನ್ನು ಅತ್ತ ಕರಕೊಂಡು ಹೋಗುವಾಗ, ಮಂಗಲಕರರ ಮನೆಯ ಗೇಟನ್ನು ತೆರೆದುಕೊಂಡು, ಪೋಲೀಸ್ ಇನ್ಸ್‌ಪೆಕ್ಟರ್ ಪ್ರಸಾದರಾಯರು ಸಿದ್ದಪ್ಪನೊಂದಿಗೆ ಒಳಗೆ ಹೋಗುತ್ತಿದ್ದರು.

ಆ ಅಣ್ಣ ತಮ್ಮಂದಿರಿಬ್ಬರೂ ಪರಸ್ಪರ ಮಾತಾಡಿಕೊಳ್ಳುತ್ತಾ, ವೆಂಕೋಬರಾಯರ ಮನೆಯ ದಾರಿಯನ್ನು ಹಿಡಿದರು. ಕೃಷ್ಣನು ತನ್ನ ಸಮಾಚಾರವನ್ನು ಅಣ್ಣನಿಗೆ ಶ್ರುತಪಡಿಸಿದನು. ಅವನು ಬೆಂಗಳೂರಿನಲ್ಲಿ ಮಂಗಲಕರರನ್ನು ಸಂಧಿಸಿ 'ಕಾರುಣ್ಯ ಮೂರ್ತಿ'ಯ ಮೂಲಪ್ರತಿಯನ್ನು ಕಳೆದುಕೊಂಡ ವಿಧಾನ, ಸುಂದರಿ ಸಿನೆಮಾ ನಕ್ಷತ್ರವಾದ ಬಗೆ, ರಾಮಾ ಜೋಯಿಸರ ಮುಚ್ಚುಮರೆ ಮೋಸಗಳು, ಆ ಮೇಲೆ ಮೊನ್ನೆ ಬಳ್ಳಾರಿಯಲ್ಲಿ ಮಂಗಲಕರರು ಅವನೊಡನೆ ಮಾತಾಡಿದ ಬಗೆ-ಮುಂತಾದ್ದೆಲ್ಲವನ್ನೂ ಕೇಳಿ ಶೀನುವಿಗೆ ಖೇದಾಶ್ಚರ್ಯವಾಯಿತು.

ಹಾಗೆಯೇ ಶೀನುವೂ ತನ್ನ ವೃತ್ತಾಂತಗಳನ್ನೂ ಹೇಳಿದನು ಅವನು ಮಂಗಲಕರರನ್ನು ಸಂಧಿಸಿದ ಬಗೆ, ಅವನ ಹೆಂಡತಿ ಕಮಲೆಯೇ ಎಂದು ಗೊತ್ತಾದ ವೈಚಿತ್ರ್ಯ—ವರದನ ಪಾಪದೃಷ್ಟಿ, ಕಮಲೆಯ ಮೇಲೆ ಅವನಿಗಿರುವ ಸೋದರೀ ಪ್ರೇಮ,—ಅವಳಿಗೂ ಅವನಿಗೂ ಅಂದೇ—ಆಗ ತಾನೇ ನಡೆದುಹೋದ ಪುಸ್ತಕ ವ್ಯಾಪಾರ, ಮುಕುಂದರಾಯರ ಸಂಬಂಧದ ಪತ್ರಗಳು ಹೊರಟ ಸೋಜಿಗ—ವರದನಿಂದಾದ ಘಾತುಕತನ—ಮುಂತಾದ್ದೆಲ್ಲವನ್ನೂ ತಮ್ಮನಿಗೆ ತಿಳಿಯಪಡಿಸಿದನು

ಮುಕುಂದರಾಯರ ಪತ್ರವು ಮಂಗಲಕರರ ಪೆಟ್ಟಿಗೆಯಲ್ಲಿ ಯಾಕೆ ಬಂತು ?—ಎಂಬುದು ಈಗ ಅವರಿದಿರಿನಲ್ಲಿ ನಿಂತಿರುವ ಪ್ರಶ್ನೆ ಶೀನು ಕಳುಹಿಸಿದ "ವಿಧಿಯ ಬಲೆ" ಯಲ್ಲಿ ಶೀನುವಿನ ಹೆಂಡತಿಯೆ ಅಭಿನಯಿಸಿದುದನ್ನು ಕೇಳಿ ಶೀನುವಿಗೆ ವಿಚಿತ್ರ ಆಶ್ಚರ್ಯವಾಯಿತು. ಅವಳಿಗೆ ಗಂಡನ ಮೇಲಿರುವ ಪ್ರೀತಿಯನ್ನು ಕೃಷ್ಣನ ಬಾಯಿಯಿಂದ ಕೇಳಿ ನಗುವೂ ಬಂತು ಎಂತಹ ವಿಚಿತ್ರ ಯೋಗಾಯೋಗವಿದು!

ಇಷ್ಟೆಲ್ಲಾ ದೀರ್ಘ ಸಮಾಚಾರಗಳು ಆ ಪರಸ್ಪರರಿಗೆ ತಿಳಿಯುವಾಗ, ಅವರು ವಕೀಲ ವೆಂಕೋಬರಾಯರ ಮನೆಯನ್ನು ತಲುಪಿ, ಅಲ್ಲಿ ಆಗ ತಾನೇ ಸಿನೇಮಾದಿಂದ ಬಂದಿದ್ದ, ವೆಂಕೋಬರಾಯರಿಗೆ ಶೀನು ತನ್ನ ಸಹೋದರ ಕೃಷ್ಣನ ಪರಿಚಯವನ್ನು ಮಾಡಿಸಿ, ಅಲ್ಲಿ ಕೃಷ್ಣನೊಂದಿಗೆ ಊಟವನ್ನು ತೀರಿಸಿ, ಆ ದಿನ ಕಮಲೆಗೂ ತನಗೂ ಜರುಗಿದ ಸಂಭಾಷಣೆಯನ್ನೂ—ಆಗ ಕೋಣೆಯೊಳಗೆ ಸಿಕ್ಕಿಬಿದ್ದುದನ್ನೂ, ಕಮಲೆ ತಂದುಕೊಟ್ಟ ಪುಸ್ತಕಗಳು ರಹಸ್ಯವಾದುವೆಂಬಂಶವನ್ನೂ, ಆ ರಹಸ್ಯವನ್ನು ನಿಧಾನವಾಗಿ ಯೋಚಿಸಿ ಹೇಳುವೆನೆಂಬುದನ್ನೂ, ಇಂದು ಜರುಗಿದ ಸಂಭವದಿಂದ ತನಗೇನಾದರೂ ಅಪಾಯವಾದರೆ ನಾಳೆ ಅಡುಗೇ ಕೆಲಸಕ್ಕೆ ಬರಲಾಗಲಿಕ್ಕಿಲ್ಲವೆಂಬ ಸಂದೇಹವನ್ನೂ—ಹೀಗೆ ಎಲ್ಲಾ ವೃತ್ತಾಂತಗಳನ್ನೂ ಶೀನು ವಕೀಲ ವೆಂಕೋಬರಾಯರಿಗೆ ನಿವೇದಿಸಿ, ಶೀನುವಿನ ಸುಗುಣಗಳನ್ನು ಅರಿತಿರುವ, ಧನವಂತ ವೆಂಕೋಬರಾಯರಿಂದ, ಸಾದರ ಸಹಾನುಭೂತಿಗಳನ್ನು ಪಡೆದು, ಆ ಸಹೋದರರು ಸತ್ಯನಾರಾಯಣ ಗುಡಿಯ ಬಳಿಯಲ್ಲಿರುವ ಶೀನುವಿನ ಬಾಡಿಗೆಯ ಕೋಣೆಗೆ ಬಂದು ಸೇರಿದರು.

ಆಗ ಗಂಟೆ ಸುಮಾರು ಹನ್ನೆರಡು. ಸುತ್ತುಮುತ್ತಣ ಮನೆಗುಡಿಸಲುಗಳಲ್ಲಿರುವವರು ಗೊರಕೆ ಹೊಡೆಯುತ್ತಿದ್ದರು. ಪ್ರಾಣಿಗಳೆಲ್ಲಾ ನೀರವ; ಮರಮುಟ್ಟಗಳೂ ನೀರವ; ಅಷ್ಟದಿಕ್ಕುಗಳೂ ನಿಷ್ಪ್ರಕಾಶವಾದ ನೀರವ ರಜನೀಮಯ. ಆ ನೀರವತೆಯ ಹೃದಯದಲ್ಲಿ-ದೂರ ರೈಲುವೇ ಸ್ಟೇಶನ್ನಿನಲ್ಲಿ ರೈಲಿಂಜನ್ನಿನ ಉಸಿರಿನ ಸದ್ದುಮಾತ್ರ, ಸಣ್ಣದಾಗಿ ಕೇಳಿಸುತಿತ್ತು.

---

## ೩೪. ಪೋಲೀಸರ ಕೈಗೆ!

ಶೀನು ಕೋಣೆಯೊಳಗೆ ದೀಪವನ್ನು ಹಚ್ಚಿ, ಕಮಲೆ ಆ ದಿನ ತಂದು ಕೊಟ್ಟ ಪುಸ್ತಕಗಳನ್ನೂ, ಪತ್ರಗಳನ್ನೂ ಕೃಷ್ಣನಿಗೆ ತೋರಿಸುತಿದ್ದನು. ಇಬ್ಬರೂ ಸಣ್ಣ ದನಿಯಿಂದ ಮಾತಾಡುತಿದ್ದರು. ತನ್ನ ಕೈಯಿಂದ ಕಳವಾಗಿ ಹೋದ 'ಕಾರುಣ್ಯ ಮೂರ್ತಿ'ಯ ಪ್ರತಿಯನ್ನು ಅಲ್ಲಿ ನೋಡಿ ಕೃಷ್ಣನಿಗೆ ಪರಮಾನಂದವಾಯಿತು. ಅವನು "ಅಕ್ಷರದ್ರೋಹಿಗಳಾದ ಮಂಗಲಕರರ ಗೌರವ-ಮರ್ಯಾದೆಗಳನ್ನು ಚೂರು ಚೂರು ಮಾಡಿ, ಬೀದಿಯಲ್ಲಿ ಚೆಲ್ಲಬೇಕು. ಇನ್ನು ಮೇಲೆ ಆ ಮಾತೃಭಾಷಾ ಘಾತುಕನು ತಲೆಯೆತ್ತಲಿಕ್ಕಿಲ್ಲದ ಹಾಗೆ ಮಾಡಬೇಕು, ನೋಡಣ್ಣ! ಪ್ರಸಿದ್ಧ ಪತ್ರಿಕೆಗಳಲ್ಲಿ ವಿವರವಾದ ಪ್ರಕಟನೆಯನ್ನು ಕೊಡಬೇಕು. ಎಷ್ಟು ಮಾತ್ರಕ್ಕೂ ಬಿಡಬಾರದು!" ಎಂದು ತನ್ನ ಸ್ವಭಾವಕ್ಕೆ ತಕ್ಕ ಹಾಗೆ ಮಾತಾಡಿದನು.

ಶೀನು:— ಯೋಚನೆ ಮಾಡೋಣ ತಮ್ಮ! ದುಡುಕಬಾರದು. ಅವರು ಒಳ್ಳೇ ಹಣದ ಬಲವಿರುವವರಾದುದರಿಂದ ಹೇಗೆ ಹೇಗೆ ಸಾಧಿಸುವರೋ ಯಾರಿಗೆ ಗೊತ್ತು.

ಕೃಷ್ಣ:— 'ಸತ್ಯಮೇವ ಜಯತೇ-ನಾನೃತಂ' ಎಂಬುದು ಸತ್ಯವಾದರೆ, ಎಷ್ಟು ಧನಬಲ-ಜನಬಲವಿದ್ದರೂ, ನೋಡೋಣ, ಸುಳ್ಳಿನೊಡನೆ ಹೋರಾಡಿ-ಸತ್ಯವು ಗೆಲ್ಲುತ್ತೋ ಇಲ್ಲವೋ ಎಂದು.

ಶೀನು:— ಯಾವುದಕ್ಕೂ ಅವಸರಪಡಬಾರದು. ಆದುದು ಆಗಿ ಹೋಯಿತು. ನಾವಾಗಿ ಇನ್ನು ಮೇಲೆ ಅವರ ಗೋಜಿಗೆ ಹೋಗದೆ

ಇದ್ದು ನೋಡೋಣ. ಅವರೇ ತಿಳಿದು, ತಪ್ಪನ್ನು ಸರಿಪಡಿಸಿ, 'ಕನ್ನಡ ಗೆಳೆಯ' ನ ಸತ್ಯಸ್ವರೂಪವನ್ನು ಹೊರಪಡಿಸುವರೋ ನೋಡೋಣ.

ಕೃಷ್ಣ:— ಅವರು ಇನ್ನು ಹೊರಪಡಿಸುವುದೇನೆಂದರೆ, ನಿನಗೆ ಕೇಡೇ ಸರಿ! ಅಣ್ಣ! ನೀನು ಹಲವು ತಿಂಗಳು ಅವರ ಸಹವಾಸದಲ್ಲಿದ್ದೂ ತಿಳಿಯದ ಅವರ ಸ್ವಭಾವವನ್ನು ನಾನು ಬೆಂಗಳೂರಿನಲ್ಲಿ ಒಂದೆರಡು ಗಳಿಗೆಯ ಸಹವಾಸದಿಂದಲೇ ಕಂಡುಹಿಡಿದು ಬಿಟ್ಟಿದ್ದೇನೆ! ಪರಮಧೂರ್ತ ಗೋಮುಖವ್ಯಾಘ್ರವದು! ಯಾವುದಕ್ಕೂ ಅವರ ಮರ್ಯಾದೆಯ ಪೆಟ್ಟಿಗೆಯಂತಿರುವ ಈ ಪುಸ್ತಕಗಳನ್ನು ಬಹಳ ಜಾಗ್ರತೆಯಿಂದ ಕಾಪಾಡಬೇಕಣ್ಣ!

ಶೀನು:— ನೀನು ಹೇಳುವುದು ಸುಳ್ಳಲ್ಲ ಕೃಷ್ಣ! ಆದರೆ ನನ್ನ ತಂಗಿಯಾದ ಕಮಲೆಗಾಗಿಯಾದರೂ ಅವಳ ಗಂಡನ ಗೌರವವನ್ನು ಉಳಿಸುವಂತಹ ಉಪಾಯವೇನಾದರೂ ಇದ್ದರೆ ಹುಡುಕಬೇಕೆಂದಿದ್ದೇನೆ.

ಕೃಷ್ಣ:— ಅಷ್ಟರೊಳಗೆ ಆ ಧೂರ್ತ ಶಿಖಾಮಣಿಯೇ ಇಂದು ನಡೆದ ವಿದ್ಯಮಾನಗಳಿಂದಾಗಿ, ಏನಾದರೊಂದು ಕಪಟ ತಂತ್ರದಿಂದ ನಮಗೇ ಮುಳುವು ತಂದಾನು! ನೀನು ಕಣ್ಣಾರೆ ಕಂಡಿಯಲ್ಲಣ್ಣ—ಪೋಲೀಸ್ ಇನ್ಸ್‌ಪೆಕ್ಟರ್ ಅವರ ಮನೆಗೆ ಬಂದುದನ್ನು? ಅಣ್ಣಾ! ನಾವು ಆದಷ್ಟು ಜಾಗ್ರತೆಯಾಗಿ ಈ ಊರನ್ನು ಬಿಟ್ಟುಬಿಡುವುದೇ ಮೇಲು ನೋಡು!

ಶೀನು:— ಹಾಗೆಲ್ಲಾ ಅಂಜಬೇಕಾಗಿಲ್ಲ. ನಾನು ಸತ್ಯಪೀಠದ ಮೇಲೆ ಗಟ್ಟಿಯಾಗಿ ನಿಂತುಕೊಂಡಿರುವಾಗ, ಸುಳ್ಳುಪೊಳ್ಳುಗಳೆಲ್ಲಾ ಹೆದರಿ ಓಡಿಹೋಗಬಹುದೆ? "ಬಂದುದೆಲ್ಲಾ ಬರಲಿ, ಗೋವಿಂದನ ದಯೆಯೊಂದಿರಲಿ!"

"ಯಾರೊಳಗೆ?" ಬಾಗಿಲ ಹೊರಗೆ ಯಾರದೋ ಕೊರಳು ಕೇಳಿತು.

ಉತ್ತರ ಕ್ಷಣವೇ ಸರಿದಿದ್ದ ಬಾಗಿಲು ತೆರೆಯಲ್ಪಟ್ಟಿತು.

"ಯಾರು?—" ಎಂಬ ಪ್ರಶ್ನೆಯೊಂದಿಗೆ–ಬಂಧುಗಳಿಬ್ಬರೂ ತಿರುಗಿ ನೋಡಿದರು.

ವರದನು ನಿಂತಿದ್ದನು!

"ಏನು ವರದರಾಯರೆ!—ಇಂತಹ ಹೊತ್ತಿನಲ್ಲಿ?" ಎಂದು ಕೇಳಿದನು ಶೀನು.

ಒಳಗೆ ಶೀನು ಒಬ್ಬನೇ ಇರುವನೆಂದು ಅದುವರೆಗೆ ವರದನು ಭಾವಿಸಿದ್ದನು. ಇನ್ನೊಬ್ಬನು–ಅಂದರೆ ಕೃಷ್ಣನು ಇರುವುದನ್ನು ನೋಡುತ್ತಲೇ ಭಯಚಕಿತನಾದನು. ಮರುನಿಮಿಷದಲ್ಲಿಯೇ ತುಂಟತನದ ಧೈರ್ಯವನ್ನು ಅವಲಂಬಿಸಿಕೊಂಡನು. ಇವಾವುದನ್ನೂ ಹೊರಗೆ ತೋರಲೀಸದೆ ಸಮಾಧಾನ ಸ್ವರದಿಂದ—"ಶೀನಾಚಾರಿ! ನಿನ್ನ ಹತ್ತಿರ ಸ್ವಲ್ಪ ಗುಟ್ಟಿನ ಕೆಲಸವಿತ್ತು; ಇದಾರು ಇನ್ನೊಬ್ಬ?"

ಶೀನು:— ಮತ್ತಾರೂ ಪರಕೀಯನಲ್ಲ. ನನ್ನ ಖಾಸ ತಮ್ಮ. ನಿಮ್ಮ ರಹಸ್ಯವೇನಿದ್ದರೂ ನಿಃಶಂಕೆಯಿಂದ ಹೇಳಬಹುದು.

ಕೃಷ್ಣ:— ಏನ್ರೀ! ಮೊನ್ನೆ ಮದರಾಸಿನಲ್ಲಿ ಸುಂದರೀಬಾಯಿಯ ಕೋಣೆಯಲ್ಲಿ ನಾನಿರುವಾಗ ನೀವಲ್ಲವೇನಯ್ಯ ಬಂದದ್ದು?

ವರದ:— ಓಃ! ನೀನೋ ಅದು? ನಿಮಗೂ ಸುಂದರೀಬಾಯಿಗೂ ಏನು ಸಂಬಂಧ?

ಕೃಷ್ಣ:— ಅದು ಅವಳೇ ನಿಮಗೆ ಹೇಳಿದ್ದಾಳಲ್ಲ?

ವರದ:— ಹೇಳಿದ್ದರೆ ನಾನೇಕೆ ಕೇಳೇನು?

ಕೃಷ್ಣ:—ಆದಿರಲಿ, ಸಾರ್! ಮಹಾಘನಶಾಲಿಗಳಾದ ಮಂಗಲಕರ್‍ರಾಯರ ಕುಮಾರರೋ ತಾವು?

ವರದ:— ಹೌದು. ಏಕೆ?

ಕೃಷ್ಣ:— ನಮಗೇನೂ ಬೇಡ. ನೀವು ಬಂದ ಸಮಾಚಾರವನ್ನು ಶ್ರುತಪಡಿಸೋಣಾಗಲಿ!

ವರದ:— ಶ್ರುತಪಡಿಸಲಿಕ್ಕಾಗಿಯೇ ಬಂದಿದ್ದೇನೆ! ಆದರೆ ನಿನಗಲ್ಲ! ಶೀನಾಚಾರಿಗೆ! ಶೀನಾಚಾರಿ! ಈ ದಿನ ಕಮಲಾಬಾಯಿಯ

ಕೈಯಿಂದ ನೀನು ಯಾವ ಯಾವ ಪುಸ್ತಕಗಳನ್ನು ಪಡೆದಿರುವಿಯೋ ಅವೆಲ್ಲವನ್ನೂ ಇತ್ತ ಕೊಡು!

ಶೀನು:— ನಿಮಗೇಕೆ ಕೊಡಬೇಕು?

ವರದ:—ಅವು ನನ್ನ ತಂದೆಯ ಪುಸ್ತಕಗಳು. ನಮಗೆ ಅಗತ್ಯವಿದೆ.

ಶೀನು:— ಕಮಲಮ್ಮನು ನಿಮ್ಮ ತಂದೆಯವರ ಪುಸ್ತಕಗಳನ್ನು ನನಗೆ ಕೊಟ್ಟಿಲ್ಲ. ಅವೆಲ್ಲಾ ನನ್ನ ಸ್ವಂತ ಪುಸ್ತಕಗಳು. ಇಗೋ–ಇಲ್ಲಿರುವ ಈ ಪುಸ್ತಕಗಳನ್ನೆ ಅವಳು ತಂದುಕೊಟ್ಟದ್ದು.

ವರದ:— ಅವೇ ಬೇಕಾಗಿವೆ.

ಕೃಷ್ಣ:— ಎಷ್ಟು ಮಾತ್ರಕ್ಕೂ ಕೊಡಲಾಗುವುದಿಲ್ಲ, ನಡೆಯಿರಿ.

ವರದ:— ನಿನ್ನೊಡನೆ ಕೇಳಲಿಲ್ಲ. ಶೀನಾಚಾರಿ! ಒಳ್ಳೆಯ ಮಾತಿನಲ್ಲಿ ಅವುಗಳನ್ನೆಲ್ಲಾ ಕೊಟ್ಟುಬಿಡು; ಇಲ್ಲದಿದ್ದರೆ ನಿನ್ನ ಮೇಲೆ ಕಮಲೆಯ ಪ್ರಕರಣದಲ್ಲಿ ಕೇಸ್ ಮಾಡಿಸಿ, ಶಿಕ್ಷೆಗೆ ಗುರಿಪಡಿಸೇವು. ಇವುಗಳನ್ನು ಈಗ ಕೊಟ್ಟರೆ ನಿನಗೇನೂ ಆಗದಂತೆ ಮಾಡುತ್ತೇವೆ.

ಕೃಷ್ಣ:— ನೀವು ಮಾಡುವುದನ್ನು ಅಗತ್ಯವಾಗಿ ಮಾಡಿಬಿಡಿರಿ.

ವರದ:— ನಿನ್ನನ್ನು ಯಾರು ಕೇಳಿದರೊ?

ಕೃಷ್ಣ:— ಅಣ್ಣನೂ ನಾನೂ ಒಂದೆ! ಒಂದೇ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳು ನಾವು. ನನ್ನ ಅಭಿಪ್ರಾಯವೇ ಅಣ್ಣನ ಅಭಿಪ್ರಾಯ. ಅಲ್ಲವೇನಣ್ಣ?

ಶೀನು:— ಹೌದು. ಇವೆಲ್ಲಾ ನನ್ನ ಸ್ವಂತ ಪುಸ್ತಕಗಳು. ನಾನೇ ಕೈಮುಟ್ಟಿ ಬರೆದಿದ್ದೇನೆ. ಎಷ್ಟು ಮಾತ್ರಕ್ಕೂ ಕೊಡಲಾಗುವುದಿಲ್ಲ. ಇನ್ನು ನೀವು ಕೇಸ್ ಗೀಸ್ ಮಾಡಿಸಲಿಕ್ಕೆ ಕಮಲಮ್ಮನ ಸಂಬಂಧದಲ್ಲಿ ನನ್ನದೇನೂ ಅಪರಾಧವಿಲ್ಲ. ನನ್ನ ಸತ್ಯವು ನನ್ನನ್ನು ಕಾಪಾಡೀತು! ನೀವು ಹೋಗಬಹುದು!

ವರದ:— ಪುಸ್ತಕಗಳನ್ನು ಕೊಡುವುದಿಲ್ಲವೆ?

"ಇಲ್ಲ!" ಬಂಧುಗಳಿಬ್ಬರೂ ಒಂದೇ ಬಾರಿಗಂದರು.

"ಇಲ್ಲ?—ಸಿದ್ಧ!—" ಎಂದು ಕೂಗಿ ವರದನು ಇದಿರಿನಲ್ಲಿದ್ದ ಪುಸ್ತಕಗಳ ಕಡೆಗೆ ಧುಮುಕಿದನು.

ಕೃಷ್ಣನು ಚಟಕ್ಕನೆ ಆ ಪುಸ್ತಕಗಳ ಮೇಲೆಯೆ ಕುಳಿತು, ಬಲಗೈಯನ್ನು ಮುಷ್ಟಿಮಾಡಿ ದುರುಳನ ಮುಂದೆ ನೀಡಿ, ಹುಬ್ಬುಗಂಟುಹಾಕಿ, ಕಣ್ಣು ಕೆಕ್ಕರಿಸಿ ನೋಡುತ್ತ—"ಜೋಕೆ! ಮೂಗು ಜಜ್ಜಿಹಾಕಿಯೇನು!"

ಶೀನುವೂ ಅವನ ಪಕ್ಕದಲ್ಲಿ ನಿಂತು ಕೋಪದಿಂದ—"ದುರಾತ್ಮ! ಒಳ್ಳೆಯ ಮಾತಿನಲ್ಲಿ ಸುಮ್ಮನೆ ಹೋಗುವಿಯೋ ಕೂಗಿ ಮಂದಿಯನ್ನು ಬರಮಾಡಲೊ?"

"ಸಾಕು ಮುಚ್ಚು!—" ಎಂದು ವರದನು ಜಬರಿಸಿ ಎಡಗೈಯ ಮಣಿಗಂಟಿನಿಂದ ಶೀನುವಿನ ಎದೆಯನ್ನು ತಿವಿದನು. ಅಷ್ಟರಲ್ಲಿ ಸಿದ್ದಪ್ಪನು ಕೃಷ್ಣನನ್ನು ಹಿಡಿದತ್ತ ಎಳೆದನು. ಕೃಷ್ಣನೂ ಸಿದ್ದನೂ ಗುದಮುರಿಗೆ ಹಾಕಿಕೊಳ್ಳುತಿರುವಾಗ, ಮೂಲೆಗೆ ಬಿದ್ದ ಶೀನು ಎದ್ದು ಪುಸ್ತಕಗಳನ್ನು ಎತ್ತಿಕೊಳ್ಳಲುಜ್ಜುಗಿಸಿದನು. ಅಷ್ಟರಲ್ಲಿ ವರದನು ಇನ್ನೊಮ್ಮೆ ಶೀನುವನ್ನು ದೂಡಿ ಆ ಪುಸ್ತಕಗಳನ್ನು ಬಾಚಿ ಎತ್ತಿಕೊಂಡನು!

"ಅಣ್ಣಾ! ಪುಸ್ತಕ—!" ಎಂದು ಕೃಷ್ಣನು ಕೂಗುತ್ತ, ಸಿದ್ದಪ್ಪನನ್ನು ಬಲದಿಂದ ದೂಡಿಹಾಕಿ, ಹಾರಿಬಂದು ವರದನ ಪುಸ್ತಕದಕೈಯನ್ನು ಹಿಡಿದನು. ವರದನು ಕೃಷ್ಣನನ್ನು ಕೊಡರಿ ಜಾರಿಸುತ್ತ ಪುಸ್ತಕಗಳೊಂದಿಗೆ ಪಲಾಯನ ಮಾಡಬೇಕೆಂದು ತಿರುಗಿದಾಗ, ಬಾಗಿಲಿಗೆ ಅಡ್ಡವಾಗಿ ಒಳಗಡೆಯನ್ನು ನೋಡುತ್ತ, ಭಯಂಕರವಾದ ಪೋಲೀಸಿನ ಭವ್ಯವಾದ ಮೂರ್ತಿ ಅಚಲವಾಗಿ ನಿಂತಿರುವುದನ್ನು ನೋಡಿ ಸ್ತಂಭೀಭೂತನಾಗಿ ನಿಂತನು!

ಆ ಸಂಧಿಯಲ್ಲಿ ಕೃಷ್ಣನು ಅವನ ಕೈಯಿಂದ ಪುಸ್ತಕಗಳನ್ನು ಕಸಿದುಕೊಂಡುಬಿಟ್ಟನು!

ಫಕ್ಕನೆ ಪೋಲೀಸನನ್ನು ನೋಡಿ ಸಿದ್ದಪ್ಪನೂ ಸ್ತಬ್ಧನಾದನು.

"ಏನಿದು ಗಲಾಟೆ?"—ಶಾಂತಗಂಭೀರ ವಾಣಿಯಿಂದ ಪೋಲೀಸನು ಕೇಳಿದನು.

ವರದನು ಪ್ರಸಂಗಾವಧಾನತೆಯನ್ನು ತಂದುಕೊಂಡು,—"ಮತ್ತೇನಿಲ್ಲ ಜಮಾದಾರ್! ಶೀನಾಚಾರಿ ಎಂಬ ಕಳ್ಳನು ನನ್ನ ತಂದೆ ಮಂಗಲ್ಕರ್ರಾಯರು ಬರೆದ ಪುಸ್ತಕಗಳನ್ನು ಅಪಹರಿಸಿ ತಂದಿಟ್ಟುಕೊಂಡಿದ್ದಾನೆ.

ಅವುಗಳನ್ನು ಒಳ್ಳೆಯ ಮಾತಿನಲ್ಲಿ ಕೊಡದೇ ಇದ್ದ ಕಾರಣ ಸ್ವಲ್ಪ ಬಲಾತ್ಕಾರ ಪಡಿಸಬೇಕಾಯಿತು."

ಪೋಲೀಸನು ಸದರ್ಪಿತನಾಗಿ—"ಶೀನಾಚಾರಿ ಎಂದರೆ ಯಾರು?"

ಶೀನು— ನಾನೆ!

ಪೋಲೀಸ್:— ಪುಸ್ತಕಗಳು ಎಲ್ಲಿವೆ?

ವರದ:— ಅದೋ, ಶೀನಾಚಾರಿಯ ತಮ್ಮ ಕೃಷ್ಣನ ಕೈಯಲ್ಲಿ!

ಕೃಷ್ಣ:— ಇವು ಅಪಹರಿಸಿದ ಗ್ರಂಥಗಳಲ್ಲ! ನನ್ನ ಅಣ್ಣನೇ ಬರೆದ ಅವನ ಸ್ವಂತ ಪುಸ್ತಕಗಳು.

ವರದ:— ಅಲ್ಲಲ್ಲ! ನನ್ನ ತಂದೆ ಇವನಿಂದ ಬರೆಸಿದ್ದು!

ಪೋಲೀಸ್:— ಈ ತಕರಾರು ಇಲ್ಲಿ ಬೇಡ! ಆ ಪುಸ್ತಕಗಳನ್ನು ಇತ್ತಕೊಡಿರಿ ನೋಡೋಣ!

ವರದ:— ಕೃಷ್ಣ! ಒಳ್ಳೆಯ ಮಾತಿನಲ್ಲಿ ಕೊಟ್ಟುಬಿಡು ನನ್ನ ಕೈಯಲ್ಲಿ?

ಕೃಷ್ಣ:— ಯಾರ ಕೈಯಲ್ಲಿ ಯಾಕೆ ಕೊಡಬೇಕು? ನಮ್ಮ ಪುಸ್ತಕ ನಮ್ಮ ಕೈಯಲ್ಲಿರಲಿ!

ಪೋಲೀಸ್:— ನಮ್ಮ ಪುಸ್ತಕವೆಂದು ನೀವು ಹೇಳುತ್ತೀರಿ; ನಮ್ಮ ಪುಸ್ತಕವೆಂದು ಇವರು ಹೇಳುತ್ತಾರೆ! ಈ ತಕರಾರು ಅಲ್ಲಿ ತೀರ್ಮಾನವಾಗಲಿ! ಕೊಡಿರಿತ್ತ ಪುಸ್ತಕ ನನ್ನ ಕೈಗೆ! ಎಲ್ಲಿಯೂ ಹೋಗುವುದಿಲ್ಲ! ಏನೂ ಸಂದೇಹ ಬೇಡ!

ಕೃಷ್ಣ:— ಅಣ್ಣಾ! ಕೊಡಲೆ?

ಶೀನು:— ಕೊಡು ಕೃಷ್ಣ! ಸತ್ಯವೆಲ್ಲಿಗೆ ಹೋದೀತು?

ಕೃಷ್ಣನು ಎಲ್ಲಾ ಪುಸ್ತಕಗಳನ್ನೂ ಅದರೊಂದಿಗಿದ್ದ ಪತ್ರಗಳನ್ನೂ ಆ ಪೋಲೀಸನ ವಶಮಾಡಿದನು.

ಅನಂತರ ಪೋಲೀಸನು— ಶೀನಾಚಾರಿಗಳೆ! ನಾವು ನಿಮ್ಮನ್ನು ಕೈದು ಮಾಡಲಿಕ್ಕಾಗಿ ಬಂದಿದ್ದೇವೆ ಪೋಲೀಸ್ ಇನ್ಸ್‌ಪೆಕ್ಟರ್ ಪ್ರಸಾದರಾಯರ ಆಜ್ಞೆ. ವಾರಂಟೂ ಇದೆ.

ಹೀಗೆಂದು ‘ ಹೆಂಗುಸಿನ ಮೇಲೆ ಅತ್ಯಾಚಾರ ಮಾಡಿದ ನಿಮಿತ್ತ ’ ವಾಗಿರುವ ವಾರಂಟನ್ನು ತೋರಿಸಿ, ಬೇಡಿಯನ್ನು ಹೊರಗೆ ತೆಗೆದನು.

ಕೃಷ್ಣ:— ಅಣ್ಣಾ ! ಇದೇನು ವಿಪತ್ತು ಬಂತಲ್ಲಾ !

ಶೀನು:— ಹೆದರದಿರು ಕೃಷ್ಣ! ಹೀಗೇನಾದರೂ ಬರುವುದೆಂದು ಮಾಡಿಯೇ ಇದ್ದೆ. ಆಗಲಿ ಸಿದ್ಧನಾಗಿಪ್ಪೇನೆ! ಜಮಾದಾರ್ ಸಾಬ್! ಬೇಡೀಗೀಡೀ ಅನಾವಶ್ಯಕ!

ಪೋಲೀಸ್:— ಕಾನೂನಿಗೆ ಸರಿಯಾಗಿ ನಡೆಯಬೇಕು ನೋಡಿ! ಚಾಚಿರಿ ಕೈಯನ್ನು!

ಶೀನು ಕೈಚಾಚಿದನು. ಪೋಲೀಸನು ಬೇಡಿಯನ್ನು ತೊಡಿಸಿದನು. ಇದನ್ನು ನೋಡುವಾಗ ಕೃಷ್ಣನ ಕಣ್ಣಿನಲ್ಲಿ ನೀರು ತುಂಬಿತು. ಆದರೆ ಶೀನುವಿಗೇನೂ ದುಃಖವಾದಂತಿರಲಿಲ್ಲ—“ ಕೃಷ್ಣ ! ಚಿಂತಿಸಬೇಡ! ನೀನು ಇಲ್ಲಿಯೇ ಮಲಗಿ, ನಾಳೆ ಬೆಳಗ್ಗೆ ವೆಂಕೋಬರಾಯರಲ್ಲಿಗೆ ಹೋಗಿ, ನಡೆದುದನ್ನೆಲ್ಲಾ ಹೇಳು, ಮುಂದೆ ದೇವರಿದ್ದಾನೆ; ಸತ್ಯವಿದೆ! ” ಎಂದ.

ಕೃಷ್ಣ:— ಅದು ಸರಿ ಅಣ್ಣ! ನಾನು ಬಲುಬಲು ಪೇಚಾಡಿ ಇಂದೇ ನಿನ್ನನ್ನು ಕಂಡು ಹಿಡಿದು ಸಂಧಿಸಿ, ಅಷ್ಟು ಬೇಗನೇ ಈರೀತಿಯಾಗಿ ಆಗಲ ಬೇಕಾಯಿತಲ್ಲಾ ಎಂದು ವ್ಯಸನಪಡುತ್ತೇನೆ! ಅಷ್ಟೆ!

ಶೀನು:— ಸಂಧಿಸಿ ಮುಖ್ಯ ಮುಖ್ಯ ಮಾತುಗಳನ್ನು ಆಡಿಕೊಳ್ಳುವಷ್ಟು ಸಮಯವನ್ನು ದೇವರು ಕರುಣಿಸಿದನಲ್ಲ! ಅದಕ್ಕಿಂತ ಮೊದಲೇ ಈ ಪ್ರಸಂಗವು ಬರುತ್ತಿದ್ದರೆ ವ್ಯಸನಪಡಲೇಬೇಕಿತ್ತು!

ಈ ಸಮಯದಲ್ಲಿ ವರದನು ಜೇಬಿನಿಂದ, ಒಂದು ಹತ್ತು ರೂಪಾಯಿಯ ನೋಟನ್ನು, ಅರ್ಧಭಾಗ ತೆಗೆದು ಆ ಪೋಲೀಸನಿಗೆ ತೋರಿಸುತ್ತ- “ಪೋಲೀಸ್ ಸಾಬ್! ಆ ಪುಸ್ತಕಗಳಿಂದ ನಿಮಗೇನೂ ಪ್ರಯೋಜನವಿಲ್ಲ. ಅವನ್ನು ದಯಮಾಡಿ ಇತ್ತುಕೊಡು! ನಿನಗೆ—”

“ಖಬರ್ದಾರ್! ನಿನ್ನನ್ನೂ ಅರೆಸ್ಟ್ ಮಾಡುತ್ತೇವೆ. ನೀನು ಮನೆಯನ್ನು ಹೊಕ್ಕು—ಈ ಮತ್ತೊಬ್ಬ ಲಕ್ಷ್ಮಮನುಷ್ಯನೊಂದಿಗೆ ಬಲಾತ್ಕಾರ ಮಾಡಿರುತ್ತೀ! ನೀನು ಮಂಗಲಕರ್ರಾಯರ ಮಗ ತಾನೆ? ಅಂತೆಯೇ

ತಪ್ಪಿಸಿಕೊಳ್ಳಲಾರಿ ಎಂದು ಇಷ್ಟಕ್ಕೆ ಹೋಗಬಿಡುತ್ತೇವೆ! ನಿನ್ನೊಂದಿಗ ನಾದ ಈ ಲತ್ಕ ಆಳು ಯಾರು?

ವರದ:— ಕೋಪ ಮಾಡಬೇಡಪ್ಪಾ ನಮ್ಮನೇ ಸೇವಕ.

ಪೋಲೀಸ್:— ಸರಿ. ನಿನ್ನ ಪಾಡಿಗೆ ಹೊರಟುಹೋಗು. ನಾಳೆ ಸಮ್ಮನ್ಸ್ ಬರುವಾಗ ತಪ್ಪಿಸಿಕೊಂಡರೆ ಜೋಕೆ!

ವರದನು ಮತ್ತೇನೂ ಮಾಡಲಾರದವನಾಗಿ ಮುಖ ತಗ್ಗಿಸಿ ಕೊಂಡು ಸಿದ್ದಪ್ಪನೊಂದಿಗೆ ಹೊರಟುಹೋದನು.

ಹೊರಗೆ ಇನ್ನೊಬ್ಬ ಪೋಲೀಸನು ನಿಂತಿದ್ದನು. ಮೊದಲನೆಯ ವನು ಪುಸ್ತಕಗಳನ್ನೆಲ್ಲಾ ಎಣಿಸಿ ನೋಡಿಕೊಂಡು ಎರಡನೆಯವನ ಕೈಯಲ್ಲಿ ಕೊಟ್ಟು, ಶೀನುವನ್ನು ಕರೆದುಕೊಂಡು ಹೊರಟನು. ಕೃಷ್ಣನು ಅಣ್ಣನನ್ನು ಅಗಲಿರಲಾರದೆ, ಬಾಗಿಲಿನ ಬೀಗವನ್ನು ಹಾಕಿ, ಅವರ ಜತೆ ಯಲ್ಲಿಯೆ ಹೊರಟನು. ಈ ಗದ್ದಲವನ್ನು ಕೇಳಿ ಎಚ್ಚೆತ್ತು ಅಲ್ಲಿಗೆ ಬಂದಿದ್ದ ಅಕ್ಕಪಕ್ಕದ ನಿವಾಸಿಗಳಾದ ನಾಲ್ಕಾರು ಜನರೂ ತೆರಳಿದರು.

---

## ೩೫. ಇನ್ನೇನುಪಾಯ?

ಪೋಲೀಸ್ ಇನ್ಸ್‌ಪೆಕ್ಟರ್ ಪ್ರಸಾದರಾಯರು ಕಳುಹಿಸಿಕೊಟ್ಟ ಆ ಇಬ್ಬರು ಪೋಲೀಸರು, ಮೊದಲು ವಕೀಲ ವೆಂಕೋಬರಾಯರ ಮನೆಗೆ ಬಂದು ಶೀನುವನ್ನು ವಿಚಾರಿಸಿ, ಅವನು ತನ್ನ ಬಿಡಾರದಲ್ಲಿರುವನೆಂಬು ದನ್ನು ತಿಳಿದುಕೊಂಡು, ವರದನು ಬಲವಂತ ಮಾಡುತಿದ್ದ ವೇಳೆಗೆ ಸರಿ ಯಾಗಿ ದೈವಯೋಗದಲ್ಲಿ ಅಲ್ಲಿಗೆ ಬಂದುನಿಂತಿದ್ದರು. ಆದರಿಂದಾಗಿ ಕೈಗೆ ಬಂದುದು ಬಾಯಿಗೆ ಬಾರದಂತಾಗಿ ವರದನು ಕೈಸುಟ್ಟುಕೊಂಡವ ನಂತೆ ಕ್ಷುಣ್ಣನಾಗಿ ಮನೆಯನ್ನು ಸೇರಿದನು ಅವನು ಬರಿಗೈಯಿಂದ ಬಂದುದನ್ನು ನೋಡಿ ಮಂಗಲಕರರು, ಗಾಬರಿಯಿಂದ–"ಏನಾಯಿತೊ? ಪುಸ್ತಕಗಳೆಲ್ಲಿ?" ಎಂದು ಚೀರಿದರು.

ತಾಮಸಿಯಾದ ವರದನು ಸಿಟ್ಟಿನಿಂದ ಕಾಲು ಅಪ್ಪಳಿಸುತ್ತ— "ಪುಸ್ತಕ! ಪುಸ್ತಕ! ಪುಸ್ತಕ! ಯಾಕೆ ಬೇಕಿತ್ತು ನಿನಗೆ ಆ ಅಡುಗೇ

ಆಚಾರಿಯ ಎಂಜಲು ತಿನ್ನುವ ಕೆಲಸ? ಛಿ! ಛಿ! ಈಗ ತಿನ್ನು ಅದರ ಫಲವನ್ನು!"

ಮಂಗಲಕರರು ಮಂಚದ ಮೇಲೆ ಹೊರಳುತ್ತ, ಬಳಿಕ ಎದ್ದು ಕುಳಿತು ತಲೆಯನ್ನು ಗಟ್ಟಿಯಾಗಿ ಹಿಡಿದುಕೊಂಡು,—"ಅಯ್ಯೋ! ಅಯ್ಯೋ! ಮಗನೆ! ನೀನೂ ನನ್ನ ಕೈಯನ್ನು ಬಿಟ್ಟುಬಿಡಬೇಡವೋ ಅಪ್ಪ! ಏನಾಯಿತೆಂದಾದರೂ ಹೇಳಪ್ಪಾ! ಅಷ್ಟು ಜೋರಿನಲ್ಲಿ ಹೇಳಿಹೋದಿಯಲ್ಲಾ! ನಿನ್ನನ್ನು ನಂಬಿದ್ದೆನಲ್ಲಾ! ಏನಾಯಿತೊ?"

ವರದ:— ಹೌದು! ಅಲ್ಲಿ ಅವನು ಒಬ್ಬನೇ ಇರುತ್ತಿದ್ದರೆ ಹೇಳಿದ ಹಾಗೆ ತಂದೇಬಿಡುತ್ತಿದ್ದೆ. ಅವನಿಗಿಂತ ಜೋರಿನವನಾದ ಅವನ ತಮ್ಮನೆಂಬೊಬ್ಬನು ಸೇರಿಕೊಂಡಿದ್ದಾನೆ ಅಲ್ಲಿ!—

ಮಂಗಲ:— ತಮ್ಮನೆ? ಹಾ! ಮೋಸವೇ ಆಯಿತಪ್ಪಾ! ಆಯಿತು!

ವರದ:— ಆದರೂ ನಾನು ಬಿಡದೆ ಅವನನ್ನು ಒದ್ದುಹಾಕಿ ಪುಸ್ತಕಗಳನ್ನು ಕೈಗೆತ್ತಿಕೊಂಡೆ. ಅಷ್ಟರಲ್ಲಿ ನಿನ್ನಿಂದಲೇ ಎಲ್ಲಾ ಹಾಳಾಗಿ ಹೋಯಿತು!

ಮಂಗಲ:— ಏನಾಯಿತು?

ವರದ:— ನೀನು ಪೋಲೀಸ್ ಇನ್ಸ್‌ಪೆಕ್ಟರರನ್ನು ಬರಹೇಳಿದ್ದೇ ತಪ್ಪಾಯಿತು? ಅವರೊಡನೆ ನಾವು ಕೊಟ್ಟ ಕಂಪ್ಲೇಂಟಿನ ಪ್ರಕಾರ, ಆ ಶೀನಾಚಾರಿಯನ್ನು ಆರೆಸ್ಟ್ ಮಾಡಲಿಕ್ಕೆ ಇಬ್ಬರು ಪೋಲೀಸರು ಅದೇ ಸಮಯಕ್ಕೆ ಅಲ್ಲಿಗೆ ಬಂದು, ಆ ಪುಸ್ತಕಗಳನ್ನೆಲ್ಲಾ ತಮ್ಮ ಕೈವಶ ಮಾಡಿಕೊಂಡುಬಿಟ್ಟಿದ್ದಾರೆ!

ಮಂಗಲ:— ಅಯ್ಯಯ್ಯೋ!

ವರದ:— ನಾನು ಲಂಚದ ಆಶೆ ತೋರಿಸಿದ್ದಕ್ಕೆ ನನ್ನನ್ನೆ ಆರೆಸ್ಟ್ ಮಾಡುತ್ತೇನೆಂದು ಬೆದರಿಸಿದ ಆ ಪೋಲೀಸ! ಈಗ ನಾನೂ ಸಿಕ್ಕಿಬಿದ್ದ ಹಾಗಾಗಿದೆ ಗೊತ್ತೋ?

ಮಂಗಲ:— ಹಾ! ನೀನು ಪುಸ್ತಕಕ್ಕಾಗಿ ಜಗಳ ಮಾಡಿದ್ದು ಆ ಪೋಲೀಸರು ನೋಡಿದರೋ?

ವರದ:— ನೋಡದೆ ಮತ್ತೆ?

ಮಂಗಲ:— ಹಾ! ಇನ್ನೇನು ಮಾಡುವುದು ?

ಮಂಗಲಕರರು ನಿರಾಧಾರರಾದವರ ಹಾಗೆ ಮಂಚದಲ್ಲಿ ಒರಗಿದರು. ವರದನು ಕಮಲೆಯ ಮೇಲೆಯೂ, ಪೋಲೀಸರ ಮೇಲೆಯೂ, ಶೀನುವಿನ ಮೇಲೆಯೂ, ತಂದೆಯ ಮೇಲೆಯೂ ಇದ್ದ ಸಿಟ್ಟನ್ನು ಏಕಮುಖವಾಗಿ ತಂದೆಯ ಮೇಲೆಯೇ ತೋರಿಸುತ್ತ, ಕಾಲನ್ನು ಅಪ್ಪಳಿಸಿಕೊಂಡು ಕೂಗಾಡುವವನ ಹಾಗೆ,—"ಮಾಡುವುದಿನ್ನು ನಿದ್ದೆ! ನಿದ್ದೆ! ನನಗೊಂದೂ ಗೊತ್ತಿಲ್ಲ! ನನಗೇನು ಗೊತ್ತು, ನೀನು ಅವನ ಪುಸ್ತಕಗಳನ್ನೆಲ್ಲಾ ಅಪಹಾರ ಮಾಡಿ ಹೀಗೆ ಸಿಕ್ಕಿಬೀಳುತ್ತೀ ಅಂತ? ಏನೋ ಹೆಂಗುಸಿನ ಸಂಬಂಧದ ಒಂದೇ ಕೇಸು, ಮರ್ಯಾದೆಯಿಂದ ಹೇಗಾದರೂ ಪಾರಾಗೋಣಾಂತ ನಾನು ನೋಡಿದರೆ, ನಿನ್ನ ಈ ಎಂಜಲು ತಿನ್ನುವ ವ್ಯಾಪಾರದಿಂದಾಗಿ ಸಿಕ್ಕು ಸಿಕ್ಕಾದ ಇಂದ್ರಜಾಲದಲ್ಲಿ ಸಿಕ್ಕಿಕೊಂಡಿದೆ! ಇನ್ನು ಮಾಡುವುದೇನು ಮಣ್ಣು? ಕೊಟ್ಟ ಕಂಪ್ಲೇಂಟಿನ ಪ್ರಕಾರ ಸಾಧಿಸಲಿಕ್ಕಾದರೂ ಮಾರ್ಗವಿದೆಯೆ? ಹೆಂಗುಸಿನ ಮೇಲೆ ಅತ್ಯಾಚಾರ ಎಂಬ ಕೇಸು ನಿರ್ಬಲವಾಗಿ, ಪುಸ್ತಕಗಳ ಹಕ್ಕು ಸ್ವಾಧೀನತೆಗೆ ಸಂಬಂಧಪಟ್ಟ ಕೇಸಾಗಿ ಪರಿಣಮಿಸುವಂತಾಯಿತು! ಛೀ! ಯಾಕೆ ಬೇಕಿತ್ತಪ್ಪಾ ನಿನಗೆ ಈ ಪೀಕಲಾಟದ ವ್ಯವಹಾರ? ಥೂ! ಥೂ!—" ಎಂದು ಮುಂತಾಗಿ ಬಯ್ಯುತ್ತ ಅತ್ತಿತ್ತ ತಿರುಗಾಡಲಾರಂಭಿಸಿದನು.

ಮಂಗಲಕರರು ಆರ್ತಸ್ವರದಿಂದ—"ಅಯ್ಯೋ! ಮಗನೇ! ವರದಾ! ನೀನೂ ನನ್ನನ್ನೆ ಬಯ್ದರೆ ನಾನೇನು ಮಾಡಲಿಯೋ ಇನ್ನು? ಹುಡುಕಪ್ಪಾ ಇನ್ನೂ ಏನಾದರೊಂದು ಉಪಾಯ? ಆ ಪುಸ್ತಕಗಳಿಗಾಗಿಯೇ ಕಮಲೆಯ ಮೇಲೆ ಅವನು ಬಲಾತ್ಕಾರ ಮಾಡಿದ ಹಾಗೇನಾದರೂ—"

"ಹೌದೌದು! ಒಂದು ಸುಳ್ಳು ಮುಚ್ಚಲಿಕ್ಕೆ ಸಾವಿರ ಸುಳ್ಳು ಹೇಳಿ-ಛೀ ಛೀ— ಒಟ್ಟು ದೊಡ್ಡ ಸುಳ್ಳಿನ ಸಾಮ್ರಾಜ್ಯ! ನನಗೆ ಒಂದೂ ತೋರುವುದಿಲ್ಲ! ಏನಾದರೂ ಮಾಡಿಕೋ ನಿನ್ನ ಕರ್ಮ! ಇದಿಷ್ಟು ಮಾಡಿದ್ದು ಮನೆಗೆ ಹೊಕ್ಕ ಮಾರಿಯಾದ ಈ ಕಮಲ!"

"ಇದಿಷ್ಟೂ ದೊಡ್ಡದು ಮಾಡಿದ್ದು ಕಾಳಸರ್ಪದಂತಹ ವರದ!" ಕಮಲೆಯೆಂದಳು.

"ಹಾಯ್! ಹಾಯ್! ನೀವಿಬ್ಬರೂ ಸೇರಿ ನನ್ನನ್ನು ಕೊಲ್ಲ ಬೇಡಿರೋ!"

"ಏನಾದರೂ ಹೊಡಕೊಳ್ಳಿರಿ ತಲೇತಲೆ!" ಎಂದು ಆರ್ಭಟಿಸುತ್ತ ಧಡಧಡನೆ ಕಾಲನ್ನು ಅಪ್ಪಳಿಸಿಕೊಂಡು, ವರದನು ತನ್ನ ಕೋಣೆಗೆ ಹೋಗಿ ಮಂಚದ ಮೇಲೆ ಧಮ್ಮನೆ ಬಿದ್ದನು

ಮಂಗಲಕರರೂ ತಮ್ಮ ಮಂಚದಲ್ಲಿ ಹೊರಳಾಡಿಕೊಂಡು ನಿದ್ರಾ ತಂದ್ರಾವಸ್ಥೆಯಲ್ಲಿ ಏನೇನೋ ಕನಸು-ನೆನಸುಗಳನ್ನು ಕಂಡು ಆಗಾಗ ಕೂಗಿಕೊಳ್ಳುತ್ತಿದ್ದರು.

ಮರುದಿನ ಬೆಳಗಾಯಿತು; ಮಧ್ಯಾಹ್ನವೂ ಆಯಿತು; ಅಪರಾಹ್ನಕ್ಕೂ ತಿರುಗಿತು. ಮಂಗಲಕರರು ಬಹಳ ಅಸ್ವಸ್ಥರಾಗಿದ್ದರು. ಆಫೀಸಿಗೆ ಹೋಗುವ ಸ್ಥಿತಿಯಲ್ಲಿರಲಿಲ್ಲ ಮುಖವು ಕಪ್ಪಿಟ್ಟುಹೋಗಿತ್ತು. ಯೋಚನೆಯಿಂದ ತಲೆಬಿಸಿಯಾಗಿ ಶೂಲಿಯೆದ್ದಿತ್ತು ಒಮ್ಮೆಗೇ ಎಲ್ಲಾ ಶಕ್ತಿಯೂ ಕುಂದಿಹೋದವರಂತೆ, ಮಂಚದ ಮೇಲೆಯೇ ಬಿದ್ದು ಹೊರಳಾಡುತಿದ್ದರು ಒಮ್ಮೊಮ್ಮೆ ಏಳುವರು; ಕೋಣೆಯೊಳಗೇ ಅತ್ತಿತ್ತ ತಿರುಗಾಡುವರು; ಈಜೀಚೇಯರಿನ ಮೇಲೆ ಬೀಳುವರು ಮತ್ತೆ ಏಳುವರು. ಆಗೊಮ್ಮೆ ರಾಮಚಂದ್ರರಾಯರು ಅವರನ್ನು ವಿಚಾರಿಸಲು ಬಂದಾಗ, ತನಗೇನೂ ಸೌಖ್ಯವಿಲ್ಲ-ತಲೆಶೂಲಿ, ವಿಶ್ರಾಂತಿ ಬೇಕು — ಎಂದೇನೋ ನೆವನ ಹೇಳಿ ಅವರನ್ನು ಕಳುಹಿಸಿಬಿಟ್ಟರು. ಕಮಲೆಯೊಮ್ಮೆ ಅವರಿಗೆ ಸಮಾಧಾನಪಡಿಸಬೇಕೆಂಬ ಮನಸ್ಸಿನಿಂದ—"ಆದದ್ದು ಆಗಿ ಹೋಯಿತು! ಇನ್ನು ಮೇಲೆ ಇಲ್ಲದ ಸಲ್ಲದ ಆಲೋಚನೆ ಮಾಡಿ ಏನು ಪ್ರಯೋಜನ? 'ಕನ್ನಡ ಗೆಳೆಯ'ನ ಸತ್ಯವಾದ ಹೆಸರಿನ ವಿಷಯದಲ್ಲಿ ಪ್ರಮಾದ ಜರುಗಿದಂತೆ ತೋರಿಸಿ, 'ಅಮೃತ ಭೂಜ'ದಲ್ಲಿ ಸತ್ಯವನ್ನು ಹಾಕಿಸಲಿಕ್ಕೆ ಉಪಾಯವಿಲ್ಲವೆ? ಸಾಧ್ಯವಿಲ್ಲವೆ?—" ಎಂದು ಪ್ರಸ್ತಾವಿಸಲು, ಮಂಗಲಕರರು ಕಡುಗೋಪದಿಂದ ಉರಿದುಬಿದ್ದು— "ಸಾಕು ನಿನ್ನ ಹಿತಚಿಂತನೆಯ ವೇಷ! ಮಾಡುವುದೆಲ್ಲಾ ಮಾಡಿ ಈಗ ನನಗೆ ಬುದ್ಧಿ ಹೇಳಬರುವಿಯಾ? ನೀನು ನನ್ನ ಕಣ್ಣೆದಿರಿಗೆ ಬರಬೇಡ! ದೂರ ಹೋಗು!" ಎಂದು ಅಬ್ಬರಿಸಿದರು. ಆ ಮೇಲೆ ಕಮಲೆ ಅವರ ಕಣ್ಣಿಗೆ ಬೀಳದಂತೆ ಜಾಗರೂಕಳಾಗಿದ್ದಳು.

ಕಮಲೆ ಹೇಳಿದಂತೆ ಮಾಡಿಸಿದರೂ ಮಂಗಲಕರರಿಗೆ ಕ್ಷೇಮ ವಿದ್ದಿಲ್ಲ. ಅವರು ಗೌರ್ನಮೆಂಟ್ ನೌಕರರಿದ್ದು ಒಂದೊಂದು ಪುಸ್ತಕ ವನ್ನು ಪ್ರಕಟಪಡಿಸುವ ಮೊದಲು, ತಾನು ಇಂತಹ ಗ್ರಂಥವನ್ನು ಬರೆ ದಿರುವೆನೆಂದೂ, ಅದನ್ನು ಪಬ್ಲಿಷ್ ಮಾಡಿಸಲು ಅನುಜ್ಞೆ ಕೊಡ ಬೇಕೆಂದೂ-ಮುಂತಾಗಿ ಸರಕಾರದ ಅಪ್ಪಣೆಯನ್ನು ಕೇಳಿ ಪಡೆದುಕೊಂಡೇ ಪ್ರಕಟಪಡಿಸಬೇಕಾಗಿತ್ತು. ಹಾಗೆಯೇ ಮಾಡಿದ್ದರು. ಈಗ 'ಕನ್ನಡ ಗೆಳೆಯ' ಶ್ರೀನಿವಾಸನಾದರೆ ಅವರು ಸರಕಾರವನ್ನೆ ಮೋಸಪಡಿಸಿದಂತಾ ಗುತ್ತೆ. ಅದರ ಫಲವು ಉದ್ಯೋಗವನ್ನು ಕಳೆದುಕೊಳ್ಳುವುದಲ್ಲದೆ, ಶಿಕ್ಷೆ ಯನ್ನೂ ಅನುಭವಿಸಿ ಭಯಂಕರವಾದ ಅವಮಾನದಲ್ಲೇ ಪರಿಣಮಿಸು ವುದು. ಯೋಚನೆ ಮಾಡಿದಂತೆ ಅವರ ಕಲ್ಲು ಮನಸ್ಸು—ಹೀಗೊಂದು ಧೈರ್ಯವನ್ನು ಊಹಿಸಲಾರಂಭ ಮಾಡಿತು! ಶೀನು ತನ್ನ ಲೇಖಕ ನಾಗಿದ್ದನು. ತಾನು ಕುಳಿತು ಹೇಳುತ್ತಾ ಇರಲು ಅವನು ಬರೆಯುತ್ತಾ ಬಂದನು. ಆದುದರಿಂದ ಆ ಅಕ್ಷರಗಳೆಲ್ಲಾ ಅವನದೇ ಆಗಿದ್ದರೂ ಗ್ರಂಥವು ತನ್ನದೇ! "ವಿಧಿಯ ಬಲೆ" ಕೂಡಾ ತಾನೇ ಹೇಳಿ ಬರೆಯಿಸಿ ದುದು. ಅದನ್ನು ಅವನು ಅಪಹರಿಸಿ ತನ್ನ ಹೆಸರಿನಿಂದ ಸಿನಿಮಾ ಮಂಡ ಲಿಗೆ ಕಳುಹಿಸಿದುದಲ್ಲದೆ, ತಾನು ಅವನಿಂದ ಬರೆಯಿಸಿದ 'ಕಾರುಣ್ಯ ಮೂರ್ತಿ' ಮೊದಲಾದ ಗ್ರಂಥಗಳನ್ನು ಅವನು ತನ್ನದಾಗಿಸಿಕೊಳ್ಳಲು ಪ್ರಯತ್ನಪಟ್ಟಿದ್ದಾನೆ. ಅದಕ್ಕೆ ತನ್ನ ಹೆಂಡತಿಯಾದ ಕಮಲೆಯೇ ಅವ ನಿಗೆ ಸಹಾಯ ಮಾಡಿ, ಆ ಗ್ರಂಥಗಳನ್ನು ಅವನಿಗೆ ಕೊಟ್ಟಳು, ಎಂದು ಸಾಧಿಸಿದರೆ ಏನಾಗುತ್ತೆ? ಈ ವಿಧಾನಕ್ಕೆ ಸಾಧಕವಾಗಿ, ಮಂಗಲಕರರ ಆಫೀಸಿನ ಕಾಗದಗಳಲ್ಲಿ ಆ ಗ್ರಂಥಗಳು ಬರೆಯಲ್ಪಟ್ಟಿರುವುದೇ ಸಾಕ್ಷಿ! ಆದರೆ 'ಕಾರುಣ್ಯ 'ಮೂರ್ತಿ'ಯ ಮೂಲಪ್ರತಿ—ಮತ್ತು ಬೇರೆ ಕೆಲವು ಆಖ್ಯಾಯಿಕೆಗಳು ಸಾಮಾನ್ಯ ಕಾಗದದಲ್ಲಿಯೇ ಬರೆಯಲ್ಪಟ್ಟಿವೆ. ಅಲ್ಲದೆ ಶೀನುವಿಗೂ ಅವರಿಗೂ ಸಂಬಂಧ ಪರಿಚಯವಾದುದು ಎಲ್ಲಾ ಒಂದು ವರ್ಷದೊಳಗಿನ ಮಾತು. ಶೀನು 'ಕಾರುಣ್ಯ ಮೂರ್ತಿ' ಮೊದಲಾದ ಕೆಲವು ಗ್ರಂಥಗಳನ್ನು ಒಂದು ವರ್ಷಕ್ಕೆ ಪೂರ್ವಕಾಲದಲ್ಲಿ ಬರೆದಂತೆ ಆ ಪುಸ್ತಕಗಳಲ್ಲಿ ಅಲ್ಲಲ್ಲಿ ತಾರೀಕನ್ನೂ ಹಾಕಿದ್ದಾನೆ! ಅಲ್ಲದೆ ಆ ಮೂಲಪ್ರತಿ

ಯನ್ನು ಕೃಷ್ಣನು ಬೆಂಗಳೂರಿಗೆ ತಂದುದು, 'ಕನ್ನಡ ಚಿತ್ರಮಾಲೆ'ಯ ರಾಘವರಾಯರಿಗ ಗೊತ್ತಿದೆ. ಆಗ ಕೃಷ್ಣನೊಂದಿಗೆ ಹೇಳಿದ ಸುಳ್ಳು ಮಾತುಗಳನ್ನೆಲ್ಲಾ ರಾಘವರಾಯರೂ ಕೇಳಿದ್ದಾರೆ; ಅಲ್ಲದೆ ಒಂದು ವರ್ಷದ ಹಿಂದೆ ಶೀನು ಬಳ್ಳಾರಿಯಲ್ಲಿರಲಿಲ್ಲವೆಂದೂ, ಆವನು ಬಳ್ಳಾರಿಗೆ ಬಂದು ಒಂದು ವರ್ಷಮಾತ್ರವೇ ಆಯಿತೆಂದೂ, ಆವನಿಗೂ ಆವಳಿಗೂ ಪ್ರಥಮ ಪರಿಚಯ ಮಾಡಿಸಿದ ವಕೀಲ ವೆಂಕೋಬರಾಯರು ಬಲ್ಲರು. ಅಂತೆಯೇ ಮುಖ್ಯವಾಗಿ 'ಕಾರುಣ್ಯ ಮೂರ್ತಿ'ಯ ಮೂಲಪ್ರತಿ ಜೀವದಿಂದಿರುವುದು ತುಂಬಾ ತೊಂದರೆಯಾಗಿದೆ! ಅಲ್ಲದೆ ಹೇಳುತ್ತ ಬರೆಯಿಸಿದುದೆಂದರೆ, ಅಷ್ಟನ್ನೂ ಹೇಳುತ್ತಾ ಬರೆಯಿಸುವುದೆಂದರೆ- ಏನೂ ವಿಶ್ವಾಸಿಕವಾಗಿ ಕಾಣುವುದಿಲ್ಲ. ಹಾಗೆ ಬರೆಯುವ ವಾಡಿಕೆಯೂ ಸಾಮಾನ್ಯವಾಗಿ ಎಲ್ಲಿಯೂ ಇರಲಿಕ್ಕಿಲ್ಲ. ಪರೀಕ್ಷೆ ಮಾಡಿಸುವುದಾದರೆ ಹಾಗೆ ಒಬ್ಬ ಲೇಖಕನಿಂದ ಒಂದು ಗ್ರಂಥವನ್ನು ಬರೆಯಿಸುವ ಸಾಮರ್ಥ್ಯವೂ ಅವರಿಗಿಲ್ಲ. ಅಲ್ಲದೆ ಶೀನು ಬರೆದ ರೀತಿಯ ಶೈಲಿ–ವಾಕ್ಸರಣಿ–ಭಾಷಾವಿಧಾನಗಳೂ ಆವರಿಗೆ ಬಾರದು. ಆದುದರಿಂದ ಹಾಗೆ ಸಾಧಿಸಲು ಹೋಗುವುದೆಂದರೆ, ಇನ್ನೊಬ್ಬನ ಮಕ್ಕಳಿಗೆಲ್ಲಾ ತಾನೇ ಅಪ್ಪ–ಎಂದು ಸಾಧಿಸಲೆತ್ನಿಸುವಂತೆ ಅಸಹ್ಯವೂ ಅಸಾಧ್ಯವೂ ಅವಮಾನಕಾರಕವೂ ಎಂದು ವಿಚಾರಾಂತದಲ್ಲಿ ಅವರಿಗೇ ಗೊತ್ತಾಯಿತು! ಯಾವ ದಂಡಶಾಸ್ತ್ರದಲ್ಲಿಯಾಗಲೀ ನ್ಯಾಯಶಾಸ್ತ್ರದಲ್ಲಿಯಾಗಲೀ ಇಂತಹ ಚೋದ್ಯವಾದ ಅಪರಾಧದ ಹೆಸರು ಬಂದಿದ್ದೀತೇ? ಇದನ್ನು ವ್ಯವಹರಿಸಲು ತಕ್ಕ ನ್ಯಾಯವಾದಿಗಳಾದರೂ ದೊರೆತಾರೇ? ಅದಕ್ಕೆಂತಲೇ ಮಂಗಲಕರರು ಶೀನುವಿನ ಎಲ್ಲಾ ಕೈಬರೆಹದ ಪ್ರತಿಗಳನ್ನೂ ವಶಮಾಡಿಕೊಂಡರಲ್ಲದೆ, ಅಷ್ಟು ಸಾಧನೆಯಿಂದ ಕೃಷ್ಣನ ಕೈಯಲ್ಲಿದ್ದ "ಕಾರುಣ್ಯ ಮೂರ್ತಿ"ಯ ಮೂಲಪ್ರತಿಯನ್ನೂ ಕಸಿದಿದ್ದರು. ಅವೆಲ್ಲಾ ದೈವಲೀಲೆಯ ಹಾಗೆ ಅವುಗಳ ಸ್ವಾಮಿಯ ಕಡೆಗೇ ತಿರುಗಿ ಹೋದುವಲ್ಲ! ಅಯ್ಯೋ! ಇನ್ನೇನುಪಾಯ? ಏನಾದರೂ ಮಾಡಿ ಲಂಚವನ್ನಾದರೂ ಬೇಕಾದಷ್ಟು ಕೊಟ್ಟು ಪೋಲೀಸರ ಕೈವಶವಾದ ಆ ಎಲ್ಲಾ ಗ್ರಂಥಗಳನ್ನು ನಾಶಪಡಿಸಿಬಿಡಬೇಕು. ಅಂದರೆ ಈವರೆಗಣ ಕೀರ್ತಿಕಾರ್ಯಗಳಾದರೂ ದಕ್ಕಬಹುದು. ಆದರೆ ಹೇಗೆ?—

ಬಾಯಿಯಿಂದ ಹೇಳುವುದು ಹೇಗೆ, ಕೇಳುವುದು ಹೇಗೆ?— ಯೋಚನೆ ಮಾಡಿ ಮಾಡಿ ತಲೆಶೂಲಿ ಅಸಯನೀಯವಾಯಿತು! "ಹಾ! ದೇವ!" ಎಂದು ಅಡಿಗಡಿಗೆ ನರಳಿದರು! ಆಹಾ! ಅವರಿಗೆ ಬುದ್ಧಿ ಕೆಡಬೇಕಿತ್ತು! ಹುಚ್ಚುಹಿಡಿಯಬೇಕಿತ್ತು! ಮೂರ್ಛೆಬರಬೇಕಿತ್ತು! ಅಥವಾ ಪ್ರಗತಿ ಲಕ್ಷಣ ಸೂಚಕವಾದ ಪಶ್ಚಾತ್ತಾಪವಾದರೂ ಆಗಬೇಕಿತ್ತು! ಇಲ್ಲ! ಬಲುಗಟ್ಟಿ ಮಂಡೆಯ ಮಂಗಲಕರರಿಗೆ ಬಿದ್ದ:ಪೆಟ್ಟುಗಳು ಸಾಕಾಗಲಿಲ್ಲ! ಉಪಾಯಾನ್ವೇಷಣದಲ್ಲಿಯೇ ತೊಳಲಾಡುತ್ತಿದ್ದಾರೆ!—ಆಗಲೇ ಹೊತ್ತು ತಿರುಗಿ ಅಪರಾಹ್ನವಾಗಿತ್ತು!

---

## ೩೬. ಮರ್ಮಾಹತ-ಪತನ!

ಆಗ, "ಪಿ. ಎಂ. ಮಂಗಲಕರ್, ಅವರ ಮನೆ ಇದು ತಾನೆ?" ಎಂಬ ಸ್ತ್ರೀಕಂಠದ ಪ್ರಶ್ನೆಯೊಂದು ಮಂಗಲಕರರ ಕಿವಿಗೇ ಬಿತ್ತು ಸಿದ್ದಪ್ಪನು ಆ ಪ್ರಶ್ನೆಗೆ ಉತ್ತರ ಕೊಡುತ್ತಿದ್ದನು:—

"ಹೌದು, ಇದೇರಿ"

ಸ್ತ್ರೀವ್ಯಕ್ತಿ:— ಅವರ ಮಗ ವರದರಾಯರಿದ್ದಾರೊ?

ಸಿದ್ದ:— ಇದ್ದಾರ್ರಿ. ಮಲಗ್ಯಾರ

ಸ್ತ್ರೀವ್ಯಕ್ತಿ:— ಎಲ್ಲಿ?

ಸಿದ್ದ:— ಆ ಕೋಣೇಲಿ ಕರೀಲಾರೀ?

ಸ್ತ್ರೀವ್ಯಕ್ತಿ:— ಬೇಡ ಬೇಡ. ನಾನೇ ಎಬ್ಬಿಸುತ್ತೇನೆ.—

ಈ ಕಡೆಯ ವಿಚಿತ್ರವಾದ ಮಾತನ್ನು ಕೇಳಿ, ಮಂಗಲಕರರು ಹೊರಗೆ ಬಂದರು. ವಿಲಕ್ಷಣ ರೀತಿಯ ನಾಗರಿಕ ಭೂಷಣಗಳಿಂದಲಂ ಕೃತಳೂ, ಸ್ಥೂಲ ವಿಕಟಾಕಾರಿಣಿಯೂ ಕೃಷ್ಣಕರಾಳಿಯೂ ಆದ ಯುವತಿ! ಬೀದಿಯಲ್ಲಿಯೂ ಕಂಪೌಂಡಿನ ಗೋಡೆಯ ಮೇಲೆಯೂ ಗೇಟಿನ ಬದಿಯಲ್ಲಿಯೂ—ಅಲ್ಲದೆ ಅಂಗಳದಲ್ಲಿ ಕೂಡಾ ಹಲವು ಮಂದಿ ಗುಂಪು ಗುಂಪಾಗಿ ಕೂಡುತ್ತ ಆ ವ್ಯಂಗ್ಯ ನಾರೀಮೂರ್ತಿಯನ್ನೆ ನೋಡುತ್ತಿದ್ದಾರೆ! ಅವಳು ವರದನು ಮಲಗಿದ್ದ ಕೋಣೆಗೆ ಹೋಗುವುದರೊಳಗೆ

ಮಂಗಲಕರರು ಹೊರಗೆ ಬಂದು ಅಡ್ಡನಿಂತು,—"ಯಾರು ನೀನು?" ಎಂದು ದರ್ಪದಿಂದ ಕೇಳಿದರು.

ಯುವತಿ ತಟಕ್ಕನೆ ಕೈಯನ್ನು ಮುಗಿದು—ನಮಸ್ತೆ! ತಾವೇ ಮಂಗಲಕರರಾಯರೊ?

ಮಂಗಲ:— ಹೌದು. ಯಾಕೆ?

ಯುವತಿ:— ನನ್ನ ಪರಿಚಯ ನಿಮಗಿಲ್ಲದಿದ್ದರೂ, ನೀವು ಕೇಳಿರ ಬಹುದು. ನಿಜವಾಗಿ ನೋಡಿದರೆ ನಾನು ನಿಮಗೆ ಸಂಬಂಧಿಕಳೇ ಆಗು ವವಳಿದ್ದೇನೆ. ವರದರಾಯರು ನನ್ನ ವಿಷಯವನ್ನು ತಮಗೆ ಹೇಳಿರ ಬಹುದು. ನಾನೇ ನೋಡೀ—ಸುಂದರೀಬಾಯಿಯೆಂದರೆ!

ಮಂಗಲಕರರು ಚಕಿತರಾದರು! ಅವರ ಬೇಯುವ ಹೃದಯದಲ್ಲಿ ಮತ್ತೊಂದು ಉರಿ ಎದ್ದಹಾಗಾಯಿತು.

ಅಷ್ಟರಲ್ಲಿ ಈ ಮಾತುಕತೆಗಳನ್ನು ಕೇಳಿ ವರದನು ಎದ್ದು ಬಂದು, ಭಯಾಶ್ಚರ್ಯಗಳನ್ನು ಅಡಗಿಸಿಕೊಂಡು,—"ಬಾ! ಸುಂದರೀಬಾಯಿ! ಕುಳಿತುಕೊ." ಎಂದು ಕೋಣೆಯೊಳಗಣ ಕುರ್ಚಿಯೊಂದನ್ನು ತೋರಿಸಿ ದನು.

ಮಂಗಲಕರರು ಹುಬ್ಬೇರಿಸಿಕೊಂಡು "ಯಾರಿವಳೆ"ಂಬ ಪ್ರಶ್ನೆ ಯನ್ನು ವ್ಯಕ್ತಪಡಿಸಿದರು.

ವರದನು ಅಪ್ಪನ ಬದಿಗೆ ಸರಿದು ಪಿಸುಸ್ವರದಿಂದ—"ಅಪ್ಪ! ನೀನು ಒಳಗೆ ಹೋಗಿರು. ಇವಳೇ ಆ ಪ್ರಸಿದ್ಧ ನರ್ತಕಿ! ನಾನೊಂದು ಬಿಜಿ ನೆಸ್‌ಗೆ ಇಳಿದಿರುವೆನೆಂದೆನೋ ಇಲ್ಲವೊ?—ಎಲ್ಲಾ ಮತ್ತೆ ಇವಳನ್ನು ಕಳುಹಿಸಿ ಹೇಳ್ತೇನೆ—" ಎಂದು ಹೇಳಿ, ಸಿದ್ದನನ್ನು ಕರೆದು, ಹೋಟೆಲ್ಲಿ ನಿಂದ ಎರಡು ಕಪ್ ಟೀ ತರುವಂತೆ ಆಣತಿ ಕೊಟ್ಟುಬಿಟ್ಟು, ಅಂಗಳದಲ್ಲಿ ಸೇರಿರುವ ಜನಗುಂಪಿಗೆ ಎರಡು ಗದರಿಕೆ ಹಾಕಿ ಚದರಿಸಿ, ಕೋಣೆ ಯಲ್ಲಿ ಕುಳಿತುಕೊಂಡು ಸುಂದರೀಬಾಯಿಯೊಂದಿಗೆ ಮಾತಾಡಲಾರಂಭಿಸಿ ದನು.

"ಏನು?—ಇಲ್ಲಿಗೇ ಬಂದುಬಿಟ್ಟೆಯಲ್ಲ ಸುಂದರೀಬಾಯಿ?"

"ಏನಿಲ್ಲ. ಪರಿಚಯಸ್ಥರಾರೂ ಇಲ್ಲದೆ ಒಬ್ಬಳೇ ಇದ್ದಿದ್ದು ಬೇಜಾರಾಗಿ ಹೋಯಿತು ನೀವು ಆಗಾಗ ಬರುತ್ತೇನೆಂತ ನನ್ನ ಬಿಟ್ಟು ಹೋದವರು ಬರಲೇ ಇಲ್ಲ! ಆದುದರಿಂದಲೇ ಮನೆಹುಡುಕಿಕೊಂಡು ಬಂದೆ. ಬರಬಾರದೆ?"

"ಓ! ಅದಕ್ಕೇನು ಬಿಡು? ನನಗೆ ಸ್ವಲ್ಪ ಅವಸರವಸರವಾದ ಬೇರೆ ಕೆಲಸವಿದ್ದುದರಿಂದ ಬರಲಿಲ್ಲ. ಘೋಂಡೂರಾವ್ ನಿನಗೆ ಎಲ್ಲಾ ಅನುಕೂಲತೆಗಳನ್ನು ಒದಗಿಸಿಕೊಟ್ಟಿದ್ದಾನಷ್ಟೆ?"

"ಓಹೊ! ಅದಕ್ಕೇನೂ ಮೋಸವಿಲ್ಲ. ಅದಿರಲಿ, ಪ್ರಿಯ ವರದನ್! ನೀವು ಆ ವಿಷಯ ನಿಮ್ಮ ತಂದೆಯೊಡನೆ ಪ್ರಸ್ತಾವಿಸಿದ್ದೀರಷ್ಟೆ?"

"ಯಾವ ವಿಷಯ?"

"ಅದೇ—ನನ್ನ ನೀವು ಮದುವೇ—!"

"ಶ್! ಮೆಲ್ಲಗೆ ಮಾತಾಡು! ಅದನ್ನು ಇನ್ನು ಮೇಲೆ ಪ್ರಸ್ತಾವಿಸಬೇಕಷ್ಟೆ."

"ಅದೇನು? ಇದರಲ್ಲಿ ಮುಚ್ಚುಮರೆಯೇನು? ನೀವು ಇಷ್ಟರಲ್ಲಿ ಪ್ರಸ್ತಾವಿಸಿದ್ದೀರಿ-ಎಂತಲೇ ನಾನು ನಂಬಿದ್ದೇನೆ!"

"ದುಡುಕಬಾರದು ಸುಂದರೀಬಾಯಿ! ನಾಡದಿನ ನಾಟ್ಯಪಾರ್ಟಿ ಮುಗಿದು ಹೋಗಲಿ. ಆ ಮೇಲೆ ವಿಚಾರ ಮಾಡುವ."

"ಉಹುಂ! ಅದಾಗದು"

"ಮತ್ತೆ?"

"ನೀವು ನನ್ನನ್ನು ಮದುವೇ ಮಾಡಿಕೊಳ್ಳುವ ವಿಷಯ ಈಗಲೇ ನನಗೆ ಗೊತ್ತಾಗಬೇಕು. ಈಗಲೇ ತಂದೆಯೊಡನೆ ಕೇಳಿ ನಿಮ್ಮ ಖಂಡಿತಾಭಿಪ್ರಾಯವನ್ನು ನನಗೆ ತಿಳಿಸಬೇಕು. ಹಾಗಾದರೇನೇ ನಾನು ನಾಡದು ಪಾರ್ಟಿಯನ್ನು ನೆರವೇರಿಸಿಯೇನು! ಇಲ್ಲದಿದ್ದರೆ ನಾನು ಈಗಲೇ ಮದರಾಸಿಗೆ ಹೊರಟುಬಿಡುತ್ತೇನೆ!"

"ಹೀಗೆಂದರೆ ಹೇಗೆ ಸುಂದರೀಬಾಯಿ? ನಾನು ಇನ್ನೂ ನಿನ್ನ ಕೂಲಂಕಷ ವಿಚಾರ ಮಾಡಿಲ್ಲ. ನೀನು ಯಾರು-ಏನು ಎಂಬುದನ್ನೆಲ್ಲಾ

ನೀನು ಹೇಳಿರುವಿಯಾ? ಅದೆಲ್ಲಾ ನಾನೂ ಕೇಳಿಲ್ಲ, ನೀನೂ ಹೇಳಿಲ್ಲ. ಈಗ ಮದುವೆಯ ವಿಚಾರ ಎಂದ ಮೇಲೆ ಎಲ್ಲಾ ನಿಧಾನವಾಗಿ ಕೇಳಿ,–"

"ಅಷ್ಟೆಲ್ಲ ಉದ್ದುದ್ದ ವಿಚಾರವೇನೂ ಇಲ್ಲ ನನ್ನದು. ಕೇಳಿ, ನಾನು ಈಗಣಷ್ಟು ಪ್ರಸಿದ್ಧಿಗೆ ಬಂದೇನಂತ ನನ್ನ ತಂದೆಗೆ ಗೊತ್ತಿರುತ್ತಿದ್ದರೆ, ನನ್ನನ್ನು ಹೀಗೆ ಬಿಟ್ಟುಹಾಕುತ್ತಿದ್ದಿಲ್ಲ. ಸನನ್ನ ಗಂಡ ನ್ನನ್ನು ಬಿಟ್ಟು ಓಡಿ ಹೋಗುತ್ತಲೂ ಇರಲಿಲ್ಲ!—"

"ಹ! ನಿನ್ನ ಗಂಡ ಒಬ್ಬ ಬೇರೆ ಇದ್ದಾನೆಯೆ?"

"ಇದ್ದಾನೆಯೋ ಇಲ್ಲವೋ ನನಗೇ ಗೊತ್ತಿಲ್ಲ. ಆದರೆ ನನ್ನ ತಂದೆ ಬಹಳ ಉಪಾಯದಿಂದ ನನಗೊಂದು ಮದುವೆ ಮಾಡಿಸಿಬಿಟ್ಟಿದ್ದನು. ಆದರೆ ನನ್ನ ತಂದೆಯ ಮುಖ ಹೇಗುಂಟಂತ ನನಗೆ ಗೊತ್ತಿಲ್ಲ. ನನ್ನ ಗಂಡ ಮದುವೆಯಾದ ಕೂಡಲೇ ನನ್ನನ್ನು ಬಿಟ್ಟು–ಎಲ್ಲವನ್ನೂ ಬಿಟ್ಟು ಸಂನ್ಯಾಸಿಯಾಗಿ ಓಡಿಹೋದ. ನಾನೀಗ ಹೀಗಿದ್ದೇನೆ ನೋಡಿರಿ!"

"ಓಹೊ!"

"ಹೌದು. ಈಗ ನನ್ನನ್ನು ಯಾರೂ ಕೇಳುವವರಿಲ್ಲ. ಯಾಕೆ ವರದನ್? ನನಗೆ ಮೊದಲೊಂದು ಮದುವೆಯಾಯಿತಂತ ಅಸಮಾಧಾನವುಂಟೇನು ನಿಮಗೆ?"

"ಛೆ! ಅದೇನೂ ಇಲ್ಲ!"

"ನೋಡಿ! ನಾನು ನಿಮ್ಮೊಂದಿಗಲ್ಲದೆ ಬೇರೆ ಗಂಡುಸರೊಂದಿಗೆ ಆ್ಯಕ್ಟ್ ಮಾಡಿಯೇ ಇಲ್ಲ! ನಮಗಿಬ್ಬರಿಗೂ ಪರಸ್ಪರ ಇಷ್ಟವೂ ಬಿತ್ತು! ಸುಳ್ಳು–ಮುಚ್ಚು–ಮರೆ ಇವೆಲ್ಲಾ ಮುಂದೆ ಸಂಕಟವುಂಟುಮಾಡುವಂತಾದ್ದೆಂತ ತಿಳಿದುಕೊಂಡು, ನಾನು ಇದ್ದ ಸತ್ಯ ಹೇಳಿಬಿಟ್ಟಿದ್ದೇನೆ! ಇನ್ನು ತೊಂದರೆ ಏನಿದೆ?"

"ಅದೇನಿಲ್ಲ ಸರಿ! ಎಲ್ಲಾ ತಂದೆಯೊಡನೆ ಮೆಲ್ಲನೆ ಪ್ರಸ್ತಾವಿಸಿ–"

"ಈಗಲೇ ಪ್ರಸ್ತಾವಿಸಬಹುದಲ್ಲಾ ವರದನ್? ಅವರು ತಮ್ಮ ಒಪ್ಪಿಗೆಯನ್ನು ಬೇಕಾದರೆ ನಾಳೆಯೇ ತಿಳಿಸಲಿ, ಅಥವಾ ನಾಡದೇ ತಿಳಿಸಲಿ; ಈಗಲೇ ನನ್ನ ಇದಿರೇ ಅವರ ಕಿವಿಯೊಳಗೆ ಹಾಕಬೇಕು ನೀವು!"

"ಇಷ್ಟು ಅವಸರಪಟ್ಟರೆ ಹೇಗೆ ಸುಂದರೀಬಾಯಿ?"

"ಹೀಗೆ ಕುಂಟುನೆವನ ಹೇಳಿದರೆ ಹೇಗೆ ನಂಬಲಿ ವರದನ್?"

"ಹಾಗೇನು ಈಗ ಮುಳುಗಿ ಹೋದದ್ದು ಸುಂದರೀಬಾಯಿ?"

"ನಾನು ಅದೇ ಚಿಂತೆಯಲ್ಲಿ ಮುಳುಗಿ ಹೋಗಿದ್ದೇನೆ ವರದನ್! ಪ್ರಿಯವರದನ್! ಮನಸ್ಸಿಗೆ ಚಿಂತೆಯಿರಲೇಬಾರದು! ನನಗೆ ಯಾವಾಗಲೂ ನಿಮ್ಮದೊಂದೇ ವಿಚಾರವೇ ಹತ್ತಿಹೋಗಿದೆ! ಈ ನನ್ನ ಚಿಂತೆಯನ್ನು ಹೋಗಲಾಡಿಸಿ, ನೀವು ನನ್ನ ಮನಸ್ಸಿಗೆ ನಂಬುಗೆ ಹುಟ್ಟಿಸಿದರೇನೇ ನಾಡದು ನನ್ನಿಂದ ನಾಟ್ಯವಾಡಲು ಆದೀತಷ್ಟೆ! ಇಲ್ಲದಿದ್ದರೆ ಇಲ್ಲ!"

ಸಿದ್ದನು ಎರಡು ಕಪ್ ಟೀ ತಂದು ಅವರಿದಿರಿನಲ್ಲಿಟ್ಟು ಹೋದನು.

ಪಾಪ! ಸುಂದರಿ ಹೇಳಿದುದು ಸುಳ್ಳಲ್ಲ! ಯಾವಾಗ ವರದನು 'ನಿನ್ನನ್ನು ಮದುವೆ ಮಾಡಿಕೊಳ್ಳುತ್ತೇನೆ'ಂದು ಆವಳಿಗೆ ಆಶೆ ಹಚ್ಚಿದನೋ ಆವಾಗಿನಿಂದ ಆ ಆಶೆ ಕ್ಷಣೇಕ್ಷಣೇ ಬಳೆ-ಬಳೆದು ಇಷ್ಟು ಹೊತ್ತಿಗೆ ತಾಳಲಾರದ ಸ್ಥಿತಿಗೆ ಬಂದಿತ್ತು. ಏಕೆಂದರೆ, ಆ ಆಶೆ ಕೆಸರಲ್ಲಿಯ ಕಂಬದಂತೆ ಸಂದೇಹದಿಂದ ಅಲ್ಲಾಡುತಿತ್ತು. 'ಮುಂಗೈ ಗಂಟಿಗೆ ಹಚ್ಚಿದ ಜೇನಿ' ನಂತೆ, ವರದನು ಸುಮ್ಮನೆ ಆಶೆ ಹಚ್ಚಿ, ತನ್ನ ಕೆಲಸವಾದ ಮೇಲೆ ಕಡೆಗೆ ಮೋಸಮಾಡಿಬಿಡುವನೋ ಎಂಬುದೇ ಸಂದೇಹ. ತಾನು ಕುರೂಪಿಣಿ ಎಂಬ ಅರಿವೇ ಆ ಬಗೆಯ ಸಂದೇಹಕ್ಕೆ ಕಾರಣ. ಇಂದು ವರದನನ್ನು ಗಟ್ಟಿಯಾಗಿ ಕೇಳಿ, ಆ ಸಂದೇಹವನ್ನು ನಿವಾರಣೆ ಮಾಡಿಕೊಂಡೇ ನಾಡದಿನ ನಾಟ್ಯ-ಇಲ್ಲವಿದ್ದರೆ ನಾಟ್ಯವಿಲ್ಲ, ಎಂದು ತನ್ನೊಳಗೆ ತೀರ್ಮಾನಿಸಿಕೊಂಡೇ ವರದನಮನೆಯನ್ನು ಹುಡುಕಿಕೊಂಡು ಬಂದಿದ್ದಳು.

ಆವಳು ಹಾಗೆ ಗಟ್ಟಿಯಾಗಿ ಪಟ್ಟುಹಿಡಿದು ಕೇಳುತ್ತಲೇ, ವರದನು ತನ್ನೊಳಗೇ ಕತ್ತರಿಸಿಕೊಂಡನು. ಆವಳನ್ನು ವರಿಸಿಕೊಳ್ಳುವುದಂತೂ ಹಾಗಿರಲಿ, ಆವಳೊಡನೆ ಮಾತಾಡುವುದೇ ಅಸಹ್ಯಕರವೆಂದೂ–ಅವಮಾನಕರವೆಂದೂ ಭಾವಿಸಿಕೊಂಡಿದ್ದನಲ್ಲವೆ? ಆದರೆ ಈಗ ಆ ಬಗೆಯ ಭಾವವನ್ನು ತೋರಗೊಟ್ಟರೆ, ಪರಮ ಲಾಭದಾಯಕವಾದ ಆವಳ ನಾಟ್ಯ ಕಛೇರಿ ನಿಂತುಹೋದೀತೇನೋ ಎಂದು ಮಿಡುಕಿಕೊಂಡು, ಉಪಾಯದಿಂದ ತೂರಿಕೊಳ್ಳಬೇಕೆಂದು ಹೊಂಚುಹಾಕುತ್ತ—"ಸುಂದರೀಬಾಯಿ!

ನೀನನ್ನುವುದು ನಿಜವೇ! ನನಗೂ ಹಾಗೆಯೆ ಬಹಳ ಆತುರವುಂಟು! ಈಗ ನೀನು ಹೋಗು! ನಾನು ಅಪ್ಪನೊಡನೆ ಹೇಳಿ ಈ ದಿನ ಸಾಯಂ ಕಾಲದೊಳಗೆ ನಿನಗೆ ಖಂಡಿತ ತಿಳಿಸುತ್ತೇನೆ. ಟೀ ತೆಗೆದುಕೋ!"

"ಆದಾಗದು! ಈಗಲೇ ನನ್ನ ಇದಿರೇ ನಿಮ್ಮ ತಂದೆಗೆ ತಿಳಿಸ ಬೇಕು."

"ಆಯ್ಯೋ! ಅವರಿಗೆ ಸೌಖ್ಯವಿಲ್ಲ ಸುಂದರೀಬಾಯಿ! ಸಮಯ ನೋಡಿ—"

"ಸುಳ್ಳು ಹೇಳುವಿರಲ್ಲ ವರದನ್? ಅವರೀಗ ನನ್ನೊಡನೆ ಬಹಳ ಚಂದಾಗಿ ಮಾತಾಡಿದರಲ್ಲ?"

"ಮಾತಾಡಿದರೂ ಇದು ನಿಧಾನವಾಗಿ ಕೇಳಬೇಕಾದ ವಿಷಯ ವಲ್ಲವೆ? ಸುಂದರೀಬಾಯಿ, ನನ್ನ ತಂದೆಯ ಒಪ್ಪಿಗೆ ಇದ್ದರೂ ಸರಿ, ಇಲ್ಲದಿದ್ದರೂ ಸರಿ. ನಿನ್ನನ್ನು ನಾನು ಮದುವೆಯಾಗುವುದಂತೂ ಖಂಡಿತ, ಸಂಶಯವಿಲ್ಲ!"

"ಆದಂತೂ ಹೇಗೂ ಉಂಟೇಉಂಟಲ್ಲ? ನಿಮ್ಮ ತಂದೆಯೊಡನೆ ಕೇಳುವ ಶಾಸ್ತ್ರ ಈಗಲೇ ಆಗಿಹೋಗಬೇಕು."

"ನಿನ್ನ ಇದಿರೇ ಕೇಳಿದರೆ ಅವರು ಸರಿಯಾದ ಅಭಿಪ್ರಾಯ ಕೊಟ್ಟಾರೇ ಸುಂದರೀಬಾಯಿ?"

"ಕೊಡದೇನು?"

"ಒಂದು ವೇಳೆ ಇಷ್ಟವಿಲ್ಲದಿದ್ದರೆ ನಿನಗೆ ಕಷ್ಟವಾದೀತೂಂತ—"

"ಅದೇ ಮುಚ್ಚುಮರೆ ಬೇಡೆಂದು ನಾನು ಹೇಳುವುದು. ನನಗೆ ಕಷ್ಟವಾದೀತೂ ಅಂತ ಒಳಗೊಂದು ಹೊರಗೊಂದು ಮಾತಾಡಬೇಡೀ– ಅಂತ ನಾನೇ ಸ್ಪಷ್ಟವಾಗಿ ಹೇಳಿಬಿಡುತ್ತೇನೆ ಅವರಿಗೆ!"

"ಇದೊಂದು ಶನಿಯ ಹಾಗೆ ಅಂಟಿತಲ್ಲ ಪೀಡೆ!" ಎಂದುಕೊಂಡು ವರದನು ಒಂದು ನಿಮಿಷ ಸುಮ್ಮನಿದ್ದನು

ಟೀ ಆರುತ್ತಾ ಇತ್ತು.

ಈ ದುರಂತ ಸಂಭಾಷಣೆಯ ಮುಕ್ಕಾಲೂ ಮೂರುವೀಸ ಶಬ್ದ ಗಳನ್ನು ಕಿವಿಯೊಳಗೆ ತುಂಬಿಸಿಕೊಂಡಿದ್ದ ಮಂಗಲಕರರು, ಇದೊಂದು

ನಾಗರಿಕ ರೀತಿಯ ಮದುವೆಯ ಮಾತುಕತೆ ಎಂದರಿತುಕೊಂಡು, ಕೌತುಕಾಸಹ್ಯಗಳನ್ನು ತಡೆದುಕೊಳ್ಳಲಾರದೆ, ಆ ಕೋಣೆಯ ಬದಿಗೆ ಬಂದು—" ಏನಿದು ವರದ? ಎಂಥಾ ಮಾತಿದು? ಯಾರೋ ಇವಳು? ಆಂ?" ಎಂದು ಗದರಿಸಿದಂತೆ ಕೇಳಿದರು.

" ಏನಿಲ್ಲ! ಅಪ್ಪ! ನಿಧಾನವಾಗಿ ಹೇಳುತ್ತೇನೆ ಅಂದೆನೋ ಇಲ್ಲವೋ? ಸೌಖ್ಯವಿಲ್ಲದ ನೀನು—" ಎಂದು ವರದನು ಹೇಳುತಿರುವಾಗ, ಸುಂದರಿ ನಡುವೇ ಬಾಯಿಹಾಕಿ,—" ಏನಿಲ್ಲವೆಂದರೇನು? ನಿಮ್ಮ ಮಗನು ತುಂಬಾ ದಾಕ್ಷಿಣ್ಯಪಡುವ ಹಾಗೆ ಕಾಣುತ್ತೆ. ಮತ್ತೇನಿಲ್ಲ; ನಾನೇ ಹೇಳುತ್ತೇನೆ ಕೇಳಿ! ನಾನೂ ನಿಮ್ಮ ಮಗ ವರದರಾಯರೂ ಸಿನೆಮಾ ಮಂಡಲಿಯಲ್ಲಿ ಒಟ್ಟಿಗೇ ಆ್ಯಕ್ಟ್ ಮಾಡುತ್ತೇವೆ. ಇವರಿಗೂ ನನಗೂ ಪರಸ್ಪರ ಇಷ್ಟವೂ ಒಪ್ಪಿಗೆಯೂ ಬಿದ್ದುಹೋಗಿದೆ. ಇವರು ನಿಮ್ಮ ಒಪ್ಪಿಗೆಯನ್ನು ಪಡೆದು ನನ್ನನ್ನು ವಿಧಿಪ್ರಕಾರ ಮದುವೆ ಮಾಡಿಕೊಳ್ಳುತ್ತೇನೆಂದು ನನಗೆ ಭರವಸೆ ಕೊಟ್ಟಿದ್ದಾರೆ! ಪಾಪ! ಈಗ ನಿಮ್ಮೊಡನೆ ಹೇಳಲು ತುಂಬಾ ದಾಕ್ಷಿಣ್ಯಪಟ್ಟಿರುತ್ತಾರೆ!—"

ವರದನು ಮೇಜಿಯ ಮೇಲೆ ಮೊಣಕೈಯನ್ನು ಊರಿಕೊಂಡು ತಲೆಯ ಭಾರವನ್ನು ಹಣೆಯ ದ್ವಾರಾ ಅಂಗೈಯ ಮೇಲೆ ಬಿಟ್ಟು, ಕುಳಿತಿದ್ದನು, ಕೆಳಗೆ ನೋಡುತ್ತಾ!

ಮಂಗಲಕರರು ಹುಬ್ಬುಗಂಟಿಕ್ಕಿ ಸುಂದರಿಯನ್ನು ನೋಡುತ್ತ—" ಏನೇನು? ನಿನಗೆ ಯಾರೂ ಕೇಳುವವರಿಲ್ಲವೋ-ಹರಾಮಿ?"

ಸುಂದರಿ:—" ಕೇಳುವವರಿದ್ದರೆ ನಾನೇಕೆ ಹೀಗಾದೇನು? ಇರಲಿಕ್ಕೆ ಇದ್ದಾನೆ ನನಗೊಬ್ಬ ಅಪ್ಪ! ಈಗಲೂ ಇದ್ದಾನೆ ಜೀವದಲ್ಲಿ! ಆವನು ನನ್ನ ಮುಖವನ್ನು ನೋಡಲಿಕ್ಕೇ ಹೆದರಿಕೊಂಡು, ಅನಂತಪುರದಲ್ಲಿ ಎಲ್ಲಿಯೋ ಅಡಗಿಕೊಂಡಿದ್ದಾನೆ!-ಯಾರು ಯಾರಿಂದಲೋ-ನನ್ನ-"

ಮಂಗಲಕರರು ಬಿಕ್ಕಿಬಿಕ್ಕಿ—" ಯಾ-ರು? ಯಾ-ರು?—"

ಸುಂದರಿ:—ಗೊತ್ತಿದೆಯೋ ನಿಮಗೆ, ಅನಂತಪುರದಲ್ಲಿ ಮುಕುಂದರಾಯರೂಂತ?—ಅವನೇ—ನನ್ನ ತಂದೆ!—

"ಯಾರು? ಯಾ–ಯಾ–ರು? ಮುಮ್ಮುಕುಂದರಾಯರ ಮ–ಮ್ಮ ಗಳು?—" ಮಂಗಲಕರರ ಕಂಠದಿಂದ ತಡವರಿಸಿಕೊಂಡು ಹೊರಟ ಶಬ್ದವಿದು!

ಸುಂದರಿ:—"ಹೌದು! ಹೌದು!—"

ಮಂಗಲಕರರು ನಡುಗುತ್ತ—"ಹಾ! ನಿನಗೂ–ವರದನಿಗೂ–ಇಷ್ಟ ಬಿ-ತ್ತು! ಅ-ಯ್ಯೋ! ಹಾ!—

"ಅಪ್ಪ--ಅಪ್ಪ!—" ವರದನು ಕೂಗಿದನು.

"ಅಯ್ಯೊ! ನಿಮಗೇನಾಯಿತು?" ಸುಂದರಿ ಚೀರಿದಳು.

"ಹಾ!–ಪಾಪೀ!–ಮುಕುಂದ–ರಾ–ಯಾ–ಹ! ಹ! ಹ!—" ಎಂದು ಕೂಗುತ್ತ, ಬಿರುಗಾಳಿಗೆ ಅಲುಗಾಡುವ ಅರಳಿ ಎಲೆಯಂತೆ ನಡುಗುತ್ತ ಮಂಗಲಕರರು ಹಿಂದೆ ಮುಂದೆ ಮಾಲಿಕೊಂಡು, ಜೋಲಿಕೊಂಡು ನೆಲಕ್ಕೆ ಬಿದ್ದರು! ಪಾಪ! ಎರಡು ಕಪ್ ಟೀಗಳು ಕುಡಿವವರಿಲ್ಲದೆ ತಬ್ಬಲಿಯಾದುವು!

---

## ೩೭. ಸತ್ಯವು ಜಾರಿಕೊಂಡಿತು!

ಬಹಳ ಗದ್ದಲವಾಯಿತು. ಬೀದಿಯಲ್ಲಿ ನೋಡುತಿದ್ದ ಜನರ ಗುಂಪು, ಆ ವಿಚಿತ್ರ ಪ್ರಕಾರವನ್ನು ನೋಡಿ ಅಂಗಳದಲ್ಲಿ ಬಂದು ನೆರೆಯಿತು. ವರದನು ತಂದೆಯ ಮೂರ್ಛಿತ ಕಾಯವನ್ನೆತ್ತಿಕೊಂಡು ಕೋಣೆಯಲ್ಲಿ ಮಂಚದ ಮೇಲೆ ಹಾಸಿಗೆಯಲ್ಲಿ ಮಲಗಿಸಿದನು. ಮಂಗಳಕರರು ಆಗಾಗ ಮುಖವನ್ನು ವಿಕೃತಪಡಿಸಿಕೊಳ್ಳುತ್ತ, ಭಯಾರ್ತಕಂಠದಿಂದ—"ಹಾ! ಅಯ್ಯೊ! ಮಹಾಪಾಪ! ಕೆಟ್ಟೆ! ಹಾ! ಹಾ-ಯ್!—" ಎಂದು ಕೂಗಿಕೊಳ್ಳುತ್ತ ಮತ್ತೆ ಕಣ್ಣು ಮುಚ್ಚುತ್ತಿದ್ದರು.

ಅವರ ಮಿದುಳಿನ ಆಲೋಚನೆಗಳೆಲ್ಲಾ ಏಕತ್ರಿತವಾಗಿ ಸೇರಿ, ಅತಿ ಭಯಂಕರವಾದೊಂದು ಚಿತ್ರವು ಅವರ ಒಳಗಣ್ಣಿನೊಳಗೆ ಕಾಣಲಾರಂಭವಾಗುತಿತ್ತು. "ಕಾರುಣ್ಯ ಮೂರ್ತಿ" "ವಿಧಿಯ ಬಲೆ" "ತ್ಯಾಗಿ" "ಅಮೃತ ಭೋಜ" ಮೊದಲಾದ ಗ್ರಂಥಗಳ ನಾಮಾಕ್ಷರಗಳು ಹಗ್ಗದ

ಹಾಗಾಗಿ ಅವರ ಕೈಗಳನ್ನು ಜೋಡಿಸಿ ಬಿಗಿದು, ಎಳೆದೆಳೆದು ತಂದು ವಿಶಾಲವಾದೊಂದು ನಡು ಬಯಲಿನಲ್ಲಿ ನಿಲ್ಲಿಸಿವೆ. "ಪವಿತ್ರವಾದ ಸತ್ಯಸ್ವರೂಪವಾದ ಕನ್ನಡ ನ್ಯಾಯಾಸ್ಥಾನವಿದು!!" ಎಂದು ನಾಲ್ಕು ಸುತ್ತಿನಿಂದಲೂ ಸುಳಿದುಕೊಂಡೆದ್ದ ಗಂಭೀರವಾದ ಏಕಶಬ್ದವು ಅವರ ಕಿವಿಗೆ ಬಿತ್ತು! ಕಣ್ಣು ಬಿಟ್ಟು ಸುತ್ತಲೂ ನೋಡುತಿದ್ದಾರೆ; ನಟ್ಟಿದಿರೇ ಧರ್ಮಾಸನದ ಮೇಲೆ ಕನ್ನಡ ದೇವಿ ಗಂಭೀರ ಭಾವದಿಂದ ವಿರಾಜಿಸಿದ್ದಾಳೆ! ಇದ್ದಕ್ಕಿದ್ದಂತೆ ಆ ಪುಸ್ತಕದ ಹಾಳೆಗಳು ಭರಭರನೆ ಹಾರಾಡಲಾರಂಭಿಸಿದುವು. ಅಕ್ಷರಗಳೆಲ್ಲಾ ಗಾಳಿಯೊಂದಿಗೆ ಸೇರಿ, "ಕನ್ನಡ ಗೆಳೆಯ ಶೀನು! ಕನ್ನಡ ಗೆಳೆಯ ಶೀನು!" ಎಂದು ಮೊರೆಯಲಾರಂಭಿಸಿದುವು. ಅವರ ಕಿವಿ ಗಡಚಿಕ್ಕಿಹೋಗಿದೆ. ಅವರು ಹುಳದ ಹಾಗೆ ಕೈಕಾಲುಗಳನ್ನು ಚಡಪಡಿಸಿಕೊಳ್ಳುತ್ತ, ಆ ಪುಸ್ತಕಗಳ ಕಾಟವನ್ನು ನಿವಾರಣೆ ಮಾಡಿಕೊಳ್ಳುತ್ತಿದ್ದಾರೆ. ಕೋಪಕಷಾಯಿತ ನೇತ್ರರಾಗಿ ನಾಲ್ಕುಸುತ್ತಲೂ ನೋಡುತಿದ್ದಾರೆ. ನಿಬಿಡಾಕ್ಷರಮಯಗಳಾದ ಆ ಪತ್ರ ಸಮೂಹಗಳು, ಅವರನ್ನು ಮುತ್ತಿಗೆ ಹಾಕಿ ಮುಚ್ಚಿ ಉಸಿರಾಡಿಸಲೂಬಾರದಂತೆ ಮಾಡಿ ಅವರನ್ನು ಸಂಹರಿಸಲೆಳಸಿದಂತಹ ಆ ಪತ್ರಸಮೂಹಗಳು, ಕನ್ನಡ ದೇವಿಯ ಕೈಸಂಜ್ಞೆಯಿಂದ ದೂರದೂರ ಸರಿದು ನಾಲ್ಕುಸುತ್ತಲೂ ರಾಶಿರಾಶಿಯಾಗಿ ನಿಂತುವು. ಕೆಲವು ಪತ್ರಸಮೂಹಗಳು ಮಂಗಲಕರರನ್ನು ನೋಡಿ ನಗುವಂತೆ ತೋರಿದುವು ಇದರಿಂದ ಮಂಗಲಕರರ ಕೋಪವು ದ್ವಿಗುಣಿತವಾಗಿ—"ಏನಿದು ಇಂದ್ರಜಾಲ? ನನ್ನನ್ನು ಯಾಕೆ ಇಲ್ಲಿಗೆ ತಂದಿರುವಿರಿ? ಯಾರು ತಂದವರು? ನಾನು ಯಾರು ಗೊತ್ತೊ?" ಎಂದು ಕೂಗಿದರು.

"ಗೊತ್ತಿದೆ" "ಗೊತ್ತಿದೆ" "ಗೊತ್ತಿದೆ" ಎಂದು ಅಬ್ಬರದಿಂದ ಉಬ್ಬರಿಸಿಕೊಂಡು ಅಕ್ಷರಗಳೆಲ್ಲಾ ಅಟ್ಟಹಾಸ ಮಾಡಿದುವು! ಬಳಿಕ ಗಲಗಲನೆ ನಕ್ಕುವು. ಆ ನಗುವಿನ ಧ್ವನಿ ಶಾಂತವಾದ ಮೇಲೆ ಆ ಅಕ್ಷರ ಪತ್ರಗಳ ಎಡೆಯಿಂದ ಕನ್ನಡ ದೇವಿಯ ಸುಂದರ-ಗಂಭೀರ ಮುಖಕಮಲವು ಗೋಚರವಾಗಿ, ತೀಕ್ಷ್ಣವಾದ-ತಂಬೂರಿಯ ತಂತಿಗೆ ಸ್ಪಂದನವಾದಂತಹ ಸ್ವರದಿಂದ—"ಎಲೆ ಪಾಪಿ! ಮುಕುಂದರಾಯ! ಇದು ನಿನ್ನದೇ ಇಂದ್ರಜಾಲ! ನಿನ್ನ ಇಂದ್ರಜಾಲವೇ ನಿನ್ನನ್ನು ಈ ನ್ಯಾಯಾ

ಸ್ಥಾನದಲ್ಲಿ ತಂದು ನಿಲ್ಲಿಸಿತು! ನೀನು ದ್ರೋಹಿ! ಕನ್ನಡದ್ರೋಹಿ! ಆತ್ಮ ದ್ರೋಹಿ!" ಎಂಬ ನಿಂದಾ ವಾಕ್ಯಗಳು ಕೇಳಿಸಿದುವು.

"ಅಲ್ಲಲ್ಲ! ಶೀನು ಅಕ್ಷರದ್ರೋಹಿ! ನಾನು—ಅಲ್ಲ! ನನ್ನ ಲೇಖಕ-ಶೀನು! ನಾನು ಹೇಳಿ ಹೇಳಿ ಅವನ ಕೈಯಲ್ಲಿ ಬರೆಯಿಸಿದ ಗ್ರಂಥಗಳಿವು! ನನ್ನ 'ವಿಧಿಯ ಬಲೆ' ಯನ್ನು ಅವನೇ ಕದ್ದು ಸಿನಿಮಾ ಕಂಪೆನಿಗೆ ಕಳಿಸಿದ್ದಾನೆ! ನನ್ನ ಹೆಂಡತಿಯನ್ನು—ಆ ನೀಚ—ಕೃತಘ್ನನು—"

"ಛೇ! ಕಪಟಿ! ಮುಚ್ಚು ನಿನ್ನ ಹೊಲಸು ಬಾಯಿಯನ್ನು! ಸುಳ್ಳು ಬಾಯಿಯನ್ನು! ಸರಿಯಾದ ಸತ್ಯವನ್ನೆ ನುಡಿಯಲಿ ನಿನ್ನ ನಾಲಿಗೆ! ಹೇಳು, ಶೀನುವಿಗೂ ನಿನಗೂ ಪರಿಚಯವಾಗಿ ಎಷ್ಟು ಕಾಲವಾಯಿತು?" ಕನ್ನಡ ದೇವಿಯು ದನಿಯಿದು.

ಪತ್ರಾಕ್ಷರಗಳು ಅಲುಗಾಡಿದುವು. ಶೀನುವೂ ವಕೀಲವೆಂಕೋಬರಾಯರೂ ಅವುಗಳ ಗುಂಪಿನಲ್ಲಿ ದೃಷ್ಟಿಗೋಚರರಾದರು. "ಮಂಗಲಕರರಿಗೆ ಶೀನುವಿನ ಪ್ರಥಮ ಪರಿಚಯ ಮಾಡಿಸಿದವನು ನಾನೇ" ಎಂದರು ವಕೀಲ ವೆಂಕೋಬರಾಯರು.

"ಹೌದು. ಒಂದು ವರ್ಷದಿಂದ ಶೀನೂ ನನಗೆ ಪರಿಚಿತನು" ಎಂದರು ಮಂಗಲಕರರು.

ಅಷ್ಟರಲ್ಲಿ 'ಕಾರುಣ್ಯ ಮೂರ್ತಿ' ಮೂಲ ಪುಸ್ತಕವನ್ನು ಕೈಯಲ್ಲಿ ಹಿಡಿದುಕೊಂಡಿದ್ದ ಕೃಷ್ಣನೂ, 'ಕನ್ನಡ ಚಿತ್ರಮಾಲೆಯ' ರಾಘವರಾಯರೂ ಕಾಣಿಸಿಕೊಂಡರು. ಕೃಷ್ಣನು ಖಣಖಣನೆ ಹೇಳಿದನು:—

"ನಿಜ. 'ಕಾರುಣ್ಯ ಮೂರ್ತಿ' ಶೀನಣ್ಣನಿಂದ ಮಂಗಲಕರರ ಪರಿಚಯವಾಗುವುದಕ್ಕಿಂತ ಮೊದಲೇ ಬರೆಯಲ್ಪಟ್ಟಿದೆ. ಆಗ ಮಂಗಲಕರರು ಬೆಂಗಳೂರಿನ ಈ ರಾಘವರಾಯರ ಇದಿರಿನಲ್ಲಿ, ಈ ಮೂಲಪ್ರತಿಯನ್ನು ಸಾಧಿಸಿಕೊಳ್ಳಲಿಕ್ಕಾಗಿ, ಒಂದು ವರ್ಷದ ಮೊದಲು ಶೀನಣ್ಣ ಬಳ್ಳಾರಿಯಲ್ಲಿದ್ದು ಅವನಿಂದ ಬರೆಯಿಸಿರುವೆನೆಂದು ಸುಳ್ಳೇ ಹೇಳಿರುತ್ತಾರೆ. ಅಲ್ಲವೇ ರಾಘವರಾಯರೇ?"

"ಹೌದು! ಹೌದು!" ಎಂದು ರಾಘವರಾಯರಂದರು.

"ಹಾಗಲ್ಲವದು! ನಾನು ಸುಳ್ಳು ಹೇಳಿಲ್ಲ. ಶೀನು ಬಳ್ಳಾರಿಗೆ ಬಂದು

ಒಂದು ವರ್ಷವಾದರೇನಾಯಿತು? ಅದಕ್ಕಿಂತ ಮೊದಲು ಅವನು ಹೊಸ ಪೇಟೆಯಲ್ಲಿದ್ದಾಗ, ಆಗಾಗ ಬಳ್ಳಾರಿಯಲ್ಲಿರುವ ನನ್ನ ಬಳಿಗೆ ಬಂದು ಹೋಗುತ್ತಾ ಇದ್ದ. ಆಗ ನಾನು ಬರೆದಿಟ್ಟಿದ್ದ 'ಕಾರುಣ್ಯ ಮೂರ್ತಿ' ಮೊದಲಾದ ಕೆಲವು ಗ್ರಂಥಗಳನ್ನು ಇವನು ಅಪಹರಿಸಿಕೊಂಡು ಹೋಗಿ ರುತ್ತಾನೆ!'' ಎಂದು ಮಂಗಲಕರರು ಸಾಧಿಸಲಾರಂಭಿಸಿದ್ದಾರೆ.

"ಹೇಳುತ್ತಾ ಬರೆಸಿದೆನೆಂದು ಆಗೊಂದು ರೀತಿ! ತಾನು ಬರೆದು ದನ್ನು ಅಪಹರಿಸಿದನೆಂದು ಈಗೊಂದು ರೀತಿ! ಇದೇನು ಮಾತು ಮಂಗಲ ಕರರೆ! ಯದ್ವಾತದ್ವಾ! ಬುದ್ಧಿ ಭ್ರಂಶವಾಯಿತೇನೊ!" ಎಂಬ ಶಬ್ದಗಳು ಅವರ ಕಿವಿಗಳನ್ನು ವೇಧಿಸಿದುವು!

ಕನ್ನಡದೇವಿ:— ಆಗಲಾಗಲಿ! ಎಲ್ಲಾ ಗ್ರಂಥಗಳನ್ನು ಮಂಗಲ ಕರರೇ ಬರೆಸಿರುವರೆಂದೇ ಆಗಲಿ! ಅವರ ಗ್ರಂಥಗಳನ್ನು ಶೀನು ಅಪಹರಿ ಸಿದನೆಂದೇ ಆಗಲಿ! ಒಳ್ಳೇದು, ಮುಕುಂದರಾಯ! 'ಕಾರುಣ್ಯ ಮೂರ್ತಿ'ಯ ಮೂಲಪ್ರತಿಯಲ್ಲಿ ಪ್ರಥಮ ಪ್ರಕರಣದ ಭಾಗದಲ್ಲಿ ಸೇರಿಕೊಂಡು ಕೆಲವು ಪದ್ಯಗಳಿವೆಯಲ್ಲಾ? ಅವುಗಳನ್ನೂ ನೀನೇ ಬರೆದಿರುವಿಯೊ?"

ಮಂಗಲ:— ಹೌದು, ಹೌದು!

ಕನ್ನಡ:— ಎಲ್ಲಿ? ಅಂತಹ ಒಂದು ಪದ್ಯವನ್ನು ಕಟ್ಟು ನೋಡೋಣ ಈಗ? ಅದರ ಹೋಲಿಕೆ ಈ ಪದ್ಯಗಳಿವೆಯೋ ನೋಡೋಣ. ಹಾಗೆಯೇ ನೀನು ಗ್ರಂಥಗಳನ್ನು ಹೇಗೆ ಬರೆಯಿಸಿದೆನೆನ್ನುವಿಯೋ ಹಾಗೆಯೇ ಹೇಳಿ ಯಾವುದಾದರೊಂದು ಅಂಶವನ್ನು ಬರೆಯಿಸು ನೋಡೋಣ.''

ಮಂಗಲ:— ಈಗಲೇ ಬರೆಯಿಸಲು ನನ್ನ ಮನಸ್ಸು ಸ್ವಸ್ಥವಾಗಿಲ್ಲ.

ಕನ್ನಡದೇವಿ:— ಶೀನು! ನೀನು ಬರೆಯುವಿಯಾ?

ಶೀನು:— "ಶಿರಸಾಜ್ಞೆ ಜನನಿ!" ಎಂದು ಒಂದು ನಿಮಿಷ ಕಣ್ಣು ಮುಚ್ಚಿ ಬರೆಯಿಸಿಲಾರಂಭಿಸಿದಾಗ, ಸುತ್ತುಮುತ್ತೂ ನಕ್ಷತ್ರಗಳ ರಾಶಿ ಯಂತೆ ಮಿನುಗುತಿದ್ದ ಪ್ರತ್ಯಕ್ಷರಗಳೂ—"ಹೀಗೆಯೇ ಶೀನು ನಮ್ಮನ್ನು ರಚಿಸಿದನು! ಬರೆದನು! ಶೀನುವೇ ಕನ್ನಡ ಗೆಳೆಯ" ಎಂದು ಮೊರೆ ದುವು. ಶೀನು ತಾನು ಬರೆದ ಕಾಗದವನ್ನು ಕನ್ನಡ ದೇವಿಯ ಅಡಿಯ ಲ್ಲಿಟ್ಟು "ತಾಯಿ! ಇದೊ! ಒಂದು ಪುಟ್ಟ ಪದ್ಯವನ್ನೂ-ಒಂದು ಸಣ್ಣ ಗದ್ಯವನ್ನೂ ರಚಿಸಿ ಬರೆದಿದ್ದೇನೆ! ಸ್ವೀಕರಿಸು!'' ಎಂದನು.

ಕನ್ನಡದೇವಿ ಅದನ್ನೆತ್ತಿಕೊಂಡು ಓದಿನೋಡಿ—"ಹೌದು. ಈ ಕಾಗದದಲ್ಲಿ ಬರೆದಿರುವ ರಸ-ಭಾವ-ಶೈಲಿಗೂ ಕಾರುಣ್ಯ ಮೂರ್ತಿ—ಅಮೃತ ಭೂಜ-ಮೊದಲಾದ ಗ್ರಂಥಗಳಲ್ಲಿರುವ ರಸಭಾವಶೈಲಿಗೂ ಸರಿಯಾದ ಹೋಲಿಕೆ ಭಾಸವಾಗುತ್ತದೆ. ವಾಗ್ವೋಘಸೆಯಂತೂ ನಿಃಸಂದೇಹವಾದ ಹೋಲಿಕೆಯನ್ನು ತೋರುತ್ತಿದೆ. ಆದುದರಿಂದ ಈ ಎಲ್ಲಾ ಗ್ರಂಥಗಳ ನಿಜವಾದ ಲೇಖಕನು ಶೀನುವೇ ಸರಿ. 'ಕನ್ನಡ ಗೆಳೆಯು' ಇದು ಶೀನುವಿನ ಗುರುತು ಅಯ್ಯಾ—ನನ್ನ ಭಕ್ತಪ್ರವರರಾದ ರಾಘವರಾಯರೆ! ಈ ಮಂಗಲಕರನೆಂಬ ಕಳ್ಳ ಹೆಸರಿನವನು ನಿಮ್ಮನ್ನೂ ನನ್ನನ್ನೂ ಮೋಸಪಡಿಸಿದನು ನೋಡಿದಿರಾ! ನೀವಿನ್ನು 'ಅಮೃತಭೂಜ' ದಲ್ಲಿ ಗ್ರಂಥಕರ್ತನ ಹೆಸರಿನಲ್ಲಾದ ತಪ್ಪನ್ನು ತಿದ್ದಿ ಸರಿಪಡಿಸಬೇಕಾಗಿದೆ!''

ರಾಘವ:— ಚಿತ್ತ ದೇವಿ!

"ಅಲ್ಲ! ಎಂದಿಗೂ ನಾನೊಪ್ಪಲಾರೆ! 'ಕನ್ನಡ ಗೆಳೆಯು' ಇದು ನನ್ನ ಗುರುತು! ನಾನು ಒಂದು ವರುಷಕ್ಕಿಂತಲೂ ಮೊದಲೇ 'ಕನ್ನಡಗೆಳೆಯು' ಎಂಬ ಸಂಕೇತದಿಂದ ಲೇಖನಗಳನ್ನು ಬರೆದಿರುತ್ತೇನೆ.'' ಎಂದು ಕೂಗಿದರು ಮತ್ತೂ ಮಂಗಲಕರರು.

"ಇದ್ದೀತಿದ್ದೀತು! ಅವೆಲ್ಲಾ ನೀರಸವಾದ ಲೇಖನಗಳು! ಕೆಲವು ರಸಾತ್ಮಕವಿದ್ದರೂ ಅವು ನಿನ್ನ ದಾಕ್ಷಿಣ್ಯಕ್ಕೊಳಗಾದ ಬೇರೆಯವರು ನಿನಗೆ ಬರೆದುಕೊಟ್ಟ ಲೇಖನಗಳೇ ಹೊರತು ನಿನ್ನ ಸ್ವಂತದ್ದಲ್ಲ! ಅದೇ ಸಂಕೇತ ನಾಮವನ್ನಿಟ್ಟುಕೊಂಡು ನೀನು ಶೀನುವನ್ನು ಮೋಸಪಡಿಸಿರುತ್ತೀ. ಇನ್ನು ನಿನ್ನ ಮೋಸದ ಕೊಡವು ತುಂಬಿತು! ಮುಳುಗಿನ್ನು ಅವಮಾನದ ಭಯಂಕರ ಮಡುವಿನಲ್ಲಿ!'' ಕನ್ನಡ ದೇವಿಯ ಕಠೋರ ವಾಣಿಯಿದು.

ಮಂಗಲಕರರು ತತ್ತರಿಸುತಿರುವಾಗ—"ದ್ರೋಹಿ!'' "ಕನ್ನಡ ದ್ರೋಹಿ!" "ಅಕ್ಷರದ್ರೋಹಿ!'' ಎಂದು ನಾಲ್ಕು ದಿಕ್ಕುಗಳಿಂದಲೂ ಭಯಂಕರ ನಿನಾದವೆದ್ದಿತು.

ಮಂಗಲಕರರು ತಲೆಯನ್ನು ಚಚ್ಚಿಕೊಂಡು-ಕಣ್ಣುಗಳನ್ನು ಬಿಗಿದು,-"ಅಯ್ಯೋ! ಅಯ್ಯೋ!" ಎಂದು ಚೀರಿದರು.

ಮತ್ತೆ ಕಣ್ಣು ಬಿಡಿಸಿ ನೋಡಿದಾಗ ಕಮಲೆಯೂ ಶೀನುವೂ ಕೈಕೈ ಹಿಡಿದುಕೊಂಡು, ಅವರನ್ನು ನೋಡಿ ಗಹಗಹಿಸಿ ನಗುತ್ತಿದ್ದರು.

ಮತ್ತೊಂದು ಕಡೆ ನೋಡಿದಾಗ ಕೃಷ್ಣನು ಅವರ ಕಡೆಗೆ ಬೆರಳನ್ನು ತೋರಿಸಿ—"ಮೋಸಗಾರ! ಪಂಚಕ ಶಿರೋಮಣಿ! ನನಗೆ ಬಹಳ ಬಹಳ ಸುಳ್ಳಿನ ಬಲೆಯನ್ನು ಹೆಣೆದ ಜಾಣ ಜೇಡ!'' ಎಂದು ಅಣಕಿಸುತ್ತಿದ್ದನು.

ಇನ್ನೊಂದೆಡೆ ರಾಘವರಾಯರು ಅವರನ್ನು ತಿರಸ್ಕಾರದ ದೃಷ್ಟಿಯಿಂದ ನೋಡಿ ಛೀಕಾರವನ್ನು ಮಾಡಿದರು.

ಮಗದೊಂದು ಕಡೆ ವೆಂಕೋಬರಾಯರು ರಾಮಚಂದ್ರರಾಯರು ಪ್ರಸಾದರಾಯರು ಮೊದಲಾದ ಇಷ್ಟಮಿತ್ರರು ಗುಂಪುಗೂಡಿ ಅವರನ್ನು ನೋಡುತ್ತ ಧಿಕ್ಕಾರವನ್ನು ಪ್ರದರ್ಶನ ಮಾಡಿದರು.

ಬೇರೊಂದು ಕಡೆ ಕನ್ನಡಿಗರೆಲ್ಲಾ ಸೇರಿ "ದ್ರೋಹಿ! ದ್ರೋಹಿ!'' ಎಂದು ಕೂಗಿದರು.

ಮಂಗಲಕರರು ದಿಕ್ಕುಗಾಣದೆ ನೆಲದಲ್ಲಿ ಬಿದ್ದು ಒದ್ದಾಡುತ್ತಿದ್ದಾರೆ. ಅವರ ಆ ದ್ರೋಹವು ಸರಕಾರಕ್ಕೂ ತಿಳಿದು, ಅವರ ವಿದ್ಯಾಧಿಕಾರೀ ಉದ್ಯೋಗವು ಅವರನ್ನು ತೊಲಗಿ ಹೋಯಿತು. ಅವರನ್ನು ಕೇಳುವವರು ಇನ್ನಿಲ್ಲ! ಕನ್ನಡ ನಾಡಿಗರೆಲ್ಲಾ ''ಪಿ. ಮುಕುಂದರಾವ್–ಮಂಗಲ್ಕರ್–ಕನ್ನಡ ದ್ರೋಹಿ'' ಎಂಬ ತಲೆಬರಹದಿಂದ ಪ್ರಕಟವಾದ ಅವರ ದುಷ್ಟ ಚರಿತ್ರೆಯನ್ನು ಓದುತ್ತಾ ತಿರಸ್ಕರಿಸುತ್ತಿದ್ದಾರೆ! ಎಲ್ಲಿ ನೋಡಿದರೂ ಘೋರಾವಮಾನ! ಸಾಲದುದಕ್ಕೆ ಅವರ ಮಗಳನ್ನು ಅವರ ಮಗನು ಮದುವೇ ಮಾಡಿಕೊಳ್ಳುವುದಕ್ಕೆ ಸಿದ್ಧನಾಗಿ ನಿಂತಿರುವ ಬೀಭತ್ಸದೃಶ್ಯ! ಆಕಡೆ ಕಮಲೆಯೂ ಶೀನೂ ಅನ್ಯೋನ್ಯರಾಗಿ ನಿಂತಿರುವ ಅಸಹನೀಯ ದೃಶ್ಯ! ದಶದಿಶೆಗಳಿಂದಲೂ ''ದ್ರೋಹಿ! ಪಾಪಿ!—'' ಎಂಬ ಕೂಗು!

ಈ ಮರ್ಮವೇದನಾ ಸ್ಮರಣೆಗಳಿಂದ ಕಂಗೆಟ್ಟು "ಹೋ!" ಎಂದು ನಿಜವಾಗಿಯೂ ಬಾಯಿಬಿಟ್ಟು ಕೂಗುತ್ತ, ಅವರು ಮಂಚದಿಂದ ಕೆಳಗುರುಳಿ ಬೀಳಹೋಗುವಾಗ, ಎಲ್ಲರೂ ಸೇರಿ ಅವರನ್ನು ಆದರಿಸಿದರು. ಮೇಲೆ ವಿವರಿಸಿದ ಆ ಸ್ವಪ್ನಾವಸ್ಥೆಯಲ್ಲಿ ಅವರ ಬಾಯಿಯಿಂದಲೂ

ತುಂಡು ತುಂಡು ಉಚ್ಚಾರಗಳು ಹೊರಟಿದ್ದುವು. ಅವುಗಳನ್ನು ಕೇಳುತ್ತ ಕೌತುಕಾಶ್ಚರ್ಯಪಡುತ್ತ ಇನ್ಸ್‌ಪೆಕ್ಟರ್ ಪ್ರಸಾದರಾಯರು, ವಕೀಲ ವೆಂಕೋಬರಾಯರು-ರಾಮಚಂದ್ರರಾಯರು, ಶೀನು-ಕೃಷ್ಣ ಮೊದಲಾದೆಲ್ಲರೂ ಬಂದು ನಿಂತು ನೋಡುತಿದ್ದರು. ಪ್ರಸಿದ್ಧಳಾದ ಸಿನಿಮಾ ನಟಿ ಸುಂದರೀಬಾಯಿ, ವಿದ್ವಾನ್ ಮಂಗಲಕರರ ಮನೆಯಲ್ಲಿರುವಳೆಂದೂ, ಅವಳನ್ನು ನೋಡಿ, ಮಂಗಲಕರರು ದೆವ್ವ ಬಡಿದವರ ಹಾಗೆ ಬಿದ್ದರೆಂದೂ ಬಿಸಿಬಿಸೀ ವಾರ್ತೆ ಗಾಳಿಯ ವೇಗದಿಂದ ಊರೆಲ್ಲ ಹಬ್ಬುತ್ತ, ಜನರನ್ನು ಅಲ್ಲಿಗೆ ಕರೆತರುತಿದ್ದಿತು.

ಹಿಂದಿನ ರಾತ್ರಿಯಲ್ಲಿ ಪೋಲೀಸರು ಶೀನುವನ್ನು ಕೈದು ಮಾಡಿಕೊಂಡು ಹೋದ ವೃತ್ತಾಂತಗಳನ್ನು, ಕೃಷ್ಣನು ಬಂದು ವಕೀಲ ವೆಂಕೋಬರಾಯರೊಡನೆ ಪಸಂತಿಪಡಿಸಿಕೊಂಡನು. ಶೀನುವಿನ ಸಾಧು ಸ್ವಭಾವವನ್ನು ಚೆನ್ನಾಗಿ ಮನವರಿಕೆ ಮಾಡಿಕೊಂಡಿರುವ ವಕೀಲ ವೆಂಕೋಬರಾಯರು, ಕೃಷ್ಣನ ಪ್ರಾರ್ಥನೆಯ ಮೇರೆಗೆ ಮನಃಪೂರ್ವಕವಾಗಿ ತಮ್ಮ ಸೇವಕನಾದ ಶೀನುವಿಗೆ ಒತ್ತಾಸೆ ಮಾಡಲುದ್ಯೋಗಿಸಿ, ತಾವೇ ಜಾಮೀನಾಗಿ ನಿಂತು, ಶೀನುವನ್ನು ಬಿಡಿಸಿಕೊಂಡು ಬಂದರು ಆ ಸಂದರ್ಭದಲ್ಲಿ ವಕೀಲ ವೆಂಕೋಬರಾಯರಿಗೂ-ಇನ್ಸ್‌ಪೆಕ್ಟರ್ ಪ್ರಸಾದರಾಯರಿಗೂ ಶೀನು-ಮಂಗಲಕರರ ಸಂಬಂಧದ ವಿಷಯದಲ್ಲಿ ಬಹಳ ಚರ್ಚೆ ನಡೆಯಿತು. ಈ ಚರ್ಚೆಗೆ ಪ್ರಸಾದರಾಯರೂ, ವೆಂಕೋಬರಾಯರೂ ಮಂಗಲಕರರ ಸ್ನೇಹಿತರಾಗಿದ್ದುದೇ ಮುಖ್ಯವಾದ ಪ್ರೋತ್ಸಾಹ ಕಾರಣವಾಗಿತ್ತು. ಆ ಪುಸ್ತಕಗಳೂ ಪತ್ರಗಳೂ ಪ್ರಸಾದರಾಯರ ಸ್ವಾಧೀನದಲ್ಲಿದ್ದುವು. ಆ ಗ್ರಂಥಗಳನ್ನೆಲ್ಲಾ ಶೀನುವೇ ಬರೆದಿರುವನೆಂದು ಸ್ಪಷ್ಟವಾದ ಅವನ ಅಕ್ಷರಗಳು ಸಾರುತಿದ್ದುವು. ಕೃಷ್ಣನು ತಾನು ಬೆಂಗಳೂರಿನಲ್ಲಿ ಮಂಗಲಕರರನ್ನು ಸಂಧಿಸಿ, 'ಕಾರುಣ್ಯ ಮೂರ್ತಿ'ಯ ಮೂಲ ಪುಸ್ತಕವನ್ನು ಕಳೆದುಕೊಂಡ ವಿಧಾನವನ್ನೂ ಆ ಚರ್ಚೆಯ ಮುಂದಿಟ್ಟನು. ತಾನು ಬರೆದ ಮೂಲಪ್ರತಿಗಳನ್ನೆ ಮಂಗಲಕರರ ಕೈಯಲ್ಲಿ ಬರಿಯ ವಿಶ್ವಾಸದಿಂದ ಕೊಟ್ಟುದು, ವ್ಯಾವಹಾರಿಕ ನ್ಯಾಯದಿಂದ ತನ್ನದ ತಪ್ಪೇ ಆಯಿತೆಂದೂ, ಹಾಗೆ ಕೊಟ್ಟುದರಿಂದಲೇ ಮಂಗಲಕರರಂತಹ

ದೊಡ್ಡ ಮನುಷ್ಯರಿಗೆ ಆ ಬಗೆಯ ಬುದ್ಧಿ ಹುಟ್ಟಿತೆಂದೂ, ಆದುದರಿಂದ ಆದಕ್ಕೆಲ್ಲಾ ತಾನೇ ಕಾರಣನಾದೆನೆಂದೂ ಶೀನೂ ಹೇಳುತ್ತಿದ್ದನು. ಅಲ್ಲದೆ ಅವರು ಕೊಟ್ಟ ಕಂಪ್ಲೇಂಟಿನ ಪ್ರಕಾರ ಶೀನು ಕೈದು ಮಾಡಲ್ಪಟ್ಟಿರುವನಷ್ಟೆ? ಆ ಕಂಪ್ಲೇಂಟು ತೀರಾ ಸುಳ್ಳಾದುದೆಂದೂ, ಕಮಲೆಗೂ ತನಗೂ ಅಣ್ಣ ತಂಗಿಯರ ಭಾವವಿರುವುದೆಂದೂ, ಈ ಪುಸ್ತಕ ಪತ್ರಗಳನ್ನು ತನಗೆ ಒಪ್ಪಿಸಲಿಕ್ಕಾಗಿಯೇ ಕಮಲೆ ತನ್ನ ಕೋಣೆಗೆ ಬಂದಳೆಂದೂ ಶೀನು ಪ್ರಮಾಣ ಪೂರ್ವಕವಾಗಿ ಹೇಳಿದನು. ಪೋಲೀಸ್ ಜವಾನರು ಶೀನುವನ್ನು ಕೈದು ಮಾಡಲಿಕ್ಕೆ ಹೋದಾಗ, ಅಲ್ಲಿ ವರದನು ಇದೇ ಪುಸ್ತಕ-ಪತ್ರಗಳನ್ನು ಅಪಹರಿಸಲೆತ್ನಿಸಿದುದು, ಪ್ರತ್ಯಕ್ಷವಾಗಿ ವರದನು ಲಂಚದ ಆಶೆಯನ್ನು ಆ ಪೋಲೀಸರಿಗೆ ತೋರಿಸಿದುದು, ಇವುಗಳ ಆಧಾರದಿಂದ ವಿಚಾರ ಮಾಡಿದರೆ, ಶೀನುವಿನ ಹೇಳಿಕೆಯೇ ಸಮಂಜಸವಾಗಿ, ಕಂಪ್ಲೇಂಟು ಅಸಮಂಜಸವಾಗಿ ಕಾಣುತಿತ್ತು. ನಿನ್ನೆ ರಾತ್ರಿ ಕಮಲೆ ಸತ್ಯವನ್ನೆ ಹೇಳಿಬಿಟ್ಟಾಳೆಂದು ಹೆದರಿಯೇ ಅವಳನ್ನು ಮುಂದಕ್ಕೆ ಬರಗೊಡದೆ ಶೀನುವಿನ ಮೇಲೆ ಅಪರಾಧವನ್ನು ಹೇರುವ ಆ ಬಗೆಯ ಕಂಪ್ಲೇಂಟನ್ನು ಕೊಟ್ಟಿರುವಂತೆ ಹೊಳೆಯುತಿತ್ತು. ಒಟ್ಟಾರೆ ಅವರ ಮಿತ್ರರಾದ ಮಂಗಲಕರರಾಯರು ದೊಡ್ಡ ಇಂದ್ರಜಾಲದಲ್ಲಿ ಸಿಕ್ಕಿ ಪೇಚಾಡುತಿರುವಂತೆ ಅವರಿಗೆ ತೋರಿತು. ಆದುದರಿಂದ ಒಮ್ಮೆ ಮಂಗಲಕರರನ್ನು ಕಂಡು, ತಮ್ಮ ಸಂದೇಹಗಳನ್ನು ಬಿಚ್ಚಿ, ಅದಕ್ಕೆ ಅವರು ಏನು ಹೇಳುತ್ತಾರೋ ನೋಡಿಕೊಂಡು ಮುಂದಿನ ವ್ಯವಹಾರಕ್ಕೆ ಇಳಿಯಬೇಕು.---ಎಂದು ಅವರೊಳಗೆ ಒಂದು ತೀರ್ಮಾನವಾಯಿತು.

ಆಗ ಶೀನೂ—ಮುಕುಂದರಾಯರ ಸಂಬಂಧವನ್ನು ತೋರಿಸುವ ಪತ್ರಗಳು ಮಂಗಲಕರರ ವಿಳಾಸದಲ್ಲಿದ್ದುದು ಒಂದು ಪ್ರತ್ಯೇಕವಾದ ಸಮಸ್ಯೆ. ಆಗ ಶೀನುವಿಗೆ ಮದುವೆಯಾದಾಗಿನ ಮಾತುಗಳೂ ಆ ಚರ್ಚೆಯಲ್ಲಿ ಹೊರಟುವು. ಮುಕುಂದರಾಯರೆಂದರೆ, ಅನಂತಪುರದಲ್ಲಿರುವರೆಂದು ನಂಬಲ್ಪಡುವ ಒಂದು ಗೂಢ ವ್ಯಕ್ತಿ. ಅವರ ಪತ್ರಗಳು ಅನಂತಪುರಕ್ಕೆ ಬಂದು, ಅಲ್ಲಿಂದ ಮಂಗಲಕರರ ವಿಳಾಸಕ್ಕೆ ತಿರುಗಿವೆ. ಮುಕುಂದರಾಯರೆಂಬವರಾರೂ ಬಳ್ಳಾರಿಯಲ್ಲಿ ತೋರುವುದಿಲ್ಲ. ಹಾಗಾದರೆ ಆ ಮುಕುಂದರಾಯರ ವ್ಯಕ್ತಿ ಮಂಗಲಕರರ ಯಾವ ಪದರಿನಲ್ಲಿ

ಅಡಗಿದೆಯೊ ? ಈ ಸಮಸ್ಯೆಯನ್ನು ಮಂಗಲಕರರೊಡನೆ ನಿಃಸಂಕೋಚ ವಾಗಿ ಬಿಚ್ಚಿ ತಿಳಿದುಕೊಳ್ಳಲೇಬೇಕು. ಯಾವ ಕಾರಣದಿಂದ ಮುಕುಂದ ರಾಯರು ಇದಿರಿಗೆ ಬಾರದೆ ಮರೆಯಲ್ಲಿದ್ದರೋ ಆ ಕಾರಣವು ಅಂದರೆ–ಅವರ ಮಗಳಾದ ಕುರೂಪ ಸುಂದರಿ, ಈಗ ಯಾರ ಹಂಗಿನಲ್ಲಿಯೂ ಇಲ್ಲದೆ, ಸಿನಿಮಾ ತಾರೆಯಾಗಿ ಹೋದುದರಿಂದ ಇನ್ನು ಮುಕುಂದ ರಾಯರು ಅಡಗಿಕೊಂಡಿರುವ ಆವಶ್ಯಕವೇ ಇಲ್ಲ.

ಹೀಗೆ ತಮ್ಮತಮ್ಮೊಳಗೆ ಗೊತ್ತುಮಾಡಿಕೊಂಡು ಇನ್ಸ್ಪೆಕ್ಟರ್ ಪ್ರಸಾದರಾಯರು ಶೀನು–ಕೃಷ್ಣಾದಿಗಳನ್ನು ಕುರಿತು,—“ಸಂಜೆ ಐದು ಗಂಟೆಗೆ ನಾನು ಮಂಗಲಕರರ ಮನೆಯಲ್ಲಿರುತ್ತೇನೆ ನೀವೂ ಅಲ್ಲಿಗೆ ಬನ್ನಿ” ಎಂದು ಹೇಳಿದರು. ಆ ಪ್ರಕಾರ ಅವರೆಲ್ಲರೂ ಮಂಗಲಕರರ ಮನೆಗೆ ಬಂದಾಗ, ಮಂಗಲಕರರು ಮೂರ್ಛಾವಸ್ಥೆಯಲ್ಲಿದ್ದರು. ಭಯಂ ಕರವಾದ ಆ ಕನಸನ್ನು ಕಾಣುತ್ತ ವಿಕಾರ ಮುಖಮುದ್ರೆಯಿಂದ ಆಗಾಗ ಅರಚುತಿದ್ದರು. ಡಾಕ್ಟರರೊಂದು ಇಂಜಕ್ಶನ್ ಕೊಟ್ಟಿದ್ದರು.

ನೆರೆದ ಬೀದೀ ಗುಂಪನ್ನು ನೋಡಿ ಪ್ರಸಾದರಾಯರು ಪೋಲೀಸ್ ಅಧಿಕಾರ ದರ್ಪದಿಂದ ಎರಡು ಬೆದರಿಕೆ ಹಾಕಿ, ಅಂಗಳದಲ್ಲಿ ಕೂಡಿದ ಪುಡಿಯಾಳುಗಳನ್ನೆಲ್ಲಾ ಹೊರಕ್ಕೆ ಹಾರಿಸಿಬಿಟ್ಟರು. ಅಲ್ಲಿ ಸುಂದರಿ–ಶೀನು–ಕೃಷ್ಣ ಮುಂತಾದವರು ಪರಸ್ಪರ ನೋಡಿಕೊಂಡು ಆಶ್ಚರ್ಯ ಚಕಿತರಾದರೆಂದು ವಾಚಕರೇ ತಿಳಿದುಕೊಳ್ಳಬಹುದು.

ಮೆಲ್ಲಮೆಲ್ಲನೆ ಮಂಗಲಕರರು ಅರಿವಿಗೆ ಬಂದರು. ಅರಿವಿಗೆ ಬರುತ್ತಾ ಆ ಭಯಂಕರ ಕನಸನ್ನು ನೆನೆನೆನೆದು ಬೆದರಿಕೊಂಡರು. ಕಣ್ಣು ತಿರುಗಿಸಿ ತಿರುಗಿಸಿ ಎಲ್ಲರನ್ನೂ ನೋಡಿದರು. ಸ್ವಪ್ನವಲ್ಲ–ಸತ್ಯಸಂಗತಿ ಯಂತೆಯೇ ತೋರಿತು. “ಹಾ! ಅವಮಾನ! ಅವಮಾನ! ಸತ್ತರೂ ಹೋಗದು! ಏನು ಗತಿ?” ಎಂದು ಚೀರಿದರು. ಪ್ರಸಾದರಾಯರೂ ವರ ದನೂ ಅವರನ್ನು ಸಮಜಾಯಿಸಲು, ಸ್ವಲ್ಪ ಹೊತ್ತಿಗೆ ಅವರು ಸಮಾ ಧಾನ ಸ್ಥಿತಿಗೆ ಬಂದು, ಸಮೀಪದಲ್ಲಿದ್ದ ವರದನನ್ನೂ ದೂರದಲ್ಲಿದ್ದ ಸುಂದರಿಯನ್ನೂ ನೋಡಿ, ವಿಕೃತಾರ್ತ ಸ್ವರದಿಂದ—“ಹಾ! ಮಗನೆ! ವರದಾ! ವರದಾ!—” ಎಂದು ಕೂಗಿದರು.

"ಏನಪ್ಪಾ! ಏನು ಬೇಕು?"

"ಅಯ್ಯೋ! ಏನು ಮಾಡಿಬಿಟ್ಟೆ! ನೀನೇನು ಮಾಡೀ?–ನಾನೇ ಮಾಡಿಸಿದೆ! ಅಯ್ಯೋ! ಆ ಸುಂದರಿ—ಸಿಸ್ಟ–ರ್–ಅ–ರಂಗ! ನನ್ನ ಮಗಳು!—"

"ಏನು—ಏನಂದಿ ಅಪ್ಪಾ?"

"ಹೌದಪ್ಪಾ! ನಾನೇ ಮುಕುಂದರಾಯ! ಪರಮ ಪಾಪಿ! ನನ್ನ ಮಗನಿಗೂ ನನ್ನ ಮಗಳಿಗೂ–ಹೌದು ಹೌದು! ಸುಂದರಿ ನನ್ನ ಮಗಳು!"

"ಏನಪ್ಪಾ?"

"ಕೇಳಪ್ಪಾ—" ಎಂದು ಮಂಗಲಕರರು ಬಹುಕಷ್ಟದಿಂದ ತಮ್ಮ ಹಿಂದಿನ ಚರಿತ್ರೆಯನ್ನು ಬಾಯಿಬಿಟ್ಟರು.

ಆಗ ಇನ್ಸ್‌ಪೆಕ್ಟರ್ ಪ್ರಸಾದರಾಯರು, ತಮ್ಮ ಕೈಯಲ್ಲಿದ್ದ. ನಾರಾಯಣಯ್ಯ–ರಾಮಾಜೋಯಿಸರ ಪತ್ರಗಳನ್ನೂ ವರದನಿಗೆ ತೋರಿಸಿದರು.

ಎಲ್ಲರೂ ಬೆರಗಾದರು. ಸುಂದರಿಯೂ ವರದನೂ ದಂಗುಬಡಿದು ನಿಂತರು. ಸುಂದರಿಯು ಮೈಯಲ್ಲೆಲ್ಲ ವಿದ್ಯುತ್ಸಂಚಾರವಾದಂತಾಗಿ ನಿಶ್ಚೇಷ್ಟಿತೆಯಾಗಿ ನಿಂತಳು. ಪ್ರಸಾದರಾವ್–ಶೀನು–ಕೃಷ್ಣ ಮುಂತಾದವರಿಗೆ ಒಂದು ಪ್ರಶ್ನೆ ಬಗೆಹರಿದಂತಾಯಿತು.

ವರದನು ತಂದೆಯನ್ನು ಸಮಜಾಯಿಸಲು ಪ್ರಾರಂಭಿಸಿ—"ಅಪ್ಪಾ! ಹಾಗೋ ಕತೆ? ಸರಿ! ಅಂಥಾದ್ದೇನೂ ಆಗಿಲ್ಲಪ್ಪ! ನಮ್ಮೊಳಗೆ ಇಷ್ಟ ಬಿತ್ತು ಅಂದರೆ, ಪರಿಚಯವಾಯಿತು—ಎಂದಷ್ಟೇ ಅರ್ಥ ಅಪ್ಪಾ! ಮತ್ತೇನೂ ಇಲ್ಲ ನಾನು ಸುಂದರಿಯನ್ನು ತಂಗಿಯಂತೆಯೇ ತಿಳಿದಿದ್ದೆ; ಹಾಗೆಯೇ ಆಯಿತು!"

"ಏನಾಯಿತೋ! ಪರಮಾತ್ಮಾ!—" ಎಂದು ಪ್ರಲಾಪಿಸುತ್ತಾ ಮಂಗಲಕರರು ಎದ್ದುಕುಳಿತರು. ಭಾವೋನ್ಮಾದದ ಲಕ್ಷಣವು ಅವರ ಮುಖದಲ್ಲಿ ಕಾಣುತಿತ್ತು. ಆ ಉನ್ಮಾದಶಕ್ತಿಯಿಂದಲೇ ಅವರು ಎದ್ದು ಕುಳಿತರಲ್ಲದೆ ಬೇರೆ ಶಕ್ತಿ ಅವರ ಮೈಯಲ್ಲಿರಲಿಲ್ಲ ಹಾಗೆಯೇ ಕಣ್ಣು ತಿರುಗಿಸಿ ಶೀನೂ–ಕೃಷ್ಣರನ್ನು ನೋಡಿ—"ಹೌದು ಹೌದು! ಈ ಶೀನು ನನಗೆ ಅಳಿಯನೇ ಆಗುತ್ತಾನೆ. ಆಹಾಹಾ! ನಾನು ಇವನಿಗೆ ಮಾಡಿದ

ದ್ರೋಹಕ್ಕೆ ಸರಿಯಾಗಿ ಇವನೂ ನನಗೆ ಮಾಡಿದ! ದ್ರೋಹಕ್ಕೆ ದ್ರೋಹ. ಎಲೇ! ಶೀನು! ನಿನ್ನ ದ್ರೋಹವು ನಿನಗೆ ದಕ್ಕಿತು! ದಕ್ಕಿತು!—"

ಶೀನು ತಟ್ಟನೆ ಮುಂದೆ ಬಂದ—"ಇಲ್ಲ ಇಲ್ಲ! ಹಾಗನ್ನದಿರಿ! ಪರಮಾತ್ಮ ಸಾಕ್ಷಿಯಾಗಿಯೂ--ಕನ್ನಡ ತಾಯಿಯ ಸಾಕ್ಷಿಯಾಗಿಯೂ ಹೇಳುತ್ತೇನೆ--ಕಮಲಾಬಾಯಿಯನ್ನು ನನ್ನ ಪ್ರಿಯ ಸಹೋದರಿಯಂತೆ ಭಾವಿಸಿರುತ್ತೇನೆ!" ಎಂದು ಎದೆಯ ಮೇಲೆ ಕೈಯಿಟ್ಟುಕೊಂಡು ಹೇಳಿದನು.

"ನಿಜ ನಿಜ ಶ್ರೀನಿವಾಸನು ನನ್ನ ಅಣ್ಣ! ಅಣ್ಣ! ಪರಮಾತ್ಮನ ಸಾಕ್ಷಿಯಾಗಿ ಅವನನ್ನು ನಾನು ತೀರ್ಥರೂಪ ಸಮಾನ ಅಣ್ಣನೆಂದು ಭಾವಿಸಿರುತ್ತೇನೆ!'' ಎಂದು ಬದಿಯಲ್ಲಿ ನಿಂತಿದ್ದ ಕಮಲೆಯ ಸ್ಥಿರ ವಾಣಿಯೂ ಕೇಳಿಸಿತು.

ಮಂಗಲಕರರು ಪಿಳಿಪಿಳಿ ಕಮಲೆಯನ್ನೂ ಶೀನುವನ್ನೂ ನೋಡಿದರು. ಆ ಮೇಲೆ ಪ್ರಸಾದರಾಯಾದಿಗಳನ್ನು ನೋಡಿದರು. ಆಗ ಪ್ರಸಾದರಾಯರು—"ಕಮಲಾ—ಶ್ರೀನಿವಾಸರ ಈ ಮಾತನ್ನು ಅಗತ್ಯವಾಗಿ ನಂಬಬಹುದು!" ಎಂದು ಸಮರ್ಥಿಸಿದರು.

ಮಂಗಲಕರರು ಹಾಗೆಯೇ ವರದಾ ಸುಂದರಿಯರನ್ನು ನೋಡಿ---"ಯಾರಿಗೆ ಗೊತ್ತು! ವರದಾ-ಸುಂದರಿಯರು ಏನೇನು ಮಾಡಿಕೊಂಡಿದ್ದಾರೋ ಯಾರಿಗೆ ಗೊತ್ತು! ಹಾಗೆಯೇ ಕಮಲಾ-ಶೀನೂಗಳು ಏನೇನು ಮಾಡಿದ್ದಾರೋ ಯಾರಿಗೆ ಗೊತ್ತು! ಹಾಯ್! ಹಾಯ್! ನಿಮ್ಮನ್ನು ದೂರಿ ಏನೂ ಪ್ರಯೋಜನವಿಲ್ಲ! ಎಲ್ಲಾ ನನ್ನ ತಪ್ಪುಗಳು! ತಪ್ಪಿಗೆ ಒಪ್ಪಿದ ಪ್ರಾಯಶ್ಚಿತ್ತ! ಅಯ್ಯೋ! ನನ್ನ ದ್ರೋಹವು ನನ್ನನ್ನೆ ತಿನ್ನಲಾರಂಭಿಸಿದೆ! ಹಾ! ಹಾ! ಅಕ್ಷರಗಳ ಬಲೆಯಲ್ಲಿ ಸಿಕ್ಕಿಬಿದ್ದು ಪೇಚಾಡುತಿದ್ದೇನೆ! ಅಗೊ! ಎಲ್ಲರೂ ನನ್ನನ್ನು ನೋಡಿ ನಗಾಡುತ್ತಾರೆ!........... ಅಯ್ಯೋ! ಅಯ್ಯೋ! ಮುಕುಂದಾ! ಪಾಪೀ! ದ್ರೋಹೀ! ಛೀ! ಇನ್ನು ನೀನು ಬದುಕಿದರೂ ಸತ್ತಹಾಗೆಯೇ! ವಿದ್ಯಾಧಿಕಾರಿಯಾಗಿ ತಲೆಗೆ ರುಮಾಲಿಟ್ಟುಕೊಂಡು ಇನ್ನು ಆಫೀಸಿಗೆ ಹೋಗುವುದುಂಟೆ?—ಛಿ! ನಾಯಿ! ನಾಯಿ!"

ಮತ್ತೆ ಮಂಗಲಕರರು ನಿಶ್ಚೇಷ್ಟಿತರಾಗಿ ಬಿದ್ದರು. ಹೀಗಾಗುವುದರಲ್ಲಿ ಏನೂ ಅತಿಶಯವಿಲ್ಲ ಮನುಷ್ಯರು ದುಷ್ಕಾರ್ಯವನ್ನು ಮಾಡುವಾಗ ಅದರ ಘೋರ ಪರಿಣಾಮವನ್ನು ಕುರಿತು ಸರಿಯಾಗಿ ಯೋಚಿಸಿ ನೋಡುವುದಿಲ್ಲ. ನೋಡಿದರೂ ಹಾಗಾದರೆ ಹೀಗೆ ಮಾಡಿದರಾಯಿತು, ಹೀಗಾದರೆ ಹಾಗೆ ಸಾಧಿಸಿಬಿಟ್ಟರಾಯಿತು. ಹಾಗೆಲ್ಲ ಬಂದರಲ್ಲವೆ?--ಬಂದ ಕಾಲಕ್ಕೆ ನೋಡಿಕೊಳ್ಳೋಣ ಎಂಬ ಕ್ಷುದ್ರ ನಂಬುಗೆಯ ಬಡ್ಡುಧೈರ್ಯದಿಂದ ದುಷ್ಟಕಾರ್ಯದಲ್ಲಿ ಬಹಳ ಬಹಳ ಮುಂದುವರಿದು, ಸತ್ಯದ ಪ್ರಕಾಶವು ಹರಡಿಕೊಂಡು ಬರುವಾಗ, ಪರಿಣಾಮವು ನಿಚ್ಚಳವಾಗಿ ಮುಂದೆ ಬಂದು ನಿಲ್ಲುವಾಗ, ಅವರ ಆ ಧೈರ್ಯವೂ--ಹೀಗೆ ಹಾಗೆ ಮಾಡಿಬಿಟ್ಟೇನೆಂಬ ಆಲೋಚನೆಗಳೂ ಮನಸ್ಸಿನಲ್ಲಿಯೇ ಇಂಗಿಹೋಗಿ, ಸಿಕ್ಕಿಬೀಳುತ್ತಾರೆ. ಈ ಬಗೆಯ ದುಃಸಾಧನೆಯಲ್ಲಿ ಕೈಕಾಲು ಬಿದ್ದುಹೋದ ಮೇಲೆ, ಮನಸ್ಸು ಚಂಚಲವಾಗಿ, ಯಾವುದು ಮುಚ್ಚಿಡಬೇಕು, ಯಾವುದು ಮುಚ್ಚಿಡಬಾರದು ಎಂಬ ಜ್ಞಾನವು ನಷ್ಟವಾಗಿ–ನಾಲಗೆಯನ್ನು ಬಿಗಿಹಿಡಿದಿಟ್ಟುಕೊಳ್ಳಲು ಅಶಕ್ತರಾಗಿ ಹೋಗುತ್ತಾರೆ. ಮಿದುಳು ಆಡಿಸುವಂತೆ ನಾಲಗೆ ಆಡಿಬಿಡುತ್ತೆ ಮಂಗಲಕರರಿಗೆ ಇದೇ ದುರವಸ್ಥೆ ಬಂತು. ಅವರ ಆಲೋಚನೆಯ ಮಿದುಳಿನ ಮೇಲೆ. ಅಕ್ಷರಗಳು ದಕ್ಕದೇ ಹೋಗುವಂತಹ ಪೆಟ್ಟೊಂದು, ಕೀರ್ತಿ ನಷ್ಟವಾಗುವ ಭೀತಿಯ ಪೆಟ್ಟೊಂದು, ಹೆಂಡತಿ ವ್ಯಭಿಚಾರ ಮಾಡಿದಳೆಂಬ ಯಾತನಾಕಾರೀ ಪೆಟ್ಟೊಂದು, ಈ ಬಲವಾದ ಪೆಟ್ಟುಗಳ ಮೇಲೆ-ಮಗನಿಗೂ ಮಗಳಿಗೂ-ಎಂಬ ನೆನೆಯಲಸಹ್ಯವಾದ ಮಾತಿನ ದೊಡ್ಡ ಪೆಟ್ಟೊಂದು–ಹೀಗೆ ಪೆಟ್ಟಿನ ಮೇಲೆ ಪೆಟ್ಟುಗಳೇ ಬೀಳಲಾರಂಭಿಸಿ, ನೊಂದು ಬೆಂದು, ಒಳಗಣ್ಣಿನಲ್ಲಿ ಭಯಂಕರವಾದ ಆ ಪರಿಣಾಮ ಚಿತ್ರವು ಮೂಡಿದುದರಲ್ಲಿ ಏನಾಶ್ಚರ್ಯ! ಮೂರ್ಛಿತರಾದುದರಲ್ಲಿ ಏನಾಶ್ಚರ್ಯ! ಉನ್ಮಾದರಾದುದರಲ್ಲಿ ಏನಾಶ್ಚರ್ಯ! ಇವೆಲ್ಲ ಅವಸ್ಥೆಗಳೂ ಕಡಕಡನೆಯಾಗುವಾಗ ಪಶ್ಚಾತ್ತಾಪಾನಲದಿಂದ ವೈಕಾವೇರಿ ಜ್ವರಗ್ರಸ್ತರಾಗಿ ರುಗ್ಣಶಯ್ಯೆಯನ್ನೆ ಸೇರಿದರು.

ಇನ್ನು ಮುಂದೇನಾಯಿತೆಂದು ಬರೆಯುವ ಕುತೂಹಲವು ನಮಗೂ ಇಲ್ಲ, ಓದುವ ಕುತೂಹಲವು ನಿಮಗೂ ಇರಲಿಕ್ಕಿಲ್ಲ. ಏಕೆಂದರೆ, ಊಹನಾ

ಸಮರ್ಥರಾದ ಓದುಗರು ಆಗುವುದೆಲ್ಲ ಹೀಗೆಯೇ ಆಗಿರಬೇಕೆಂದು ಊಹಿಸಿಯೇ ಬಿಟ್ಟಾರು. ಮುಖ್ಯವಾಗಿ ನಮ್ಮ ಸುಂದರೀಬಾಯಿಯ ನಾಟ್ಯ ಕೌಶಲ್ಯದ ಬಣ್ಣನೆಗಳನ್ನು ನೋಡುವ ಸಂಭ್ರಮ ಕುತೂಹಲಗಳು ನಮಗೆ ನಿಮಗೆ ಎಲ್ಲರಿಗೂ ತಪ್ಪಿಹೋದುದೊಂದು ಕೊರತೆಯೇ ಸರಿ. ಮಾಡುವು ದೇನು? ಅವಳಾದರೂ ಅಂತಹ ಸ್ಥಿತಿಯಲ್ಲಿ ಹೇಗೆ ನಟನ ಮಾಡಿಯಾಳು?

ಇನ್ನು ಓದುಗರು ಈ ಗ್ರಂಥವನ್ನು ಮುಚ್ಚಿಬಿಡಲು ನಮ್ಮದೇನೂ ಅಭ್ಯಂತರವಿಲ್ಲ. ಆದರೆ ಪಶ್ಚಾತ್ತಾಪದಿಂದ ರೋಗಗ್ರಸ್ತರಾಗಿ ಮಲಗಿದ್ದ ಮಂಗಲಕರರು, ಸಾಯುವ ಮೊದಲು ಇಷ್ಟೊಂದಾದರೂ ಪುಣ್ಯಕಾರ್ಯ ವನ್ನು ಮಾಡಿಬಿಡೋಣವೆಂದು, "ಕನ್ನಡ ಚಿತ್ರಮಾಲೆ"ಯ ರಾಘವ ರಾಯರಿಗೆ ಒಂದು ಪತ್ರವನ್ನು ಬರೆಯಿಸಿ, ತಮ್ಮ ಸಹಿಯನ್ನು ಹಾಕಿ ಕಳು ಹಿಸಿದ್ದ, ಆ ಪುಣ್ಯ ಪತ್ರದ ಒಕ್ಕಣೆಯನ್ನಿಷ್ಟು ನೋಡಿಕೊಂಡು ಆ ಮೇಲೆ ಈ ಗ್ರಂಥವನ್ನು ಮುಚ್ಚೋಣಾಗಲಿ!

"ಪ್ರಿಯ ರಾಘವರಾಯರೆ,

'ಕನ್ನಡ ಗೆಳೆಯ' ಎಂಬ ಸಂಕೇತನಾಮಕ್ಕೆ ಪಾತ್ರನು ನಾನಲ್ಲ. ಕೆ. ಶ್ರೀನಿವಾಸರಾವ್, ಎಂಬವನು ಅದಕ್ಕೆ ಪಾತ್ರನಾಗಿರುತ್ತಾನೆ. ಈ ಮೊದಲು ನಿಮ್ಮ ಗ್ರಂಥಮಾಲೆಯಲ್ಲಿ 'ಕನ್ನಡ ಗೆಳೆಯ' ಗುರುತಿನಿಂದ ಪ್ರಕಟವಾದ ಎಲ್ಲಾ ಗ್ರಂಥಗಳೂ ಅವನಿಂದಲೇ ವಿರಚಿತವಾದುವು ಆದುದರಿಂದ "ಅಮೃತ ಭೋಜ"ದಲ್ಲಿ ಅಚ್ಚಾಗಿರುವ, ನನ್ನ ಹೆಸರು. ನನ್ನ ಫೋಟೋ—ನನ್ನ ಮುನ್ನುಡಿ—ಇತ್ಯಾದಿ ನನ್ನ ಸಂಬಂಧಗಳನ್ನು ತೆಗೆದುಹಾಕಿ, ಅವನ ಕರ್ತೃತ್ವದ ಹೆಸರಿನಲ್ಲಿ ಪ್ರಸಿದ್ಧಪಡಿಸಬೇಕೆಂದು, ಸತ್ಯ ಸಂಗತಿಯನ್ನು ಈ ಮೂಲಕವಾಗಿ ತಿಳಿಸಿ ಪ್ರಾರ್ಥಿಸುತ್ತಿದ್ದೇನೆ.

ಇತಿ— ಪಿ. ಎಮ್. ಮಂಗಲಕರ್"

**"ಕನ್ನಡ ಚೆಲ್ನುಡಿ ಉನ್ನತಿಗೇರಲಿ!"**

**— ಮುಚ್ಚಬಹುದು —**

# ಬೆಳಗುತ್ತಿರುವ ಪ್ರತಿಭಾ ಕಿರಣಗಳು

| | | |
|---|---|---|
| ೧ ಘೋಟೇಮುಸುಕ† | ದೇವುಡು | ೧—೮—೦ |
| ೨ ರಾಜಲಕ್ಷ್ಮಿ† | ಶರತ್ | ೧—೮—೦ |
| ೩ ಅನ್ನಪೂರ್ಣಾಮಂದಿರ* | ಸಿರುಪಮಾದೇವಿ | ೨—೦—೦ |
| ೪-೫ ಸಾವಿನ ಉಡಿಯಲ್ಲಿ* | ಎನ್ಕೆ | ೩—೦—೦ |
| ೬ ವೈಕುಂಠನ ಮೃತ್ಯುಪತ್ರ* | ಶರತ್ | ೧—೮—೦ |
| ೭ ಚಕಮಕಿ† | ಬೇಂದ್ರೆ | ೨—೦—೦ |
| ೮-೯ ಗಂಡುಹೆಣ್ಣಿನ ಸಮಸ್ಯೆ* | ಕುಪ್ಪಮ್ಮ | ೩—೮—೦ |
| ೧೦ ಹೆತ್ತತಾಯಿ* | ಕಾರಂತ | ೨—೦—೦ |
| ೧೧ ಭೂಮಾತೆ ಮತ್ತು ಮಂದಿರ* | ಶರತ್-ಪರ್ಲಬಕ್ | ೧—೮—೦ |
| ೧೨-೧೩ ಬಿರುಗಾಳಿ | ಪ್ರೊ. ಫಡಕೆ | ೩—೮—೦ |
| ೧೪ ರಮಾನಾಥ† | ಪ್ರೇಮಚಂದ | ೩—೦—೦ |
| ೧೫ ಷೋಡಶಿ* | ಶರತ್ | ೨—೦—೦ |
| ೧೬ ನೇತಾಜಿ | ಮಲ್ಲಾರಿ | ೧—೮—೦ |
| ೧೭ ವಿಜಯಾ* | ಶರತ್ | ೧—೮—೦ |
| ೧೮ ರೇಡಿಯೋ ನಾಟಕಗಳು | ಬೀಚಿ. | ೧—೮—೦ |
| ೧೯ ಸುಭಾಷ ಸೀಮೋಲ್ಲಂಘನ | ಉತ್ತಮಚಂದ | ೧—೮—೦ |
| ೨೦ ಬೆಳವಲದ ಭಾಗ್ಯಲಕ್ಷ್ಮಿ* | ಕುಲಕರ್ಣಿ | ೨—೮—೦ |
| ೨೧ ಧರ್ಮಸಂಕಟ† | ವಾಡೇಕರ | ೨—೦—೦ |
| ೨೨ ಸಮ್ರಾಟ್ ಹರ್ಷವರ್ಧನ* | ನಾಗೇಶ | ೨—೦—೦ |
| ೨೩ ಎರಡು ಸೆಳೆತ* | ವಂದ್ಯೋಪಾಧ್ಯಾಯ | ೧—೧೨—೦ |
| ೨೪ ಗೃಹದಾಹ† | ಪ್ರೇಮಚಂದ | ೧—೮—೦ |
| ೨೫ ಕಾಲಯಾಪನ* | ಭಾರತೀಸುತ | ೧—೧೦—೦ |
| ೨೬ ಮಾನವಲೀಲೆ* | ವೆಂಕಟೇಶಯ್ಯ | ೧—೮—೦ |
| ೨೭ ಕರೀಬೆಕ್ಕು* | ರಮೇಶ | ೧—೪—೦ |
| ೨೮ ಕೊಂದವರು ಯಾರು?* | ಜೋಶಿ | ೧—೪—೦ |
| ೨೯ ದಲಿತ ಕುಸುಮ* | ಹೊಸಮನೆ | ೨—೦—೦ |
| ೩೦ ನೂರಜಹಾನ* | ಕೇಶವಶರ್ಮಾ | ೧—[illegible] |
| ೩೧-೩೨ ಇಂದ್ರಜಾಲ | ನವಗಿರಿನಂದ | ೪—೦—[illegible] |

* ಈ ಗುರುತಿನವು ಕಾದಂಬರಿಗಳು † ಈಗುರುತಿನವು ಕಥಾ ಸಂಕಲನಗಳು.